|| ಓಂ ||

ಚೋಳರೇಣುಕಸಂವಾದರೂಪವಾದ

# ಶಿವಾಧಿಕ್ಯ ಶಿಖಾಮಣಿಯು.



ಮೈಸೂರು ನಮಶ್ಶಿವಾಯಮಠದ ಜಂಗಮೂರ್ತಿ

ಶ್ರೀ ಸೋಮಶೇಖರಸ್ವಾಮಿಗಳಿಂದ

ಪರಿಷ್ಕರಿಸಲ್ಪಟ್ಟು,

ಸ್ವಕೃತ ಕನ್ನಡ ಟಿಪ್ಪಣಿಯೊಡನೆ

—:o:—

ರು ಶ್ರೀಮತ್ಕನ್ಯಕಾಪರಮೇಶ್ವರೀ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

ಪ್ರಥಮ ಮುದ್ರಣ ೧೦೦೦ ಪ್ರತಿಗಳು.

1929.



Price Rs. 1—0—0. ಬೆಲೆ ೧—೦—೦.

ಶ್ರೀ ಶಿವಾಯನಮಃ.

ಸೋಸಲೆ ಶ್ರೀ ರೇವಣಾರಾಧ್ಯವಿರಚಿತಃ

# ಶಿವಾಧಿಕ್ಯಶಿಖಾಮಣಿಃ

ಮೈಸೂರು ಶ್ರೀ ನಮಶ್ಶಿವಾಯಮಠ ಚರಮೂರ್ತಿ

ಶ್ರೀ ಸೋಮಶೇಖರಸ್ವಾಮಿನಾ

ಸಂಶೋಧ್ಯ

ಸ್ವಕೃತ ಕರ್ಣಾಟಕ ಟಿಪ್ಪಣ್ಯಾಸಾಕಂ

ಶ್ರೀಮತ್ಕನ್ಯಕಾಪರಮೇಶ್ವರೀ ಮುದ್ರಾಕ್ಷರಶಾಲಾಯಾಂ ಮುದ್ರಯಿತ್ವಾ

ಪ್ರಕಾಶಿತಂ.

ಮೂಲ್ಯಮೇಕೋಽರೂಪ್ಯಕಃ.

# ಪೀ ಠಿ ಕೆ.

ಈ ಗ್ರಂಥಕಾರನು ಟಿ|| ನರಶೀಪುರದ ತಾಲ್ಲೋಕು ಸೋಸಲೆ ಎಂಬ ಗ್ರಾಮದಲ್ಲಿದ್ದನು. ಈತನು ವೀರಶೈವರಲ್ಲೊಬ್ಬ ದೊಡ್ಡ ವಿದ್ವಾಂಸನು. ಈತನು ಈ ಗ್ರಂಥದ ಅಂತ್ಯದಲ್ಲಿ ತನ್ನ ವಂಶಪಾರಂಪರೆಯನ್ನು ಹೇಳಿಕೊಂಡಿರುವುದು ಹೇಗೆಂದರೆ—ಶ್ರೀ ರೇಣುಕಾಚಾರ್ಯರ ವಂಶದಲ್ಲಿ ಹುಟ್ಟಿದವನು ವಿಶ್ವನಾಥನು, ಅವನ ಮಗ ಕಾಶೀಪತಿಯು, ಅವನ ಮಕ್ಕಳು ವೀರಾರ್ಯ ಮತ್ತು ಸರ್ವೇಶ್ವರಾರ್ಯರು, ಸರ್ವೇಶ್ವರಾರ್ಯನ ಮಗ ವೀರಣಾರ್ಯ, ಆತನ ಮಗ ರೇವಣಸಿದ್ಧ, ಆತನ ಮಗನೇ ಈ ರೇವಣಾರಾಧ್ಯನು, ಇವನು ಈ ಶಿವಾಧಿಕ್ಯಶಿಖಾಮಣಿಯನ್ನು ಬರೆಯುವುದಕ್ಕೆ ಬೆಂಗಳೂರು ಡಿಸ್ಟ್ರಿಕ್ಟ್‌ನಲ್ಲಿರುವ ಮುದಿಗೆರೆಗೆ ಅರಸಾದ ರಘುವಪ್ಪನಾಯಕನು ಕಾರಣಭೂತನೆಂಬ ವಿಷಯವು ಈ ಗ್ರಂಥದ ಆದಿಯಲ್ಲಿರುವ "ರಘುನಾಯಕಬೋಧಾರ್ಥಂ ಶಿವಾಧಿಕ್ಯಶಿಖಾಮಣಿಂ" ಎಂಬುದರಿಂದ ತಿಳಿಯಲ್ಪಡುತ್ತದೆ ರಘುವಪ್ಪನಾಯಕನು ಈ ಗ್ರಂಥಕಾರನನ್ನು ಕರೆಯಿಸಿ ತನ್ನ ಆಸ್ಥಾನದಲ್ಲಿ ಸಮಸ್ತವೈಷ್ಣವರಿಂದೊಡಗೂಡಿ ಹೇಳಿದುದೇನೆಂದರೆ— ರೇವಣಾರಾಧ್ಯರೇ! ಪೂರ್ವದಲ್ಲಿ ಪಾಲ್ಕುರಿಕೆ ಶ್ರೀಸೋಮನಾಥರು ಚಕ್ರಪಾಣಿ ರಂಗನಾಥನೆಂಬ ವೈಷ್ಣವಾಚಾರ್ಯನನ್ನು ವಾದದಲ್ಲಿ ಜೈಸಿ ಶಂಕಾಪರಿಹಾರವಿಲ್ಲದೆ ಶಿವನೇ ಅಧಿಕನೆಂದು "ಬಸವರಾಜೀಯ" ವೆಂಬ ಗ್ರಂಥವನ್ನು ಬರೆದರು. ಮತ್ತು ಕೆರೆ ಪದ್ಮರಸರು ತ್ರಿಭುವನತಾತನೆಂಬ ವೈಷ್ಣವಾಚಾರ್ಯನನ್ನು ವಾದದಲ್ಲಿ ಜೈಸಿ ಶಂಕಾಪರಿಹಾರವಿಲ್ಲದೆ ಶಿವನೇ ಅಧಿಕನೆಂದು "ಸಾನಂದಚರಿತ್ರೆ"ಯನ್ನು ಬರೆದರು. ಈಗ ನೀವು ಸಕಲ ದರ್ಶನದವರೊಡನೆ ಕೂಡಿರುವ ನನ್ನ ಸಂಶಯವನ್ನು ಹೋಗಲಾಡಿಸಿರೆಂದು ಕೇಳಿಕೊಳ್ಳಲಾಗ ರೇವಣಾರಾಧ್ಯರು—ಪೂರ್ವದಲ್ಲಿ ಗುಪ್ತವೇಷದಿಂದಿದ್ದ ಶ್ರೀರೇವಣಸಿದ್ಧೇಶ್ವರನು ವಿಷ್ಣುಭಕ್ತನೆನಿಸಿದ ಕಾಂಚೀಪಟ್ಟಣಕ್ಕೆ ದೊರೆಯಾದ ವಿಜಯೇಂದ್ರ ಚೋಳನನ್ನು ವಾದದಲ್ಲಿ ಜೈಸಿ ಆತನ ಕುಲದೈವವಾದ ವಿಷ್ಣುವಿಗ್ರಹವು ಸ್ವಮಹಿಮಾ ಬಲದಿಂದ ಸ್ಥಾಪಿತವಾಗಿ ಆ ವಾದವಿಚಾರಗಳೆಲ್ಲವು ದ್ವಾದಶಸಹಸ್ರ ಗ್ರಂಥಗಳಿಂದ "ಇತರಮತಕೋಲಾಹಲ" ಎಂಬ ಗ್ರಂಥವನ್ನು ರಚಿಸಿರುವನು. ಆ ಗ್ರಂಥದಲ್ಲಿರುವ ವಿಷಯಗಳ ಸಾರವನ್ನು ತೆಗೆದುಕೊಂಡು ಚೋಳರೇಣುಕ ಸಂವಾದರೂಪವಾದ "ಶಿವಾಧಿಕ್ಯಶಿಖಾಮಣಿ" ಎಂಬೀ ಗ್ರಂಥವನ್ನು ರಚಿಸಿ ಆ ರಾಜನಿಗುಂಟಾಗಿದ್ದ ಶಂಕೆ

ಗಳನ್ನೂ, ಆತನ ಆಸ್ಥಾನದಲ್ಲಿದ್ದ ವಿದ್ವಾಂಸರಿಗೆ ಓದಿಹೇಳಿ, ಅವರ ಶಂಕೆಗಳನ್ನೂ, ನಿವಾರಣೆಮಾಡಿದ ಒಳಿಕ ಆ ರಾಜನು ವೈಷ್ಣವ ಮತವನ್ನು ತ್ಯಜಿಸಿ ಶೈವದೀಕ್ಷೆಯನ್ನು ಹೊಂದಿದನೆಂದು ತಿಳಿಯಬರುತ್ತದೆ. ಆ ನಾಯಕನು ಕ್ರಿ. ಶ. 1623 ರಲ್ಲಿದ್ದನೆಂದು ತಿಳಿಯಬರುತ್ತಾದ್ದರಿಂದ ಈತನ ಕಾಲದಲ್ಲೇ ಇದ್ದು ಈ ಗ್ರಂಥವನ್ನು ಬರೆದಿರುತ್ತಾನೆ.

ಈ ಗ್ರಂಥದಲ್ಲಿ—ವಿಜಯೇಂದ್ರಚೋಳನು ಶಿವಕಾಂಚಿಯಲ್ಲಿರುವ ಏಕಾಮ್ರನಾಥನೆಂಬ ಹೆಸರುಳ್ಳ ಶಿವಲಿಂಗದ ಪೂಜಾದಿಗಳನ್ನು ನಿಲ್ಲಿಸಿ, ವಿಷ್ಣುಕಾಂಚಿಯಲ್ಲಿ ವಿಷ್ಣುಮೂರ್ತಿಯಪೂಜೆಯನ್ನು ಪ್ರಾಬಲ್ಯಗೊಳಿಸಿ ಆ ವಿಷ್ಣುವಿಗ್ರಹಕ್ಕೆ ಶಿವಭಕ್ತರನ್ನು ತನ್ನ ಆಜ್ಞಾಬಲದಿಂದ ನಮಸ್ಕಾರಮಾಡಿಸುತ್ತಿದ್ದನು. ಹೀಗಿರುವಲ್ಲಿ ಶ್ರೀರೇವಣಸಿದ್ಧೇಶ್ವರನನ್ನು ನಮಸ್ಕಾರಮಾಡುವಂತೆ ಹೇಳಲಾಗಿ ಹೋ! ಹೋ!! ನಿಮ್ಮ ದೇವರಿಗೆ ನಾವಡ್ಡಬೀಳೆವೆಂದು ತಲೆಯನ್ನು ತಿರುಗಿಸಲು ಆ ಕ್ಷಣದಲ್ಲೇ ಒರಳೊಳಗಣ ಗುಂಡುತಿರುಗುವಂತೆ ಆ ವಿಗ್ರಹದ ತಲೆಯು ತಿರುಗುತ್ತಿರಲು ಆ ಸಕಲ ವೈಷ್ಣವಾಚಾರ್ಯರಿಂದ ನಿಲ್ಲಿಸಲ್ಪಡಲಸಾಧ್ಯವಾಗಿ ಒಳಿಕ ಆ ಚೋಳನು ತನ್ನ ಕುಲದೈವದ ಸ್ಥಿರಪ್ರತಿಷ್ಠೆಗೋಸ್ಕರ ಚಿಂತಿಸುತ್ತಿರಲು, ಒಂದಾನೊಂದುದಿನ ಏಕಾಮ್ರನಾಥನು ಜಂಗಮವೇಷದಿಂದ ಚೋಳನ ಸ್ವಪ್ನಕ್ಕೆ ಬಂದು ಶಿವನಿಗಿಂತಧಿಕನಾವನೂ ಇಲ್ಲವು ಭ್ರಾಂತಿಮೂಲಕವಾದ ಅಜ್ಞಾನವನ್ನು ಬಿಡು, ಶ್ರೀರೇವಣಸಿದ್ಧೇಶ್ವರನನ್ನು ಮರೆಹೊಂದು, ನಿನ್ನ ಕಾರ್ಯವು ಕೈಗೂಡುವುದೆಂದು ಸ್ವಪ್ನವಾದನಂತರ ಎಚ್ಚೆದ್ದು ಆತನನ್ನು ಮರೆಹೊಂದಲು, ಆತನು ಇವನ ಭಕ್ತಿಗೆಮೆಚ್ಚಿ ಆ ವಿಷ್ಣುಮೂರ್ತಿಯ ಚಾಂಚಲ್ಯವನ್ನು ನಿಲ್ಲಿಸಿ, ಆತನ ಹಣೆಗೆ ಭಸ್ಮಧಾರಣೆಯನ್ನು ಮಾಡಲು ಶೈವಸಂಪ್ರದಾಯದಲ್ಲಿ ಅವನಿಗುಂಟಾಗಿದ್ದ, ಭಸ್ಮಧಾರಣ, ಶಿವಾದ್ವೇದೋತ್ಪತ್ತಿವಿಧಾನ, ಶಿವಶಾಸ್ತ್ರೋದ್ಧಾರಫಲ, ಶಿವನಿಗೆ ಸರ್ವದೇವತಾಜನಕತ್ವವಿಚಾರ, ಶಿವೇತರದೇವತಾಪರಿತ್ಯಾಗವಿಧಾನ, ರುದ್ರನಿಗೆ ಬ್ರಾಹ್ಮಣ್ಯವಿಚಾರ, ರುದ್ರನೇ ನಮಸ್ಕಾರಾರ್ಹನೆಂಬ ವಿಚಾರ, ಅಷ್ಟಾವರಣ ವಿಚಾರ ಇದಲ್ಲದೆ ಜೈನ, ಬೌದ್ಧ, ಚಾರ್ವಾಕ, ಕಾಪಾಲಿಕ, ಪಾಂಚ ರಾತ್ರ, ಮಾಯಾವಾದ ಮೊದಲಾದ ಮತಗಳ ಸ್ವರೂಪವನ್ನು ತಿಳಿಸಿ ಸಂಶಯವನ್ನು ಹೋಗಲಾಡಿಸಿದನು. ಒಳಿಕ ಚೋಳನು ಶಿವಭಕ್ತನಾಗಿ ತನ್ನ ಪಟ್ಟಣವನ್ನೆಲ್ಲಾ ಶಿವಭಕ್ತಿಮಯವನ್ನಾಗಿಮಾಡಿ, ಕೆಲಕಾಲಾನಂತರದಲ್ಲಿ ಅಂತಃಪುರಜನಸಹಿತವಾಗಿ ಕೈಲಾಸಕ್ಕೆ ಹೋದನೆಂಬುದು ಪ್ರಸಿದ್ಧವಾಗಿದೆ. ಈ ಗ್ರಂಥದಲ್ಲಿರುವ ಹನ್ನೆರಡು ಉಪದೇಶಗಳಲ್ಲಿ ನೂರು ಸಂವಾದ

ಗಳನ್ನು ಗರ್ಭೀಕರಿಸಿ ಪ್ರತಿಯೊಂದು ಸಂವಾದದಲ್ಲೂ ಒಂದೊಂದು ವಿಷಯವನ್ನು ಹೇಳಿರುತ್ತಾನೆ. ಇಂಥಾ ಅಸಾಧಾರಣವಾದ ವಿಷಯಗಳುಳ್ಳ ಈ ಗ್ರಂಥವು ಕೇವಲ ಸಂಸ್ಕೃತದಲ್ಲಿದ್ದುದರಿಂದಲೂ ಸರ್ವರಿಗೂ ತಿಳಿಯಲಸಾಧ್ಯವಾಗಿದ್ದುದರಿಂದಲೂ, ಸರ್ವರ ಪ್ರಯೋಜನಕ್ಕಾಗಿ ನಾನು ಕನ್ನಡ ಟಿಪ್ಪಣಿಯನ್ನು ಬರೆದಿರುತ್ತೇನೆ. ಇದರ ಪ್ರಯೋಜನವನ್ನು ವೀರಶೈವರು ಹೊಂದಿ ನನ್ನ ಶ್ರಮವನ್ನು ಸಾಫಲ್ಯಗೊಳಿಸುವ ರೆಂದು ನಂಬಿದ್ದೇನೆ.

ಈ ಗ್ರಂಥಮುದ್ರಣಕ್ಕಾಗಿ ವಿದ್ಯಾಭಿಮಾನಿಗಳೂ, ಗ್ರಂಥಪ್ರಚಾರಕರಿಗೆ ಪ್ರೋತ್ಸಾಹಕರೂ, ಶಮದಮಾದಿ ಗುಣಾನ್ವಿತರೂ ಆದ ನಂಜನಗೂಡು ತಾಲ್ಲೋಕು ಸುತ್ತೂರು ಸಿಂಹಾಸನ ಮಠದ ಬ್ರ|| ಶ್ರೀ|| ವೇ|| ಶಿವರಾತ್ರಿಸ್ವಾಮಿಯವರು ೧೦೦ ರೂಪಾಯಿಗಳನ್ನು ಕೊಡುತ್ತೇವೆಂದು ವಾಗ್ದಾನಮಾಡಿದ್ದಾರೆ. ಇದಕ್ಕಾಗಿ ಈ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಈ ಗ್ರಂಥಕಾರನು ನಂಜನಗೂಡು ತಾಲ್ಲೋಕು ಸುತ್ತೂರು ಸಿಂಹಾಸನದ ಶ್ರೀಗುರುನಂಜಾರ್ಯರ ಶಿಷ್ಯರಾದ ಶ್ರೀಚೆನ್ನಬಸವಸ್ವಾಮಿಯವರೇ ಮೊದಲಾದವರ ಹೇಳಿಕೆಯ ಪ್ರಕಾರವಾಗಿ ಈ ಗ್ರಂಥಕ್ಕೆ ಕರ್ನಾಟಕ ಟೀಕೆಯನ್ನು ಬರೆದಿರುವಂತೆ ತಿಳಿಯಬರುತ್ತದೆ. ಶುದ್ಧವಾದೀ ಪ್ರತಿಯು ದೊರೆದರೆ ಮುಂದೆ ಮುದ್ರಣಮಾಡಿಸುವೆನು.

ಚರಮೂರ್ತಿ

ಮೈಸೂರು. 8—4—1929

ಸೋಮಶೇಖರಸ್ವಾಮಿ,
ನಮಶ್ಶಿವಾಯಮಠ.



# ಶುದ್ಧಾಶುದ್ಧಪತ್ರಿಕಾ.



| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೭ | ೨೩ | ಬಹ್ಮ | ಬ್ರಹ್ಮ |
| ೧೨ | ೧೧ | ತ್ರಾತ | ತ್ರಾತ್ |
| ೧೨ | ೨೫ | ಹೆಳ | ಹೇಳ |
| ೧೩ | ೨ | ದಾರ್ಢ್ಯತೇ | ಧಾರ್ಯ್ಯತೇ |
| ೧೫ | ೨೨ | ದುಷ್ಟರಿಂ | ದುಷ್ಟರಂ |
| ೧೬ | ೫ | ಶ್ರಿ | ಶ್ರೀ |
| ೨೧ | ೧೪ | ಅಯು | ಆಯು |
| ೨೧ | ೨೦ | ಠ | ಯ |
| ೨೬ | ೨೫ | ಸಮಂತು | ಸುಮಂತು |
| ೩೯ | ೨೩ | ಬಹ್ಮ | ಬ್ರಹ್ಮ |
| ೩೯ | ೨೪ | ಎಂಬಿಲಿಗೆ | ಎಂಬಿಲ್ಲಿಗೆ |
| ೪೦ | ೨೯ | ರಕವರ್ಣ | ರಕ್ತವರ್ಣ |
| ೪೨ | ೧೪ | ವೃತ್ತಿಜಂ | ಮೃತ್ತಿಜಂ |
| ೫೧ | ೮ | ಷಟ್ದರ್ಶನ | ಷಡ್ದರ್ಶನ |
| ೫೨ | ೨೪ | ಕಾರಣವನ್ನು | ಕಾರಣವನ್ನೂ |
| ೫೩ | ೧೬ | ಪುಸು ಕ | ಪುಸ್ತುಕ |
| ೫೮ | ೨೫ | ಕಮಂಡುಲ | ಕಮಂಡುಲು |
| ೬೩ | ೬ | ಲೋಯತಿಕ | ಲೋಕಾಯತಿಕ |
| ೬೪ | ೧೧ | ಯೋಪದೆಶೇ | ಯೋಪದೇಶೇ |
| ೬೫ | ೧ | ದ್ವಿತೀಯೋ | ತೃತೀಯೋ |
| ೬೫ | ೨೪ | ರೀಶ್ವರವಾದ | ಸೀಶ್ವರವಾದ |
| ೮೪ | ೧೭ | ಪರಮೇಶ್ವರನ | ಪರಮೇಶ್ವರನು |
| ೮೯ | ೨೬ | ಸಮಾನನ್ನಾಗಿ | ಸಮಾನನನ್ನಾಗಿ |
| ೯೧ | ೯ | ಶಿವಂ ಕರಃ | ಶಿವಂಕರಃ |
| ೯೧ | ೧೭ | ಪರಿತಜ್ಯೇ | ಪರಿತ್ಯಜ್ಯೇ |
| ೧೧೫ | ೧೫ | ದುಕವಾಗಿದೆ | ದುಕ್ತವಾಗಿದೆ |

| | | | |
|---|---|---|---|
| ೧೨೦ | ೬ | ಶಕಿಃ | ಶಕ್ತಿಃ |
| ೧೨೦ | ೧೦ | ಭ್ರಾಮತ್ಯ | ಭ್ರಾಮಯತ್ಯ |
| ೧೨೨ | ೧೯ | ರ ದ್ರ | ರುದ್ರ |
| ೧೩೬ | ೨೪ | ಭೀತಿಯಿ ದಾ | ಭೀತಿಯಿಂದಾ |
| ೧೪೫ | ೧೮ | ಸ್ಧಾನ | ಸ್ಥಾನ |
| ೧೪೮ | ೧೩ | ಮೋಪದೇಶೇ | ಸಂವಾದವಿಚಾರೋ |
| ೧೬೯ | ೨೭ | ಗಾದ | ನಾದ |
| ೧೮೧ | ೨೭ | ತನ | ತನ್ನ |
| ೧೮೬ | ೨೫ | ಹೇಳಲ್ಪಟ್ವದೆ | ಹೇಳಲ್ಪಟ್ಟದೆ |
| ೧೯೦ | ೧೩ | ಮರುತೂ | ಮರುತ್ಸೂ |
| ೧೯೩ | ೨೧ | ಅಲಂಕರಿಸಿದನು. | ಅಲಂಕರಿಸಿದನು |
| ೧೯೬ | ೯ | ತ್ರಿಯಂಬಕೋ | "ತ್ರಿಯಂಬಕೋ |
| ೧೯೮ | ೧೯ | ಬಂದುವಾದ | ಬಂಧುವಾದ |
| ೨೦೫ | ೨೦ | ಮೂರುಹೆಜ್ಜೆ | ಮೂರುಹೆಜ್ಜೆ |
| ೨೧೯ | ೨ | ವಿಥಾ | ವಿಧಾ |
| ೨೧೭ | ೯ | ಅಶ್ರೌತಂ | "ಅಶ್ರೌತಂ |
| ೨೨೯ | ೩೦ | ಸ್ಧಾನ | ಸ್ಥಾನ |
| ೨೪೧ | ೨ | ಮಹಾತ್ಮ್ಯಂ | ಮಾಹಾತ್ಮ್ಯಂ |
| ೨೪೭ | ೭ | ತಾ ಭಿಚಾಕಶೀಹಿ | ತಾಭಿಚಾಕಶೀಹಿ |
| ೨೪೮ | ೨೭ | ಅರ್ಥವನ್ನು | ಅರ್ಥವನ್ನು |
| ೨೫೬ | ೫ | ದೀಪನಂಜ್ಞಾನ | ದೀಪನಂ ಜ್ಞಾನ |



|| ಓಮ್ ||

ಶ್ರೀ ಶಿವಾಯ ಪರಬ್ರಹ್ಮಣೇನಮಃ.



# ಶಿವಾಧಿಕ್ಯಶಿಖಾಮಣಿಃ

## ಪ್ರಾರಭ್ಯತೇ.



ಗಾಯತ್ರೀಮಂತ್ರಮಧ್ಯಸ್ಥಭರ್ಗವಾಚ್ಯಮುಮಾಪತಿಂ |
ಸಮಸ್ತವೇದವೇದಾಂತವೇದ್ಯಂ ವಂದೇಽನಿಶಂ ಶಿವಮ್ ||೧||
ಯಂ ವೇದಾ ಸ್ಸಕಲಾ ಸ್ಸ್ತುವಂತ್ಯತಿಶಯಪ್ರೀತ್ಯನ್ವಿತಾ ಸ್ಸರ್ವದಾ |
ಯಂ ಪದ್ಮಾಸನ ಪದ್ಮಲೋಚನಮುಖಾ ದೇವಾ ಯಜಂತೇಽಖಿಲಾಃ ||
ಯಂ ಧ್ಯಾಯಂತಿ ಮುಮುಕ್ಷವೋ ಮುನಿಗಣಾ ಸ್ಸರ್ವೇ ಹೃದಬ್ಜಾಂತರೇ |
ತಂ ವಂದೇ ಜಗದೀಶ್ವರಂ ಶಶಿಕಲಾಭೂಷಂ ಶಿವಂ ಶಾಶ್ವತಮ್ ||೨||

---

ಗಿರಿರಾಜಸುತಾಮುಖತಾ |
ಮರಸಾಮೋದದ್ವಿರೇಫನಕಲಂಕ ಕೃಪಂ ||
ಪರಮೈಶ್ವರ್ಯಪ್ರಥಿತಂ |
ಗಿರಿಶಂ ಕಾಪಾಡುಗೆಮ್ಮನಿರದನವರತಂ ||



ಗಾಯತ್ರೀ ಮಂತ್ರದ ಮಧ್ಯದಲ್ಲಿರುವ 'ಭರ್ಗ' ಶಬ್ದದಿಂದ ವಾಚ್ಯನೂ, ಪಾರ್ವತೀ ವಲ್ಲಭನೂ, ಸರ್ವಜೀವರ ಬುದ್ಧಿಯನ್ನು ಪ್ರೇರಿಸತಕ್ಕವನೂ, ವೇದಗಳಿಂದಲೂ ಉಪನಿಷತ್ತುಗಳಿಂದಲೂ, ತಿಳಿಯಲಿಕ್ಕೆ ಯೋಗ್ಯನೂ, ಆಗಿರುವ ಶ್ರೀಶಿವಸ್ವಾಮಿಯನ್ನು ಯಾವಾಗಲೂ ನಮಿಸುತ್ತೇನೆ ||೧||

ಯಾವನನ್ನು ಎಲ್ಲಾ ವೇದಗಳೂ, ಅತಿಶಯ ಪ್ರೇಮದಿಂದ ಕೂಡಿದವುಗಳಾಗಿ ಯಾವಾಗಲೂ ಸ್ತುತಿಸುತ್ತವೆಯೋ, ಯಾವನನ್ನು ಬ್ರಹ್ಮವಿಷ್ಣು ಮೊದಲಾದ ಎಲ್ಲಾ ದೇವತೆಗಳು ಪೂಜಿಸುತ್ತಿರುವರೋ, ಯಾವನನ್ನು ಮೋಕ್ಷವನ್ನು ಬಯಸುವ ಎಲ್ಲಾ ಮುನಿಸಮೂಹಗಳು ತಮ್ಮ ಹೃದಯಕಮಲದೊಳಗೆ ಧ್ಯಾನಿಸುತ್ತಿರುವರೋ, ಮೂರು ಲೋಕಗಳಿಗೊಡೆಯನೂ, ಚಂದ್ರಶೇಖರನೂ. ಸತ್ಯರೂಪನೂ, ಆಗಿರುವ ಆ ಶಿವನನ್ನು ನಮಿಸುತ್ತೇನೆ. ||೨||

ಗುರುಂ ಶ್ರೀ ರೇಣುಕಾಚಾರ್ಯಮನಂತಮಹಿಮಾಸ್ಪದಂ |
ಅಪ್ರಾಕೃತಗುಣಾಧಾರಂ ವಂದೇಽಹಂ ಪ್ರಮಥಾಧಿಪಂ ||೧||
ರೇವಣಸಿದ್ಧಪುತ್ರೋಽಹಂ ರೇವಣಾರಾಧ್ಯನಾಮಕಃ |
ರಚಯಾಮಿ ಪ್ರಹರ್ಷೇಣ ಶತವಾದ ಸಮಾಹೃತಿಮ್ ||೨||
ರಘುನಾಯಕಬೋಧಾರ್ಥಂ ಶಿವಾಧಿಕ್ಯಶಿಖಾಮಣಿಂ ||

ಶ್ರೀಮದ್ಬ್ರಹ್ಮವಿಷ್ಣುರುದ್ರೇಂದ್ರಾದಿಸಕಲದೇವವಾರವಂದಿತ ಚರಣಾರವಿಂದಾಖಿಲಯೋಗಿಜನಹೃದಯಾರವಿಂದನಿಲಯಾಪ್ತಮೂರ್ತಿ ಸಚ್ಚಿದಾನಂದಾತ್ಮಕಪರಬ್ರಹ್ಮಶಿವಾವಿರ್ಭೂತಸ್ಯ, ಅಪ್ರಾಕೃತಗುಣಗಣರಮಣೀಯಸ್ಯ, ಪ್ರಮಥಸಮಾಜಾಧ್ಯಕ್ಷಸ್ಯ, ಶಿವಾಜ್ಞಯೈವಾಸ್ಮಿನ್ಮರ್ತ್ಯಲೋಕೇ ಕೊಲ್ಲಿಪಾಕಿಸುಕ್ಷೇತ್ರವಿರಾಜಮಾನಸೋಮೇಶ್ವರಾಭಿಧದಿವ್ಯಲಿಂಗಾದಾವಿರ್ಭೂತಸ್ಯ, ಮುಮುಕ್ಷ್ವಾಶ್ರಯಣೀಯಾನವದ್ಯವೀರಶೈವಮತಸ್ಥಾಪಕಸ್ಯ, ಮಲಯಾಚಲಮಹಾಮಹೀರುಹಸ್ನಿಗ್ಧಛಾಯಾಮಧ್ಯಮಂಡಿತಮಂಡಪಮಂಡನಾಯಮಾನಸಪ್ತಶಿಸಪ್ತಸಹಸ್ರಮುನಿವರವಾರವಂದಿತ ಚರಣಾರವಿಂದಾಯುಸಮಾಚಮಿತ ಸಪ್ತಸಾಗರಾಯವಿಂಧ್ಯಧರಣೀಧರಸ್ತಂಭಕಾಚುಕುಂ

---

ಅನಂತಮಹಿಮೆಗಳಿಗಾಸ್ಪದನೂ, ಅಪ್ರಾಕೃತಗುಣಗಳಿಗಾಧಾರನೂ, ಪ್ರಮಥಗಂಗೊಡೆಯನೂ ಆದ ಶ್ರೀ ರೇಣುಕಾಚಾರ್ಯನನ್ನು ನಮಸ್ಕರಿಸುತ್ತೇನೆ. ||೧||

ರೇಣುಕಾಚಾರ್ಯನ ಕುಲದಲ್ಲಿ ಹುಟ್ಟಿದ ಶ್ರೀ ರೇವಣಸಿದ್ಧನ ಮಗನಾದ ರೇವಣಾರಾಧ್ಯನಾಮಕನಾದ ನಾನು ನೂರು ಸಂವಾದಭೇದವುಳ್ಳ "ಶಿವಾಧಿಕ್ಯಶಿಖಾಮಣಿ" ಎಂಬ ಸಂಗ್ರಹಗ್ರಂಥವನ್ನು ಮುದಿಗೆರೆಯ ರಘುವಪ್ಪನಾಯಕನ ತಿಳುವಳಿಕೆಗಾಗಿ ರಚಿಸುವೆನು ||೨||

ಸಂಪದ್ಯುಕ್ತರಾದ ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಮೊದಲಾದ ದೇವತೆಗಳ ಸಮೂಹದಿಂದ ನಮಿಸಲ್ಪಟ್ಟ ಪಾದಕಮಲವುಳ್ಳವನೂ, ಸಮಸ್ತ ಯೋಗಿಗಳ ಹೃದಯ ಕಮಲವೆಂಬ ಮನೆಯಲ್ಲಿ ವಾಸಿಸುತ್ತಿರುವವನೂ, ಪೃಥಿವ್ಯಾದ್ಯಷ್ಟತನುಗಳುಳ್ಳವನೂ, ಸಚ್ಚಿದಾನಂದ ಸ್ವರೂಪನೂ, ಆದ ಪರಬ್ರಹ್ಮಶಿವನದೆಸೆಯಿಂದ ಹುಟ್ಟಿದವನೂ, ಮಾಯಾಸಂಬಂಧ ರಹಿತಗಳಾದ ಗುಣಗಳ ಸಮೂಹದಿಂದ ರಮಣೀಯನೂ, ಪ್ರಮಥ ಸಮಾಜಕ್ಕೆ ಅಧಿಕಾರಿಯೂ ಶಿವಾಜ್ಞೆಯಿಂದಲೇ ಈ ಮರ್ತ್ಯಲೋಕದಲ್ಲಿ ಕೊಲ್ಲಿಪಾಕಿಯಲ್ಲಿರುವ ಸೋಮೇಶ್ವರ ಲಿಂಗದ ದೆಸೆಯಿಂದ ಆವಿರ್ಭವಿಸಿ ಮೋಕ್ಷಾಪೇಕ್ಷಿಗಳಿಂದ ಆಶ್ರಯಿಸಲಿಕ್ಕೆ ಯೋಗ್ಯನೂ, ದೋಷರಹಿತವಾದುದರಿಂದ ಸರ್ವಮತ ಶ್ರೇಷ್ಠವಾದ ವೀರಶೈವಮತವನ್ನು ಸ್ಥಾಪಿಸಿದವನೂ, ಮಲಯಾಚಲದಲ್ಲಿ ಒಪ್ಪುತ್ತಿರುವ ಮಹಾವೃಕ್ಷದ ಸಾಂದ್ರವಾದ ನೆರಳಿನ ಮಧ್ಯದಲ್ಲಿ ಅಲಂಕಾರವುಳ್ಳುದಾಗಿ ಮಾಡಲ್ಪಟ್ಟ ಯೋಗಮಂಟಪಕ್ಕೆ ಅಲಂಕಾರವಾದ ಎಪ್ಪತ್ತೇಳು ಸಾವಿರ ಸಂಖ್ಯಾಕರಾದ ಮುನಿಶ್ರೇಷ್ಠರ ಸಮೂಹದಿಂದ ನಮಿಸಲ್ಪಟ್ಟ ಪಾದಕಮಲಗಳುಳ್ಳವನೂ ಸಮುದ್ರಗಳನ್ನು ಆಚಮನ ಮಾ

ಭಸಂಭವಾಯಮುನಯೇ ಶಿವಾದ್ವೈತತತ್ತ್ವೋಪದೇಶಕಸ್ಯ, ಶಿವಲಿಂಗಂ ದತ್ವಾ ಶ್ರೀ
ಶಂಕರಾಚಾರ್ಯಾಭೀಷ್ಟಂ ಕೃತವತಃ, ಲಂಕಾನಗರ್ಯಾಂಯುಗಪತ್ತ್ರಿಕೋಟಿಶಿವಲಿಂಗ
ಪ್ರತಿಷ್ಠಾಪಕಸ್ಯ, ಕುಂಭಕೋಣಾದಿಸ್ಥಾನಪ್ರಸಿದ್ಧಾನ್ನವಕೋಟಿಸಿದ್ಧಾನ್ ನಿಮೇಷ
ಮಾತ್ರೇಣ ಮೇಷಾನ್ನಿರ್ಮಾಯ ಮಹಾನವಸಿದ್ಧಾನ್ ತನ್ಮೇಷಪಾಲಕಾನ್ ಕೃತ್ವಾ
ದಭ್ರದಭ್ರಮಹಾಮಹತ್ತ್ವಸಹಿತ ಸ್ವಬುದ್ಧಿಪ್ರಾರಬ್ಧಪ್ರಚುರತರಸಿದ್ಧಿಸಮೃದ್ಧಿವೃದ್ಧ
ಸಿದ್ಧಕುಲಚಕ್ರವರ್ತಿನಃ, ರಾಜಾಧಿರಾಜರಾಜಪರಮೇಶ್ವರಾಯ ಶ್ರೀವಿಕ್ರಮಾವತಾ
ರಾಯ ವಿಕ್ರಮಾದಿತ್ಯಾಯ ಗಗನಮಾರ್ಗಗಮನಸಾಹಾಯ್ಯಕಮಹಾಮಣಿಮ
ಯಾಷ್ಟಾಪದಪಾದುಕಾದ್ವಯಂ ಸ್ವಾರ್ಥಿತಾರ್ಥಸಾರವರ್ಷಿಣೀಂ ಪರತರಕಂಥಾಮ
ಕ್ಷಯಾಮೃತಭರಿತಭಿಕ್ಷಾಪಾತ್ರಂ ವಿಶ್ವಕರ್ಮನಿರ್ಮಿತಾಂ ಸರ್ವಾಭೀಷ್ಟಪ್ರದಾಂ ಕ್ಷುರಿ
ಕಾಂ ಭುಕ್ತಿಮುಕ್ತಿಪ್ರದಂ ಮರಕತಮಯಂ ಶಿವಲಿಂಗಂ ಚ ಕೃಪಯಾ ದತ್ತವತಃ,
ವಿಷ್ಣುಕಾಂಚೀಪುರೀನಾಯಕ ಕೇಶವಮೂರ್ತಿ ಕಂಪಮಾನಶಿರಸ್ಸ್ಥಾಪಕಸ್ಯ, ಪೃಥು
ತರ ಪೃಥಿವೀಮಂಡಲೇ ಪ್ರಕಾಶಾಪ್ರಕಾಶರೂಪೇಣ ಚತುರ್ದಶಶತವರ್ಷಪರ್ಯಂತಂ ಸ್ಥಿ
ತ್ವಾ ಪ್ರಚಂಡಪಾಷಂಡ ಪುಂಡರೀಕಷಂಡಮದಪುಂಡರೀಕಸ್ಯ, ಸಸಮಲಾಂತಃಕರಣ

---

ಡಿದ ವಿಂಧ್ಯಪರ್ವತವನ್ನು ಸ್ತಬ್ಧವನ್ನಾಗಿ ಮಾಡಿದ ಅಗಸ್ತ್ಯಮುನಿಗೆ ಶ್ರೇಷ್ಠವಾದ ಶಕ್ತಿವಿಶಿಷ್ಟಶಿ
ವಾದ್ವೈತ ತತ್ತ್ವವನ್ನು ಪದೇಶಿಸಿದವನೂ, ಶ್ರೀ ಶಂಕರಾಚಾರ್ಯನಿಗೆ ಶಿವಲಿಂಗವನ್ನು ಕೊಟ್ಟು
ಇಷ್ಟಾರ್ಥವನ್ನು ಪೂರ್ಣಗೊಳಿಸಿದವನೂ, ಲಂಕಾನಗರಿಯಲ್ಲಿ ಒಂದೇಮುಹೂರ್ತದಲ್ಲಿ ಮೂರು
ಕೋಟಿಶಿವಲಿಂಗಗಳನ್ನು ಮೂರುಕೋಟಿ ಆಚಾರ್ಯರೂಪವನ್ನು ಹೊಂದಿ ಪ್ರತಿಷ್ಠಿಸಿದವನೂ ಕುಂ
ಭಕೋಣ ಮೊದಲಾದ ಸ್ಥಳಗಳಲ್ಲಿ ಪ್ರಸಿದ್ಧರಾಗಿದ್ದ ನವಕೋಟಿ ಸಂಖ್ಯಾಕರಾದ ಸಿದ್ಧರನ್ನು
ನಿಮಿಷಮಾತ್ರದಿಂದ ಕುರಿಯ ಜನ್ಮವನ್ನು ಹೊಂದಿದವರನ್ನಾಗಿ ಮಾಡಿ; ಶ್ರೇಷ್ಠರಾದ ಒಂಭ
ತ್ತುಮಂದಿ ಸಿದ್ಧರನ್ನು ಆ ಕುರಿಗಳಂ ಕಾಯುವವರನ್ನಾಗಿ ನಿಯಮಿಸಿ, ಅಧಿಕವೂ ಅಲ್ಪವೂ
ಆದ ಶ್ರೇಷ್ಠವಾದ ಮಹಿಮೆಗಳಿಂದಕೂಡಿದ ತನ್ನ ಪ್ರಜ್ಞಾಶಕ್ತಿಯಿಂದ ಉಪಕ್ರಮಿಸಲ್ಪಟ್ಟ
ಬಹಳ ಪ್ರಚುರವಾದ ಸಿದ್ಧಿಗಳ ಪೆರ್ಚುಗೆಯುಳ್ಳ ಜ್ಞಾನವೃದ್ಧರಾದ ಸಿದ್ಧರ ಸಮೂಹಕ್ಕೆ
ಚಕ್ರವರ್ತಿಯೂ, ರಾಜಾಧಿರಾಜರಿಗೊಡೆಯನಾದ ಶ್ರೀವಿಕ್ರಮಾವತಾರವುಳ್ಳವನಾದ ವಿಕ್ರಮಾದಿ
ತ್ಯನಿಗೋಸ್ಕರ ಆಕಾಶಮಾರ್ಗದಲ್ಲಿ ಸಂಚರಿಸುವುದಕ್ಕೆ ಸಾಹಾಯ್ಯವನ್ನು ಮಾಡುವ ಶ್ರೇಷ್ಠವಾ
ದ ರತ್ನಗಳಿಂದ ಕೆತ್ತಲ್ಪಟ್ಟ ಸುವರ್ಣದ ಪಾದುಕೆಗಳೆರಡನ್ನೂ, ಅಪೇಕ್ಷಿಸಿದಷ್ಟು ವರಹಗಳನ್ನು
ಸುರಿಸುವ ಶ್ರೇಷ್ಠವಾದ ಕಂಥೆಯನ್ನೂ, ನಾಶವನ್ನು ಹೊಂದದ ಅಮೃತದಿಂದ ತುಂಬಿದ ಭಿಕ್ಷಾ
ಪಾತ್ರೆಯನ್ನೂ ದೇವಶಿಲ್ಪಿಯಾದ ವಿಶ್ವಕರ್ಮನಿಂದ ಮಾಡಲ್ಪಟ್ಟ ಸಕಲೇಷ್ಟಾರ್ಥಗಳನ್ನು ಕೊ
ಡುವ ಚೂರಿಯನ್ನೂ, ಭೋಗಮೋಕ್ಷಂಗಳಂ ಕೊಡುವ ಶ್ರೇಷ್ಠವಾದ ಮರಕತ ರತ್ನಮಯ
ವಾದ ಶಿವಲಿಂಗವನ್ನೂ ಕೃಪೆಯಿಂದ ಕೊಟ್ಟವನೂ, ವಿಷ್ಣುಕಾಂಚಿಗೆ ಅಧಿದೇವತೆಯಾದ ವಿಷ್ಣು

ಮಸುಮುನಿತತಿನುತಿಪಾತ್ರಸ್ಯ, ಲಿಂಗಾಂಗೈಕ್ಯಬೋಧಕಶಿವಪಂಚಾಕ್ಷರಮಹಾಮಂ ತ್ರಪ್ರೋಚ್ಚಾರತ್ವರಮಾಣವದನಾರವಿಂದಸ್ಯ, ಶಿವಧ್ಯಾನಾಸಕ್ತಚಿತ್ತಸ್ಯ, ಉತ್ತಮಾಂ ಗಕಲಿತೇಷ್ಟಲಿಂಗಸ್ಯ, ಶಿಖಾಲಂಬಿತಮಸ್ತಕಸ್ಯ, ಭಸ್ಮತ್ರಿಪುಂಡ್ರಮಂಡಿತಫಾಲಸ್ಯ, ರುದ್ರಾಕ್ಷಮಾಲಾಽಲಂಕೃತಕಂಠಸ್ಯ, ಮುಕ್ತ್ಯಂಗನಾಲೋಕನಲೋಲಲೋಚನಸ್ಯ, ಮುಮುಕ್ಷುಜನತಾಭಯದಹಸ್ತಸ್ಯ, ಸ್ವೀಯಕೃಪಾಕಟಾಕ್ಷವೀಕ್ಷಣಮಾತ್ರೇಣಕ್ಷಿ ತಿಪತಿಶತಿರಕ್ಷಣದಕ್ಷಸ್ಯ, ವಂದಮಾನಬೃಂದಾರಕಬೃಂದಸುರದ್ರುಮಾಯಮಾನಸ್ಯ, ವೇದವೇದಾಂತಾಗಮಪುರಾಣಪ್ರಭೃತಿ ಪ್ರಭೂತಾನವದ್ಯವಿದ್ಯಾ ಕ್ಷೀರಪಾರಾವಾರ ಪಾರಂಗತಸ್ಯ, ಅಗಣಿತಶಮದಮಾದಿಗುಣಮಣಿಗಣರೋಹಣ ಧರಣೀಧರಸ್ಯ, ಶ್ರೀ ರೇಣುಕಗುರೋಃ ಕೃತೌ ದ್ವಾದಶಸಹಸ್ರಿಕಾಯಾಮಿಶರಮತಕೋಲಾಹಲಸಮಾಖ್ಯ ತೌ ಸಾರಸಂಗ್ರಹರೂಪಸ್ಯಾಸ್ಯ ಶಿವಾಧಿಕ್ಯಶಿಖಾಮಣೇಃ ಶತಸಂವಾದನಾಮಧೇಯ ಕ್ರಮಃ ಕಥ್ಯತೇ.

---

ಮೂರ್ತಿಯ ನಡುಗುತ್ತಿದ್ದ ತಲೆಯನ್ನು ನಡುಕಿಲ್ಲದುದನ್ನಾಗಿ ಮಾಡಿದವನೂ, ವಿಶಾಲವಾದ ಭೂಲೋಕದಲ್ಲಿ ಪ್ರಕಾಶಾಪ್ರಕಾಶರೂಪದಿಂದ ಒಂದು ಸಾವಿರದ ನಾಲ್ಕುನೂರು ವರ್ಷಗಳ ವರೆಗಿದ್ದು ಕ್ರೂರರಾದ ಪಾಷಂಡರೆಂಬ ಆನೆಗಳ ಸಮೂಹಕ್ಕೆ ಮದವೇರಿದ ಆನೆಯಂತಿವರ್ತಿ ಸಿದವನೂ, ಪಾಪರಹಿತವಾದ ಮನಸ್ಸನ್ನುಳ್ಳ ಮಸುಮುನಿಗಳ ಸ್ತುತಿಗಳಿಗೆ ಪಾತ್ರನೂ, ಶ್ರೇ ಷ್ಠವಾದ ಲಿಂಗಾಂಗ ಸಾಮರಸ್ಯವಂ ಬೋಧಿಸುವ ಶಿವಪಂಚಾಕ್ಷರ ಮಹಾಮಂತ್ರವನ್ನು ಉ ಚ್ಚರಿಸುವುದರಲ್ಲಿ ಆತುರಪಡುವ ಮುಖವುಳ್ಳವನೂ, ಶಿವನನ್ನು ಚಿಂತಿಸುವುದರಲ್ಲಿ ಆಸಕ್ತವಾದ ಮನಸುಳ್ಳವನೂ, ಶಿರಸ್ಸಿನಲ್ಲಿ ಧರಿಸಲ್ಪಟ್ಟ ಇಷ್ಟಲಿಂಗವುಳ್ಳವನೂ, ಮಸ್ತಕದಲ್ಲಿ ಜೋಲಾಡು ತ್ತಿರುವ ಶಿಖೆಯುಳ್ಳವನೂ, ಭಸ್ಮದಿಂ ರಚಿತವಾದ ತ್ರಿಪುಂಡ್ರಗಳಿಂದ ಅಲಂಕರಿಸಲ್ಪಟ್ಟ ಹಣೆಯು ಳ್ಳವನೂ, ರುದ್ರಾಕ್ಷಮಾಲಿಕೆಯಿಂದಲಂಕರಿಸಲ್ಪಟ್ಟ ಕೊರಳುಳ್ಳವನೂ, ಮುಕ್ತಿವನಿತೆಯಂ ನೋ ಡುವುದರಲ್ಲಿ ಚಂಚಲವಾದ ನೇತ್ರಗಳುಳ್ಳವನೂ, ಮೋಕ್ಷವನ್ನು ಬಯಸುವ ಜನಕ್ಕೆ ಅಭಯ ವಂ ಕೊಡುವ ಕೈಯ್ಯುಳ್ಳವನೂ, ದಯಾರಸದಿಂ ಕೂಡಿದ ಕಡೆಗಣ್ಣಿನಿಂದ ನೋಡುವ ಮಾತ್ರ ದಿಂದ ರಾಜರ ಸಮೂಹವನ್ನು ಕಾಪಾಡುವುದರಲ್ಲಿ ಶಕ್ತನೂ, ನಮಿಸಿದ ದೇವತೆಗಳ ಸಮೂಹ ಕ್ಕೆ ಕಲ್ಪತರುವೂ, ಸಂಪದ್ಯುಕ್ತಗಳಾದ ವೇದೋಪನಿಷದಾಗಮಪುರಾಣ ಮೊದಲಾದ ಪ್ರಾಚು ರ್ಯವನ್ನೈದಿದ ದೋಷರಹಿತಗಳಾದ ವಿದ್ಯೆಗಳ ಸಮೂಹವೆಂಬ ಪಾಲ್ಗಡಲಿನ ಕಡೆಯನ್ನು ಹೊಂ ದಿದವನೂ, ಎಣಿಕೆ ಮಾಡಲಿಕ್ಕಾಗದ ಶಮದಮಾದಿ ಗುಣಗಳೆಂಬ ರತ್ನಗಳ ಸಮೂಹಕ್ಕೆ ರೋಹಣ ಪರ್ವತವಾದವನೂ ಆದ ಶ್ರೀರೇಣುಕನೆಂಬ ಗುರುವಿನ ಕೃತಿಯಾದ, ಹನ್ನೆರಡುಸಾವಿರ ಗ್ರಂಥಗ ಳುಳ್ಳ ''ಇತರಮತಕೋಲಾಹಲ,, ವೆಂಬ ಗ್ರಂಥದಲ್ಲಿರುವಸಾರವಾದ ವಿಷಯಗಳ ಸಂಗ್ರಹವಾದ ಈ ಶಿವಾಧಿಕ್ಯಶಿಖಾಮಣಿಯ ನೂರು ಸಂವಾದಗಳ ನಾಮಧೇಯಕ್ರಮವು ಹೇಳಲ್ಪಡುತ್ತದೆ.

ಚೋಳರೇಣುಕಸಂವಾದೇ ಶಿವಾಧಿಕ್ಯಶಿಖಾಮಣೌ |
ರಾಜಪಟ್ಟಾಭಿಷೇಕಾದಿ ಶಿವಯೋಗ್ಯರ್ಚನಾಂತಕಾಃ ||೧||
ತೇ ದ್ವಾದಶೋಪದೇಶಸ್ಥಸಂವಾದಾಸ್ತು ಶತಂಮತಂ |
ರಾಜಪಟ್ಟಾಭಿಷೇಕಶ್ಚ ತತ ಷೋಡಶದಾನಕಂ ||೨||
ವಿದ್ಯಾವತಾರೋ ವೇದೋಪವೇದಾಂಗಾನಾಂ ಚ ಲಕ್ಷಣಂ |
ನ್ಯಾಯಶಾಸ್ತ್ರಪುರಾಣ ಸ್ಮೃತಿ ಮೀಮಾಂಸಾದಿ ಲಕ್ಷಣಂ ||೩||
ಸಿದ್ಧಾಂತಭೇದಸಿದ್ಧಾಂತವೇದಪ್ರಾಮಾಣ್ಯಲಕ್ಷಣಂ |
ನಿಗಮಾಗಮಯೋರೈಕ್ಯಂ ತಯೋರರ್ಥಪ್ರಕಾಶನಂ ||೪||
ತದರ್ಥನಿರ್ಣಯೋ ನೂತನಕವಿವಾಕ್ಯನಿರಾಕೃತಿಃ |
ಪ್ರಥಮೋಪದೇಶೇ ಪಂಚಾದಶಸಂವಾದಪದ್ಧತಿಃ ||೫||
ಆಪ್ತತ್ವಂ ಸಾತ್ವಿಕತ್ವಂ ಚ ಶಂಭೋರ್ವೇದೋದ್ಭವಸ್ತಥಾ |
ವೇದನ್ಯಾಯೋ ವೇದವರಪ್ರದಾನಂ ಷಣ್ಮತಾದಿಕಂ ||೬||
ಶಾಸ್ತ್ರಪ್ರತಿಷ್ಠಾ ವಿಘ್ನೇಶಪಟ್ಟತಜ್ಜಪಲಕ್ಷಣೇ |
ಪ್ರೋಕ್ತಾ ದ್ವಿತೀಯೋಪದೇಶೇ ನವಸಂವಾದಪದ್ಧತಿಃ ||೭||

---

೧ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ರಾಜಪಟ್ಟಾಭಿಷೇಕವಿಧಿಯು. ೨ ನೆಯ ಸಂವಾದದಲ್ಲಿ ಷೋಡಶಮಹಾದಾನೋದ್ದೇಶವಿಧಿಯು. ೩ ನೆಯ ಸಂವಾದದಲ್ಲಿ ೧೮ ವಿದ್ಯೆಗಳ ಉತ್ಪತ್ತಿವಿಧಿಯು. ೪ ನೆಯ ಸಂವಾದದಲ್ಲಿ ವೇದಭೇದವಿಧಿಯು. ೫ ನೆಯ ಸಂವಾದದಲ್ಲಿ ಉಪವೇದವಿಧಿಯು. ೬ ನೆಯ ಸಂವಾದದಲ್ಲಿ ವೇದಾಂಗವಿಧಿಯು. ೭ ನೆಯ ಸಂವಾದದಲ್ಲಿ ವೇದದುಪಾಂಗಲಕ್ಷಣವು. ೮ ನೆಯ ಸಂವಾದದಲ್ಲಿ ಪುರಾಣೋದ್ದೇಶವಿಧಿಯು. ೯ ನೆಯ ಸಂವಾದದಲ್ಲಿ ಧರ್ಮಶಾಸ್ತ್ರಲಕ್ಷಣವಿಧಿಯು. ೧೦ ನೆಯ ಸಂವಾದದಲ್ಲಿ ಮೀಮಾಂಸಾಶಾಸ್ತ್ರಲಕ್ಷಣವಿಧಿಯು, ೧೧ ನೆಯ ಸಂವಾದದಲ್ಲಿ ಶೈವತಂತ್ರಲಕ್ಷಣವು. ೧೨ ನೆಯ ಸಂವಾದದಲ್ಲಿ ವೇದಾಗಮಪ್ರಾಮಾಣ್ಯವಿಧಿಯು. ೧೩ ನೆಯ ಸಂವಾದದಲ್ಲಿ ನಿಗಮಾಗಮೈಕ್ಯವಿಧಿಯು ೧೪ ನೆಯ ಸಂವಾದದಲ್ಲಿ ನಿಗಮಾಗಮಾರ್ಥನಿರ್ಣಯ ವಿಧಿಯು. ೧೫ ನೆಯ ಸಂವಾದದಲ್ಲಿ ವೇದಾರ್ಥನಿರ್ಣಯದಲ್ಲಿ ನೂತನಕವಿವಾಕ್ಯನಿರಾಕರಣವಿಧಿಯು.

೨ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಶಿವನಿಗೆ ಪರಮಾಪ್ತತ್ವನಿರ್ಣಯವು. ೨ ನೆಯ ಸಂವಾದದಲ್ಲಿ ಪರಮಾಪ್ತನಾದ ರುದ್ರನಿಗೆ ಸಾತ್ವಿಕತ್ವನಿರ್ಣಯವಿಧಿಯು. ೩ ನೆಯ ಸಂವಾದದಲ್ಲಿ ಶಿವನದೆಸೆಯಿಂದ ಸಕಲವೇದೋತ್ಪತ್ತಿವಿಧಿಯು. ೪ ನೆಯ ಸಂವಾದದಲ್ಲಿ ಸರ್ವವೇದಪ್ರೋಕ್ತನ್ಯಾಯವಿಚಾರವು. ೫ ನೆಯ ಸಂವಾದದಲ್ಲಿ ವೇದವರಪ್ರದಾನವಿಧಿಯು. ೬ ನೆಯ ಸಂವಾದದಲ್ಲಿ ವೈದಿಕಸಮ್ಮತ ಷಟ್ತಂತ್ರ ಷಡ್ದರ್ಶನಲಕ್ಷಣವು. ೭ ನೆಯ ಸಂವಾದದಲ್ಲಿ ಶಿವಶಾಸ್ತ್ರಪ್ರತಿಷ್ಠಾಫಲವಿಧಿಯು. ೮ ನೆಯ ಸಂವಾದದಲ್ಲಿ ಗಣಪತಿಪಟ್ಟಾಭಿಷೇಕವಿಧಿಯು. ೯ ನೆಯ ಸಂವಾದದಲ್ಲಿ ಗಣಪತಿಮಂತ್ರಜಪಸ್ತೋತ್ರವು.

ಕಾಪಾಲಿಕಂ ಪಾಂಚರಾತ್ರಂ ಮಾಯಾವಾದಶ್ಚ ಬೌದ್ಧಕಂ |
ಜೈನಂ ಚಾರ್ವಾಕ ಮಥ ತತ್ಸರ್ವಪ್ರಾಪ್ಯಪದಂ ಸ್ಫುಟಂ ||೮||
ಪ್ರೋಕ್ತಾ ತೃತೀಯೋಪದೇಶೇ ಸಪ್ತಸಂವಾದಪದ್ಧತಿಃ |
ವಿಷ್ಣೋರ್ನಾರಾಯಣಸ್ಯಾಥ ಕೇಶವಸ್ಯಾಮೃತಸ್ಯ ಚ ||೯||
ಪುರುಷಸ್ಯ ತಥೈತೇಷಾಂ ಪದಾನಾ ಮರ್ಥನಿರ್ಣಯಃ |
ಪ್ರೋಕ್ತಾ ಚತುರ್ಥೋಪದೇಶೇ ಪಂಚಸಂವಾದಪದ್ಧತಿಃ ||೧೦||
ಭವಾದಿನಾಮಪರ್ಯಾಯೋ ಭಗವಚ್ಛಬ್ದವಾಚ್ಯತಾ |
ಸದಾವಿರುದ್ಧಸ್ವಭಾವಪ್ರತಿಷೇಧಮುಖೇ ವಿಧಿಃ ||೧೧||
ಪ್ರೋಕ್ತಾ ಪಂಚೋಪದೇಶೇಽಪಿ ಚತುಸ್ಸಂವಾದಪದ್ಧತಿಃ |
ಪರೇಶಮೂರ್ತಿದ್ವೈವಿಧ್ಯಂ ಶ್ರೀಮಹೇಶಸ್ವರೂಪಕಂ ||೧೨||
ಮಹೇಶಾಧಿಕ್ಯಮಥ ತತ್ಪರಂ ಬ್ರಹ್ಮಾದಿನಾಮ ಚ |
ಪ್ರೋಕ್ತಾ ಷಷ್ಠೋಪದೇಶೇ ತು ಚತುಸ್ಸಂವಾದಪದ್ಧತಿಃ ||೧೩||

---

೩ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಶೈವಾವೈದಿಕಕಾಪಾಲಿಕಮತನಿರ್ಣಯವು ೨ನೆಯ ಸಂವಾದದಲ್ಲಿ ವೈಷ್ಣವಾವೈದಿಕಪಾಂಚರಾತ್ರಮತನಿರ್ಣಯವು. ೩ ನೆಯ ಸಂವಾದದಲ್ಲಿ ವೈದಿಕಾವೈದಿಕಮಾಯಾವಾದಮತಭೇದವು. ೪ ನೆಯ ಸಂವಾದದಲ್ಲಿ ಬೌದ್ಧಮತನಿರ್ಣಯವು ೫ ನೆಯ ಸಂವಾದದಲ್ಲಿ ಜೈನಮತ ನಿರ್ಣಯವು. ೬ ನೆಯ ಸಂವಾದದಲ್ಲಿ ಚಾರ್ವಾಕಮತಭೇದವು. ೭ ನೆಯ ಸಂವಾದದಲ್ಲಿ ಸರ್ವಮತದರ್ಶನ ಗಮ್ಯಸ್ಥಾನವಾದ ಶಿವಪದಸ್ವರೂಪನಿರ್ಣಯವು.

೪ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ವಿಷ್ಣುಪದವಿಗ್ರಹನಿರ್ಣಯವು. ೨ ನೆಯ ಸಂವಾದದಲ್ಲಿ ನಾರಾಯಣಶಬ್ದವಿಗ್ರಹನಿರ್ಣಯವು. ೩ ನೆಯ ಸಂವಾದದಲ್ಲಿ ಕೇಶವಶಬ್ದವಿಗ್ರಹನಿರ್ಣಯವು. ೪ ನೆಯ ಸಂವಾದದಲ್ಲಿ ಪುರುಷಶಬ್ದನಿರ್ಣಯವು. ೫ ನೆಯ ಸಂವಾದದಲ್ಲಿ ಶಿವನಿಗೆ ಅಮೃತಶಬ್ದವಾಚ್ಯತ್ವನಿರ್ಣಯವು

೫ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಶಿವನಿಗೆ ಭವವೃದಹರ ನಾಮಧೇಯನಿರ್ಣಯವು. ೨ ನೆಯ ಸಂವಾದದಲ್ಲಿ ಭಗವಚ್ಛಬ್ದ ವಾಚ್ಯತ್ವನಿರ್ಣಯವು ೩ ನೆಯ ಸಂವಾದದಲ್ಲಿ ಶಿವನ ಸ್ವಭಾವಸಿದ್ಧವಿರುದ್ಧಸ್ವರೂಪನಿರ್ಣಯವು ೪ ನೆಯ ಸಂವಾದದಲ್ಲಿ ದೇವತಾಂತರಪ್ರತಿಷೇಧಮುಖದಿಂದ ಶಿವಾಧಿಕ್ಯವಿಧಿಯು.

೬ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಪರಶಿವನ ಸಕಲನಿಷ್ಕಳಮೂರ್ತಿಸ್ವರೂಪನಿರ್ಣಯವು. ೨ ನೆಯ ಸಂವಾದದಲ್ಲಿ ತ್ರಿಮೂರ್ತ್ಯುತ್ಪತ್ತಿಕಾರಣಮಹೇಶ್ವರ ಸ್ವರೂಪವಿಧಿಯು. ೩ ನೆಯ ಸಂವಾದದಲ್ಲಿ ಮಹೇಶ್ವರಾಧಿಕ್ಯನಿರ್ಣಯವು. ೪ ನೆಯ ಸಂವಾದದಲ್ಲಿ ಮಹೇಶ್ವರನಿಗಿರುವ ಪರಬ್ರಹ್ಮಾದಿ ಪರ್ಯಾಯನಾಮಗಳ ವಿಚಾರವು.

ಅನ್ಯದೇವಪರಿತ್ಯಾಗ ಶ್ಶಂಭೋ ಸ್ತದ್ದೇವತಾತ್ಮತಾ |
ತ್ರಿಮೂರ್ತಿಸೃಷ್ಟಿಸ್ತ್ರೈಲೋಕ್ಯಂ ಗುಣಾಸ್ತ್ರೈಮೂರ್ತಿಭೇದತಾ ||೧೪||
ಸಶಕ್ತಿತ್ರೈಮೂರ್ತಿಭೇದೋ ರುದ್ರಾಧಿಕ್ಯಂ ತ್ರಿಮೂರ್ತಿಷು |
ದ್ವಯೋ ರ್ಮೂರ್ತ್ಯೋಶ್ಚ ಮಧ್ಯೇ ಶ್ರೀರುದ್ರಸ್ಯಾಧಿಕ್ಯಮುತ್ತಮಂ ||೧೫||
ರುದ್ರಸ್ಯ ವಿಶ್ವಾಧಿಕತ್ವ ಮೇಕೋ ರುದ್ರ ಇತಿ ಸ್ಥಿತಿಃ |
ಸಪ್ತಮೇ ತೂಪದೇಶೇ ಸ್ಯಾನ್ನವಸಂವಾದಪದ್ಧತಿಃ ||೧೬||
ರುದ್ರಸ್ಯ ವರ್ಣೋತ್ತಮತ್ವಂ ವಿಷ್ಣುಬ್ರಹ್ಮೋದ್ಭವ ಸ್ತತಃ |
ರುದ್ರಪ್ರಸನ್ನತಾ ವಿಷ್ಣೋ ರ್ಲಲಾಟೇ ಬ್ರಹ್ಮಣ ಸ್ತಥಾ ||೧೭||
ಪುಷ್ಪೇಽನಸೂಯಾಂಜಲಿಸ್ಥೇ ತಥಾ ರುದ್ರಪ್ರಸನ್ನತಾ |
ರುದ್ರಪಿಂಡಪ್ರದಾನೇನ ಬ್ರಾಹ್ಮಣಾನಾಂ ಸಮುದ್ಭವಃ ||೧೮||
ನಮಸ್ಕಾರಾರ್ಹತಾ ಶಂಭೋ ರುದ್ರಲಿಂಗಾರ್ಚನಕ್ರಮಃ |
ಲಕ್ಷಣಂ ಚ ಬ್ರಾಹ್ಮಣಾನಾಂ ಸಮಾಹ್ವಾನ ನಿರಾಕೃತಿಃ ||೧೯||

---

೭ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಶಿವೇತರದೇವತಾಪರಿತ್ಯಾಗಪೂರ್ವಕವಾಗಿ ಶಿವಾಧಿಕ್ಯನಿರ್ಣಯವು. ೨ ನೆಯ ಸಂವಾದದಲ್ಲಿ ಶಿವನಿಗೆ ಸರ್ವದೇವತಾಜನಕತ್ವ ನಿರ್ಣಯವು. ೩ನೆಯ ಸಂವಾದದಲ್ಲಿ ದೃಷ್ಟಾಂತಪೂರ್ವಕತ್ರಿಮೂರ್ತಿಭೇದನಿರ್ಣಯವು. ೪ನೆಯ ಸಂವಾದದಲ್ಲಿ ತ್ರಿಮೂರ್ತಿಸ್ವರೂಪಭೇದವು. ೫ ನೆಯ ಸಂವಾದದಲ್ಲಿ ಸಶಕ್ತಿ ತ್ರಿಲೋಕ ತ್ರಿಮೂರ್ತಿ ಭೇದನಿರ್ಣಯವು. ೬ ನೆಯ ಸಂವಾದದಲ್ಲಿ ತ್ರಿಮೂರ್ತಿಗಳಲ್ಲಿ ರುದ್ರಾಧಿಕ್ಯವು. ೭ ನೆಯ ಸಂವಾದದಲ್ಲಿ ದ್ವಿಮೂರ್ತಿ ಮಧ್ಯದಲ್ಲಿ ವಿಷ್ಣುವಿಗಿಂತ ರುದ್ರಾಧಿಕ್ಯನಿರ್ಣಯವು. ೮ ನೆಯ ಸಂವಾದದಲ್ಲಿ ರುದ್ರನಿಗೆ ಏಕತ್ವ ಸಂಖ್ಯಾನಿರ್ಣಯವು ೯ ನೆಯ ಸಂವಾದದಲ್ಲಿ ರುದ್ರನಿಗೆ ವಿಶ್ವಾಧಿಕತ್ವನಿರ್ಣಯವಿಧಿಯು

೮ನೆಯ ಉಪದೇಶದ ೧ನೆಯ ಸಂವಾದದಲ್ಲಿ ರುದ್ರನಿಗೆ ಬ್ರಾಹ್ಮಣ್ಯನಿರ್ಣಯವಿಧಿಯು. ೨ ನೆಯ ಸಂವಾದದಲ್ಲಿ ಆದಿರುದ್ರನದೆಸೆಯಿಂದ ಬ್ರಹ್ಮವಿಷ್ಣುಗಳ ಉತ್ಪತ್ತಿ ವಿಧಿಯು. ೩ ನೆಯ ಸಂವಾದದಲ್ಲಿ ನಾರಾಯಣನ ಲಲಾಟದಲ್ಲಿ ರುದ್ರಪ್ರಸನ್ನತಾವಿಧಿಯು, ೪ ನೆಯ ಸಂವಾದದಲ್ಲಿ ಬ್ರಹ್ಮಲಲಾಟದಲ್ಲಿ ರುದ್ರಪ್ರಸನ್ನತಾ ವಿಧಿಯು. ೫ ನೆಯ ಸಂವಾದದಲ್ಲಿ ಅನಸೂಯಕರಾಂಜಲಿ ಪುಷ್ಪದಲ್ಲಿ ರುದ್ರಪ್ರಸನ್ನತಾವಿಧಿಯು. ೬ ನೆಯ ಸಂವಾದದಲ್ಲಿ ಮಹಾಬ್ರಾಹ್ಮಣರುದ್ರಪಿಂಡ ಪ್ರದಾನದಿಂದ ಸರ್ವಬ್ರಾಹ್ಮಣೋತ್ಪತ್ತಿವಿಧಿಯು ೭ ನೆಯ ಸಂವಾದದಲ್ಲಿ ಸರ್ವಬ್ರಾಹ್ಮಣರಿಂದ ಮಹಾಬ್ರಾಹ್ಮಣನಾದ ರುದ್ರನಪೂಜಾವಿಧಿಯು. ೮ ನೆಯ ಸಂವಾದದಲ್ಲಿ ರುದ್ರಪೂಜಾ ನಮಸ್ಕಾರ ಸ್ತೋತ್ರಗಳಲ್ಲಿ ತತ್ಪರನಾದ ಬ್ರಾಹ್ಮಣನ ಲಕ್ಷಣವು ೯ ನೆಯ ಸಂವಾದದಲ್ಲಿ ರುದ್ರನೊಡನೆ ವಿಷ್ಣ್ವಾದಿಗಳಿಗೆ ಸಾಮ್ಯ ಸ್ತುತಿ ನಮಸ್ಕಾರ ನಿರಾಕರಣವು.

ಅಷ್ಟಮೇ ತೂಪದೇಶೇ ಸ್ಯಾನ್ನವಸಂವಾದಪದ್ಧತಿಃ |
ವಿಷ್ಣೋರ್ಭೃಗುಮುನೇಃ ಶಾಪಃ ಶಾಪಸ್ತ್ವನ್ಯೋನ್ಯಜಸ್ತಯೋಃ ||೨೦||
ಬ್ರಹ್ಮವಿಷ್ಣ್ವೋರ್ದಧೀಚೇಸ್ತು ಶಾಪೋ ಗೌತಮಶಾಪಕಃ |
ವಿಷ್ಣೋಸ್ತಪೋ ಬ್ರಹ್ಮತಪೋ ರುದ್ರಸ್ಯ ಸ್ವಸ್ವರೂಪತಾ ||೨೧||
ರುದ್ರೋಪಮನ್ಯುಭ್ಯಾಂ ವಿಷ್ಣೋರುಪದೇಶವಿಧಿಸ್ತತಃ |
ಪ್ರೋಕ್ತಾ ನವಮೋಪದೇಶೇ ನವಸಂವಾದಪದ್ಧತಿಃ ||೨೨||
ಶ್ರೀಕೃಷ್ಣಾರ್ಜುನಸಂವಾದಸ್ಸತ್ಯಸಂಧಾಚ್ಯುತೋದ್ಭವಃ |
ಜ್ವಾಲಾಲಿಂಗೋದ್ಭವೋ ಲಿಂಗಪ್ರತಿಷ್ಠಾ ಲಿಂಗಪೂಜನಂ ||೨೩||
ಅಷ್ಟಮೂರ್ತಿಸ್ವರೂಪತ್ವಮಷ್ಟಮೂರ್ತ್ಯಧಿದೇವತಾ |
ಬುದ್ಧಿಕರ್ಮಪ್ರೇರಕತಾ ತತ್ಕರ್ಮಫಲದಾನತಾ ||೨೪||
ಪ್ರೋಕ್ತಾ ದಶಮೋಪದೇಶೇ ನವಸಂವಾದಪದ್ಧತಿಃ |
ಯಕ್ಷರುದ್ರಾಜ್ಞಾಬಲಂ ಚ ಪಾಶುಪತ್ಯವಿಧಿಸ್ತತಃ ||೨೫||

---

೯ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ನಾರಾಯಣನಿಗೆ ಭೃಗುಶಾಪವಿಧಿಯು. ೨ ನೆಯ ಸಂವಾದದಲ್ಲಿ ವಿಷ್ಣುಬ್ರಹ್ಮರ ಪರಸ್ಪರ ಶಾಪವಿಧಿಯು. ೩ ನೆಯ ಸಂವಾದದಲ್ಲಿ ದಧೀಚಿಶಾಪವಿಧಿಯು. ೪ ನೆಯ ಸಂವಾದದಲ್ಲಿ ಗೌತಮಶಾಪವಿಧಿಯು, ೫ ನೆಯ ಸಂವಾದದಲ್ಲಿ ತಪೋನಿರತನಾದ ಬ್ರಹ್ಮನಸ್ವರೂಪವಿಧಿಯು. ೬ ನೆಯ ಸಂವಾದದಲ್ಲಿ ತಪೋನಿರತನಾದ ಆದಿನಾರಾಯಣನ ಸ್ವರೂಪವಿಧಿಯು. ೭ ನೆಯ ಸಂವಾದದಲ್ಲಿ ಸಕಲಲೋಕೋಪಕಾರಾರ್ಥವಾಗಿ ಆದಿ ರುದ್ರನು ಸ್ವಸ್ವರೂಪಧ್ಯಾನವಂ ಮಾಡಿದುದು. ೮ ನೆಯ ಸಂವಾದದಲ್ಲಿ ಆದಿ ರುದ್ರನಿಂದ ಆದಿನಾರಾಯಣನಿಗೆ ತಾರಕಬ್ರಹ್ಮೋಪದೇಶವಿಧಿಯು. ೯ ನೆಯ ಸಂವಾದದಲ್ಲಿ ಉಪಮನ್ಯುವಿನಿಂದ ನಾರಾಯಣನಿಗೆ ಪಾಶುಪತವ್ರತೋಪದೇಶಪೂರ್ವಕ ಶಿವಲಿಂಗದೀಕ್ಷಾವಿಧಿಯು.

೧೦ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ಕೃಷ್ಣಾರ್ಜುನ ಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯವಿಧಿಯು. ೨ ನೆಯ ಸಂವಾದದಲ್ಲಿ ಸತ್ಯಸಂಧಾಚ್ಯುತರಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯವು. ೩ ನೆಯ ಸಂವಾದದಲ್ಲಿ ಜ್ವಾಲಾಲಿಂಗದಸ್ವರೂಪನಿರ್ಣಯವು. ೪ ನೆಯ ಸಂವಾದದಲ್ಲಿ ಶಿವಲಿಂಗಾದಿಪ್ರತಿಷ್ಠಾವಿಧಿಯು. ೫ ನೆಯ ಸಂವಾದದಲ್ಲಿ ಶಿವಲಿಂಗಪೂಜಾದಿನಿರ್ಣಯವು. ೬ ನೆಯ ಸಂವಾದದಲ್ಲಿ ಆದಿರುದ್ರನ ಅಷ್ಟಮೂರ್ತಿಗಳ ಸ್ವರೂಪವಿಧಿಯು ೭ ನೆಯ ಸಂವಾದದಲ್ಲಿ ಅಷ್ಟಮೂರ್ತ್ಯಧಿದೇವತಾಸ್ವರೂಪವಿಚಾರವಿಧಿಯು. ೮ ನೆಯ ಸಂವಾದದಲ್ಲಿ ಶಿವನಿಗೆ ಸರ್ವಜೀವಬುದ್ಧಿಕರ್ಮಪ್ರೇರಕತ್ವನಿರ್ಣಯವು, ೯ ನೆಯ ಸಂವಾದದಲ್ಲಿ ರುದ್ರನಿಗೆ ಸಕಲಜೀವಂಗೆ ತತ್ತತ್ಕರ್ಮಫಲಪ್ರದಾನನಿರ್ಣಯವು.

ಬ್ರಹ್ಮಮೂರ್ಧಹೃತಿರ್ಬಾಣವೃಕಯೋರ್ವರದಾನತಾ |
ಹನುಮದ್ವಾಹನಂ ಶಂಭೋಃ ಪ್ರಳಯದ್ವಯಕರ್ತೃತಾ ||೨೭||
ವಿಷ್ಣ್ವವತಾರಸಂಹಾರೋ ಗಂಗೋತ್ಪತ್ತಿಸ್ತತೋ ಭವೇತ್ |
ಏಕಾದಶೋಪದೇಶೇ ಸ್ಯಾನ್ನವಸಂವಾದಪದ್ಧತಿಃ ||೨೮||
ರಾಮತ್ರಯನಿರಾಸಶ್ಚ ವಿಷ್ಣೋ ರಾಚಾರಧಿಕ್ಕೃತಿಃ |
ಊರ್ಧ್ವಪುಂಡ್ರನಿರಾಸಶ್ಚ ಶಂಖಚಕ್ರಾಂಕಧಿಕ್ಕೃತಿಃ ||೨೮||
ವಿಷ್ಣುದರ್ಶನಧಿಕ್ಕಾರಪೂರ್ವಕಂ ಶಿವದರ್ಶನಂ |
ಸರ್ವಶಾಸ್ತ್ರೇ ಶಿವಾಧಿಕ್ಯಂ ಗಾಯತ್ರ್ಯರ್ಥಪ್ರಕಾಶನಂ ||೨೯||
ವ್ಯಾಸಪ್ರೋಕ್ತಶಿವಾಧಿಕ್ಯಂ ಶಿವಾಚಾರವಿಚಾರತಾ |
ಶಿವಭಕ್ತಮಹತ್ತ್ವಂ ಚ ಶಿವಯೋಗ್ಯರ್ಚನಕ್ರಮಃ ||೩೦||
ತೇ ದ್ವಾದಶೋಪದೇಶಸ್ಥವಾದಾ ಏಕಾದಶಸ್ಮೃತಾಃ ||

೧೧ನೆಯ ಉಪದೇಶದ ೧ನೆಯ ಸಂವಾದದಲ್ಲಿ ಯಕ್ಷರುದ್ರಾಜ್ಞಾಸಾಮರ್ಥ್ಯವಿಧಿಯು. ೨ ನೆಯ ಸಂವಾದದಲ್ಲಿ ರುದ್ರನಿಗೆನಿತ್ಯಸಿದ್ಧವಾದ ಪಶುಪತಿಪಟ್ಟಾಭಿಷೇಕದ ನಿರ್ಣಯವಿಧಿಯು, ೩ ನೆಯ ಸಂವಾದದಲ್ಲಿ ಕಾಲಭೈರವರುದ್ರನಿಂದ ಬ್ರಹ್ಮಶಿರಶ್ಛೇದನವಿಧಿಯು. ೪ ನೆಯ ಸಂವಾದದಲ್ಲಿ ಬಾಣಾಸುರಯುದ್ಧವಿಚಾರವಿಧಿಯು. ೫ ನೆಯ ಸಂವಾದದಲ್ಲಿ ವೃಕಾಸುರವರಪ್ರದಾನವಿಚಾರವು. ೬ ನೆಯ ಸಂವಾದದಲ್ಲಿ ರುದ್ರನ ಹನುಮದ್ವಾಹನವಿಚಾರವು. ೭ ನೆಯ ಸಂವಾದದಲ್ಲಿ ರುದ್ರನಿಗೆ ಅಗ್ನಿಪ್ರಳಯ ಜಲಪ್ರಳಯ ಕರ್ತೃತ್ವದ ವಿಚಾರವು. ೮ ನೆಯ ಸಂವಾದದಲ್ಲಿ ರುದ್ರನಿಂದ ಆದಿನಾರಾಯಣಾವತಾರಸಂಹಾರವಿಧಿಯು. ೯ ನೆಯ ಸಂವಾದದಲ್ಲಿ ಗಂಗೋತ್ಪತ್ತಿನಿರ್ಣಯವು.

೧೨ ನೆಯ ಉಪದೇಶದ ೧ ನೆಯ ಸಂವಾದದಲ್ಲಿ ರಾಮತ್ರಯಾದ್ಯವತಾರಧಿಕ್ಕಾರವಿಧಿಯು. ೨ ನೆಯ ಸಂವಾದದಲ್ಲಿ ಹರಿಯ ಆಚಾರಧಿಕ್ಕಾರನಿರ್ಣಯವು. ೩ ನೆಯ ಸಂವಾದದಲ್ಲಿ ಊರ್ಧ್ವಪುಂಡ್ರನಿರಸನನಿರ್ಣಯವು. ೪ ನೆಯ ಸಂವಾದದಲ್ಲಿ ಶಂಖ ಚಕ್ರಮುದ್ರಾಧಾರಣನಿಷೇಧನಿರ್ಣಯವು. ೫ ನೆಯ ಸಂವಾದದಲ್ಲಿ ಪ್ರದೋಷಕಾಲದಲ್ಲಿ ವಿಷ್ಣುದರ್ಶನಾದಿನಿಷೇಧಪೂರ್ವಕ ಶಿವಲಿಂಗದರ್ಶನಾದಿನಿರ್ಣಯವಿಧಿಯು. ೬ ನೆಯ ಸಂವಾದದಲ್ಲಿ ಸಮಸ್ತ ಶಾಸ್ತ್ರಗಳಲ್ಲಿ ಶಿವಾಧಿಕ್ಯನಿರ್ಣಯವು. ೭ ನೆಯ ಸಂವಾದದಲ್ಲಿ ಗಾಯತ್ರೀಮಂತ್ರಮಧ್ಯದಲ್ಲಿರುವ ಭರ್ಗಸ್ ಶಬ್ದದಿಂದಲೂ ಭರ್ಗಶಬ್ದದಿಂದಲೂ ಶಿವಾಧಿಕ್ಯನಿರ್ಣಯವು. ೮ ನೆಯ ಸಂವಾದದಲ್ಲಿ ವ್ಯಾಸವಿರಚಿತ ಶಿವಾಧಿಕ್ಯವಿಧಿಯು. ೯ ನೆಯ ಸಂವಾದದಲ್ಲಿ ಶ್ರೀಭಸ್ಮಧಾರಣಾದಿ ವೀರಶೈವಾಚಾರನಿರ್ಣಯವು. ೧೦ ನೆಯ ಸಂವಾದದಲ್ಲಿ ಶಿವಭಕ್ತಮಹತ್ತ್ವಾಧಿಕ್ಯನಿರ್ಣಯವು. ೧೧ನೆಯ ಸಂವಾದದಲ್ಲಿ ಶಿವಯೋಗಿಯ ಮಹತ್ತ್ವಾಧಿಕ್ಯನಿರ್ಣಯವು.



ಪುರಾ ವೈಷ್ಣವಚೋಳಸ್ತು ಶಿವಕಾಂಚೀಸಮಾನಕಾಂ |
ಕರ್ತುಕಾಮೋ ವಿಷ್ಣುಕಾಂಚೀಂ ವಿಷ್ಣುಭಕ್ತೈಃ ಪ್ರಚೋದಿತಃ ||
ವೈಖಾನಸೈರ್ಭಾಗವತೈಃ ವೈಷ್ಣವೈಸ್ತತ್ತ್ವವಾದಿಭಿಃ |
ಪಾಂಚರಾತ್ರಪರಾಚಾರ್ಯೈರ್ವಿಷ್ಣುಮೂರ್ತಿಂ ಸಲಕ್ಷಣಾಂ ||
ಸೋಽಕಾರಯತ್ಪ್ರತಿಷ್ಠಾಂ ತು ಸಾಭೂನ್ನೂನಂ ಸಕಂಪನಾ |
ಅಹಮೇಕಾಮ್ರನಾಥಸ್ಯ ಶಂಭೋರಸ್ಮಿ ಕಥಂ ಸಮಾ ||
ತನ್ನಿಷ್ಕಂಪಪ್ರತಿಷ್ಠಾರ್ಥಮೇಕೋ ನಾಸ್ತಿ ಕರೋಮಿ ಕಿಂ |
ಚೋಳಸ್ಸಕಂಪ ಏಕಾಮ್ರನಾಥಂ ಸ ಶರಣಂ ಯಯೌ ||
ತತ ಏಕಾಮ್ರನಾಥೇನ ಚೋಳಸ್ಸ್ವಪ್ನೇ ಪ್ರಬೋಧಿತಃ |
ರೇಣುಕಂ ಗಣನಾಥಂ ತಂ ತದರ್ಥಂ ಶರಣಂ ಗತಃ ||
ಮಲಯಾದ್ರೌ ಚ ಲಂಕಾಯಾಂ ಕುಂಭಘೋಣೇ ಸ ರೇಣುಕಂ ||
ಗಣೇಂದ್ರಾಚಾರ್ಯಸಿದ್ಧಾಖ್ಯಂ ಸಪ್ರಣಾಮಸ್ತುತಿಂ ವ್ಯಧಾತ್ ||
" ಜಯಜಯ ಚಿಕಚಿತ್ತಧ್ಯೇಯ ಮಹಲ್ಲಿಂಗವೃತ್ತ |
ಭಸಿತಧವಿತಫಾಲಸ್ಫಾರರುದ್ರಾಕ್ಷಮಾಲ ||
ಶಿವಮನುಜಪಯುಕ್ತ ಕ್ಷೇಮಮುಕ್ತ್ಯೈಧ್ವರಕ್ತ |
ಗುರುಶಿವಪರಮೂರ್ತೇ ರೇಣುಕಖ್ಯಾತಕೀರ್ತೇ ||

ಪೂರ್ವಕಾಲದಲ್ಲಿ, ವಿಷ್ಣುಭಕ್ತನಾದ ವಿಜಯೇಂದ್ರಚೋಳನು—ವಿಷ್ಣುಭಕ್ತರ ಪ್ರೇರಣೆಯಿಂದ "ವಿಷ್ಣುಕಾಂಚಿಯನ್ನು" ಶಿವಕಾಂಚಿಯೊಡನೆ ಸಮಾನವನ್ನಾಗಿ ಮಾಡುವುದಕ್ಕೋಸ್ಕರ ಅಪೇಕ್ಷಿಸಿ, ವೈಖಾನಸವನ್ನು ಬಲ್ಲವರೂ, ಭಾಗವತರೂ, ವೈಷ್ಣವರೂ, ಯಥಾರ್ಥವಾದಿಗಳೂ ಆದ ಪಾಂಚರಾತ್ರಾಗಮದಲ್ಲಾಸಕ್ತರಾದ ಆಚಾರ್ಯರಿಂದ ಸಲಕ್ಷಣವಾದ ವಿಷ್ಣುವಿಗ್ರಹವನ್ನು ಮಾಡಿಸಿ ಪ್ರತಿಷ್ಠಿಸಿದನು. ಆ ಮೂರ್ತಿಯಾದರೋ "ಶಿವಕಾಂಚಿಯಲ್ಲಿರುವ ಏಕಾಮ್ರನಾಥನಾದ ಶಿವನಿಗೆ ನಾನು ಹೇಗೆ ಸಮಾನನಾಗುವೆನು" ಎಂದು ನಡುಗತಕ್ಕದ್ದಾಯಿತು. ಆ ಚೋಳನು—ವಿಷ್ಣುಮೂರ್ತಿಯನ್ನು ನಡುಗುವಿಕೆಯಿಂದ ತಪ್ಪಿಸಿ ಸ್ಥಿರವಾಗಿ ನಿಲ್ಲಿಸುವುದಕ್ಕಾಗಿ ಶಕ್ತನಾದವನೂ ಇಲ್ಲವು ನಾನೇನುಮಾಡಲಿ, ಎಂದು ಚಿಂತಿಸುತ್ತಾ; ನಡುಗತಕ್ಕವನಾಗಿ ಏಕಾಮ್ರನಾಥನಿಂದ ಬೋಧಿಸಲ್ಪಟ್ಟವನಾಗಿ, ಮಲಯಾದ್ರಿಯಲ್ಲೂ, ಲಂಕೆಯಲ್ಲೂ, ಕುಂಭಕೋಣದಲ್ಲೂ ಕ್ರಮದಿಂದ ರೇಣುಕಗಣೇಂದ್ರ, ರೇಣುಕಾಚಾರ್ಯ, ರೇವಣಸಿದ್ಧ ಎಂದು ಹೆಸರನ್ನು ಹೊಂದಿದ ರೇಣುಕನೆಂಬ ಗುರುವನ್ನು ಮರೆಹೊಕ್ಕು ನಮಸ್ಕಾರಪೂರ್ವಕವಾಗಿ ಸ್ತುತಿಸಿದನು. ಚಿತ್ತಸ್ಥೈರ್ಯವುಳ್ಳವರಿಂದ ಧ್ಯಾನಮಾಡಿಸಿಕೊಳ್ಳುವುದಕ್ಕೆ ಯೋಗ್ಯವೂ ಜ್ಞಾನೈಕಗಮ್ಯವೂ ಆದ ಮಹಾಲಿಂಗದ ಚರಿತ್ರೆಯುಳ್ಳವನೂ, ಭಸ್ಮತ್ರಿಪುಂಡ್ರದಿಂದ ಮಂಗಳಕರವಾದ ಹಣೆ

ಅಶ್ವಿನ್ಯಾತ್ಮಜಕೋಶನಮಸ್ತೇ | ಶಾಶ್ವತಚಿದ್ಭರಣೀಶನಮಸ್ತೇ |
ಕೃತ್ತಿಕಾಕೃತಮೋದನಮಸ್ತೇ | ಶ್ರುತ್ಯಧಿರೋಹಿಣಿಪಾದನಮಸ್ತೇ |
ಮೃಗಶೀರ್ಷಾಂಕಿತಮುದ್ರನಮಸ್ತೇ | ಮೃಗಮದಘನಸಾರಾರ್ದ್ರನಮಸ್ತೇ|
ಪುನಃಪುನರ್ವಸುವಾಸನಮಸ್ತೇ | ಘನಪುಷ್ಯಾರ್ಕನಿವಾಸನಮಸ್ತೇ |
ಯಮಚಿದ್ರಚಿತಾಶ್ಲೇಷನಮಸ್ತೇ | ಸಮಘಾಘಾತುಕಭಾಷನಮಸ್ತೇ |
ಸಂಬಾಹುಭ್ಯಾಂಶ್ರುತಿಗನಮಸ್ತೇ | ಬಿಂಬತ್ರಿತಯೋತ್ತರಗನಮಸ್ತೇ |
ವರಾಭಯಹಸ್ತವಿಸಾರನಮಸ್ತೇ | ಗುರುತರಚಿತ್ರಾಚಾರನಮಸ್ತೇ |
ಸ್ವಾತಿಶಯಿತಚಿದ್ದೀಪನಮಸ್ತೇ | ಸ್ವಾಂತವಿಶಾಖಸಮಾಪನಮಸ್ತೇ |
ಅನುರಾಧಯಮಾಂದ್ರೇಶನಮಸ್ತೇ | ಮನುಲಯಹಠಜ್ಯೇಷ್ಠೇಶನಮಸ್ತೇ |
ಮುಕ್ತಿಮೂಲಚಿದ್ಗಾಢನಮಸ್ತೇ | ಭುಕ್ತಿದಪೂರ್ವಾಷಾಢನಮಸ್ತೇ |
ಶ್ರಮಹರಶ್ರವಣಸಬಾಧನಮಸ್ತೇ | ಧನದಸಮುಧನಿಷ್ಠೇಶನಮಸ್ತೇ |
ಮನನಶತಭಿಷಾಭಾಷನಮಸ್ತೇ | ಪೂರ್ವಾಜಿಮಭಾದ್ರಪದನಮಸ್ತೇ |
ಸತ್ಪ್ರೋತ್ತರಭಾದ್ರಪದನಮಸ್ತೇ | ರೇವತಿಪತಿಮುಖೇಂದ್ರನಮಸ್ತೇ |
ರೇವಣಾರ್ಯಚಿಜ್ಜಂದ್ರನಮಸ್ತೇ ||

ಯಸ್ಸೋಮೇಶ್ವರಲಿಂಗಭೂಸ್ತ್ರಜಗತಾಂ ಯಂ ದೇಶಿಕೇಂದ್ರಂ ವಿದುರ್ಯೇನಾ ಬೋಧಿ ಸ ಕುಂಭಸಂಭವಮುನಿರ್ಯಸ್ಮೈ ನಮಸ್ಕುರ್ವತೇ || ಯಸ್ಮಾತ್ಸಿದ್ಧಿ

---

ಯುಳ್ಳವನೂ, ಪ್ರಕಾಶಮಾನಗಳಾದ ರುದ್ರಾಕ್ಷ ಮಣಿಗಳ ಮಾಲಿಕೆಯಂ ಧರಿಸಿದವನೂ, ಶಿವನನ್ನು ಹೇಳುವ ಪಂಚಾಕ್ಷರಮಂತ್ರಜಪದಿಂ ಕೂಡಿದ ಕ್ಷೇಮವುಳ್ಳವನೂ, ಮುಕ್ತಿಸಾಧಕವಾದ ವೀರಶೈವಾಚಾರಮಾರ್ಗದಲ್ಲಿ ಆಸಕ್ತನೂ, ಗುರು, ಲಿಂಗ, ಜಂಗಮ-ರಕ್ಷಕನೂ, ಲೋಕಪ್ರಸಿದ್ಧವಾದ ಕೀರ್ತಿಯುಳ್ಳವನೂ ಆಗಿರುವ ಎಲೈ ರೇಣುಕನೇ ! ಜಯಶೀಲನಾಗು ! ಜಯಶೀಲನಾಗು !!

೧. ಅಶ್ವಿನೀದೇವತೆಗಳ ಕುಮಾರರಿಗೆ ವೈದ್ಯಶಾಸ್ತ್ರದ ಬೊಕ್ಕಸವಾದ ನಿನಗೋಸ್ಕರ ನಮಸ್ಕಾರವು, ಇತ್ಯಾದಿಯಾಗಿ ಈ ನಕ್ಷತ್ರನಾಮರೂಪವಾದ ಸ್ತೋತ್ರವನ್ನು ಮಾಡಿದುದರಿಂದಲೂ, "ಯಾವನು—ಭೂಲೋಕದಲ್ಲಿ ಶಿವಮತವನ್ನು (ವೀರಶೈವಮತವನ್ನು) ಸ್ಥಾಪಿಸುವುದಕ್ಕಾಗಿ ಶಿವನ ಅಪ್ಪಣೆಯಿಂದ ಕೊಲ್ಲಿಪಾಕಿಕ್ಷೇತ್ರದಲ್ಲಿರುವ ಶ್ರೀ ಸೋಮೇಶ್ವರಲಿಂಗದಲ್ಲಿ ಜನಿಸಿದನೋ, ಯಾವನನ್ನು ಮೂರುಲೋಕಗಳಿಗೂ ಗುರುವನ್ನಾಗಿ ತಿಳಿಯುತ್ತಾರೆಯೋ, ಯಾವನಿಂದ ಅಗಸ್ತ್ಯಮಹರ್ಷಿಯು ಬೋಧಿಸಲ್ಪಟ್ಟನೋ, ಯಾವನಿಗೋಸ್ಕರ ಸರ್ವರೂ ನಮಸ್ಕಾರವನ್ನು ಮಾಡುತ್ತಾರೆಯೋ, ಯಾವನದೆಸೆಯಿಂದ ಸಮಸ್ತಸಿದ್ಧಿಗಳು ಬಂದವೋ, ಯಾವನಿಗೆ ಉತ್ಕೃಷ್ಟವಾದ ಶಕ್ತಿವಿಶಿಷ್ಟ ಶಿವಾದ್ವೈತಜ್ಞಾನವು ಇರುತ್ತದೆಯೋ, ಯಾವನಲ್ಲಿ ಲಿಂಗಾಂಗ

ಸಮಾಗಮಾಃ ಪರಮಚಿದ್ಯಸ್ಯಾಸ್ತಿ ಲಿಂಗೈಕ್ಯತಾ ಯಸ್ಮಿನ್ಪಾತು ಸ ಮೇ ಭವಾ ಕುಲಗುರು ಶ್ರೀರೇಣುಕಾಚಾರ್ಯ ಮಾಂ ''

## ರಾಜಪಟ್ಟಾಭಿಷೇಕವಿಧಿಃ

ಇತಿ ಚೋಳೇನ ಕೃತಯಾ ಸ್ತುತ್ಯಾ ನಕ್ಷತ್ರಮಾಲಯಾ || ಪ್ರಸನ್ನೋ ಗುರುರಾಟ್ತಸ್ಯ ಭೂತಿಪಟ್ಟಂ ಬಬಂಧ ಸಃ || ತದಾನೀಂ, ಚೋಳಃ—ಭೋ ರೇಣುಕಗಣೇಂದ್ರ! " ದೀಪಾಗ್ನಿಂ ದೀಪತೈಲಂ ಚ ಭಸ್ಮ ಚಾಸ್ಥಿರಜಸ್ವಲಾಂ || ಏತಾನಿ ಬ್ರಾಹ್ಮಣ ಸ್ಸ್ಪೃಷ್ಟ್ವಾ ಸವಾಸಾ ಜಲಮಾವಿಶೇತ್,, ಇತಿ ಶಂಖಸ್ಮೃತೇಃ ಭಸ್ಮಸ್ಪರ್ಶೋನಕರ್ತವ್ಯಃ, ಏವಂಸ್ಥಿತೇ ಭವತಾ ಮದೀಯಫಾಲೇ ಕುತೋ ಭಸ್ಮಧಾರಣಂ ಕೃತಂ!

ಶ್ರೀರೇಣುಕಃ—"ಕ್ರಮದೇಶಸಾಮಾನ್ಯಾತ್,, ಇತಿಪೂರ್ವಮೀಮಾಂಸಾಸೂತ್ರಾತ್, ಅಸ್ಥಿಸಮೀಪವರ್ತಿಭಸ್ಮ (ಚಿತಾಭಸ್ಮ) ನಸ್ಪರ್ಶನೀಯಮಿತಿತದ್ವಚನೇನೋಕ್ತಂ. ತಥಾಪ್ಯಸ್ಮಿನ್ಭರತಖಂಡೇ ಅನೇಕೈರ್ಜನೈಃ ಬಹುಷು ಪತ್ತನೇಷು ಪ್ರತಿವರ್ಷಂ

---

ಸಾಮರಸ್ಯವು ಇರುತ್ತದೆಯೋ, ಎಲೈ ರೇಣುಕಾಚಾರ್ಯನೇ ! ಆ ನೀನು ನನ್ನ ಕುಲಕ್ಕೆ ಗುರುವಾಗಿ ನನ್ನನ್ನು ಕಾಪಾಡು,, ಎಂದು ಪ್ರಾರ್ಥಿಸಲ್ಪಟ್ಟವನಾದುದರಿಂದಲೂ

### ರಾಜಪಟ್ಟಾಭಿಷೇಕವಿಧಿಯು.

ಪ್ರಸನ್ನನಾದ ಶ್ರೀ ಜಗದ್ಗುರು ರೇಣುಕಾಚಾರ್ಯನು—ಆ ,,ವಿಜಯೇಂದ್ರ,, ಚೋಳನಿಗೆ ಭಸ್ಮಧಾರಣಪೂರ್ವಕವಾಗಿ ಪಟ್ಟವನ್ನು ಕಟ್ಟಿದನು. ಆ ಸಮಯದಲ್ಲಿ ಚೋಳನು—ಎಲೈ ರೇಣುಕಗಣೇಂದ್ರನೇ ! ,,ದೀಪಜ್ವಾಲೆಯನ್ನೂ, ದೀಪದಲ್ಲಿ ಉಪಯೋಗಿಸಿರುವ ಎಣ್ಣೆಯನ್ನೂ, ವಿಭೂತಿಯನ್ನೂ, ಮೂಳೆಯನ್ನೂ ರಜಸ್ವಲೆಯಾದ ಹೆಂಗಸನ್ನೂ ಮುಟ್ಟಿದ ಬ್ರಾಹ್ಮಣನು ಸಚೇಲಸ್ನಾನಮಾಡಬೇಕು,, ಎಂದು ಹೇಳುವ ಶಂಖಸ್ಮೃತಿವಚನವಿರುವುದರದೆಸೆಯಿಂದ ಭಸ್ಮವಂ ಮುಟ್ಟಲೇಬಾರದು. ಹೀಗಿರುವಲ್ಲಿ ನನ್ನ ಹಣೆಯಲ್ಲಿ ನೀನು ಭಸ್ಮಧಾರಣೆಯನ್ನು ಏಕೆ ಮಾಡಿದೆ ?

ಶ್ರೀ ರೇಣುಕನು—ಎಲೆ ಚೋಳನೇ ! ,,ಕ್ರಮದೇಶಸಾಮಾನ್ಯಾತ್,, ಎಂದು ಪೂರ್ವಮೀಮಾಂಸಾಸೂತ್ರವಿರುವುದರಿಂದ ಮೂಳೆಯ ಸಮೀಪದಲ್ಲಿರುವ ಭಸ್ಮವನ್ನು ಅಂದರೆ ಹೆಣವನ್ನು ಸುಟ್ಟ ಬೂದಿಯಂ ಮುಟ್ಟಕೂಡದೆಂದು ಆ ಸ್ಮೃತಿವಚನದಿಂದ ಹೇಳಲ್ಪಟ್ಟಿತು. ಆದರೂ ಈ ಭರತಖಂಡದಲ್ಲಿರುವ ಜನರು ಅನೇಕ ಪಟ್ಟಣಗಳಲ್ಲಿ ಪ್ರತಿವರ್ಷದಲ್ಲೂ ಕಾಮನನ್ನು ಸು

ಕಾಮುದಹನಂ ಕೃತ್ವಾ ತದ್ಭಸ್ಮ ದಾರ್ಯತೇಖಲು. ತತ್ತಾವದಾಸ್ತಾಂ, ಸರ್ವಶ್ರುತಿ ಪುರಾಣಪ್ರಸಿದ್ಧ ಭಸ್ಮಧಾರಣ ಮಾಹಾತ್ಮ್ಯಂತಾವತ್ತ್ವಯಾ ಶ್ರೂಯತಾಂ, ಋಗ್ವೇದೇಭಸ್ಮಜಾಬಾಲೋಪನಿಷದಿ,— "ವಿಭೂತಿಧಾರಣಾದ್ಬ್ರಹ್ಮೈಕತ್ವಂ ಗಚ್ಛತಿ ಸಏಷಭಸ್ಮಜ್ಯೋತಿ ಸ್ಸಏಷಭಸ್ಮಜ್ಯೋತಿಃ" ಯಜುರ್ವೇದೋಪನಿಷದಿ,—"ಭೂತ್ಯೈ ನ ಪ್ರಮದಿತವ್ಯಂ" ಇತಿ. ತಥಾಬೃಹಜ್ಜಾಬಾಲಕಾಲಾಗ್ನಿರುದ್ರಾಥರ್ವಶಿಖಾ ದ್ಯುಪನಿಷತ್ಸು ಚ ಪ್ರಸಿದ್ಧಂ. ಶಾತಾತಪಸ್ಮೃತೌ,—"ಯದಾ ಕದಾ ಯತ್ರ ಚ ಕುತ್ರ ಸಂಭವಂ ಭಸ್ಮೋದ್ಧೃತಂ ಸ್ಯಾದಿಹ ಯೇನ ಕೇನ ವಾ || ನ ತೇನ ಸಾಮ್ಯೋಭಗವಾನ್ಪಿತಾಮಹೋ ವಿಭೂತಿಧಾರೀ ಸ ಶಿವ ಸ್ತಥೈವ ಹಿ" ಸ್ಕಾಂದೇ— "ವಿಭೂತಿಧಾರಣಂ ವಿದ್ವಾನ್ ಮನಸಾಪಿ ನ ಲಂಘಯೇತ್ || ಶ್ರುತ್ಯಾ ವಿಧೀಯತೇ ಯತ್ತತ್ತತ್ತ್ಯಾಗೀ ಪತಿತೋ ಭವೇತ್", ಇತಿ. ಮಾನವಪುರಾಣೇ,—"ಶ್ರುತಯಸ್ಸ್ಮೃತಯಸ್ಸರ್ವಾಃ ಪುರಾಣಾನ್ಯಖಿಲಾನ್ಯಪಿ || ವದಂತಿ ಭಸ್ಮಮಾಹಾತ್ಮ್ಯಂ ತತ ಸ್ತದ್ಧಾರಯೇದ್ದ್ವಿಜಃ", ಇತ್ಯಾದಿಶ್ರುತಿಸ್ಮೃತಿಪುರಾಣವಾಕ್ಯಾನಾಂ ವಿರುದ್ಧಂ ಭವದುಕ್ತಶಂಖಸ್ಮೃತಿವಾಕ್ಯಮತಸ್ತತ್ಪ್ರಕ್ಷಿಪ್ತಮಪ್ರಮಾಣಮಿತಿ ಚ ಜ್ಞೇಯಂ.

---

ಟ್ಟು, ಆ ಭಸ್ಮವನ್ನು ಧರಿಸಿಕೊಳ್ಳುತ್ತಿರುವುದು ಪ್ರಸಿದ್ಧವಾಗಿದೆಯಲ್ಲವೆ? ಅದಂತಿರಲಿ, ಸಕಲಶ್ರುತಿ ಸ್ಮೃತಿ ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ಭಸ್ಮಧಾರಣಮಹಿಮೆಯನ್ನು ಕೇಳು; ಋಗ್ವೇದದಲ್ಲಿರುವ ಭಸ್ಮಜಾಬಾಲೋಪನಿಷತ್ತಿನಲ್ಲಿ—"ಭಸ್ಮಧಾರಣೆಯಂ ಮಾಡಿದವನು ಪರಮಾತ್ಮನೊಡನೆ ಏಕತ್ವವನ್ನು ಹೊಂದುವನು" ಎಂದೂ, ಯಜುರ್ವೇದೋಪನಿಷತ್ತಿನಲ್ಲಿ— "ಭಸ್ಮಧಾರಣೆಗೋಸ್ಕರ ಚಿತ್ತೈಕಾಗ್ರತೆಯುಳ್ಳವನಾಗಿರಬೇಕು" ಎಂದೂ ಉಕ್ತವಾಗಿದೆ. ಅದೇ ರೀತಿಯಾಗಿ ಬೃಹಜ್ಜಾಬಾಲ ಕಾಲಾಗ್ನಿರುದ್ರಾಥರ್ವಶಿಖಾದ್ಯುಪನಿಷತ್ತುಗಳಲ್ಲೂ ಪ್ರಸಿದ್ಧವಾಗಿದೆ. ಶಾತಾತಪಸ್ಮೃತಿಯಲ್ಲಿ—"ಯಾವಕಾಲದಲ್ಲಿಯಾದರೂ ಯಾವಸ್ಥಲದಲ್ಲಿಯಾದರೂ ಹುಟ್ಟಿದ ಭಸ್ಮವನ್ನಾದರೂ ಧರಿಸಿದವನೊಡನೆ ಬ್ರಹ್ಮನೂ ಸಮಾನನಾಗುವುದಿಲ್ಲವು. ಆ ಭಸ್ಮಧಾರಿಯು ಶಿವಸ್ವರೂಪನೇ ಆಗುವನು" ಎಂದೂ, ಸ್ಕಾಂದಪುರಾಣದಲ್ಲಿ—"ವಿದ್ವಾಂಸನು ಭಸ್ಮಧಾರಣೆಯನ್ನು ಮನಸ್ಸಿನಿಂದಲೂ ಅತಿಕ್ರಮಿಸಲಾಗದು. ಭಸ್ಮಧಾರಣವು ವೇದದಿಂದ ವಿಧಿಸಲ್ಪಟ್ಟಿರುವುದರಿಂದ ಅದನ್ನುಲ್ಲಂಘಿಸಿದವನು ಪಾಪಿಯಾಗುವನು" ಎಂದೂ, ಮಾನವಪುರಾಣದಲ್ಲಿ— "ಸಕಲ ಶ್ರುತಿ ಸ್ಮೃತಿ ಪುರಾಣಗಳು ಭಸ್ಮಮಹಿಮೆಯನ್ನು ಹೇಳುತ್ತಿರುವುದರಿಂದ ದ್ವಿಜನು ಆ ಭಸ್ಮವನ್ನು ಧರಿಸಬೇಕು" ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ಶ್ರುತಿಸ್ಮೃತಿಪುರಾಣವಾಕ್ಯಗಳಿಗೆ ವಿರುದ್ಧವಾದ ಶಂಖಸ್ಮೃತಿವಾಕ್ಯವೆಂದು ನಿನ್ನಿಂದ ಹೇಳಲ್ಪಟ್ಟುದು ಯಾರಿಂದಲೋ ಕಲ್ಪಿತವಾಗಿ ಆ ಸ್ಮೃತಿಯಲ್ಲಿ ಸೇರಿಸಲ್ಪಟ್ಟುದುದೆಂದೂ ಅಪ್ರಮಾಣವೆಂದೂ ತಿಳಿಯಬೇಕು. ನಾವು ರಾಜಾಧಿರಾಜನಾದ ವಿಕ್ರಮಾರ್ಕನಿಗೆ ಪಟ್ಟಾಭಿಷೇಕವನ್ನೆಸಗಿದ ಕಾಲದಲ್ಲಿ ನಾವು ಆಕಾಶಮಾರ್ಗದಲ್ಲಿ ಸಂಚರಿಸುವಾಗ್ಯೆ ಉಪಯೋಗಿಸಿಕೊಳ್ಳುತ್ತಿದ್ದ ರತ್ನವಿಕಾರವಾಧ

ಬಹುನಾಕಿಂ? ರಾಜಾಧಿರಾಜಸ್ಯ ವಿಕ್ರಮಾರ್ಕಸ್ಯ ಪಟ್ಟಾಭಿಷೇಕಕಾಲೇ, ತಸ್ಮೈ ವ್ಯೋಮಮಾರ್ಗಗಮನಮಂಡಿತಮಣಿಮಯಸುವರ್ಣಪಾದುಕಾದ್ವಯಂ, ಸ್ವಾರ್ಥಿ ತಾರ್ಥಸಾರಸ್ರವಂತಿಕಾಂ ಕಂಥಾಂ, ಅಕ್ಷಯಾಮೃತಭರಿತಭಿಕ್ಷಾಪಾತ್ರಂಚ, ಸರ್ವ ಕಾಮಫಲಪ್ರದಾಂ ದುಷ್ಟನಿಗ್ರಹ ಶಿಷ್ಟಸಂರಕ್ಷಣಸಮರ್ಥಾಮಾಶ್ಚರ್ಯಕ್ಷುರಿಕಾಂ, ಮರಕತಮಯಮಹಾಶಿವಲಿಂಗಂ ಚ ದತ್ವಾ, ತಲ್ಲಲಾಟೇತ್ವಸ್ಮಾಭಿರ್ಭಸ್ಮ ಧಾರಣಂ ಕೃತಂ, ಅತಏವ ತದಾರಭ್ಯ ಪಟ್ಟಾಭಿಷಿಕ್ತಾ ರಾಜಾನೋ ಭಸ್ಮಧಾರಣಸಂಪನ್ನಾ ವಿರೂಪಾಕ್ಷಭಕ್ತಾ ಏವ, ಹೇ ಚೋಳ! ರಾಜಪಟ್ಟಾಭಿಷೇಕಲಕ್ಷಣಂಶ್ರೂಯತಾಂ, ಲಿಂಗಪುರಾಣೇ,— "ಕೃತಾಧಿವಾಸರಾಜಾನಂ ಶಂಖಭೇರ್ಯಾದಿನಿಸ್ವನೈಃ ॥ ಸ್ತ್ರೀ ಶೋಭನರವೈರ್ದಿವ್ಯೈರ್ವೇದಘೋಷೈಸ್ಸುಶೋಭನೈಃ ॥ ಸೇಚಯೇತ್ಕೂರ್ಚತೋ ಯೇನ ಪ್ರೋಕ್ಷಯೇ ದ್ಭಾವ ನೃಪೋತ್ತಮಂ ॥ ರುದ್ರಾಧ್ಯಾಯೇನ ವಿಧಿನಾ ಶಿವಂ ಭಸ್ಮಾಳಿಕೇ ಧರೇತ್ ॥ ಶಂಖಚಾಮರಭೇರ್ಯಾದ್ಯಂ ಛತ್ರಂ ಚಂದ್ರಸಮಪ್ರಭಂ ॥ ಶಿಬಿಕಾಂ ವೈಜಯಂತೀಂಚ ಕಿರೀಟಂ ಸಿಹ್ಮವಿಷ್ಟರಂ॥ಪಟ್ಟಾಭಿಷೇಕಯುಕ್ತಾಯ ಕ್ಷತ್ರಿಯಾಯ ಸಮರ್ಪಯೇತ್,, ಇತಿ. ಶಿವಧರ್ಮೋತ್ತರೇ,—ಕುಂಭಸಂಭವಂಪ್ರತಿ ಕುಮಾರವಚನಂ, "ಶಿವವಾಕ್ಯಪ್ರವಕ್ತಾರಂ ಶಿವವತ್ಪೂಜಯೇದ್ಗುರುಂ ॥ ನೃಪಃ

---

ಸುವರ್ಣದ ಪಾದುಕಾದ್ವಯವನ್ನೂ, ಅಪೇಕ್ಷಿಸಿದಷ್ಟು ಹೊನ್ನನ್ನು ಸುರಿಸತಕ್ಕ ಕಂಥೆಯನ್ನೂ, ನಾಶರಹಿತವಾದ ಅಮೃತದಿಂದ ತುಂಬಿದ ಭಿಕ್ಷಾಪಾತ್ರೆಯನ್ನೂ, ಸಮಸ್ತವಾದ ಇಷ್ಟಾರ್ಥಗಳನ್ನು ಕೊಡತಕ್ಕುದೂ, ದುಷ್ಟನಿಗ್ರಹ ಶಿಷ್ಟಪರಿಪಾಲನೆಯಲ್ಲಿ ಶಕ್ತವೂ ಆದ ಕಠಾರಿಯನ್ನೂ, ಮರಕತರತ್ನವಿಕಾರವಾದ ಶಿವಲಿಂಗವನ್ನೂ ಕೊಟ್ಟು; ಆತನ ನೊಸಲಲ್ಲಿ ಭಸ್ಮವಂ ಧರಿಸಿದೆವು. ಈ ಕಾರಣದಿಂದ ತದಾರಭ್ಯ ಪಟ್ಟಾಭಿಷಿಕ್ತರಾಗಿ ಆ ವಿಕ್ರಮಾರ್ಕನ ಪೀಠಾಧಿಪತಿಗಳಾಗುತ್ತ ಬಂದ ದೊರೆಗಳೆಲ್ಲರೂ ಭಸ್ಮಧಾರಣಸಂಪನ್ನರಾಗಿ ಶಿವಭಕ್ತರೇ ಆಗಿರುವರು. ಎಲೈ ಚೋಳನೇ! ರಾಜಪಟ್ಟಾಭಿಷೇಕ ಲಕ್ಷಣವಂ ಕೇಳು; ಲಿಂಗಪುರಾಣದಲ್ಲಿ— "ನೃಪೋತ್ತಮನನ್ನು ಆಚಾರ್ಯನು—ಶಂಖಭೇರ್ಯಾದಿ ಮಂಗಳವಾದ್ಯಧ್ವನಿಗಳೂ, ಮುತ್ತೈದೆಯರ ಮಂಗಳಕರವಾದ ಗಾನ ಧ್ವನಿಗಳೂ, ಶ್ರೇಷ್ಠವಾದ ವೇದಮಂತ್ರಘೋಷಗಳೂ ಆಗುತ್ತಿರುವಾಗ್ಗೆ ವಿಧ್ಯನುಸಾರವಾಗಿ ಶ್ರೀರುದ್ರವನ್ನು ಪಠಿಸುತ್ತ, ಪುಣ್ಯಕರಗಳಾದ ಗಂಗಾದಿ ತೀರ್ಥಗಳನ್ನು ದರ್ಭಕೂರ್ಚದಿಂದ ಪ್ರೋಕ್ಷಿಸಿ, ಹಣೆಯಲ್ಲಿ ಮಂಗಳಕರವಾದ ಭಸ್ಮವನ್ನು ಧರಿಸಿ ಪಟ್ಟಾಭಿಷಿಕ್ತನನ್ನಾಗಿಮಾಡಿದ ಬಳಿಕ ಆತನಿಗೆ ಶಂಖ, ಚಾಮರ, ಭೇರಿ, ಶ್ವೇತಚ್ಛತ್ರ, ಪಾಲಕಿ, ಕಿರೀಟ, ಸಿಹ್ಮಾಸನ ಮೊದಲಾದ ರಾಜಯೋಗ್ಯಗಳಾದ ಚಿಹ್ನೆಗಳನ್ನು ಕೊಡಬೇಕು,, ಎಂದೂ, ಶಿವಧರ್ಮೋತ್ತರದಲ್ಲಿ— "ಪಟ್ಟಾಭಿಷಿಕ್ತನಾದ ದೊರೆಯು—ಶಿವೋಕ್ತವಾದ ವಚನಂಗಳನ್ನು, ಉಪದೇಶಿಸುವ ಗುರುವನ್ನು ಲೋಕೋಪಕಾರಾರ್ಥವಾಗಿಯೂ, ತನಗೆ ಸಂಪತ್ತು ಹೆಚ್ಚುವುದಕ್ಕಾಗಿಯೂ ಶಿವನನ್ನು ಪೂಜಿ

ಪರೋಪಕಾರಾರ್ಥಂ ಮಾತ್ಮನಶ್ಚ ವಿಭೂತಯೇ || ಜಗದ್ಧಿತಾಯ ನೃಪತಿಂ ಶಿವಧರ್ಮೇ ನಿವೇಶಯೇತ್ || ತನ್ನಿಯೋಗಾದಯಂ ಲೋಕಶ್ಶುಚಿಸ್ಸ್ಯಾದ್ಧರ್ಮತತ್ಪರಃ,, ಮನುಸ್ಮೃತೌ,—" ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಾಸ್ಸಮೇ ಸಮಾಃ || ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ || ಪ್ರಸಾದಸ್ಯ ಪ್ರಕೋಪಸ್ಯ ಪ್ರತ್ಯಕ್ಷೇ ದೃಶ್ಯತೇಫಲಂ || ಪರೋಕ್ಷೇ ದೇವತಾಸ್ಸರ್ವೇ ರಾಜಾ ಪ್ರತ್ಯಕ್ಷದೇವತಾ || ದುಷ್ಟಸ್ಯ ದಂಡ ಸ್ಸುಜನಸ್ಯ ಪೂಜಾ ನ್ಯಾಯೇನ ಮಾರ್ಗೇಣ ಚ ಕೋಶವೃದ್ಧಿಃ || ಅಪಕ್ಷಪಾತೋಽರ್ಥಿಷು ರಾಷ್ಟ್ರರಕ್ಷಾಪಂಚೈವ ಯಜ್ಞಾಃ ಖಲು ತೇ ನೃಪಾಣಾಂ,, ಅನ್ಯತ್ರ— "ಸಂತುಷ್ಟೇ ಸರುಷಿ ಸ್ವಸ್ಥೇ ರಾಜ್ಞಾಂ ಚ ತ್ರಿವಿಧಾ ಗುಣಾಃ || ದೋಷಾ ಗುಣಾಃ ಗುಣಾ ದೋಷಾಃದೋಷಾ ದೋಷಾ ಗುಣಾ ಗುಣಾಃ,, ಇತ್ಯಾದಿರಾಜನೀತಿರ್ಜಗತಿಪ್ರಸಿದ್ಧಾ. ವಿಸ್ತರೇಣಾಲಂ.

ಇತಿ ರಾಜಪಟ್ಟಾಭಿಷೇಕವಿಧಿಃ ಪ್ರಥಮೋಪದೇಶೇ ಪ್ರಥಮಸ್ಸಂವಾದಃ.

---

ಸುವಂತೆ ಪೂಜಿಸಬೇಕು. ಆ ಗುರುವಾದರೋ ಆ ದೊರೆಯನ್ನು ಲೋಕಹಿತಾರ್ಥವಾಗಿ ಶಿವಧರ್ಮಗಳಲ್ಲಾಸಕ್ತನಾಗಿರುವಂತೆ ಮಾಡಬೇಕು. ದೊರೆಯಿಂದ ಈ ಲೋಕವು ಪಾಪರಹಿತವೂ ಧರ್ಮಾಸಕ್ತಿಯುಳ್ಳುದೂ ಆಗುವುದು,, ಎಂದೂ, ಮನುಸ್ಮೃತಿಯಲ್ಲಿ — "ರಾಜನು ಧರ್ಮನಿರತನಾಗಿದ್ದರೆ ಪ್ರಜೆಗಳೂ ಧರ್ಮಾಸಕ್ತರಾಗುವರು. ರಾಜನು ಪಾಪಕಾರ್ಯಗಳನ್ನು ಮಾಡುತ್ತಿದ್ದರೆ ಪ್ರಜೆಗಳೂ ಪಾಪಕಾರ್ಯಗಳನ್ನು ಮಾಡುವರು. ರಾಜನು ಪಾಪಕಾರ್ಯಗಳನ್ನೂ ಪುಣ್ಯಕಾರ್ಯಗಳನ್ನೂ ಸಮವಾಗಿ ಮಾಡತಕ್ಕವನಾಗಿದ್ದರೆ ಪ್ರಜೆಗಳೂ ಪಾಪಪುಣ್ಯಗಳನ್ನು ಸಮವಾಗಿ ಮಾಡುವರು. ಪ್ರಜೆಗಳು ರಾಜನನ್ನನುಸರಿಸಿಯೇ ಇರುವುದರಿಂದ ರಾಜನು ಹ್ಯಾಗೋ ಹಾಗೆ ಪ್ರಜೆಗಳಿರ್ಪರು. ರಾಜನ ಪ್ರೀತಿ ಕೋಪಗಳ ಫಲಗಳು ಕಣ್ಣೆದುರಿಗೇ ತೋರಿಬರುತ್ತವೆ. ದೇವತೆಗಳಲ್ಲಿ ಯಾರೂ ಕಣ್ಣಿಗೆ ಕಾಣತಕ್ಕವರಲ್ಲವು. ದೊರೆಯಾದರೋ ಕಣ್ಣಿಗೆ ಕಾಣತಕ್ಕ ದೇವತೆಯಾಗಿರುತ್ತಾನೆ. ದುಷ್ಟರಂ ನಿಗ್ರಹಿಸುವುದು, ಸಜ್ಜನರಂ ಪಾಲಿಸುವುದು, ನ್ಯಾಯಾನುಸಾರವಾಗಿ ಸಂಪಾದಿಸಿದ ಧನದಿಂದ ಬೊಕ್ಕಸವಂ ಹೆಚ್ಚಿಸುವುದು, ಯಾಚಕರಲ್ಲಿ ಪಕ್ಷಪಾತವಂ ಮಾಡದಿರುವುದು, ರಾಜ್ಯವಂ ರಕ್ಷಿಸುವುದು ಈ ಐದೇ ರಾಜರಿಗೆ ಪಂಚಯಜ್ಞಗಳೆಂದು ಪ್ರಕಟವಾಗಿರ್ಪುವು,, ಎಂದೂ, ಮತ್ತೊಂದು ಸ್ಥಳದಲ್ಲಿ— "ರಾಜನು ಸಂತೋಷವುಳ್ಳವನಾಗಿರ್ದೊಡೆ ಪ್ರಜೆಗಳ ದೋಷಗಳು ಗುಣರೂಪಗಳಾಗಿ, ಕೋಪಿಯಾಗಿರ್ದೊಡೆ ಗುಣಗಳು ದೋಷರೂಪಗಳಾಗಿ ಪರಿಣಮಿಸುತ್ತವೆ. ಕೋಪ ಸಂತೋಷಗಳೆರಡೊಂದೂ ಇಲ್ಲದವನಾಗಿರ್ದೊಡೆ, ದೋಷಗಳು ದೋಷಗಳೇ, ಗುಣಗಳು ಗುಣಗಳೇ ಆಗುವವು,, ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ರಾಜನೀತಿಯು ಲೋಕಪ್ರಸಿದ್ಧವಾಗಿರುವುದರಿಂದ, ನಾವು ವಿಸ್ತಾರವಾಗಿ ಹೇಳಬೇಕಾದುದಿಲ್ಲವು.

ಎಂಬಲ್ಲಿಗೆ ರಾಜಪಟ್ಟಾಭಿಷೇಕವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.

ಶ್ರೀ ಶಿವಾಯನಮಃ.

# ಷೋಡಶಮಹಾದಾನೋದ್ದೇಶವಿಧಿಃ.

ಚೋಳಃ—" ರಾಜ್ಞಾ ಪಟ್ಟಾಭಿಷಿಕ್ತೇನ ಕಿಂಕರ್ತವ್ಯ ಮತಃಪರಂ ||
ತತ್ಸರ್ವಂ ಬ್ರೂಹಿ ಕೃಪಯಾ ಶ್ರೀರೇಣುಕಗಣೇಶ ಮೇ "

ಶ್ರೀರೇಣುಕಃ—ಹೇ ಚೋಳ ! ಪಟ್ಟಾಭಿಷಿಕ್ತೇನರಾಜ್ಞಾ ಕರ್ತವ್ಯಸ್ಸತ್ಪಾತ್ರ ದಾನವಿಧಿಶ್ಶ್ರೂಯತಾಂ, ಶಿವಧರ್ಮೋತ್ತರೇ,—" ಸದ್ಬೀಜಮೂಷರೇ ಯದ್ವದ್ವಾಪಿತಂ ನಿಷ್ಫಲಂ ಭವೇತ್ || ದಾನಂ ತದ್ವದಪಾತ್ರೇಷು ವಿನ್ಯಸ್ತಂ ನಿಷ್ಫಲಂ ಭವೇತ್|| ಭಸ್ಮನ್ಯೇವ ಹುತಂ ಹವ್ಯಂ ಯಥಾ ಹೋತುಶ್ಚ ನಿಷ್ಫಲಂ || ಸುಜ್ಞಾನರಹಿತೇ ವಿಪ್ರೇ ತಥಾ ದಾನಂ ನಿರರ್ಥಕಂ || ಅಪಾತ್ರದಾನಾದ್ದಾರಿದ್ರ್ಯಮೈಶ್ವರ್ಯಂ ಪಾತ್ರದಾನತಃ,, ಸ್ಕಾಂದೇ,—"ಪಾತ್ರಾಪಾತ್ರವಿಶೇಷೋಽಸ್ತಿ ಧೇನುಪನ್ನಗಯೋರಿವ|| ತೃಣಾತ್ಸಂಜಾಯತೇ ಕ್ಷೀರಂ ಕ್ಷೀರಾತ್ಸಂಜಾಯತೇ ವಿಷಂ || ಸತ್ಪಾತ್ರದಾನೇನ ಭವೇ

## ಷೋಡಶಮಹಾದಾನೋದ್ದೇಶವಿಧಿಯು.

ಚೋ—ಎಲೈ ರೇಣುಕಗಣೇಶನೇ! ಪಟ್ಟಾಭಿಷಿಕ್ತನಾದ ರಾಜನಿಂದ ಆಚರಿಸಲು ಯೋಗ್ಯವಾದ ಕರ್ಮಗಳನ್ನು ಕೃಪೆಯಿಂದೆನಗೆ ನಿರೂಪಿಸು.

ರೇ—ಎಲೈ ಚೋಳನೇ ! ಪಟ್ಟಾಭಿಷಿಕ್ತನಾದ ರಾಜನಿಂದಾಚರಿಸಲ್ಪಡತಕ್ಕದಾದ ಸತ್ಪಾತ್ರದಾನವಿಧಿಯನ್ನು ಹೇಳುವೆನು ಕೇಳು; ಶಿವಧರ್ಮೋತ್ತರದಲ್ಲಿ—"ಚೌಳುಮಣ್ಣಿನ ನೆಲದಲ್ಲಿ ಬಿತ್ತಲ್ಪಟ್ಟ ಬೀಜವು ಉತ್ತಮವಾಗಿದ್ದರೂ ಫಲಪ್ರದವಾಗದಿರುವಂತೆ, ಅಯೋಗ್ಯರಲ್ಲಿ ಮಾಡಿದ ದಾನವು ಫಲವನ್ನು ಕೊಡುವುದಿಲ್ಲವು. ಬೂದಿಯಲ್ಲಿ ತುಪ್ಪವನ್ನು ಸುರಿದವನಿಗೆ ಫಲವುಂಟಾಗದಿರುವಂತೆ ಶಿವನು "ಸರ್ವದೇವತಾಶ್ರೇಷ್ಠನೆಂದರಿಯದ ಬ್ರಾಹ್ಮಣನಲ್ಲಿ ದಾನಮಾಡಿದವನಿಗೆ ಫಲವುಂಟಾಗುವುದಿಲ್ಲವು. ದುಷ್ಪಾತ್ರದಲ್ಲಿ ದಾನಮಾಡುವವನಿಗೆ ಬಡತನವುಂಟಾಗುವುದು. ಸತ್ಪಾತ್ರದಲ್ಲಿ ದಾನಮಾಡುವವನಿಗೆ ಸಂಪತ್ತುಂಟಾಗುವುದು,, ಎಂದೂ, ಸ್ಕಾಂದಪುರಾಣದಲ್ಲಿ—"ಧೇನು ಸರ್ಪಗಳಿಗೆ ಪರಸ್ಪರ ಭೇದವಿರುವಂತೆ ಪಾತ್ರಾಪಾತ್ರಗಳಿಗೆ ಪರಸ್ಪರ ಭೇದವಿರುತ್ತದೆ. ಗೋವಿಗೆ ಹುಲ್ಲನ್ನು ತಿನ್ನಿಸಿದರೆ ಅದು ಅಮೃತಕ್ಕೆ ಸಮಾನವಾದ ಹಾಲನ್ನು ಕೊಡುತ್ತದೆ. ಹಾವಿಗೆ ಹಾಲನ್ನು ಕುಡಿಸಿದೊಡೆ, ಅದು ಪ್ರಾಣವನ್ನು ತೆಗೆಯುವುದರಲ್ಲಿ ಸಮರ್ಥವಾದ ವಿಷವನ್ನು ಕೊಡುತ್ತದೆ. ಸತ್ಪಾತ್ರದಾನ ಮಾಡುವವನು ಧನಾಢ್ಯನಾಗಿ ಆ ಧನದಿಂದ ಪುಣ್ಯಕರ್ಮಗಳನ್ನು ಮಾಡಿ, ಆ ಪುಣ್ಯಾಧಿಕ್ಯದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿ ಸುಖದಿಂದಿದ್ದು ಆ ಪುಣ್ಯ

ಧನಾಢ್ಯೋ ಧನಾಧಿಕೇನೈವ ಕರೋತಿ ಪುಣ್ಯಂ || ಪುಣ್ಯಾದವಶ್ಯಂ ತ್ರಿದಿವಂ ಪ್ರಯಾತಿ ಪುನರ್ಧನಾಢ್ಯಃ ಪುನರೇವ ಭೋಗೀ || ಅಪಾತ್ರದಾನೇನ ಭವೇದ್ದರಿದ್ರೋ ದರಿದ್ರದೋಷೇಣ ಕರೋತಿ ಪಾಪಂ || ಪಾಪಾದವಶ್ಯಂ ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ || ತ್ಯಾಗ ಏಕೋ ಗುಣಶ್ಶ್ರೇಷ್ಠಃ ಕಿಮನ್ಯೈರ್ಬಹುಭಿರ್ಗುಣೈಃ||ತ್ಯಾಗೇನೈವ ಹಿ ಪೂಜ್ಯಂತೇ ಪಶುಪಾಷಾಣಪಾದಪಾಃ,, ತತ್ರಷೋಡಶ ಮಹಾದಾನವಿಧಿಃ ಕಥಮಿತಿಚೇಚ್ಛ್ರೂಯತಾಂ, "ತುಲಾಧಿರೋಹಣಂ ದಾನಂ ಪ್ರಥಮಂ ಪರಿಕೀರ್ತಿತಂ || ಹಿರಣ್ಯಗರ್ಭದಾನಂ ಚ ತಿಲಪರ್ವತದಾನಕಂ||ತತೋ ಮಹಾಮೇರುದಾನಂ ದಾನಂ ಸೌವರ್ಣದಾನಕಂ||ಕಲ್ಪವೃಕ್ಷಮಹಾದಾನಂ ತತಶ್ಶ್ರೀಹೇಮಧೇನುಕಂ||ಲಕ್ಷ್ಮೀದಾನಂ ತತೋದಾನಂ ತಿಲಧೇನುಸಮಾಹ್ವಯಂ || ಸಹಸ್ರಧೇನುದಾನಂ ಚ ಹಿರಣ್ಯಸ್ಯ ಪ್ರದಾನಕಂ || ಕನ್ಯಾದಾನಂ ತತೋದಾನಂ ಹಿರಣ್ಯವೃಷಭಾಭಿಧಂ || ಹಿರಣ್ಯಗಜದಾನಂ ಚ ಲೋಕಪಾಲಾಷ್ಟದಾನಕಂ || ನಾರಾಯಣಮಹಾದಾನಮೇತತ್ಷೋಡಶದಾನಕಂ || ತಾನಿ ಷೋಡಶದಾನಾನಿ ಶಿವಾರ್ಥಂ ವಿನಿವೇದಯೇತ್ || ಶಿವಭಕ್ತಾಯ ವಿಪ್ರಾಯ ಶಿವಲಿಂಗಾಂಗಸಂಗಿನೇ,, ಇತಿ. ಲೈಂಗ್ಯೇ,—"ರಾಜ್ಞಾಂ ಷೋಡಶದಾನಾನಿ ಶಿವೇನ ಕಥಿತಾನಿ ಚ || ಧರ್ಮಾರ್ಥಕಾಮಮೋಕ್ಷಾರ್ಥಂ ಕರ್ಮ

---

ಕೀಂದನಂತರದಲ್ಲಿ ಹಿಂದಿರುಗಿ ಭೂಲೋಕಕ್ಕೆ ಬಂದು ಧನವಂತನಾಗಿ ಮಹಾಸುಖದಿಂದ ಬಾಳುವನು. ಅಪಾತ್ರದಾನಮಾಡುವವನು ಬಡವನಾಗಿ ಆ ಬಡತನದಿಂದ ಪಾಪಕಾರ್ಯಗಳನ್ನು ಮಾಡಿ, ಆ ಪಾಪಗಳ ವೃದ್ಧಿಯಿಂದ ನರಕವನ್ನನುಭವಿಸಿ, ಬಳಿಕ ಭೂಲೋಕಕ್ಕೆ ಬಂದು, ಮಹಾದರಿದ್ರನಾಗಿ, ಬಹು ಪಾಪಕಾರ್ಯಗಳನ್ನೇ ಮಾಡುವನು. ಸತ್ಪಾತ್ರದಾನವು ಸಕಲ ಗುಣಗಳಲ್ಲಿ ಶ್ರೇಷ್ಠವಾದದ್ದು. ಹ್ಯಾಗೆಂದೊಡೆ, ಗೋವುಗಳೂ, ಕಲ್ಲುಗಳೂ, ಮರಗಳೂ ದಾನ ಮಾಡುವುದರಿಂದಲೇ ಪೂಜ್ಯವಸ್ತುಗಳೆಂದು ಭಾವಿಸಲ್ಪಡುತ್ತವೆ,, ಎಂದೂ ಹೇಳಲ್ಪಟ್ಟಿದೆ. ಮತ್ತ ಮಾಗ್ರಂಥದಲ್ಲೇ ಉಕ್ತವಾಗಿರುವ ಷೋಡಶಮಹಾದಾನವಿಧಿಯಂ ಕೇಳು; "ತುಲಾಧಿರೋಹಣದಾನ, ಹಿರಣ್ಯಗರ್ಭದಾನ, ತಿಲಪರ್ವತದಾನ, ಮಹಾಮೇರುದಾನ, ಸುವರ್ಣಭೂದಾನ, ಕಲ್ಪವೃಕ್ಷದಾನ, ಸುವರ್ಣಧೇನುದಾನ, ಲಕ್ಷ್ಮೀದಾನ, ತಿಲಧೇನುವಿನಿಂದಕೂಡಿದದಾನ, ಸಹಸ್ರಗೋದಾನ, ಹಿರಣ್ಯದಾನ, ಕನ್ಯಾದಾನ, ಸುವರ್ಣದಿಂದ ಮಾಡಲ್ಪಟ್ಟ ವೃಷಭಪ್ರತಿಮಾದಾನ, ಸುವರ್ಣಗಜದಾನ, ಅಷ್ಟದಿಕ್ಪತಿಪ್ರತಿಮಾದಾನ, ನಾರಾಯಣಪ್ರತಿಮಾದಾನ, ಇವುಗಳೇ ಷೋಡಶಮಹಾದಾನಗಳಾಗಿರುವುವು. ಅವುಗಳನ್ನು ಶಿವಪ್ರೀತ್ಯರ್ಥವಾಗಿ ಶಿವಭಕ್ತಿಸಂಪನ್ನರಾದ ಲಿಂಗಧಾರಿ ಬ್ರಾಹ್ಮಣರಿಗೋಸ್ಕರ ಕೊಡಬೇಕು,, ಎಂದು ಉಕ್ತವಾಗಿದೆ. ಅದೇ ವಿಚಾರವು ಲಿಂಗಪುರಾಣದಲ್ಲಿ—"ಮಹಾನುಭಾವನಾದ ಶಿವನು ರಾಜರಿಗೆ ಧರ್ಮಾರ್ಥಕಾಮಮೋಕ್ಷಗಳಿಗಾಗಿ ನಿರೂಪಿಸಿರುವ ತುಲಾಧಿರೋಹಣ ಮೊದಲಾದ ದಾನಗಳನ್ನು ಕ್ರಮವಾಗಿ ಕೇಳು,, ಇತ್ಯಾದಿ

ನೈವ ಮಹಾತ್ಮನಾ || ತುಲಾಧಿರೋಹಣಾದೀನಿ ಶೃಣು ತಾನಿ ಯಥಾಕ್ರಮಮ್,, ಇತ್ಯಾದಿಭಿಷ್ಷೋಡಶಮಹಾದಾನವಿಧಿರ್ವಿಜ್ಞೇಯಃ. ಮಹಾಭಾರತೇ,— "ತ್ವಚಂ ಕರ್ಣಶ್ಶಿಬಿರ್ಮಾಂಸಂ ಜೀವಂ ಜೀಮೂತವಾಹನಃ || ದದೌ ದಧೀಚಿರಸ್ಥೀನಿ ಶಿವ ದೇಯಂ ಮಹಾತ್ಮನಾ || ವಿದ್ಯಾಮೂಲಂ ಚಾನ್ನಪಾನೀಯಪರ್ಣೌ ಕನ್ಯಾಪುಷ್ಪಂ ದಾನಕಲ್ಪದ್ರುಮಸ್ಯ || ದಾನಂ ಚೈತದ್ಭೂಮಿಭಾಗೇ ಫಲಾಢ್ಯಮನ್ಯದ್ದಾನಂ ಸ್ವರ್ಗಭೋಗಪ್ರದಂ ಸ್ಯಾತ್ || ದಾತಾ ನದಾಪಯತಿ ದಾಪಯಿತಾ ನ ದತ್ತೇ ಯೋ ದಾನದಾಪನಪರೋ ಮಧುರಂ ನ ವಕ್ತಿ || ತದ್ದಾನದಾಪನಮನೋಹರಭಾಷಣಾನಿ ತ್ರೀಣ್ಯಪ್ಯಮೂನಿ ಖಲು ಸತ್ಪುರುಷೇ ವಸಂತಿ,, ಆದಿತ್ಯಪುರಾಣೇ,—"ಶಿವಭಕ್ತಮತಿಕ್ರಮ್ಯ ಯೇನಾನ್ಯಸ್ಮೈ ಪ್ರದೀಯತೇ || ನಿಷ್ಫಲಂ ತದ್ಭವೇದ್ದಾನಂ ನರಕಂ ಚ ಪ್ರಪದ್ಯತೇ,, ಇತ್ಯಾದಿಭಿರ್ದಾನವಿಚಾರೋಬಹುಪ್ರಸಿದ್ಧಃ.

ಇತಿ ಷೋಡಶಮಹಾದಾನೋದ್ದೇಶವಿಧಿಃ ಪ್ರಥಮೋಪದೇಶೇ ದ್ವಿತೀಯಸ್ಸಂವಾದಃ



ಯು ನಂದೀಶ್ವರನಿಂದ ನಿರೂಪಿಸಲ್ಪಟ್ಟಿದೆ. ಮಹಾಭಾರತದಲ್ಲಿ— "ಕರ್ಣನು—ತನ್ನ ದೇಹದ ಚರ್ಮವನ್ನು, ಶಿಬಿಯು—ತನ್ನ ದೇಹದ ಮಾಂಸವನ್ನು, ದಧೀಚಿಯು—ತನ್ನ ಬೆನ್ನ ಮೂಳೆಯನ್ನು, ಇಂದ್ರನು ತನ್ನ ಪ್ರಾಣವನ್ನು ಕೊಟ್ಟನು. ದಾನವೆಂಬ ಕಲ್ಪವೃಕ್ಷಕ್ಕೆ ವಿದ್ಯಾದಾನವೇ ಬೇರು, ಅನ್ನೋದಕ ದಾನಗಳೇ ಎಲೆಗಳು, ಕನ್ಯಾದಾನವೇ ಹೂವು. ಈ ನಾಲ್ಕು ಭೂಲೋಕದ ಜನರಿಗೆ ಅನೇಕ ಫಲಗಳನ್ನು ಕೊಡುತ್ತವೆ. ಮಿಕ್ಕದಾನಗಳು ಸ್ವರ್ಗಸೌಖ್ಯವನ್ನು ಮಾತ್ರ ಕೊಡುತ್ತವೆ. ತನ್ನ ಸ್ವತ್ತನ್ನು ಕೊಡುವವನು— ಅನ್ಯರಿಂದ ಕೊಡಿಸುವುದಕ್ಕೆ ಪ್ರಯತ್ನಿಸುವದಿಲ್ಲವು. ಅನ್ಯರಿಂದ ಕೊಡಿಸುವವನು ತನ್ನ ಸ್ವತ್ತನ್ನು ಕೊಡುವುದಿಲ್ಲವು. ತನ್ನ ಸ್ವತ್ತನ್ನು ದಾನಮಾಡಿ, ಅನ್ಯರಿಂದಲೂ ದಾನಮಾಡಿಸತಕ್ಕವನು ಮೃದುವಾದ ಮಾತುಗಳನ್ನಾಡುವುದಿಲ್ಲವು. ತನ್ನ ಸ್ವತ್ತನ್ನು ಕೊಡುವುದು, ಅನ್ಯರಿಂದ ಕೊಡಿಸುವುದು, ಮೃದುನುಡಿಯನ್ನು ನುಡಿಯುವುದು, ಈ ಮೂರು ಗುಣಗಳು ಸಜ್ಜನರಲ್ಲಿರುತ್ತವೆ," ಎಂದುಕ್ತವಾಗಿದೆ. ಆದಿತ್ಯಪುರಾಣದಲ್ಲಿ—"ಶಿವಭಕ್ತನಾದ ಬ್ರಾಹ್ಮಣನಿಗಾಗಿ ದಾನಮಾಡದೆ, ಅನ್ಯರಿಗೆ ದಾನಮಾಡಿದವನು ಆ ದಾನದಿಂದ ಫಲವನ್ನು ಹೊಂದುವುದಿಲ್ಲವು. ಅವನಿಗೆ ನರಕವುಂಟಾಗುವುದು,, ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಷೋಡಶಮಹಾದಾನೋದ್ದೇಶವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



ಶ್ರೀಭವಾಯನಮಃ.

## ಅಷ್ಟಾದಶವಿದ್ಯಾವತಾರವಿಧಿಃ.

ಚೋಳಃ—"ಧರ್ಮಾರ್ಥಕಾಮಮೋಕ್ಷಾಣಾಂ ಶ್ರೀಗುರೋ ಸಾಧನಾನಿ ಚ ||
ಯಾನಿ ಶಾಸ್ತ್ರಾಣಿ ವರ್ತಂತೇ ತೇಷಾಂ ಲಕ್ಷಣಮುಚ್ಯತಾಂ,,

ಶ್ರೀರೇಣುಕಃ—ಹೇ ಚೋಳ! ಸರ್ವಶಾಸ್ತ್ರಾವತಾರಶ್ಶ್ರೂಯತಾಂ, ಯಜುರ್ವೇದೇನಾರಾಯಣೋಪನಿಷದಿ,—"ಈಶಾನಸ್ಸರ್ವವಿದ್ಯಾನಾಂ,, ಇತಿ. ತಥಾ ಲೈಂಗ್ಯೇ,—"ನಮೋಽಸ್ತು ಸರ್ವವಿದ್ಯಾನಾಮೀಶಾನ ಪರಮೇಶ್ವರ || ನಮೋಽಸ್ತು ಸರ್ವಭೂತಾನಾಮೀಶಾನ ವೃಷವಾಹನ || ಬ್ರಹ್ಮಣೋಧಿಪತೇ ತುಭ್ಯಂ ಬ್ರಹ್ಮಣೇ ಬ್ರಹ್ಮರೂಪಿಣೇ || ನಮೋ ಬ್ರಹ್ಮಾಧಿಪತಯೇ ಶಿವಂ ಮೇಽಸ್ತು ಸದಾಶಿವ,, ಇತಿ. ಸ್ಕಾಂದೇಸೂತಸಂಹಿತಾಯಾಂ,—"ಯಶ್ಶಿವಸ್ಸರ್ವಭೂತಾನಾಮೀಶ್ವರಸ್ಸ್ವತಏವ ತತ್|| ಈಶಾನಸ್ಸರ್ವವಿದ್ಯಾನಾಂ ಸ ಏವಾದಿಗುರುರ್ಬುಧಾಃ || ತಸ್ಯ ಶಿಷ್ಯೋ ಮಹಾವಿಷ್ಣುಸ್ಸರ್ವಜ್ಞಾನ ಮಹೋದಧಿಃ,, ಶೈವೇವಾಯವೀಯಸಂಹಿತಾಯಾಂ,—"ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ || ಪುರಾಣಂ ಧರ್ಮ

---

### ಅಷ್ಟಾದಶವಿದ್ಯೆಗಳುತ್ಪತ್ತಿವಿಧಿಯು.



ಚೋ—ಎಲೈ ಸಂಪದ್ಯುಕ್ತನಾದ ಗುರುವೇ! ಧರ್ಮಾರ್ಥಕಾಮಮೋಕ್ಷಗಳಿಗೆ ಸಾಧಕವಾದ ಶಾಸ್ತ್ರಗಳ ಲಕ್ಷಣವನ್ನು ನಿರೂಪಿಸು.

ರೇ—ಎಲೈ ಚೋಳನೇ! ಸಮಸ್ತ ಶಾಸ್ತ್ರಗಳ ಉತ್ಪತ್ತಿಯನ್ನು ಕೇಳು; ಯಜುರ್ವೇದದ ನಾರಾಯಣೋಪನಿಷತ್ತಿನಲ್ಲಿ—"ಶಿವನೇ ಸಕಲ ವಿದ್ಯೆಗಳಿಗೆ ಅಧಿಪತಿಯು,, ಎಂದು ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ—"ಸಕಲವಿದ್ಯೆಗಳಿಗೊಡೆಯನಾದ ಪರಮೇಶ್ವರನೇ! ನಿನಗೆ ನಮಸ್ಕಾರವಾಗಲಿ,, ಎಂದೂ, ಸೂತಸಂಹಿತೆಯಲ್ಲಿ—"ಎಲೈ ದೇವತೆಗಳೇ! ಸರ್ವವಿದ್ಯೆಗಳಿಗೊಡೆಯನಾದ ಆ ಶಿವನೇ ಜಗದಾದಿಗುರುವು. ಅವನಿಗೆ ವಿಷ್ಣುವು ಶಿಷ್ಯನಾಗಿ ಸರ್ವಶಾಸ್ತ್ರಜ್ಞಾನಕ್ಕೆ ಸಮುದ್ರವಾದನು,, ಎಂದೂ, ವಾಯವೀಯಸಂಹಿತೆಯಲ್ಲಿ—"ಹದಿನಾಲ್ಕು ವಿದ್ಯೆಗಳಾಗಿರುವ ಶಿಕ್ಷಾ ವ್ಯಾಕರಣ ಛಂದೋ ನಿರುಕ್ತ ಜ್ಯೋತಿಷ ಕಲ್ಪ ಋಗ್ಯಜುಸ್ಸಾಮಾಥರ್ವಣ ಮೀಮಾಂಸಾ ನ್ಯಾಯ ಪುರಾಣ ಧರ್ಮಶಾಸ್ತ್ರಗಳೊಡನೆ ಆಯುರ್ವೇದ, ಧನುರ್ವೇದ, ಗಾಂಧರ್ವಶಾಸ್ತ್ರ, ಅರ್ಥಶಾಸ್ತ್ರ, ಈ ನಾಲ್ಕು ಸೇರಿದೊಡೆ ಹದಿನೆಂಟು ವಿದ್ಯೆಗಳಾಗುತ್ತವೆ. ಬೇರೆಬೇರೆ ಮಾರ್ಗವುಳ್ಳ ಈ

ಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ‖ ಆಯುರ್ವೇದೋ ಧನುರ್ವೇದೋ ಗಾ
ಧರ್ವಶ್ಚೇತ್ಯನುಕ್ರಮಾತ್ ‖ ಅರ್ಥಶಾಸ್ತ್ರಂ ಪರಂ ತಸ್ಮಾದ್ವಿದ್ಯಾಹ್ಯಷ್ಟಾದಶ ಸ್ಮೃ
ತಾಃ ‖ ಅಷ್ಟಾದಶಾನಾಮೇತಾಸಾಂ ವಿದ್ಯಾನಾಂ ಭಿನ್ನವರ್ತ್ಮನಾಂ ‖ ಆ
ದಿಕರ್ತಾ ಕವಿಸ್ಸಾಕ್ಷಾಚ್ಛೂಲ ಪಾಣಿರಿತಿ ಶ್ರುತಿಃ ‖ ಸ ಹಿ ಸರ್ವಜಗನ್ನಾಥಸ್ಸಿಸೃಕ್ಷು
ಖಿಲಂ ಜಗತ್ ‖ ಬ್ರಹ್ಮಾಣಂ ವಿದಧೇ ಸಾಕ್ಷಾತ್ಪುತ್ರಮಗ್ರೇ ಸನಾತನಂ ‖ ತಸ್ಮೈ
ಪ್ರಥಮಪುತ್ರಾಯ ಬ್ರಹ್ಮಣೇ ವಿಶ್ವಯೋನಯೇ ‖ ವಿದ್ಯಾಶ್ಚೇಮಾ ದದೌ ಸರ್ವಾ
ಪ್ರಜಾಸ್ಸೃಷ್ಟ್ಯರ್ಥಮೀಶ್ವರಃ„ ಇತಿ. ಅಥರ್ವಣೇ,—" ಯೋ ಬ್ರಹ್ಮಾಣಂ ವಿದಧಾ
ಪುತ್ರಮಗ್ರೇ ಜಾತಂ ಯಃ ಪ್ರಹಿಣೋತಿಸ್ಮ„ ತಥಾಲೈಂಗ್ಯೇ,—" ಬ್ರಹ್ಮಾಣಂ
ವಿದಧೇ ವೇದಾನಗ್ರಪುತ್ರೇ ಚತುರ್ಮುಖೇ ‖ ಪ್ರಹಿಣೋತಿಸ್ಮ ತಸ್ಮೈ ಚ ಜ್ಞಾ
ನಾತ್ಮಪ್ರಕಾಶಕಂ„

ಇತ್ಯಷ್ಟಾದಶವಿದ್ಯಾವತಾರವಿಧಿಃ ಪ್ರಥಮೋಪದೇಶೇ ತೃತೀಯಸ್ಸಂವಾದಃ.

—————:※:—————

ಹದಿನೆಂಟು ವಿದ್ಯೆಗಳಿಗೆ ಶಿವನು ಆದಿಕರ್ತನೂ ಆದಿಕವಿಯೂ ಆಗಿರುತ್ತಾನೆಂದು ಶ್ರುತಿಯು
ಹೇಳುತ್ತದೆ. ಸರ್ವಲೋಕೇಶ್ವರನಾದ ಆ ಶಿವಸ್ವಾಮಿಯು – ಸ್ಥಾವರಜಂಗಮಾತ್ಮಕವಾದ ಪ್ರಪಂ
ಚವನ್ನು ಸೃಷ್ಟಿಮಾಡಲಿಚ್ಛೈಸಿದವನಾಗಿ ಜಗತ್ಸೃಷ್ಟಿಗಿಂತ ಮೊದಲು ಬ್ರಹ್ಮನನ್ನು ಸೃಷ್ಟಿಸಿ
ದನು. ಸಕಲ ಲೋಕಕ್ಕೆ ಕಾರಣನಾಗುವ ಪ್ರಥಮಪುತ್ರನಾದ ಆ ಬ್ರಹ್ಮನಿಗಾಗಿ ಸಮಸ್ತವಾದ
ಈ ವಿದ್ಯೆಗಳನ್ನು ಉಪದೇಶಮಾಡಿದನು„ ಎಂದೂ ಉಕ್ತವಾಗಿದೆ. ಅಥರ್ವಣವೇದದಲ್ಲಿ – "ಯಾ
ವನು– ಮೊದಲು ಹುಟ್ಟಿದ ಬ್ರಹ್ಮನನ್ನು ಹಿರಿಯ ಮಗನನ್ನಾಗಿ ಮಾಡಿಕೊಂಡನೋ, ಯಾವನು-
ತನ್ನಿಂದ ಹುಟ್ಟಿದ ವೇದಗಳನ್ನು ತನ್ನ ಮಗನಿಗಾಗಿ ಕೊಟ್ಟನೋ„ ಎಂದು ನಿರೂಪಿತವಾಗಿ
ಆ ಶ್ರುತ್ಯರ್ಥವೇ ಲಿಂಗಪುರಾಣದಲ್ಲಿ – "ಬ್ರಹ್ಮನನ್ನು ಸೃಷ್ಟಿಸಿ ಪ್ರಥಮಪುತ್ರನಾದ ಬ್ರಹ್ಮನಿ
ವೇದಗಳನ್ನು ಕಳುಹಿಸಿದನು„ ಎಂದುಕ್ತವಾಗಿದೆ.

ಎಂಬಲ್ಲಿಗೆ ಅಷ್ಟಾದಶವಿದ್ಯೆಗಳ ಉತ್ಪತ್ತಿವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ
ಮೂರನೆಯ ಸಂವಾದವು ಮುಗಿದುದು.



ಶ್ರೀಶರ್ವಾಯನಮಃ.

## ವೇದಭೇದವಿಧಿಃ.

ಶ್ರೀರೇಣುಕಃ—ಹೇ ಚೋಳ! ಅಷ್ಟಾದಶವಿದ್ಯಾಸು ವೇದಭೇದಲಕ್ಷಣಂ ಪ್ರಥಮಂ ಶ್ರೂಯತಾಂ, ಸ್ಕಾಂದೇಸೂತಸಂಹಿತಾಯಾಂ,—ಶಿವಃ, "ಏಕಏವ ಮಹಾನ್ವೇದಶ್ಚತುರ್ಧಾ ಚ ಪುನಃ ಕೃತಃ || ಶಾಖಾರ್ಥಮತ್ರ ಸತ್ವಾನಾಂ ಗ್ರಹ ಣಾಯಾತಿವಿಸ್ತರಾತ್ || ಸಂವಿಭಕ್ತಾ ಮಯಾ ವತ್ಸ ಋಗ್ಯಜುಸ್ಸಾಮಥರ್ವಕಾಃ || ಏಕವಿಂಶತಿಭೇದೇನ ಋಗ್ವೇದೋ ಭೇದಿತೋ ಮಯಾ || ಸ ಏಕಶತಭೇದೇನ ಯಜು ರ್ವೇದಸ್ತು ಭೇದಿತಃ || ನವಧಾ ಭೇದಿತೋಽಥರ್ವಸ್ಸಾಮಭಿನ್ನಂ ಸಹಸ್ರಧಾ,,

ಇತಿ ವೇದಭೇದವಿಧಿಃ ಪ್ರಥಮೋಪದೇಶೇ ಚತುರ್ಥಸ್ಸಂವಾದಃ.

---

ಶ್ರೀರುದ್ರಾಯನಮಃ.

## ಉಪವೇದವಿಧಿಃ

ಶ್ರೀರೇಣುಕಃ—ಹೇ ಚೋಳ! ಉಪವೇದಲಕ್ಷಣಂ ಶ್ರೂಯತಾಂ, ಸರ್ವದ ರ್ಶನಸಿದ್ಧಾಂತೇ,— "ಆಯುರ್ವೇದೋ ಧನುರ್ವೇದೋಪ್ಯಥಗಾಂಧರ್ವವೇದಕಃ ||

---

### ವೇದಭೇದವಿಧಿಯು.

ರೇ— ಎಲೈ ಚೋಳನೇ! ಹದಿನೆಂಟು ವಿದ್ಯೆಗಳಲ್ಲಿ ವೇದಭೇದ ಲಕ್ಷಣವನ್ನು ಮೊದಲು ಕೇಳು; ಸೂತಸಂಹಿತೆಯಲ್ಲಿ,—"ಎಲೈ ಷಣ್ಮುಖನೇ! ಒಂದೇ ಆದ ವೇದವು ವಿಸ್ತಾರವಾಗಿ ದ್ದುದರಿಂದ ಅದನ್ನು ಜನರು ಗ್ರಹಿಸುವುದಕ್ಕಾಗಿ ಋಕ್ಕು, ಯಜುಸ್ಸು, ಸಾಮ, ಅಥರ್ವಣ, ಎಂದು ನಾಲ್ಕು ಬಗೆಯಾಗಿ ನನ್ನಿಂದ ಮಾಡಲ್ಪಟ್ಟಿತು. ಋಗ್ವೇದವು ಇಪ್ಪತ್ತೊಂದುಭೇದದಿಂದ, ಯಜುರ್ವೇದವು ನೂರೊಂದು ಭೇದದಿಂದ, ಸಾಮವೇದವು ಸಹಸ್ರಭೇದದಿಂದ, ಅಥರ್ವಣವೇ ದವು ಒಂಭತ್ತು ಭೇದದಿಂದ ಮಾಡಲ್ಪಟ್ಟಿತು,, ಎಂದು ಶಿವನಿಂದ ನಿರೂಪಿಸಲ್ಪಟ್ಟಿದೆ.

ಎಂಬಲ್ಲಿಗೆ ವೇದಭೇದವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

---

### ಉಪವೇದವಿಧಿಯು.

ರೇ—ಎಲೈ ಚೋಳನೇ! ಉಪವೇದಗಳ ಲಕ್ಷಣವನ್ನು ಕೇಳು; ಸರ್ವದರ್ಶನಸಿದ್ಧಾಂ ತದಲ್ಲಿ "ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥವೇದಗಳನ್ನು ಉಪವೇದಗಳನ್ನಾಗಿ ತಿಳಿಯಬೇಕು. ಹೇತು, ಲಿಂಗ, ಔಷಧ, ಸ್ಕಂಧಗಳಿಂದ ಆಯುರಾರೋಗ್ಯಗಳನ್ನು ತಿಳಿಸತಕ್ಕ

ಅರ್ಥವೇದಃ ಕ್ರಮಾದ್ವೇದ್ಯಾ ಉಪವೇದಾಶ್ಚತುರ್ವಿಧಾಃ ॥ ಹೇತುಲಿಂಗೌಷಧಸ್ಕಂ
ಧೈರಾಯುರಾರೋಗ್ಯದರ್ಶಕಃ ॥ ಆಯುರ್ವೇದೋಹ್ಯನುಷ್ಠೇಯಸ್ಸರ್ವೇಷಾಂ ಕೇನ
ವರ್ತ್ಮನಾ ॥ ಧನುರ್ವೇದೋ ಭವತ್ಯತ್ರ ಪರಿಪಂಥಿನಿವಾರಕಃ ॥ ಸಪ್ತಸ್ವರಪ್ರಯೋಗೋ
ಹಿ ಸಾಮಗಾಂಧರ್ವವೇದಯೋಃ ॥ ಅರ್ಥವೇದೋನ್ನಪಾನಾದಿಪ್ರದಾನಮುಖತಸ್ಸ್ವರಃ.

ಇತ್ಯುಪವೇದಭೇದವಿಧಿಃ ಪ್ರಥಮೋಪದೇಶೇ ಪಂಚಮಸ್ಸಂವಾದಃ.

ಶ್ರೀಭೀಮಾಯನಮಃ.

## ವೇದಾಂಗವಿಧಿಃ.

ಶ್ರೀರೇಣುಕಃ—ಹೇ ಚೋಳ! ವೇದಾಂಗಲಕ್ಷಣಂ ಶ್ರೂಯತಾಂ, ಸರ್ವದ
ರ್ಶನಸಿದ್ಧಾಂತೇ,—" ವೇದಾಂಗಾನಿ ಷಡೇತಾನಿ ಶಿಕ್ಷಾ ವ್ಯಾಕರಣಂ ತಥಾ ॥ ನಿ
ರುಕ್ತಂ ಜ್ಯೋತಿಷಂ ಕಲ್ಪಶ್ಛಂದೋ ವಿಚಿತಿರಿತ್ಯಪಿ ॥ ಶಿಕ್ಷಾ ಶಿಕ್ಷಯತಿ ವ್ಯಕ್ತಂ ವೇ
ದೋಚ್ಚಾರಣಲಕ್ಷಣಂ ॥ ವಕ್ತಿ ವ್ಯಾಕರಣಂ ತಸ್ಯ ಸಂಹಿತಾ ಪದಲಕ್ಷಣಂ ॥ ವಕ್ತಿ
ತಸ್ಯ ನಿರುಕ್ತಂ ತು ಪದನಿರ್ವಚನಂ ಸ್ಫುಟಂ ॥ ಜ್ಯೋತಿಶ್ಶಾಸ್ತ್ರಂ ವದತ್ಯತ್ರ ಕಾಲಂ
ವೈದಿಕಕರ್ಮಣಾಂ ॥ ಕ್ರಮಂ ಕರ್ಮಪ್ರಯೋಗಾಣಾಂ ಕಲ್ಪಸೂತ್ರಂ ಪ್ರವಕ್ತಿ

---

ಸತಕ್ಕ ಆಯುರ್ವೇದದಲ್ಲಿ ನಿರೂಪಿತವಾಗಿರತಕ್ಕದು ಸರ್ವರಿಂದಲೂ ಆಚರಿಸಲು ಯೋಗ್ಯವಾ
ದದ್ದು. ಧನುರ್ವೇದವು ಶತ್ರುಗಳನ್ನು ನಿಗ್ರಹಿಸತಕ್ಕ ಬಗೆಯನ್ನು ಹೇಳತಕ್ಕದ್ದು. ಸಾಮ,
ಗಾಂಧರ್ವಗಳೆರಡೂ ಸಪ್ತಸ್ವರಪ್ರಯೋಗಲಕ್ಷಣವನ್ನು ಹೇಳತಕ್ಕವುಗಳು. ಅರ್ಥವೇದವು ಅನ್ನೋ
ದಕ ಮೊದಲಾದ ದಾನಗಳನ್ನು ನಿರೂಪಿಸತಕ್ಕದು,. ಎಂದು ಹೇಳಲ್ಪಟ್ಟದೆ.

ಎಂಬಲ್ಲಿಗೆ ಉಪವೇದಲಕ್ಷಣವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ
ಐದನೆಯ ಸಂವಾದವು ಮುಗಿದುದು.



ವೇದಾಂಗವಿಧಿಯು.

ರೇ—ಎಲೈ ಚೋಳನೇ! ವೇದಾಂಗಲಕ್ಷಣವಂ ಕೇಳು; ಸರ್ವದರ್ಶನಸಿದ್ಧಾಂತದಲ್ಲಿ—
"ಶಿಕ್ಷೆ, ವ್ಯಾಕರಣ, ನಿರುಕ್ತ, ಜ್ಯೋತಿಷ, ಕಲ್ಪ, ಛಂದಸ್ಸು ಎಂಬ ಈ ಆರು ವೇದಾಂಗಗಳಾ
ಗಿರುತ್ತವೆ ಶಿಕ್ಷೆಯು—ವೇದಾಕ್ಷರಗಳನ್ನುಚ್ಚರಿಸಲು ಕ್ರಮವನ್ನು. ನಿರುಕ್ತವು—ಆ ವೇದಗಳ
ಲ್ಲಿರುವ ಪದಗಳಿಗರ್ಥವನ್ನು, ಜ್ಯೋತಿಷವು—ವೇದೋಕ್ತವಾದ ಕರ್ಮಗಳನ್ನಾಚರಿಸಲು ಕಾಲ
ವನ್ನು, ಕಲ್ಪವು—ಆ ವೈದಿಕಕರ್ಮಪ್ರಯೋಗಗಳ ಕ್ರಮವನ್ನು, ಛಂದಸ್ಸು—ಆ ವೇದಮಂತ್ರಗ
ಳಿಗೆ ಅಕ್ಷರಸಂಖ್ಯೆಗಳನ್ನು ಹೇಳತಕ್ಕದ್ದು" ಎಂದುಕ್ತವಾಗಿದೆ. ಬೇರೊಂದು ಸ್ಥಳದಲ್ಲಿ—"ವೇ

ವೈ || ಮಂತ್ರಾಕ್ಷರಾಣಾಂ ಸಂಖ್ಯೋಕ್ತಾ ಛಂದೋ ವಿಚಿತಿಭಿಸ್ತಥಾ " ತಥಾ ಅನ್ಯತ್ರ,—" ಛಂದಃ ಪಾದೌ ಶಬ್ದಶಾಸ್ತ್ರಂ ಚ ವಕ್ತ್ರಂ ಶಿಕ್ಷಾ ಘ್ರಾಣಂ ಜ್ಯೋತಿ ಷಂ ಚಕ್ಷುಷೀ ಚ || ಕಲ್ಪಃ ಪಾಣೀ ಶ್ರೋತ್ರಮುಕ್ತಂ ನಿರುಕ್ತಂ ವೇದಸ್ಯಾಂಗಾ ನ್ಯಾಹುರೇತಾನಿ ಷಟ್ಕ,,

ಇತಿ ವೇದಾಂಗವಿಧಿಃ ಪ್ರಥಮೋಪದೇಶೇ ಷಷ್ಠಮಸ್ಸಂವಾದಃ.



ಶ್ರೀಉಮಾಪತಯೇನಮಃ.

## ನ್ಯಾಯಶಾಸ್ತ್ರಲಕ್ಷಣಂ.

ಶ್ರೀರೇಣುಕಃ—ಹೇ ಚೋಳ! ಅಥೋಪಾಂಗಲಕ್ಷಣಂ ಶ್ರೂಯತಾಂ, ಸರ್ವ ದರ್ಶನಸಿದ್ಧಾಂತೇ,-" ಚತ್ವಾರ್ಯೇತಾನ್ಯುಪಾಂಗಾನಿ ನ್ಯಾಯಶಾಸ್ತ್ರಂ ಪುರಾಣಕಂ|| ಧರ್ಮಶಾಸ್ತ್ರಂ ಚ ಮೀಮಾಂಸಾ ಕಥಿತಾನಿ ಮನೀಷಿಭಿಃ,, ತತ್ರನ್ಯಾಯಶಾಸ್ತ್ರಲ ಕ್ಷಣಂ,, " ನ್ಯಾಯಶಾಸ್ತ್ರಂ ಪ್ರಮಾಣಾದಿಸರ್ವಲಕ್ಷಣಸಂಯುತಂ ||ಗೌತಮೀಯಂ ಚ ಕಾಣಾದಮಿತಿ ನ್ಯಾಯಂ ದ್ವಿಧಾ ಸ್ಮೃತಂ || ತತ್ಷೋಡಶಪದಾರ್ಥೈಶ್ಚ ಷಟ್ಪ ದಾರ್ಥೈಶ್ಚ ವಿಸ್ತೃತಂ||ಪ್ರಮಾಣಂ ಚ ಪ್ರಮೇಯಂ ಚ ಸಂಶಯಶ್ಚ ಪ್ರಯೋಜನಂ|| ದೃಷ್ಟಾಂತಶ್ಚೈವ ಸಿದ್ಧಾಂತೋಽವಯವಸ್ತರ್ಕನಿರ್ಣಯೌ || ವಾದೋಜಲ್ಪೋ

---

ದಕ್ಕೆ ಛಂದಸ್ಸೇ ಪಾದಗಳೂ, ವ್ಯಾಕರಣವೇ ಮುಖವೂ. ಶಿಕ್ಷೆಯೇ ಮೂಗೂ, ಜ್ಯೋತಿಷವೇ ಕಣ್ಣೂ, ಕಲ್ಪವೇ ಕೈಗಳೂ, ನಿರುಕ್ತವೇ ಕಿವಿಗಳೂ ಆಗಿರುವುದರಿಂದ ಈ ಆರೇ ವೇದಾಂಗಗ ಳು" ಎಂದುಕ್ತವಾಗಿರುತ್ತದೆ.

ಎಂಬಲ್ಲಿಗೆ ವೇದಾಂಗವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ವೇದದುಪಾಂಗಲಕ್ಷಣವು.

ರೇ—ಎಲೈ ಚೋಳನೇ ! ವೇದದುಪಾಂಗಲಕ್ಷಣವನ್ನು ಕೇಳು; ಸರ್ವದರ್ಶನಸಿದ್ಧಾಂತ ದಲ್ಲಿ—"ನ್ಯಾಯಶಾಸ್ತ್ರವು, ಪುರಾಣವು, ಧರ್ಮಶಾಸ್ತ್ರವು, ಮೀಮಾಂಸಾಶಾಸ್ತ್ರವು ಇವು ನಾಲ್ಕು ವೇದಕ್ಕೆ ಉಪಾಂಗಗಳು,, ಎಂದುಕ್ತವಾಗಿದೆ. ಆ ಸಿದ್ಧಾಂತದಲ್ಲೇ—"ನ್ಯಾಯಶಾಸ್ತ್ರವು ಪ್ರಮಾ ಣಾದಿ ಲಕ್ಷಣಗಳಿಂದ ಕೂಡಿರತಕ್ಕದ್ದು. ನ್ಯಾಯವು—ಗೌತಮೀಯ, ಕಾಣಾದವೆಂದು ಎರಡು ಭೇದಗಳುಳ್ಳದ್ದಾಗಿದೆ. ಅದು ಹದಿನಾರು ಪದಾರ್ಥಗಳಿಂದಲೂ, ಆರು ಪದಾರ್ಥಗಳಿಂದಲೂ, ವಿಸ್ತೃತವಾಗಿದೆ. ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ,

ವಿತಂಡಶ್ಚ ಹೇತ್ವಾಭಾಸಶ್ಛಲಂ ತಥಾ || ಜಾತಿಶ್ಚ ನಿಗ್ರಹಶ್ಚೇತಿ ಪದಾರ್ಥಾಃ ಷೋಡಶ ಸ್ಮೃತಾಃ || ದ್ರವ್ಯಂ ಗುಣಸ್ತಥಾ ಕರ್ಮ ಸಾಮಾನ್ಯಂ ತತ್ತ್ರಯಾಶ್ರಯಂ || ವಿಶೇಷಸ್ಸಮವಾಯಶ್ಚ ಪದಾರ್ಥಾಷ್ಷಡ್ವಿಮೇ ಮತಾಃ,,

ಇತಿ ನ್ಯಾಯಶಾಸ್ತ್ರಲಕ್ಷಣವಿಧಿಃ ಪ್ರಥಮೋಪದೇಶೇ ಸಪ್ತಮಸ್ಸಂವಾದಃ.

ಶ್ರೀಪಶುಪತಯೇನಮಃ.

## ಪುರಾಣೋದ್ದೇಶವಿಧಿಃ.

ಶ್ರೀರೇಣುಕಃ—ಹೇ, ಚೋಳ! ಪುರಾಣಲಕ್ಷಣಮಾಕರ್ಣ್ಯಾಥ ತತ್ಪ್ರಾಶಸ್ತ್ಯಂ ಶ್ರೂಯತಾಂ, ಛಾಂದೋಗ್ಯೋಪನಿಷದಿ—"ಪಂಚಮೋ ವೇದಃ ಪುರಾಣಮಿತಿಹಾಸಂ ಚ,, ಇತಿ. ಶೈವೇವಾಯುವೀಯಸಂಹಿತಾಯಾಂ,—"ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ|| ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಂ|| ದಶಧಾ ಚಾಷ್ಟಧಾಚೈತತ್ಪುರಾಣಮುಪದಿಶ್ಯತೇ || ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ||ಭವಿಷ್ಯನ್ನಾರದೀಯಂ ಚ ಮಾರ್ಕಂಡೇಯಮತಃ ಪರಂ|| ಆಗ್ನೇಯಂ ಬ್ರಹ್ಮಕೈವರ್ತಂ ಲೈಂಗ್ಯಂ ವಾರಾಹಮೇವ ಚ || ಸ್ಕಾಂದಂ ಚ ವಾಮನಂಚೈವ ಕೌರ್ಮಂ ಮಾತ್ಸ್ಯಂ ಚ ಗಾರುಡಂ || ಬ್ರಹ್ಮಾಂಡಂ ಚೇತಿ ಪುಣ್ಯೋಯಂ

---

ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜಾತಿ, ನಿಗ್ರಹ, ಇವೇ ಹದಿನಾರು ಪದಾರ್ಥಗಳು. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಇವೇ ಆರು ಪದಾರ್ಥಗಳು ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ವೇದೋಪಾಂಗಲಕ್ಷಣವನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.

## ಪುರಾಣೋದ್ದೇಶವಿಧಿಯು.

ರೇ—ಎಲೈ ಚೋಳನೇ ! ಪುರಾಣಪ್ರಾಶಸ್ತ್ಯವನ್ನು ಕೇಳಿದನಂತರದಲ್ಲಿ ಅದರ ಲಕ್ಷಣವನ್ನು ಕೇಳು; ಛಾಂದೋಗ್ಯೋಪನಿಷತ್ತಿನಲ್ಲಿ—"ಪುರಾಣವು ಇತಿಹಾಸವುಕೂಡ ಐದನೆಯ ವೇದವು,, ಎಂದು ಹೇಳಲ್ಪಟ್ಟಿದೆ. ವಾಯುವೀಯಸಂಹಿತೆಯಲ್ಲಿ—"ಪುರಾಣವು—ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ,, ಎಂದು ಐದುಲಕ್ಷಣಗಳುಳ್ಳದ್ದು. ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ಭವಿಷ್ಯ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಬ್ರಹ್ಮಕೈವರ್ತ, ಲೈಂಗ್ಯ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರ

ಪುರಾಣಾನಾಮನುಕ್ರಮಃ || ಪುರಾಣಮಪಿ ಸಂಕ್ಷಿಪ್ತಂ ಚತುರ್ಲಕ್ಷಪ್ರಮಾಣತಃ || ಅದ್ಯಾಪಿ ದೇವಲೋಕೇ ತಚ್ಛತಕೋಟಿಪ್ರವಿಸ್ತರಂ,, ಸೂತಸಂಹಿತಾಯಾಂ,— ಸೂತಃ " ಪುರಾಣೈರ್ದಶಭಿರ್ವಿಪ್ರಾಃ ಪ್ರೋಕ್ತೋ ರುದ್ರಸ್ತಥೈವ ಚ || ಚತುರ್ಭಿರ್ಭಗವಾನ್ವಿಷ್ಣುರ್ದ್ವಾಭ್ಯಾಂ ಬ್ರಹ್ಮಾ ಪ್ರಕೀರ್ತಿತಃ || ಅಗ್ನಿರೇಕೇನ ವಿಪ್ರೇಂದ್ರಾಸ್ತಥೈಕೇನ ದಿವಾಕರಃ,, ಕೌರ್ಮೇ,—" ಅನ್ಯಾನ್ಯುಪಪುರಾಣಾನಿ ಮುನಿಭಿಃ ಕಥಿತಾನಿ ಚ || ಆದ್ಯಂಸನತ್ಕುಮಾರೋಕ್ತಂ ನಾರಸಿಹ್ಮಮತಃ ಪರಂ|| ತೃತೀಯಂ ಸ್ಕಾಂದಮುದ್ದಿಷ್ಟಂ ಕುಮಾರೇಣ ಪ್ರಭಾಷಿತಂ|| ಚತುರ್ಥಂ ಶಿವಧರ್ಮಾಖ್ಯಂ ಮಹಾನಂದೀಶಭಾಷಿತಂ|| ದೂರ್ವಾಸಸೋಕ್ತಮಾಶ್ಚರ್ಯಂ ನಾರದೀಯಮತಃಪರಂ || ಕಾಪಿಲಂ ವಾಮನಂ ಚೈವ ತತ್ತಥೈವೋಶನಸೇರಿತಂ || ಬ್ರಹ್ಮಾಂಡಂ ವಾರುಣಂ ಚಾಥ ಕಾಳಿಕಾಹ್ವಯಮೇವ ಚ || ಮಾಹೇಶ್ವರಂ ತಥಾ ಸಾಂಬಂ ಸೌರಂ ಸರ್ವಾರ್ಥಸಂಯುತಂ || ಪರಾಶರೋಕ್ತಮಪರಂ ಮಾರೀಚಂ ಭಾರ್ಗವಾಹ್ವಯಂ,, ಸರ್ವದರ್ಶನಸಿದ್ಧಾಂತೇ,—" ಪುರಾಣಂ ನಷ್ಟಶಾಖಾರ್ಥೈರ್ವೇದಾರ್ಥೈರುಪಬೃಂಹಿತಂ || ತಥಾರೂಪೇಣ ಮಹತಾಂ ಪುರುಷಾರ್ಥಪ್ರದಾಯಕಂ,,

ಇತಿ ಪುರಾಣೋದ್ದೇಶವಿಧಿಃ ಪ್ರಥಮೋಪದೇಶೇಽಷ್ಟಮಸ್ಸಂವಾದಃ.

ಹ್ಮಾಂಡ,, ಎಂದು ಹದಿನೆಂಟು ಪ್ರಕಾರವಾಗಿದೆ. ಅದು ಭೂಲೋಕದ ಜನಕ್ಕೋಸ್ಕರ ನಾಲ್ಕು ಲಕ್ಷ ಗ್ರಂಥಸಂಖ್ಯೆಯ ಅಳತೆಯಿಂದ ಮಿತಗೊಳಿಸಲ್ಪಟ್ಟಿದೆ. ಅದು ಸ್ವರ್ಗದಲ್ಲಿ ನೂರುಕೋಟಿ ಗ್ರಂಥಸಂಖ್ಯೆಗಳುಳ್ಳದ್ದಾಗಿ ಈಗಲೂ ಇರುತ್ತಿರ್ಪುದು,, ಎಂದು ನಿರೂಪಿತವಾಗಿದೆ. ಸೂತಸಂಹಿತೆಯಲ್ಲಿ—"ಎಲೈ ವಿಪ್ರರೇ ! ಹತ್ತು ಪುರಾಣಗಳಿಂದ ಶಿವನಿಗೆ ಆಧಿಕ್ಯವೂ, ನಾಲ್ಕು ಪುರಾಣಗಳಿಂದ ವಿಷ್ಣುವಿಗೆ ಆಧಿಕ್ಯವೂ, ಎರಡು ಪುರಾಣಗಳಿಂದ ಬ್ರಹ್ಮನಿಗೆ ಆಧಿಕ್ಯವೂ, ಒಂದು ಪುರಾಣದಿಂದ ಅಗ್ನಿಗೆ ಆಧಿಕ್ಯವೂ, ಒಂದು ಪುರಾಣದಿಂದ ಸೂರ್ಯನಿಗೆ ಆಧಿಕ್ಯವೂ, ಹೇಳಲ್ಪಟ್ಟಿರುವುದು,, ಎಂದು ಸೂತನಿಂದ ಹೇಳಲ್ಪಟ್ಟಿತು. ಎಂದೂ, ಕೂರ್ಮಪುರಾಣದಲ್ಲಿ—"ಬ್ರಾಹ್ಮಾದಿ ಪುರಾಣಗಳಿಗಿಂತ ಬೇರೆಯಾದ ಉಪಪುರಾಣಗಳು ಮುನಿಗಳಿಂದ ಹೇಳಲ್ಪಟ್ಟಿರುತ್ತವೆ. ಸನತ್ಕುಮಾರವು, ನಾರಸಿಹ್ಮವು, ಸ್ಕಾಂದವು, ಶಿವಧರ್ಮೋತ್ತರವು, ದೂರ್ವಾಸವು, ನಾರದೀಯವು, ಕಾಪಿಲವು, ವಾಮನವು, ಔಶನಸವು, ಬ್ರಹ್ಮಾಂಡವು, ವಾರುಣವು, ಕಾಳಿಕ, ಮಾಹೇಶ್ವರ, ಸಾಂಬ, ಸೌರ, ಪರಾಶರ, ಮಾರೀಚ, ಭಾರ್ಗವ ಎಂಬ ಇವು ಹದಿನೆಂಟು ಉಪಪುರಾಣಗಳು,, ಎಂದೂ ಹೇಳಲ್ಪಟ್ಟಿದೆ. ಸರ್ವದರ್ಶನಸಿದ್ಧಾಂತದಲ್ಲಿ—"ವೇದಗಳಲ್ಲಿ ನಷ್ಟವಾದ ಶಾಖೆಗಳಿಗೆ ಅರ್ಥವನ್ನು ನಿರೂಪಿಸತಕ್ಕ ಪುರಾಣವು—ಮಹಾತ್ಮರಿಗೆ ಪುರುಷಾರ್ಥಪ್ರದವಾಗಿರ್ಪುದು,, ಎಂದು ಹೇಳಲ್ಪಟ್ಟಿದೆ. ಎಂಬಲ್ಲಿಗೆ ಪುರಾಣೋದ್ದೇಶವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.

ಶ್ರೀ ಈಶಾನಾಯನಮಃ.

## ಧರ್ಮಶಾಸ್ತ್ರಲಕ್ಷಣವಿಧಿಃ.

ಶ್ರೀರೇಣುಕಃ—ಹೇ ಚೋಳ! ಧರ್ಮಶಾಸ್ತ್ರಲಕ್ಷಣಂ ಶ್ರೂಯತಾಂ, ಸ ದರ್ಶನಸಿದ್ಧಾಂತೇ,—"ವರ್ಣಾಶ್ರಮಾನುರೂಪೇಣ ಧರ್ಮಾಧರ್ಮವಿಭೇದತಃ ‖ ಧ ಶಾಸ್ತ್ರಮನುಷ್ಠೇಯಧರ್ಮಾಣಾಂ ತು ನಿಯಾಮಕಂ" ಮನುಸ್ಮೃತೌ,—"ವಿಷ್ಣು ಪರಾಶರೋ ದಕ್ಷಸ್ಸಂವರ್ತೋ ವ್ಯಾಸಹಾರಿತೌ ‖ ಶಾತಾತಪೋ ವಸಿಷ್ಠಶ್ಚ ಯಮ ಪಸ್ತಂಭಗೌತಮಾಃ ‖ ದೇವಲಶ್ಶಂಖಲಿಖಿತೌ ಭರದ್ವಾಜಸ್ತಥೋಶನಾಃ ‖ ಶೌ ಕೋ ಯಾಜ್ಞವಲ್ಕ್ಯಶ್ಚ ದಶಾಷ್ಟ ಸ್ಮೃತಿಕಾರಕಾಃ ‖ ಜಾಬಾಲಿರ್ನಾಚಿಕೇ ಸ್ಕಂದೋ ಲೋಕಾಕ್ಷಿಃ ಕಾಶ್ಯಪೌ ‖ ಸನತ್ಕುಮಾರೋ ವರುಣಶ್ಶಂತನುರ್ಜನಕ ಥಾ ‖ ವ್ಯಾಘ್ರಃ ಕಾತ್ಯಾಯನೋ ಜೀವೋ ಜಾತುಕರ್ಣಃ ಕಪಿಂಜಲಿಃ ‖ ಬೋ ಧಾಯನಃ ಕಣಾದಶ್ಚ ಸುಮಂತಃ ಕೌಶಿಕಸ್ತಥಾ ‖ ಉಪಸ್ಮೃತಿಕರಾ ಏತೇ ಮು ಯಃ ಪರಿಕೀರ್ತಿತಾಃ" ಸೂತಸಂಹಿತಾಯಾಂ,—"ಬ್ರಹ್ಮಾ ವಿಶ್ವಜಗತ್ಕರ್ತಾ ವಿಶ್ವೇಶಸ್ಯ ಪ್ರಸಾದತಃ ‖ ಆಜ್ಞಯಾ ಪರಯಾ ಯುಕ್ತಸ್ಸ್ಮೃತಿಸಂಸ್ಕಾರಸುವ್ರತಃ

ಇತಿ ಧರ್ಮಶಾಸ್ತ್ರಲಕ್ಷಣವಿಧಿಃ ಪ್ರಥಮೋಪದೇಶೇ ನವಮಸ್ಸಂವಾದಃ.

### ಧರ್ಮಶಾಸ್ತ್ರಲಕ್ಷಣವಿಧಿಯು.

ರೇ—ಎಲೈ ಚೋಳನೇ! ಧರ್ಮಶಾಸ್ತ್ರಲಕ್ಷಣವನ್ನು ಕೇಳು; ಸರ್ವದರ್ಶನಸಿದ್ಧಾಂ ದಲ್ಲಿ—"ನಾಲ್ಕು ಜಾತಿಗಳಿಗೂ, ನಾಲ್ಕು ಆಶ್ರಮಗಳಿಗೂ, ಅನುಸಾರವಾಗಿ ಧರ್ಮಭೇದ ನ್ನೂ, ಅಧರ್ಮಭೇದಗಳನ್ನೂ ನಿರೂಪಿಸಿ ಆಚರಿಸುವುದಕ್ಕೆ ಯೋಗ್ಯವಾದ ಧರ್ಮಗಳ ಕ್ಲುಪ್ತವಾಗಿ ವಿಧಿಸತಕ್ಕದು ಧರ್ಮಶಾಸ್ತ್ರವಾಗಿದೆ,, ಎಂದುಕ್ತವಾಗಿದೆ. ಮನುಸ್ಮೃತಿಯಲ್ಲಿ "ವಿಷ್ಣು, ಪರಾಶರ, ದಕ್ಷ, ಸಂವರ್ತ, ವ್ಯಾಸ, ಹಾರೀತ, ಶಾತಾತಪ, ವಸಿಷ್ಠ, ಯಮ, ಪಸ್ತಂಭ, ಗೌತಮ, ದೇವಲ, ಶಂಖ, ಲಿಖಿತ, ಭರದ್ವಾಜ, ಉಶನ, ಶೌನಕ, ಯಾಜ್ಞವಲ್ಕ್ಯ ಈ ಹದಿನೆಂಟು ಮಂದಿಗಳು ಸ್ಮೃತಿಗಳನ್ನು ಮಾಡಿದರು. ಜಾಬಾಲ, ನಾಚಿಕೇತ, ಸ್ಕಂ ಲೋಕಾಕ್ಷಿ, ಕಾಶ್ಯಪ, ಸನತ್ಕುಮಾರ, ವರುಣ, ಶಂತನು, ಜನಕ, ವ್ಯಾಘ್ರ, ಕಾತ್ಯಾಯ ಜೀವ, ಜಾತುಕರ್ಣ, ಕಪಿಂಜಲ, ಬೋಧಾಯನ, ಕಣಾದ, ಸುಮಂತು, ಕೌಶಿಕ, ಇವರು ಸ್ಮೃತಿಗಳನ್ನು ರಚಿಸಿದವರು,, ಎಂದು ಹೇಳಲ್ಪಟ್ಟಿದೆ. ಸೂತಸಂಹಿತೆಯಲ್ಲಿ—"ಬ್ರಹ್ಮನು ವಿ ಶ್ವರನಾದ ಶಿವನ ಅನುಗ್ರಹದಿಂದ ಸಕಲಜಗತ್ತಿಗೆ ಕರ್ತನಾಗಿ ಆತನ ಅಪ್ಪಣೆಯಿಂದ ಸಮ ಲೋಕಗಳನ್ನು ಸೃಷ್ಟಿಸಿ, ಸ್ಮೃತಿಗಳನ್ನೋದಿದುದರಿಂದುಂಟಾದ ಸಂಸ್ಕಾರಬಲದಿಂದ ಉ ವಾದ ವ್ರತಗಳನ್ನು ಆಚರಿಸಿದನು,, ಎಂದು ನಿರೂಪಿಸವಾಗಿದೆ.

ಎಂಬಿಲ್ಲಿಗೆ ಧರ್ಮಶಾಸ್ತ್ರಲಕ್ಷಣವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀಶಂಕರಾಯನಮಃ.

## ಮೀಮಾಂಸಾಲಕ್ಷಣವಿಧಿಃ.



ಶ್ರೀರೇಣುಕಃ—ಹೇ ಜೋಳ ! ಮೀಮಾಂಸಾಲಕ್ಷಣಂ ಶ್ರೂಯತಾಂ, ಸರ್ವ
ದರ್ಶನಸಿದ್ಧಾಂತೇ,— "ಮೀಮಾಂಸಾ ಸರ್ವವೇದಾರ್ಥಾನ್ಸುವಿಚಾರಪರಾಯಣಾ ||
ಅಷ್ಟಾದಶಸು ವಿದ್ಯಾಸು ಮೀಮಾಂಸಾತಿಗರೀಯಸೀ || ವಿಂಶತ್ಯಧ್ಯಾಯಸಂಯು
ಕ್ತಾ ಪ್ರತಿಪಾದ್ಯರ್ಥತೋ ದ್ವಿಧಾ || ಕರ್ಮಾಂಶಾ ಪೂರ್ವಮೀಮಾಂಸಾ ದ್ವಾದ
ಶಾಧ್ಯಾಯವಿಸ್ತೃತಾ || ಸೂತ್ರಾಣಾಂ ಜೈಮಿನೀಯಾನಾಂ ಶಾಬರಂ ಭಾಷ್ಯಮಸ್ಯ
ತು || ಮೀಮಾಂಸಾ ವಾರ್ತಿಕಂ ಭಾಟ್ಟಂ ಭಟ್ಟಾಚಾರ್ಯಕೃತಂ ಚ ತತ್ || ತಚ್ಛಿ
ಷ್ಯೋಪ್ಯಲ್ಪಭೇದೇನ ಶಾಬರಸ್ಯ ಮತಾಂತರಂ || ಪ್ರಭಾಕರಗುರುಶ್ಚಕ್ರೇ ತದ್ಧಿ ಪ್ರಾ
ಭಾಕರಂ ಮತಂ || ಭವತ್ಯುತ್ತರಮೀಮಾಂಸಾತ್ವಷ್ಟಾಧ್ಯಾಯಾದ್ವಿಧಾಥ ಸಾ ||
ಬ್ರಹ್ಮಾರ್ಥಾ ದೇವತಾರ್ಥಾ ಚ ವ್ಯಾಸಸೂತ್ರಂ ದ್ವಯೋಸ್ಸಮಂ || ಪೂರ್ವಾಧ್ಯಾ
ಯಚತುಷ್ಕೇಣ ಮಂತ್ರವಾಚ್ಯಾ ತು ದೇವತಾ || ಸಂಕರ್ಷಣೋದಿತಾ ತದ್ಧಿ ದೇವ

---

## ಮೀಮಾಂಸಾಲಕ್ಷಣವಿಧಿಯು.



ರೇ—ಎಲೈ ಚೋಳನೇ ! ಮೀಮಾಂಸಾಶಾಸ್ತ್ರದ ಲಕ್ಷಣವಂ ಕೇಳು; ಸರ್ವದರ್ಶನಸಿ
ದ್ಧಾಂತದಲ್ಲಿ—"ಮೀಮಾಂಸೆಯು ಸಮಸ್ತವೇದಗಳ ಅರ್ಥಗಳನ್ನು ಲೇಸಾಗಿ ವಿಚಾರಮಾಡತ
ಕ್ಕದಾದುದರಿಂದಲೇ ಹದಿನೆಂಟುವಿದ್ಯೆಗಳಲ್ಲಿ ಶ್ರೇಷ್ಠವಾಗಿದೆ. ಅದು ಪೂರ್ವಮೀಮಾಂಸೆ, ಉತ್ತ
ರಮೀಮಾಂಸೆಯೆಂದು ಎರಡು ಬಗೆಯಾಗಿ ಇಪ್ಪತ್ತಧ್ಯಾಯಗಳುಳ್ಳದ್ದಾಗಿದೆ. ಅದರಲ್ಲಿ ಪೂರ್ವ
ಮೀಮಾಂಸೆಯು ಜ್ಯೋತಿಷ್ಟೋಮ ಮೊದಲಾದ ಯಾಗಕರ್ಮಗಳನ್ನು ಹೇಳತಕ್ಕುದಾಗಿ ಹನ್ನೆ
ರಡಧ್ಯಾಯಗಳುಳ್ಳುದಾಗಿ ವಿಸ್ತಾರವಾಗಿದೆ. ಜೈಮಿನಿಯಿಂ ರಚಿತಮಾದ ಈ ಪೂರ್ವಮೀಮಾಂಸಾ
ಸೂತ್ರಗಳಿಗೆ ಶಾಬರಭಾಷ್ಯವೂ, ಈ ಭಾಷ್ಯಕ್ಕೆ ಭಟ್ಟಾಚಾರ್ಯನಿಂದ ರಚಿತವಾಗಿ ಭಾಟ್ಟವೆಂದು
ಪ್ರಸಿದ್ಧವಾದ ವಾರ್ತಿಕೆಯೂ, ಆ ಭಟ್ಟಾಚಾರ್ಯನ ಶಿಷ್ಯನಾದ ಪ್ರಭಾಕರಗುರುವಿನಿಂದ ಕಿಂಚಿ
ದ್ಭೇದದಿಂದ ಶಾಬರಭಾಷ್ಯಕ್ಕೆ ಭಿನ್ನಾಭಿಪ್ರಾಯವನ್ನು ತೋರ್ಪಡಿಸುವುದಕ್ಕಾಗಿ ರಚಿತವಾಗಿರು
ವ ಪ್ರಾಭಾಕರವೆಂಬ ಗ್ರಂಥವೂ ಇರುತ್ತದೆ. ಉತ್ತರಮೀಮಾಂಸೆಯು—ಬ್ರಹ್ಮಪರವಾದುದೂ,
ದೇವಪರವಾದುದೂ ಎಂದೆರಡು ಬಗೆಯಾಗಿ ಎಂಟಧ್ಯಾಯಗಳುಳ್ಳದ್ದಾಗಿದೆ. ವ್ಯಾಸಕೃತವಾದ
ಸೂತ್ರಗಳು ಆ ಎರಡುಭಾಗಕ್ಕೂ ಸಮಾನವಾಗಿರುತ್ತವೆ. ಆ ಸೂತ್ರಗಳಲ್ಲಿ ನಾಲ್ಕಧ್ಯಾಯಗ
ಳುಳ್ಳ ಬ್ರಹ್ಮಕಾಂಡವೆಂಬ ಪೂರ್ವಭಾಗಕ್ಕೆ ಸಂಕರ್ಷಣನಿಂದ ಭಾಷ್ಯವು, ಉತ್ತರಭಾಗವಾದ

ತಾಕಾಂಡಮುಚ್ಯತೇ || ಭಾಷ್ಯಂ ಚತುರ್ಭಿರಧ್ಯಾಯೈರ್ಭಗವತ್ಪಾದನಿರ್ಮಿ ಚಕ್ರೇ ವಿವರಣಂ ತಸ್ಯ ತದ್ವೇದಾಂತಂ ಪ್ರವಕ್ಷ್ಯತಿ"

ಇತಿ ಮೀಮಾಂಸಾಲಕ್ಷಣವಿಧಿಃ ಪ್ರಥಮೋಪದೇಶೇ ದಶಮಸ್ಸಂವಾದಃ.



ಶ್ರೀಭರ್ಗಾಯನಮಃ.

## ಶೈವತಂತ್ರಲಕ್ಷಣಂ.

ಚೋಳಃ— "ವಿದ್ಯಾಸ್ತ್ವಷ್ಟಾದಶ ಪ್ರೋಕ್ತಾ ವೈದಿಕಾ ರೇಣುಕೇಶ್ವ ಇದಾನೀಂ ಶೈವತಂತ್ರಾಣಾಂ ಲಕ್ಷಣಂ ಕಥಯ ಪ್ರಭೋ"

ಶ್ರೀರೇಣುಕಃ—ಹೇ ಚೋಳ! ಶಿವತಂತ್ರಲಕ್ಷಣಂ ಶೃಣು ಸುಪ್ರ ದ್ಭೇ,—"ತನೋತಿ ವಿಪುಲಾನರ್ಥಾನ್ಮಂತ್ರತಂತ್ರಪ್ರಕಾಶಕಾನ್ || ತ್ರಾಣಂ ಕುರುತೇ ಪುಂಸಾಂ ತಂತ್ರಮಿತ್ಯಭಿಧೀಯತೇ || ಲಕುಲೀಶೋದಿತಂ ಶೈವಂ ಶ್ರೀಕ ದಿತಮಿತ್ಯಪಿ || ಸಮಾಸಾತ್ಸಮಯಶ್ಶೈವೋ ದ್ವಿಧೈವ ಪರಿಪಠ್ಯತೇ || ತತ್ರ ಪಾ ಶುಪತಂ ಕಾಲಾಮುಖಂ ಚೈವ ಮಹಾವ್ರತಂ || ಲಕುಲೀಶೋದಿತಂ ತಂತ್ರಂ ಭಿನ್ನ ದರ್ಶನಂ ಪೃಥಕ್ || ವಾಮಂ ಚ ದಕ್ಷಿಣಂ ಮಿಶ್ರಂ ಕೌಳಂ ಯಾಮಳಮೇವ ಚ

---

ದೇವತಾಕಾಂಡಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರಿಂದ ವಿವರಣವು ಮಾಡಲ್ಪಟ್ಟಿದೆ. ವಿವರಣಕ್ಕೆ ವೇದಾಂತವೆಂದು ಹೇಳುತ್ತಾರೆ.

ಎಂಬಲ್ಲಿಗೆ ಮೀಮಾಂಸಾಲಕ್ಷಣವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಹತ್ತನೆಯ ಸಂವಾದವು ಮುಗಿದುದು.



### ಶೈವತಂತ್ರಲಕ್ಷಣವು.

ಚೋ—ಎಲೈ ರೇಣುಕಗಣೇಶ್ವರನೇ! ವೈದಿಕವಾದ ಹದಿನೆಂಟು ವಿದ್ಯೆಗಳು ನಿರೂ ಲ್ಪಟ್ಟುವು. ಈಗ ಶಿವಾಗಮಗಳಿಗೆ ಲಕ್ಷಣವನ್ನು ನಿರೂಪಿಸು.

ರೇ—ಎಲೈ ಚೋಳನೇ! ಶಿವಾಗಮಂಗಳ ಲಕ್ಷಣವನ್ನು ಕೇಳು; ಸುಪ್ರಭೇದಾ ಲ್ಲಿ—"ಆಗಮವು ಮಂತ್ರಗಳನ್ನೂ, ಸಿದ್ಧಾಂತಗಳನ್ನೂ ಸ್ಪಷ್ಟಪಡಿಸತಕ್ಕ ನಿರ್ದೋಷವಾದ ಗಳನ್ನು ವಿಸ್ತರಿಸಿ ಮಾನವರನ್ನು ರಕ್ಷಿಸತಕ್ಕುದಾಗಿರುವುದರಿಂದ ತಂತ್ರವೆಂದು ಹೇಳಲ್ಪಡು ತಂತ್ರವು ಲಕುಲೀಶನಿಂದ ಹೇಳಲ್ಪಟ್ಟದ್ದು, ಶಿವನಿಂದ ಹೇಳಲ್ಪಟ್ಟದ್ದು, ಎಂದೆರಡು ಭಾಗ ರ್ಧದು. ಅದು-ಸಮಯ(ಸಿದ್ಧಾಂತ)ವೆಂದು ಹೇಳಲ್ಪಡುತ್ತದೆ. ಆಶೈವಸಿದ್ಧಾಂತದಲ್ಲಿ ಪಾ ಶತ, ಕಾಲಾಮುಖ, ಮಹಾವ್ರತ ಎಂದು ಮೂರು ಭೇದಗಳುಂಟಾವು. ಲಕುಲೀಶನಿಂದ ಹೇ

ಸಿದ್ಧಾಂತಮಿತಿ ಷೋಢಾಸ್ಯಾಚ್ಛ್ರೀಕಂಠಸಮಯಃ ಪೃಥಕ್'' ಸ್ಕಾಂದೇಸೂತಸಂ
ಹಿತಾಯಾಂಯಜ್ಞವೈಭವಖಂಡೇ,— "ಪ್ರಾಜಾಪತ್ಯಾಗಮಪ್ರೋಕ್ತಧರ್ಮಾಚ್ಛ್ವೇದ
ವಿದಾಂ ವರಾಃ ‖ ಮಯಾ ಶ್ರೇಷ್ಠ ಇತಿ ಪ್ರೋಕ್ತೋ ಧರ್ಮೋ ವಿಷ್ಣ್ವಾಗಮೋ
ದಿತಃ ‖ ವಿಷ್ಣ್ವಾಗಮೋದಿತಾದ್ಧರ್ಮಾದಶೇಷಾದಾಸ್ತಿಕೋತ್ತಮಾಃ ‖ ಶೈವಾಗ
ಮೋದಿತೋ ಧರ್ಮೋ ವರಿಷ್ಠೋ ನೈವ ಸಂಶಯಃ ‖ ಅಧಸ್ಸ್ರೋತೋದ್ಭವಾದ್ಧ
ರ್ಮಾದೂರ್ಧ್ವಸ್ರೋತೋದ್ಭವೋ ಮಹಾನ್ ‖ ಕಾಮಿಕಾದಿಪ್ರಭೇದೇನ ಸಭಿನ್ನೋಽ
ನೇಕಧಾ ದ್ವಿಜಾಃ'' ಕಾಮಿಕತಂತ್ರೇ,— "ಈಶಾನವಕ್ತ್ರಾದೂರ್ಧ್ವಸ್ಮಾಜ್ಜಾತಂ
ಯತ್ಕಾಮಿಕಾದಿಕಂ ‖ ಸಿದ್ಧಾಂತಾತ್ಪರಮಂ ಶಾಸ್ತ್ರಂ ನೇತಿ ಶಾಸ್ತ್ರಸ್ಯ ನಿಶ್ಚಯಃ''
ವೀರತಂತ್ರೇ,— "ಕಾಮಿಕಂ ಯೋಗಜಂ ಚಿಂತ್ಯಂ ಕಾರಣಂ ತ್ವಜಿತಂ ತಥಾ ‖
ದೀಪ್ತಂ ಸೂಕ್ಷ್ಮಂ ಸಹಸ್ರಂ ಚ ಅಂಶುಮತ್ಸುಪ್ರಭೇದಕಂ ‖ ವಿಜಯಂ ಚೈವ
ನಿಶ್ವಾಸಂ ಸ್ವಾಯಂಭುವಮಥಾನಲಂ ‖ ವೀರಂ ಚ ರೌರವಂ ಚೈವ ಮಕುಟಂ
ವಿಮಲಂ ತಥಾ ‖ ಚಂದ್ರಜ್ಞಾನಂ ಚ ಬಿಂಬಂ ಚ ಪ್ರೋದ್ಗೀತಂ ಲಲಿತಂ ತಥಾ ‖
ಸಿದ್ಧಂ ಸಂತಾನಸರ್ವೋಕ್ತೇ ಪಾರಮೇಶ್ವರಮೇವ ಚ ‖ ಕಿರಣಂ ವಾತುಲಂ ಚೈತಾ

---

ಟ್ಟ ತಂತ್ರವು–ವಾಮ, ದಕ್ಷಿಣ, ಮಿಶ್ರ, ಕೌಳ, ಯಾಮಳ, ಸಿದ್ಧಾಂತ ಎಂದು ಆರು ಪ್ರಕಾರವಾಗಿ
ಭೇದವನ್ನು ಹೊಂದಿರ್ಪುದು. ಶಿವಸಿದ್ಧಾಂತವು ಲಕುಲೀಶನಿಂ ಹೇಳಲ್ಪಟ್ಟಿರುವುದಕ್ಕಿಂತ ಬೇರೆ
ಯಾಗಿರತಕ್ಕದ್ದು" ಎಂದುಕ್ತವಾಗಿರ್ಪುದು. ಸ್ಕಾಂದಪುರಾಣಾಂತರ್ಗತವಾದ ಯಜ್ಞವೈಭವಖಂ
ಡದಲ್ಲಿ–"ಎಲೈ ವೇದಜ್ಞರಲ್ಲಿ ಶ್ರೇಷ್ಠರಾದ ಮುನಿಗಳಿರಾ! ಬ್ರಹ್ಮನಿಂದ ನಿರ್ಮಿತವಾದ ಆಗಮ
ದಲ್ಲಿ ಹೇಳಲ್ಪಟ್ಟಿರುವ ಧರ್ಮಗಳಿಗಿಂತ ವಿಷ್ಣುವಿನಿಂದ ಹೇಳಲ್ಪಟ್ಟ ಆಗಮದಲ್ಲುಕ್ತವಾಗಿರುವ
ಧರ್ಮಗಳು ಶ್ರೇಷ್ಠವಾದವುಗಳೆಂದು ನನ್ನಿಂದ ಹೇಳಲ್ಪಟ್ಟಿತು. ವೈಷ್ಣವಾಗಮದಲ್ಲಿ ಹೇಳಲ್ಪಟ್ಟಿ
ರುವಧರ್ಮಗಳದೆಸೆಯಿಂದ ಶಿವಾಗಮಗಳಲ್ಲುಕ್ತವಾಗಿರುವ ಧರ್ಮಗಳು ಶ್ರೇಷ್ಠವಾಗಿರ್ಪವು.
ಈ ವಿಷಯದಲ್ಲಿ ಸಂಶಯವಿಲ್ಲವು. ಅಧೋಗತಿಯನ್ನು ಹೊಂದಿಸುವ ಧರ್ಮಕ್ಕಿಂತ ಊರ್ಧ್ವಗತಿ
ಯನ್ನು ಹೊಂದಿಸುವ ಧರ್ಮವು ಶ್ರೇಷ್ಠವಾದದ್ದು. ಆ ಶೈವಸಿದ್ಧಾಂತವು– ಕಾಮಿಕ ಎಂಬು
ದೇ ಮೊದಲಾದ ಭೇದಗಳಿಂದ ಅನೇಕಪ್ರಕಾರವಾಗಿ ಭಿನ್ನವಾಗಿದೆ,, ಎಂದು ಹೇಳಲ್ಪಟ್ಟಿದೆ.
ಕಾಮಿಕತಂತ್ರದಲ್ಲಿ–"ಪರಮೇಶ್ವರನ "ಈಶಾನ,, ವೆಂಬ ಊರ್ಧ್ವಮುಖದಿಂದ ಬಂದ ಕಾಮಿಕ
ಮೊದಲಾದ ತಂತ್ರವು ಸಿದ್ಧಾಂತವಾಗಿರುವುದರಿಂದ ಸಮಸ್ತ ಶಾಸ್ತ್ರಗಳಿಗಿಂತ ಶ್ರೇಷ್ಠವಾದುದೆಂದು
ಸಕಲಶಾಸ್ತ್ರಗಳಿಂದ ನಿಶ್ಚಯಿಸಲ್ಪಟ್ಟದೆ. ವೀರತಂತ್ರದಲ್ಲಿ–" (೧) ಕಾಮಿಕ, (೨) ಯೋಗಜ,
(೩) ಚಿಂತ್ಯ, (೪) ಕಾರಣ, (೫) ಅಜಿತ, (೬) ದೀಪ್ತ, (೭) ಸೂಕ್ಷ್ಮ, (೮) ಸಹಸ್ರ,
(೯) ಅಂಶುಮಾನ್, (೧೦) ಸುಪ್ರಭೇದ, (೧೧) ವಿಜಯ, (೧೨) ನಿಶ್ವಾಸ, (೧೩) ಸ್ವಾ
ಯಂಭುವ, (೧೪) ಅನಲ, (೧೫) ವೀರ, (೧೬) ರೌರವ, (೧೭) ಮಕುಟ, (೧೮)

ಸ್ತ್ರತ್ವಾವಿಂಶತಿಸಂಹಿತಾಃ || ಕಾಮಿಕಾದ್ಯಾ ವಾತುಲಾಂತಾಶ್ಶಿವೇನೋಕ್ತಾಶ್ಶಿವಾ ಗಮಾಃ || ಸಿದ್ಧಾಂತಮಿತಿ ವಿಜ್ಞೇಯಾ ಉಪಭೇದಸಮನ್ವಿತಾಃ"

ಇತಿ ಶೈವತಂತ್ರಲಕ್ಷಣಂ ಪ್ರಥಮೋಪದೇಶೇ ಏಕಾದಶಸ್ಸಂವಾದಃ.

ಶ್ರೀಭೂತೇಶಾಯನಮಃ.

## ವೇದಾಗಮಪ್ರಾಮಾಣ್ಯವಿಧಿಃ.

ಚೋಳಃ—"ಸರ್ವವೈದಿಕಶೈವಾನಾಂ ಪ್ರಾಮಾಣ್ಯಂ ಕಥಯ ಪ್ರಭೋ || ನಿಗಮಾಗಮಭೇದಂ ಚ ತದರ್ಥಜ್ಞಾನನಿರ್ಣಯಂ"

ಶ್ರೀರೇಣುಕಃ—ಹೇ ಚೋಳ! ವೇದಾಗಮಪ್ರಾಮಾಣ್ಯಂ ಪ್ರಥಮಂ ಶ್ರೂಯತಾಂ, ವೃದ್ಧಜಾಬಾಲೋಪನಿಷದಿ,—"ತತ್ಸಂಪನ್ನ ಈಶ್ವರಃ ಅವಿದ್ಯಾದಿಪಂಚ ಕ್ಲೇಶಾನಾಕುಲಸ್ಸರ್ವಾಗಮಪ್ರಣೇತಃ" ಇತಿ. ಅಜಿತಾಗಮೇ,—"ವೇದಾಸ್ಸಾಂಗಾಸ್ತು ಚತ್ವಾರಶ್ಶಿವಸ್ಯೋರ್ಧ್ವಮುಖೋದ್ಭವಾಃ" ಇತಿ. ಮಾನವಪುರಾಣೇ,— "ವೇದಾಃಪ್ರಮಾಣಂ ಪ್ರಥಮಂ ಸ್ವತ ಏವ ತತಃಪರಂ || ಸ್ವತಂತ್ರಾ ಆಗಮಾಸ್ಸ

---

ವಿಮಲ, (೧೯) ಚಂದ್ರಜ್ಞಾನ, (೨೦) ಬಿಂಬ, (೨೧) ಪ್ರೋದ್ಗೀತ, (೨೨) ಲಲಿತ, (೨೩) ಸಿದ್ಧ, (೨೪) ಸಂತಾನ, (೨೫) ಸರ್ವೋಕ್ತ, (೨೬) ಪಾರಮೇಶ್ವರ, (೨೭) ಕಿರಣ, (೨೮) ವಾತುಲ, ಈ ಭೇದಗಳುಳ್ಳ ಶಿವೋಕ್ತವಾದ ಆಗಮ ಸಮೂಹವನ್ನು ಸಿದ್ಧಾಂತವನ್ನಾಗಿ ತಿಳಿಯಬೇಕು" ಎಂದು ನಿರೂಪಿತವಾಗಿದೆ.

ಎಂಬಿಲ್ಲಿಗೆ ಶೈವತಂತ್ರಲಕ್ಷಣವನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಹನ್ನೊಂದನೆಯ ಸಂವಾದವು ಮುಗಿದುದು.

### ವೇದಾಗಮಪ್ರಾಮಾಣ್ಯವಿಧಿಯು.

ಚೋ — ಎಲೈ ಪ್ರಭುವಾದ ರೇಣುಕನೇ ! ವೈದಿಕಗಳೆನಿಸಿದ ಸಕಲ ಶಿವಾಗಮಗಳಿಗೆ ಪ್ರಾಮಾಣ್ಯವನ್ನೂ, ವೇದಗಳಿಗೂ ಆಗಮಗಳಿಗೂ ಭೇದವನ್ನೂ, ತದರ್ಥಜ್ಞಾನನಿರ್ಣಯವನ್ನೂ ನಿರೂಪಿಸು;

ರೇ — ಎಲೈ ಚೋಳನೇ ! ವೇದಾಗಮಗಳಿಗೆ ಪ್ರಾಮಾಣ್ಯವನ್ನು ಮೊದಲು ಕೇಳು; ವೃದ್ಧಜಾಬಾಲದಲ್ಲಿ— "ಅವಿದ್ಯಾದಿ ಪಂಚಕ್ಲೇಶರಹಿತನಾದ ಶಿವನು ಸಕಲಾಗಮಗಳಿಂದಹೇಳಲ್ಪಟ್ಟಿರುವನು" ಎಂದುಕ್ತವಾಗಿದೆ. ಅಜಿತಾಗಮದಲ್ಲಿ — "ಸಾಂಗವಾದ ನಾಲ್ಕು ವೇದಗಳು ಶಿವನ ಊರ್ಧ್ವಮುಖದಿಂದ ಹುಟ್ಟಿದವು" ಎಂದು ಹೇಳಲ್ಪಟ್ಟಿದೆ. ಮಾನವ ಪುರಾಣದಲ್ಲಿ — "ವೇದವು ಬೇರೊಂದರ ಅಪೇಕ್ಷೆಯಿಲ್ಲದೆ ಸ್ವಯಂಪ್ರಮಾಣವಾಗಿರುತ್ತದೆ" ಎಂದೂ ಸಕಲಾಗಮಗಳು ಸ್ವ

ರ್ಶ್ಚೇ ನಿರ್ಮಲೈಃ ಪರಿಭಾಷಿತಾಃ'' ಇತಿ. ಶಿವಧರ್ಮೋತ್ತರೇ,—''ಅತೀತಾಶೇಷದೋಷೇಣ ಸರ್ವಜ್ಞೇನ ಶಿವೇನ ಯತ್ || ಪ್ರಣೀತಮಮಲಂ ವಾಕ್ಯಂ ತತ್ಪ್ರಮಾಣಂ ನ ಸಂಶಯಃ'' ತಥೈವವೀರತಂತ್ರೇ,—'' ವೇದೋಪನಿಷದಾಂ ವಾಕ್ಯಂ ತಂತ್ರವಾಕ್ಯಂ ನ ಲಂಘಯೇತ್ || ಆಜ್ಞಾಭೇದೀ ಮಮ ದ್ರೋಹೀ ಶುನಿಗರ್ಭೇ ಸ ಜಾಯತೇ'' ಕಿಂಚಾನ್ಯತ್ರ,— '' ನ ಯಸ್ಯ ವೇದಾ ನ ಚ ಶೈವಶಾಸ್ತ್ರಂ ನ ವೃದ್ಧವಾಕ್ಯಂ ಹಿ ಭವೇತ್ಪ್ರಮಾಣಂ || ಸ ಪಾಪಸಂಘಪ್ರಹತೋ ದುರಾತ್ಮಾ ಸ್ವಸ್ಯಾಪಿ ಚಾತ್ಮಾ ನ ಭವೇತ್ಪ್ರಮಾಣಂ || ವೇದಾಃಪ್ರಮಾಣಂ ಸ್ಮೃತಯಃಪ್ರಮಾಣಂ ಧರ್ಮಾರ್ಥಯುಕ್ತಂ ವಚನಂ ಪ್ರಮಾಣಂ || ಯಸ್ಯ ಪ್ರಮಾಣಂ ನ ಭವೇತ್ಪ್ರಮಾಣಂ ಕಸ್ತಸ್ಯ ಕುರ್ಯಾದ್ವಚನಂ ಪ್ರಮಾಣಂ''

ಇತಿ ವೇದಾಗಮಪ್ರಾಮಾಣ್ಯವಿಧಿಃ ಪ್ರಥಮೋಪದೇಶೇ ದ್ವಾದಶಸ್ಸಂವಾದಃ.



ಶ್ರೀಚಂದ್ರಶೇಖರಾಯನಮಃ.

## ನಿಗಮಾಗಮೈಕ್ಯವಿಧಿಃ.

ಶ್ರೀರೇಣುಕಃ—ಹೇ ಘೋಟ! ನಿಗಮಾಗಮೈಕ್ಯಂ ಶ್ರೂಯತಾಂ, ಕಾಮಿ

---

ತಂತ್ರವಾಗಿ ಪ್ರಮಾಣವಾಗಿರುತ್ತವೆ,, ಎಂದೂ ಹೇಳಲ್ಪಟ್ಟಿದೆ. ಶಿವಧರ್ಮೋತ್ತರದಲ್ಲಿ—''ದೋಷರಹಿತನಾದ ಸರ್ವಜ್ಞನಾದ ಶಿವನಿಂದ ಹೇಳಲ್ಪಟ್ಟಿರುವ ವೇದಾಗಮಗಳ ವಾಕ್ಯಗಳು ಪ್ರಮಾಣವಾದವುಗಳೆನ್ನುವುದರಲ್ಲಿ ಸಂಶಯವಿಲ್ಲವು,, ಎಂದು ಹೇಳಲ್ಪಟ್ಟಿದೆ. ವೀರಾಗಮದಲ್ಲಿ—'' ನನ್ನ ಆಜ್ಞಾರೂಪವಾದ ವೇದೋಪನಿಷದಾಗಮಗಳ ವಚನಗಳನ್ನು ಲ್ಲಂಘಿಸಿ ನಡೆಯಲಾಗದು. ನನ್ನ ಆಜ್ಞೆಯನ್ನು ಮೀರಿದಾತನು ನನಗೆ ದ್ರೋಹವನ್ನಾಚರಿಸಿದವನಾಗಿ ನಾಯಿಯ ಬಸುರಲ್ಲಿ ಹುಟ್ಟುವನು. ಎಂದು ಹೇಳಲ್ಪಟ್ಟಿದೆ. ಮತ್ತುಮನ್ಯಗ್ರಂಥದಲ್ಲಿ—'' ವೇದಗಳನ್ನೂ, ಶಿವಸಿದ್ಧಾಂತವನ್ನೂ (ಶಿವಾಗಮಗಳನ್ನೂ) ಪೂರ್ವಾಚಾರ್ಯರ ವಾಕ್ಯಗಳನ್ನೂ ಪ್ರಮಾಣವನ್ನಾಗಿ ನಂಬದಿರುವ ದುರಾತ್ಮನು—ಬಲುಪಾಪಿಯಾಗಿ ತನ್ನನ್ನು ತಾನೇ ನಂಬುವುದಿಲ್ಲವು. ಪ್ರಮಾಣವಾದ ವೇದಗಳೂ, ಸ್ಮೃತಿಗಳೂ, ಧರ್ಮವಾಕ್ಯಗಳೂ, ಯಾವನಿಗೆ ಪ್ರಮಾಣವಲ್ಲವೋ, ಆತನ ಮಾತನ್ನು ಯಾರೂ ಪ್ರಮಾಣವನ್ನಾಗಿ ತಿಳಿಯುವುದಿಲ್ಲವು'' ಎಂದುಕ್ತವಾಗಿದೆ.

ಎಂಬಲ್ಲಿಗೆ ವೇದಾಗಮ ಪ್ರಾಮಾಣ್ಯವಿಧಿಯನ್ನು ಹೇಳುವ ಮೊದಲನೆಯಉಪದೇಶದಲ್ಲಿ ಹನ್ನೆರಡನೆಯ ಸಂವಾದವು ಮುಗಿದುದು.



### ನಿಗಮಾಗಮೈಕ್ಯವಿಧಿಯು.

ರೇ—ಎಲೈ ಘೋಟನೇ! ವೇದಾಗಮಗಳಿಗೆ ಏಕಾರ್ಥಪ್ರತಿಪಾದಕತ್ವವನ್ನು ಕೇಳು;

ಕತಂತ್ರೇ,—"ಸಿದ್ಧಾಂತೋ ವೇದಸಾರಸ್ಸ್ಯಾದನ್ಯಜ್ಜ್ಞೇತ್ತು ಬಹಿಷ್ಕೃತಂ|| ಸಿದ್ಧಾಂತವಿಹಿತಾಚಾರೋ ವೈದಿಕಾಚಾರ ಉಚ್ಯತೇ" ವೀರತಂತ್ರೇ,— "ಸರ್ವವೇದೇಷು ಯದ್ದೃಷ್ಟಂ ತತ್ಸರ್ವಂತು ಶಿವಾಗಮೇ" ತಥೈವಾಸ್ಮಾಭಿಃಕುಂಭಸಂಭವಮುನಯೇ ನಿರೂಪಿತಮೇವ,—"ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಂ || ಸರ್ವವೇದಾರ್ಥರೂಪತ್ವಾತ್ಪ್ರಾಮಾಣ್ಯಂ ವೇದವತ್ಸದಾ || ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಶ್ಶಿವಾಗಮಃ || ವೇದಬಾಹ್ಯವಿರೋಧಿತ್ವಾದ್ವೇದಸಮ್ಮತ ಉಚ್ಯತೇ || ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ || ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಸ್ಸದಾ" ಇತಿ.

ಇತಿ ನಿಗಮಾಗಮೈಕ್ಯವಿಧಿಃ ಪ್ರಥಮೋಪದೇಶೇ ತ್ರಯೋದಶಸ್ಸಂವಾದಃ.



ಕಾಮಿಕತಂತ್ರದಲ್ಲಿ—"ಸಿದ್ಧಾಂತವು—ವೇದಗಳಲ್ಲಿ ಮುಖ್ಯವಾದ ಅರ್ಥವನ್ನು ಹೇಳತಕ್ಕದ್ದು. ಆ ಸಿದ್ಧಾಂತಕ್ಕಿಂತ ಬೇರೆಯಾದುದು ಪರಿತ್ಯಾಜ್ಯವಾದದ್ದು. ಸಿದ್ಧಾಂತದಲ್ಲಿ ಹೇಳಲ್ಪಟ್ಟಿರುವ ಆಚಾರಗಳು ವೇದೋಕ್ತವಾದ ಆಚಾರಗಳಾಗಿರುತ್ತವೆ" ಎಂದು ನಿರೂಪಿತವಾಗಿದೆ. ವೀರತಂತ್ರದಲ್ಲಿ—"ಸಕಲವೇದಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳೆಲ್ಲವೂ ಶಿವಾಗಮಗಳಲ್ಲಿ ಪ್ರತಿಪಾದಿತವಾಗಿರುತ್ತವೆ" ಎಂದು ನಿರೂಪಿತವಾಗಿದೆ. ಅದೇಮೇರೆ ನಾವು ಪೂರ್ವದಲ್ಲಿ ಅಗಸ್ತ್ಯರಿಗೋಸ್ಕರ ನಿರೂಪಿಸಿದೆವು "ಶಿವನಿಂದ ಹೇಳಲ್ಪಟ್ಟುದಾದ್ದರಿಂದ ಸಿದ್ಧಾಂತವೆಂದು ಹೆಸರನ್ನು ಹೊಂದಿರುವ ಶಿವಾಗಮಗಳು ಸಕಲವೇದಗಳ ಅರ್ಥಗಳನ್ನೇ ಹೇಳುತ್ತಿರುವುದರಿಂದ ಈ ಶಿವಾಗಮಗಳಿಗೆ ವೇದಗಳಿಗಿರುವಂತೆ ಪ್ರಾಮಾಣ್ಯವಿರುತ್ತದೆ. ಮತ್ತೂ ವೇದೋಕ್ತವಾದ ಧರ್ಮಗಳನ್ನೇ ನಿರೂಪಿಸುವುದರದೆಸೆಯಿಂದಲೂ, ವೇದಬಾಹ್ಯರಾದ ಜೈನ, ಬೌದ್ಧ, ಚಾರ್ವಾಕಾದಿಗಳಿಗೆ ವಿರೋಧವಾಗಿರುವುದರದೆಸೆಯಿಂದಲೂ, ವೇದಸಮ್ಮತವಾದದ್ದು" ಎಂದು ಹೇಳಲ್ಪಟ್ಟಿದೆ. ವೇದೋಕ್ತವಾದ ಅರ್ಥವೇ ಸಿದ್ಧಾಂತದಲ್ಲೂ, ಸಿದ್ಧಾಂತೋಕ್ತವಾದ ಅರ್ಥವೇ ವೇದಗಳಲ್ಲೂ, ಈ ರೀತಿಯಾಗಿ ವೇದಾಗಮಗಳಿಗೆ ಏಕಾರ್ಥಪ್ರತಿಪಾದಕತ್ವವಿರುವುದರದೆಸೆಯಿಂದ ವೇದಸಿದ್ಧಾಂತಗಳಿಗೆ ಐಕ್ಯವೆಂಬುದು ಸಮಂಜಸವಾಗಿರುವುದರಿಂದ ಪಂಡಿತರು—ಇವೆರಡಕ್ಕೂ ಪ್ರಾಮಾಣ್ಯವನ್ನು ಸಮಾನವನ್ನಾಗಿ ಯಾವಾಗಲೂ ತಿಳಿಯಬೇಕು" ಎಂದು.

ಎಂಬಲ್ಲಿಗೆ ನಿಗಮಾಗಮೈಕ್ಯವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಹದಿಮೂರನೆಯ ಸಂವಾದವು ಮುಗಿದುದು.



## ಶ್ರೀಗಿರೀಶಾಯನಮಃ.

# ನಿಗಮಾಗಮಾರ್ಥನಿರ್ಣಯವಿಧಿಃ.

ಶ್ರೀರೇಣುಕಃ—ಭೋ ಚೋಳ! ಅಥ ನಿಗಮಾಗಮಾರ್ಥನಿರ್ಣಯವಿಧಿಶ್ಶ್ರೂಯತಾಂ, ಶೈವೇವಾಯವೀಯಸಂಹಿತಾಯಾಂ,—"ಶಿವಜ್ಞಾನಾರ್ಣವಂ ಸಾಕ್ಷಾದ್ಭುಕ್ತಿಮುಕ್ತಿಫಲಪ್ರದಂ ‖ ಶಬ್ದಾರ್ಥನ್ಯಾಯಸಂಯುಕ್ತಮಾಗಮಾರ್ಥೈರ್ವಿಭೂಷಿತಂ ‖ ವಕ್ಷ್ಯಾಮಿ ಪರಮಂ ಗುಹ್ಯಂ ಪುರಾಣಂ ವೇದಸಂಮತಂ ‖ ಯೋ ವಿಂದ್ಯಾಚ್ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ ‖ ನ ಚಿಂತಯೇತ್ಪುರಾಣಂ ತು ನೈವ ಸಸ್ಯಾದ್ವಿಚಕ್ಷಣಃ" ಇತಿ. ಸೂತಸಂಹಿತಾಯಾಂ,—ಸೂತಃ, "ಯಶ್ಚತುರ್ವೇದವಿದ್ವಿಪ್ರಃ ಪುರಾಣಂ ವೇತ್ತಿ ನಾರ್ಥತಃ ‖ ತಂ ದೃಷ್ಟ್ವಾ ಭಯಮಾಪ್ನೋತಿ ವೇದೋ ಮಾಂ ಪ್ರತರಿಷ್ಯತಿ" ಮಹಾಭಾರತೇ,—ವ್ಯಾಸಃ, "ಪುರಾಣೈರೇವ ವೇದಾರ್ಥಃ ಪ್ರಸ್ಫುಟಂ ಜ್ಞಾಯತೇ ಖಲು ‖ ಬಿಭೇತಿ ಮಾನವಾದ್ವೇದಃ ಪುರಾಣಾಭ್ಯಾಸವರ್ಜಿತಾತ್ ‖ ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಹ್ಮಯೇತ್ ‖ ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ" ಅನ್ಯತ್ರ,—"ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾಫಲಂ ‖ ಅರ್ಥವಾದೋಪಪತ್ತೀ ಚ ಲಿಂಗಂ ತಾ

---

### ನಿಗಮಾಗಮಾರ್ಥನಿರ್ಣಯವಿಧಿಯು.

ರೇ—ಎಲೈ ಚೋಳನೇ! ವೇದಾಗಮವಚನಗಳ ನಿಶ್ಚಯವಾದ ಅರ್ಥವನ್ನು ಕೇಳು; ವಾಯುವೀಯಸಂಹಿತೆಯಲ್ಲಿ—"ಶಿವಜ್ಞಾನಸಮುದ್ರವೂ, ಭೋಗಮೋಕ್ಷಪ್ರದವೂ, ಶಬ್ದಾರ್ಥನ್ಯಾಯಗಳಿಂದ ಕೂಡಿದುದೂ, ಶಿವಾಗಮಗಳ ಅರ್ಥಗಳಿಂದಲಂಕರಿಸಲ್ಪಟ್ಟುದೂ, ಅತಿರಹಸ್ಯವೂ, ವೇದಸಮ್ಮತವೂ ಆಗಿರುವ ಪುರಾಣವನ್ನು ಯಾವ ದ್ವಿಜನು ತಿಳಿಯುವನೋ ಅವನು ನಾಲ್ಕುವೇದಗಳನ್ನು ಸಾಂಗವಾದ ಉಪನಿಷತ್ತುಗಳನ್ನು ಕೂಡ ತಿಳಿಯುವನು. ಯಾವ ದ್ವಿಜನು ಪುರಾಣಾರ್ಥವನ್ನು ತಿಳಿಯುವುದಿಲ್ಲವೋ ಅವನು ಬುದ್ಧಿಶಾಲಿಯುಲ್ಲವು" ಎಂದೂ, ಸೂತಸಂಹಿತೆಯಲ್ಲಿ—"ಯಾವ ವಿಪ್ರನು—ನಾಲ್ಕುವೇದಗಳನ್ನು ಓದಿದವನಾಗಿದ್ದರೂ ಪುರಾಣವನ್ನು ಅರ್ಥಸಹಿತವಾಗಿ ತಿಳಿಯುವುದಿಲ್ಲವೋ, ಅವನನ್ನು ವೇದವು ನೋಡಿ, ತನ್ನನ್ನಿವನು ಅತಿಕ್ರಮಿಸತಕ್ಕವನೆಂದು ಭಯವನ್ನು ಹೊಂದುತ್ತದೆ" ಎಂದೂ, ಮಹಾಭಾರತದಲ್ಲಿ—"ಪುರಾಣಗಳಿಂದಲೇ ವೇದವಚನಗಳಿಗರ್ಥವು ಲೇಸಾಗಿ ಗೊತ್ತಾಗಬೇಕಾದುದರಿಂದ ಪುರಾಣಾರ್ಥವನ್ನರಿಯದವನದೆಸೆಯಿಂದ ವೇದವು ಭೀತಿಪಡುತ್ತದೆ" ಇತಿಹಾಸ ಪುರಾಣ ವಚನಗಳಿಂದ ವೇದಾರ್ಥವನ್ನು ಪುಷ್ಟೀಕರಿಸಬೇಕು", ಎಂದೂ ಹೇಳಲ್ಪಟ್ಟಿದೆ. ಮತ್ತೊಂದು ಗ್ರಂಥದಲ್ಲಿ—"ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾಫಲ, ಅರ್ಥವಾದ, ಉಪಪತ್ತಿ ಎಂಬೀ ಆರು—ವೇದವಚ

ತ್ಪರ್ಯನಿರ್ಣಯೇ || ಅರ್ಥಾತ್ಪ್ರಕರಣಾಲ್ಲಿಂಗಾದೌಚಿತ್ಯಾದ್ದೇಶಕಾಲತಃ || ಶಬ್ದಾರ್ಥಾ ಪ್ರವಿಭಜ್ಯಂತೇ ನ ಶಬ್ದಾದೇವ ಕೇವಲಂ'' ಸ್ಕಾಂದೇಸೂತಸಂಹಿತಾಯಾಂಜ್ಞಾ ಯೋಗಖಂಡೇ,—ಶಿವಃ, ''ಯಸ್ತು ವಿದ್ಯಾಭಿಮಾನೇನ ವೇದಮಾರ್ಗಪ್ರವರ್ತಕಃ ಕುಲಜಾತ್ಯಾದಿಭಿಃ ಕ್ಷೀಯಾತ್ಸಮಹಾಪಾತಕೀ ಭವೇತ್'' ತಥಾಮಾನವಪು ಣೇ,—''ಕೃತಿರ್ವಾಪಿ ಸ್ಮೃತಿರ್ವಾಪಿ ಪುರಾಣಂ ಚಾನ್ಯದೇವತಾ || ವಿರುದ್ಧಂ ಯ ವೇದೇನ ನ ತದ್ಗ್ರಾಹ್ಯಂ ಮನೀಷಿಭಿಃ'' ಅನ್ಯತ್ರ,—''ಯದಾಮ್ನಾಯ ವಿರು ತನ್ನಗ್ರಾಹ್ಯಂ ಮುನಿಭಾಷಿತಂ || ಯುಕ್ತಿಯುಕ್ತಂ ವಚೋ ಗ್ರಾಹ್ಯಂ ನ ಪು ರುಷಗೌರವಾತ್'' ಇತ್ಯಾದಿ.

ಇತಿ ನಿಗಮಾಗಮಾರ್ಥನಿರ್ಣಯವಿಧಿಃ ಪ್ರಥಮೋಪದೇಶೇ ಚತುರ್ದಶಸ್ಸಂವಾದಃ



ಶ್ರೀಉಗ್ರಾಯನಮಃ.

## ವೇದಾರ್ಥನಿರ್ಣಯೇನೂತನಕವಿವಾಕ್ಯನಿರಾಕರಣವಿಧಿಃ

ಚೋಳಃ—ಭೋ ರೇಣುಕಗಣೇಂದ್ರ! ''ನಾಋಷಿಃ ಕುರುತೇ ಕಾವ್ಯಂ

---

ನಗಳ ತಾತ್ಪರ್ಯವನ್ನು ನಿಶ್ಚಯಿಸುವುದರಲ್ಲಿ ಲಿಂಗಗಳಾಗಿರುತ್ತವೆ. ಶಬ್ದಾರ್ಥಗಳು ಅರ್ಥ ಲೂ, ಪ್ರಕರಣದಿಂದಲೂ, ಹೇತುವಿನಿಂದಲೂ, ಔಚಿತ್ಯದಿಂದಲೂ, ದೇಶಕಾಲಗಳಿಂದಲೂ ಗಿಸಲ್ಪಡುತ್ತವೆಯಲ್ಲದೆ ಶಬ್ದಮಾತ್ರದಿಂದ ವಿಭಾಗಿಸಲ್ಪಡುವುದಿಲ್ಲವು'' ಎಂದುಕ್ತವಾಗಿದೆ. ತಸಂಹಿತೆಯಲ್ಲಿರುವ ಜ್ಞಾನಯೋಗಖಂಡದಲ್ಲಿ—''ಸಮಸ್ತವಿದ್ಯೆಗಳನ್ನೂ ಬಲ್ಲೆನೆಂಬ ಹ ವೇದವಚನಗಳ ಗೂಢಾರ್ಥವನ್ನು ಕುಲಜಾತ್ಯಾದ್ಯಭಿಮಾನಗಳಿಂದ ಕೆಡಿಸತಕ್ಕವನು ಮಹಾ ಪಿಯಾಗುವನು'' ಎಂದು ಶಿವನಿಂದ ನಿರೂಪಿತವಾಗಿರುತ್ತದೆ. ಮಾನವಪುರಾಣದಲ್ಲಿ—''ವೇ ರುದ್ಧವಾದ ಕಾವ್ಯವನ್ನೂ, ಸ್ಮೃತಿಯನ್ನೂ, ಪುರಾಣವನ್ನೂ, ಅನ್ಯದೇವತೆಯನ್ನೂ ವಿದ್ವಾ ಸರು ಅಂಗೀಕರಿಸುವುದಿಲ್ಲವು'' ಎಂದೂ, ಬೇರೊಂದು ಸ್ಥಳದಲ್ಲಿ—''ವೇದವಿರುದ್ಧವಾದ ಮುನಿಯಿಂದ ಹೇಳಲ್ಪಟ್ಟದ್ದರೂ ಅಂಗೀಕರಿಸಲ್ಪಡತಕ್ಕದ್ದಲ್ಲವು. ಯುಕ್ತಿಯುಕ್ತವಾದಮಾ ಅಂಗೀಕರಿಸಲ್ಪಡಬೇಕಲ್ಲದೆ, ಯುಕ್ತಿಯುಕ್ತವಲ್ಲದ್ದನ್ನು ಪುರುಷಸಂಬಂಧವಾದ ಗೌರವದಿಂ ದಿಂದ ಅಂಗೀಕರಿಸಲ್ಪಡತಕ್ಕದ್ದಲ್ಲವು'' ಎಂದೂ ಹೇಳಲ್ಪಟ್ಟಿದೆ

ಎಂಬಿಲ್ಲಿಗೆ ನಿಗಮಾಗಮಾರ್ಥನಿರ್ಣಯವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಹದಿನಾಲ್ಕನೆಯ ಸಂವಾದವು ಮುಗಿದುದು.



ವೇದಾರ್ಥನಿರ್ಣಯದಲ್ಲಿ ನೂತನಕವಿವಾಕ್ಯನಿರಾಕರಣವಿಧಿಯು.

ಚೋ—ಎಲೈ ರೇಣುಕಗಣೇಂದ್ರನೇ ! ''ಋಷಿಯ ಅಂಶವಿಲ್ಲದವನು ಕಾವ್ಯಕರ್ತ

ಹರಿಃ ಪೃಥಿವೀಪತಿಃ || ನಾ ದೇವಾಂಶೋ ದದಾತ್ಯನ್ನಂ ನಾರುದ್ರಃ ಕ್ರಮಪಾಠಕಃ||
ಗವಾಂಪಯೋ ದ್ವಿಜಸ್ಯಾಂಘ್ರಿಂ ಯೋಗಿನಾಂ ಹೃತ್ಕವೇರ್ವಚಃ || ಪರಂ ಶುಚಿತಮಂ
ವಿಂದ್ಯಾನ್ಮುಖಂ ಸ್ತ್ರೀವಹ್ನಿವಾಜಿನಾಂ'' ಇತಿ ಮನುವಾಕ್ಯಾತ್, ಶ್ರುತ್ಯರ್ಥನಿರ್ಣ
ಯೇ ನೂತನಕವಿವಚನಮಪಿ ಪ್ರಮಾಣಂ.

ಶ್ರೀರೇಣುಕಃ—ಹೇ ಚೋಳ ! ನ ತಥಾ ವಕ್ತವ್ಯಂ, ಶಿವಾಧಿಕ್ಯಬೋಧಕ
ಶ್ರುತ್ಯರ್ಥನಿರ್ಣಯೇ ಮಹಾಪುರಾಣವಾಕ್ಯಾನಿ ಮಹಾಕವಿವಾಕ್ಯಾನಿ ಚ ಪ್ರಮಾಣಾ
ನಿ. ನ ತು ನೂತನಕವಿವಾಕ್ಯಾನಿ. ಋಗ್ವೇದೇ,-''ತಿರಶ್ಚೀನೋವಿತತೋರಶ್ಮಿರೇಷಾಮ
ಧಸ್ವಿದಾಸೀದುಪರಿಸ್ವಿದಾಸೀತ್'' ಕಠವಲ್ಲ್ಯುಪನಿಷದಿ,-''ಅಣೋರಣೀಯಾನ್ಮಹತೋ
ಮಹೀಯಾನಾತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಂ'' ಬ್ರಹ್ಮೋಪನಿಷದಿ,-
''ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್'' ನಾ
ರಾಯಣೋಪನಿಷದಿ,—''ವೇದಾಂತವಿಜ್ಞಾನಸುನಿಶ್ಚಿತಾರ್ಥಾಸ್ಸನ್ಯಾಸಯೋಗಾದ್ಯತ
ಯಶ್ಶುದ್ಧಸತ್ವಾಃ | ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮು
ಚ್ಯಂತಿ ಸರ್ವೇ'' ಇತ್ಯೇತೇಷಾಂ ಶ್ರುತಿವಾಕ್ಯಾನಾಂ ಕ್ರಮಾದರ್ಥನಿರ್ಣಯಸ್ತು ಪು
ರಾಣವಾಕ್ಯೈಶ್ಶ್ರೂಯತಾಂ, ಭವಿಷ್ಯೋತ್ತರಪುರಾಣೇವೇದಪಾದಸ್ತವೇ,—''ಅಂ
ಶಸ್ಥಮಾತ್ಮಾನಮಜಂ ನ ದೃಷ್ಟ್ವಾ ಭ್ರಮಂತಿ ಮೂಢಾ ಗಿರಿಗಹ್ವರೇಷು||ಪಶ್ಚಾದು
ದಗ್ದಕ್ಷಿಣತಃ ಪುರಸ್ತಾದಧಸ್ವಿದಾಸೀದುಪರಿಸ್ವಿದಾಸೀತ್''-''ಅನಂತಮವ್ಯಕ್ತಮಚಿಂ

ಗನೆಂದೂ, ವಿಷ್ಣ್ವಂಶವಿಲ್ಲದವನು ರಾಜನಾಗನೆಂದೂ, ದೇವತಾಂಶವಿಲ್ಲದವನು ಅನ್ನದಾನಿಯಾ
ಗನೆಂದೂ, ಶಿವಾಂಶವಿಲ್ಲದವನು ಕ್ರಮಪಾಠಕನಾಗನೆಂದೂ, ಗೋಕ್ಷೀರವನ್ನೂ, ಬ್ರಾಹ್ಮ
ಣನ ಪಾದಗಳನ್ನೂ, ಯೋಗಿಗಳ ಚಿತ್ತವನ್ನೂ, ಕವಿಯ ವಾಕ್ಕನ್ನೂ, ಸ್ತ್ರೀಯರ ಮುಖವನ್ನೂ,
ಅಗ್ನಿ ಕುದುರೆಗಳ ಮುಖವನ್ನೂ, ಪರಿಶುದ್ಧವನ್ನಾಗಿ ತಿಳಿಯಬೇಕು'' ಎಂದು ಮನುವು ಹೇಳಿ
ರುವುದರಿಂದ ವೇದವಚನಗಳಿಗೆ ಅರ್ಥವನ್ನು ನಿಶ್ಚೈಸುವುದರಲ್ಲಿ ನೂತನಕವಿಯ ವಾಕ್ಕನ್ನೂ,
ಪ್ರಮಾಣವನ್ನಾಗಿ ಭಾವಿಸಬೇಕು.

ರೇ—ಎಲೈ ಚೋಳನೇ ! ಹಾಗೆ ಹೇಳಬಾರದು. ಶಿವಾಧಿಕ್ಯಬೋಧಕಗಳಾದ ವೇದವ
ಚನಗಳಿಗೆ ಅರ್ಥವನ್ನು ನಿಶ್ಚೈಸುವುದರಲ್ಲಿ ಮಹಾಪುರಾಣಗಳ ಮತ್ತು ಮಹಾಕವಿಗಳ ವಾಕ್ಯ
ಗಳು ಪ್ರಮಾಣವಲ್ಲದೆ ನವೀನರಾದ ಕವಿಗಳ ವಾಕ್ಯಗಳು ಪ್ರಮಾಣವಲ್ಲವು. ಏಕೆಂದರೆ—
''ತಿರಶ್ಚೀನೋ'' ಎಂಬ ಋಗ್ವೇದವಚನಕ್ಕೂ, ''ಅಣೋರಣೀಯಾನ್'' ಎಂಬ ಕಠವಲ್ಲ್ಯುಪ
ನಿಷದ್ವಚನಕ್ಕೂ, ''ಯಜ್ಞೋಪವೀತಂ'' ಎಂಬ ಬ್ರಹ್ಮೋಪನಿಷದ್ವಚನಕ್ಕೂ, ''ವೇದಾಂತವಿ
ಜ್ಞಾನಸುನಿಶ್ಚಿತಾರ್ಥಾಃ'' ಎಂಬ ನಾರಾಯಣೋಪನಿಷದ್ವಚನಕ್ಕೂ ಕ್ರಮವಾಗಿ ಅರ್ಥನಿರ್ಣ
ಯವನ್ನು ಪುರಾಣವಾಕ್ಯಗಳಿಂದ ಕೇಳು. ಭವಿಷ್ಯೋತ್ತರಪುರಾಣದಲ್ಲಿರುವ ವೇದಪಾದಸ್ತವ

ಶ್ಯಮೀಶಂ ಶಿವಂ ತಮಾಶಾಂಬರಮಂಬರಾಂಗಂ || ಅಜಂ ಪುರಾಣಂ ಪ್ರಣಮಾಮಿ ಯೋsಣೋರಣೀಯಾನ್ಮಹತೋ ಮಹೀಯಾನ್''–'' ವೇದೈಕನಿಷ್ಠಾಪರಭೂಸುರಾಣಾಂ ಯಜ್ಞೋಪವೀತಂ ಪರಮಂ ಪವಿತ್ರಂ||ಧ್ಯಾಯಂತಿ ಮುಕ್ತ್ಯರ್ಥಮಿಮಂ ಮಹೇಶಂ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ'' ಏಭಿಃ ಪುರಾಣವಾಕ್ಯೈಃ ಪೂರ್ವೋಕ್ತಶ್ರುತ್ಯರ್ಥೋsಂಗೀಕರ್ತವ್ಯಃ. ತತ್ತಾವದಾಸ್ತಾಂ. ಪೂರ್ವೋಕ್ತಶ್ರುತ್ಯರ್ಥನಿರ್ಣಯೇ ಶೃಂಗಾರರಸಭರಿತಂ ನೂತನಕವಿವಾಕ್ಯಮಪಿ ಪಶ್ಯ, ''ಕಾಚಿತ್ಪ್ರಗಲ್ಭಾ ಕಮಲಾಯತಾಕ್ಷೀ ರತಿಪ್ರವೀಣಾ ರಹಸಿ ಪ್ರವಿಷ್ಟಾ||ವಿಮುಚ್ಯ ನೀವೀಂ ಪರಿರಭ್ಯದೋರ್ಭ್ಯಾಮಧಸ್ತ್ವಿದಾಸೀದುಪರಿಸ್ವಿದಾಸೀತ್'' ಇತಿ. ''ಅಣೋರಣೀಯಾನ್ಮಹತೋ ಮಹೀಯಾನ್ಮಧ್ಯೋ ನಿತಂಬಶ್ಚ ಯದಂಗನಾಯಾಃ|| ತದಂಗಹಾರಿದ್ರವಿಲೇಪಮಗ್ನಂ ಯಜ್ಞೋಪವೀತಂ ಪರಮಂ ಪವಿತ್ರಂ || ದ್ವಂದ್ವೋತ್ಥಖೇದಸಹತಾ ಜಘನಪ್ರದೇಶೇ ಶ್ರುತ್ಯಂ

---

ದಲ್ಲಿ–''ಮೂಢರು ಜನನ ಮರಣ ರಹಿತನಾದ ಪರಮಾತ್ಮನು ತಮ್ಮ ಹೃದಯದಲ್ಲಿ ವಾಸಮಾಡುತ್ತಿರುವನೆಂದರಿಯದೆ ಬೆಟ್ಟ ಗುಡ್ಡಗಳ ಗವಿಗಳಲ್ಲಿ ಅಲೆಯುತ್ತಾರೆ. ಆ ಪರಮಾತ್ಮನು—ಪೂರ್ವಾದಿ ದಿಕ್ಕುಗಳಲ್ಲೂ, ಮೇಲೂ, ಕೆಳಗೂ ಇರುತ್ತಿರುವನೆಂದು ವೇದವು ಹೇಳುತ್ತದೆ. ಯಾವ ಈ ಶಿವನು ಅಣುವಿಗಣುರೂಪನಾಗಿಯೂ, ಮಹತ್ತಿಗೆ ಮಹದ್ರೂಪನಾಗಿಯೂ, ಇರುತ್ತಿರುವನೋ, ನಾಶರಹಿತನಾದ, ಅವ್ಯಕ್ತನಾದ, ಅಚಿಂತ್ಯನಾದ, ಅದ್ವಿತೀಯನಾದ, ದಿಗಾಕಾಶಗಳೇ ವಸ್ತ್ರವಾಗುಳ್ಳ, ಜನ್ಮರಹಿತನಾದ, ಪುರಾಣಪುರುಷನಾದ ಆ ಶಿವನನ್ನು ಮಣಿವುತ್ತೇನೆ. ವೇದದಲ್ಲಿ ಮುಖ್ಯಾಸಕ್ತಿಯುಳ್ಳ ಬ್ರಾಹ್ಮಣರಿಗೆ ಯಜ್ಞೋಪವೀತಶಬ್ದವಾಚ್ಯವಾದ ಲಿಂಗವು ಶ್ರೇಷ್ಠವಾದದ್ದು. ಉಪನಿಷತ್ತುಗಳ ಅರ್ಥವನ್ನು ತಿಳಿಯುವುದರಿಂದ ಲೇಸಾಗಿ ನಿಶ್ಚಯಿಸಲ್ಪಟ್ಟ ಅರ್ಥವುಳ್ಳ ಸನ್ಯಾಸಿಗಳು ಈ ಶಿವನನ್ನು ಮೋಕ್ಷಕ್ಕಾಗಿ ಚಿಂತಿಸುವರು,, ಎಂಬೀ ಪುರಾಣವಾಕ್ಯಗಳಿಂದ ಪೂರ್ವೋಕ್ತವಾದ ಶ್ರುತಿಗಳ ಅರ್ಥವನ್ನಂಗೀಕರಿಸಬೇಕು. ಅದಂತಿರಲಿ. ಆ ಶ್ರುತಿಗಳ ಅರ್ಥವನ್ನು ನಿರ್ಣಯಿಸುವುದರಲ್ಲಿ ಶೃಂಗಾರರಸದಿಂದ ಕೂಡಿದ ನೂತನಕವಿಯ ಮಾತನ್ನಾದರೂ ಕೇಳಿ ತಿಳಿಯುವವನಾಗು. ಕಮಲದಂತೆ ವಿಸ್ತಾರವಾದ ಕಣ್ಣುಳ್ಳ, ರತಿಸುಖವನ್ನನುಭವಿಸುವದರಲ್ಲಿ ಬುದ್ಧಿಯುಳ್ಳವಳಾದ, ಪ್ರೌಢೆಯಾದ ಒಬ್ಬ ಹೆಂಗಸು ಕ್ರೀಡಾಗೃಹದಲ್ಲಿ ಪ್ರವೇಶಿಸಿ, ತನ್ನ ನೀವೀಗ್ರಂಥಿಯನ್ನು ಸಡಿಲಗೊಳಿಸಿ, ಕೈಗಳಿಂದ ತನ್ನ ಪ್ರೇಮಪಾತ್ರನಾದ ಪುರುಷನನ್ನು ಅಪ್ಪಿಕೊಂಡು ಆ ಕಾಂತನ ಮೇಲೂ ಕೆಳಗೂ ಇರತಕ್ಕವಳಾದಳು,, ಹೀಗೆಂದೂ, ''ಯಾವ ಸ್ತ್ರೀಯ ನಡುವು ಅಣುವಿಗಣುವಾಗಿರುವುದೋ, ಯಾವಳ ನಿತಂಬವು ಮಹತ್ತಿಗೆ ಮಹತ್ತಾಗಿರುವುದೋ ಆಕೆಯ ಶರೀರದಲ್ಲಿದ್ದ ಹರಿದ್ರಾಲೇಪದಿಂದ ಯಜ್ಞೋಪವೀತವು ಶ್ರೇಷ್ಠವೂ, ಪವಿತ್ರವೂ ಆಯಿತು. ಸ್ತ್ರೀಯರ ಜಘನಪ್ರದೇಶದಲ್ಲಿ ದ್ವಂದ್ವದುಃಖವನ್ನು ಸಹಿಸಿಕೊಳ್ಳುವತನವು ಶಾವರೆಯಹಾಗಿರುವ ಮುಖದಲ್ಲಿ ಶ್ರುತ್ಯಂತವೀಕ್ಷಣಗತಿಯು, ಕಾಲ್ಗಳಲ್ಲಿ ಪರಮಹಂಸಗಮ

ತವೀಕ್ಷಣಗತಿರ್ವದನಾರವಿಂದೇ ॥ ಅಸ್ತೇ ಪದೇ ಪರಮಹಂಸಗತಿರ್ವಧೂನಾಂ ತನ್ನೀವಿಮೋಕ್ಷಮಪಹಾಯ ಕಿಮಸ್ತಿ ಮೋಕ್ಷಃ'' ಇತಿ. ಏತಾದೃಗ್ಭಿಃ ನೂತನಕವಿವಾಕ್ಯೈಃ ಶ್ರುತ್ಯರ್ಥೋ ನಾಂಗೀಕರ್ತವ್ಯಃ, ಅತಏವ ಹೇ ಚೋಳ ! ಪುರಾಣೇತಿಹಾಸವಾಕ್ಯೈರೇವ ಶ್ರುತ್ಯರ್ಥೋ ನಿರ್ಣೇತವ್ಯಃ.

ಇತಿ ವೇದಾರ್ಥನಿರ್ಣಯೇ ನೂತನ ಕವಿವಾಕ್ಯನಿರಾಕರಣವಿಧಿಃ

ಪ್ರಥಮೋಪದೇಶೇ ಪಂಚದಶಸ್ಸಂವಾದಃ.



ಇತಿ ಶ್ರೀಮದ್ವೇದವೇದಶಿರಶ್ಶಿವಾಗಮಪುರಾಣಪ್ರಭೃತಿಪ್ರಭೂತಪ್ರಥಿತಪ್ರಮಥ
ಸಂಗೀತಾನವದ್ಯಶಿವಾದ್ವೈತಸಿದ್ಧಾಂತಬೋಧಕಶ್ರೀವೀರಶೈವಷಟ್ಸ್ಥಲ
ಸತ್ಪಥಪ್ರಚಾರಕವರ್ಯಸೋಸಲಿವೀರಣಾರಾಧ್ಯಶಿವಯೋಗೀಂ
ದ್ರಪುತ್ರಶ್ರೀರೇವಣಸಿದ್ಧದೇಶಿಕಾತ್ಮಜದೇವಣಾರಾಧ್ಯಶಿವ
ಯೋಗಿವಿರಚಿತೇ ಚೋಳರೇಣುಕಸಂವಾದೇ ಶಿವಾ
ಧಿಕ್ಯಶಿಖಾಮಣೌ ರಾಜಪಟ್ಟಾಭಿಷೇಕಾದಿ
ಪಂಚದಶಸಂವಾದವಿಚಾರಃ
ಪ್ರಥಮೋಪದೇಶಃ.



ನವು, ಇರುತ್ತದೋ, ಆ ಸ್ತ್ರೀಯರ ನಂಗೆ ಗಂಟಿನ ಬಿಚ್ಚುವಿಕೆಯನ್ನು ಬಿಟ್ಟರೆ ಬೇರೆ ಮೋಕ್ಷವು ಇರುತ್ತದೇನು ?,, ಎಂದೂ ನೂತನ ಕವಿವಾಕ್ಯಗಳಿರ್ುವು. ಇಂತಹ ಕವಿವಾಕ್ಯಗಳಿಂದ ಶ್ರುತ್ಯರ್ಥವು ಅಂಗೀಕರಿಸಲ್ಪಡತಕ್ಕದ್ದಲ್ಲವು. ಈ ಕಾರಣದಿಂದಲೇ ಎಲೈ ಚೋಳನೇ ! ಪುರಾಣೇತಿಹಾಸಗಳ ವಾಕ್ಯಗಳಿಂದಲೇ ಶ್ರುತಿಗಳಿಗೆ ಅರ್ಥವನ್ನು ನಿಶ್ಚಯಿಸಬೇಕು.

ಎಂಬಲ್ಲಿಗೆ ವೇದಾರ್ಥನಿರ್ಣಯದಲ್ಲಿ ನೂತನಕವಿವಾಕ್ಯನಿರಾಕರಣವಿಧಿಯನ್ನು ಹೇಳುವ ಮೊದಲನೆಯ ಉಪದೇಶದಲ್ಲಿ ಹದಿನೈದನೆಯ ಸಂವಾದವು ಮುಗಿದುದು.



ಶ್ರೀನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡಟಿಪ್ಪಣಿಯಲ್ಲಿ ಮೊದಲನೆಯ ಉಪದೇಶವು ಸಂಪೂರ್ಣವಾಯಿತು.



ಶ್ರೀವಿಷಕಂಠಾಯನಮಃ.

## ದ್ವಿತೀಯೋಪದೇಶಃ ಪ್ರಾರಭ್ಯತೇ.

### ಶಿವಸ್ಯ ಪರಮಾಪ್ತತ್ವನಿರ್ಣಯಃ.

ಚೋಳಃ—"ಸಂಹಾರಕೃತ್ಯಕರ್ತೃತ್ವಾದನಾಪ್ತಸ್ತಾಮಸೋಹರಃ ||
ಇತ್ಯಾಹುಸ್ತಸ್ಯ ಚಾಪ್ತತ್ವಂ ಸಾತ್ವಿಕತ್ವಂ ವದ ಪ್ರಭೋ"

ಶ್ರೀ ರೇಣುಕಃ—ಹೇ ಚೋಳ! ಶಿವಸ್ಯ ಪರಮಾಪ್ತತ್ವಂ ಪ್ರಥಮಂ ಶ್ರೂಯತಾಂ,-ಸೂತಗೀತಾಯಾಂ,-"ಯಥಾ ಸಾ ಶಂಕರೇಣೋಕ್ತಾ ತಥಾಸ್ತಿ ಶ್ರುತಿರಾಸ್ತಿಕಾಃ || ಪ್ರಮಾಣಂ ಸುತರಾಮಾಪ್ತತಮಏವ ಮಹೇಶ್ವರಃ || ಸರ್ವದೋಷವಿಹೀನಸ್ಯ ಮಹಾಕಾರುಣಿಕಸ್ಯ ಚ||ಸರ್ವಸ್ಯೈವ ವಿಶುದ್ಧಸ್ಯ ಕಥಂ ದೋಷಃ ಪ್ರಕಲ್ಪ್ಯತೇ || ವೇದಮಾನೇನ ಸಂಸಿದ್ಧಂ ಸರ್ವೈಸ್ಸಂಗ್ರಾಹ್ಯಮೇವ ಹಿ || ಚೋದ್ಯಾನರ್ಹಂ ತುವೇದಾರ್ಥಂ ಚೋದ್ಯಂ ಕುರ್ವನ್ಪತತ್ಯಧಃ" ಇತ್ಯಾದಿಭಿಶ್ಶಿವಸ್ಯ ಪರಮಾಪ್ತತ್ವಂ ನಿಶ್ಚಿತವ್ಯಂ. ತತ್ತಾವದಾಸ್ತಾಂ, ಭೋ ಚೋಳ! ಪರಮಾಪ್ತಶ್ಶಿವ ಏಕಏವ ದಯಾ

---

## ಎರಡನೆಯ ಉಪದೇಶ ಪ್ರಾರಂಭವು.

### ಶಿವನಿಗೆ ಪರಮಾಪ್ತತ್ವನಿರ್ಣಯವು.

ಚೋಳನು— ಎಲೈ ರೇಣುಕನೇ! ಶಿವನು ತಮೋಗುಣವುಳ್ಳವನಾಗಿರುವುದರಿಂದ ಲಯ, ಕಾರ್ಯಕ್ಕಧಿಪತಿಯಾದನು. ಆದ್ದರಿಂದ ಆತನನ್ನು ಲೋಕಕ್ಕೆ ಆಪ್ತನಲ್ಲವೆಂದು ಹೇಳುತ್ತಾರೆ. ನೀನು ಆತನಿಗೆ ಆಪ್ತತ್ವ ಸಾತ್ವಿಕತ್ವಗಳನ್ನು ನಿರೂಪಿಸು?

ಶ್ರೀ ರೇಣುಕನು—ಎಲೈ ಚೋಳನೇ! ಮೊದಲು ಶಿವನಿಗೆ ಪರಮಾಪ್ತತ್ವವನ್ನು ಕೇಳು; ಸೂತಗೀತೆಯಲ್ಲಿ—"ಎಲೈ ಆಸ್ತಿಕರೇ! ಆ ಶ್ರುತಿಯು ಶಿವನಿಂದ ಹ್ಯಾಗೆ ಹೇಳಲ್ಪಟ್ಟಿತೋ ಹಾಗೆಯೇ ಅದು ಇರುತ್ತದೆ. ಆ ವೇದವು ಅತ್ಯಂತ ಪ್ರಮಾಣವಾದುದು. ಆ ಕಾರಣದಿಂದ ಆ ಮಹೇಶ್ವರನು ಅತ್ಯಂತ ಆಪ್ತನೇ ಸರಿ; ಸ್ವಲ್ಪವಾದರೂ ದೋಷವಿಲ್ಲದವನೂ, ಬಹುಕೃಪಾಶಾಲಿಯೂ, ಎಲ್ಲಕ್ಕಿಂತ ಪರಿಶುದ್ಧನೂ ಆದ ಶಿವಸ್ವಾಮಿಗೆ ಹ್ಯಾಗೆ ದೋಷವು ಕಲ್ಪಿಸಲ್ಪಡುತ್ತದೆ? ವೇದಪ್ರಮಾಣದಿಂದ ಸಿದ್ಧವಾದುದು ಸರ್ವರಿಂದಲೂ ಸಂಗ್ರಹಿಸಲರ್ಹವಾದುದಷ್ಟೆ? ಪ್ರೇರಿಸುವುದಕ್ಕೆ ಯೋಗ್ಯವಲ್ಲದ ವೇದಾರ್ಥವನ್ನು ಪ್ರೇರಿಸುವುದಕ್ಕೆ ಯೋಗ್ಯವನ್ನಾಗಿ ಮಾಡತಕ್ಕವನು ಅಧೋಗತಿಯನ್ನು ಹೊಂದುವನು,, ಎಂದು ಹೇಳಲ್ಪಟ್ಟಿದೆ. ಇವು ಮೊದಲಾದ ವಚನಪ್ರಮಾಣಗಳಿಂದ ಶಿವನಿಗೆ ಪರಮಾಪ್ತತ್ವವು ನಿಶ್ಚೈಸಲ್ಪತಕ್ಕುದು. ಆ ವಿಚಾರವಿರಲಿ, ಎಲೈ ಚೋಳನೇ!

ಉರಿತಿ ಪ್ರೂಯತೇ, ಕಿರಣಾಗಮೇ,—" ಸಂಸಾರಖಿನ್ನಜೀವಾನಾಂ ವಿಶ್ರಾಂತಿಂ ಕರ್ತುಮಿಚ್ಛಯಾ || ಮಹಾರ್ಥಸಂಸ್ಕೃತಿರ್ಯೇಷಾ ದಾಕ್ಷಾಯಣಿಕೃತಾ ಮಯಾ " ಇತಿ. ರೌರವಾಗಮೇ,—" ಆಯುರ್ವೇದಾಚ್ಚ ಗಣಿತಾನ್ಮಂತ್ರವಾದಾಚ್ಚ ಕಥ್ಯತೇ|| ರಸೋಪನಿಷದಶ್ಚಾಪ್ತಃ ಭವಾನ್ ಸರ್ವಜಗತ್ಪತೇ" ಬ್ರಹ್ಮಗೀತಾಯಾಂ,—ಬ್ರಹ್ಮಾ, " ಮಹ್ಯಂ ಯಥಾಹ ವೇದಾನಾಮರ್ಥಂ ಸರ್ವಜ್ಞ ಈಶ್ವರಃ || ತಥೈವ ಕಥಿತೋಽಸ್ಮಾಭಿಸ್ಸತ್ಯಮೇವ ನ ಸಂಶಯಃ || ಸ್ವಪ್ರಕಾಶಸ್ವರೂಪಸ್ಯಸ್ವತಶ್ಶುದ್ಧಸ್ಯ ಶೂಲಿನಃ || ಕರಾಮಲಕವತ್ಸರ್ವಂ ಪ್ರತ್ಯಕ್ಷಂ ಹಿ ನ ಸಂಶಯಃ " ಇತ್ಯಾದಿಭಿಶ್ಶಿವ ಏತಏವ ಕೃಪಾಳುರಿತಿ ವಿಜ್ಞೇಯಃ.

ಇತಿ ಶಿವಸ್ಯ ಪರಮಾಪ್ತತ್ವನಿರ್ಣಯವಿಧಿರ್ದ್ವಿತೀಯೋಪದೇಶೇ
ಪ್ರಥಮಸ್ಸಂವಾದಃ.



ಪರಮಾಪ್ತನಾದ ಶಿವನೊಬ್ಬನೇ ದಯಾಶೀಲನೆಂದು ಕೇಳಿರುತ್ತೇವೆ. ಕಿರಣಾಗಮದಲ್ಲಿ—"ಎಲೈ ದಾಕ್ಷಾಯಣಿಯೇ ! ಸಂಸಾರದಿಂದ ದುಃಖವನ್ನನುಭವಿಸುತ್ತಿರುವ ಮಾನವರಿಗೆ ಮೋಕ್ಷವನ್ನು ಕೊಡಬೇಕೆಂದಿಚ್ಛೆಯಿಂದ ಶ್ರೇಷ್ಠನಾದ ಅರ್ಥಗಳ ಸಂಗ್ರಹರೂಪವಾದ ಈ ವೇದವು ನನ್ನಿಂದ ಮಾಡಲ್ಪಟ್ಟಿತು,, ಎಂದೂ, ರೌರವಾಗಮದಲ್ಲಿ—"ಎಲೈ ಸಕಲಲೋಕಗಳಿಗೊಡೆಯನಾದ ಶಿವನೇ ! ನೀನು ಆಯುರ್ವೇದದಿಂದಲೂ, ಜ್ಯೋತಿಶ್ಶಾಸ್ತ್ರದಿಂದಲೂ, ಮಂತ್ರಶಾಸ್ತ್ರದಿಂದಲೂ, ರಸೋಪನಿಷತ್ತಿನಿಂದಲೂ ಆಪ್ತನೆಂದು ಹೇಳಲ್ಪಟ್ಟಿರುತ್ತೀಯೆ,, ಎಂದೂ ನಿರೂಪಿತವಾಗಿದೆ. ಬ್ರಹ್ಮಗೀತೆಯಲ್ಲಿ—"ಸರ್ವಜ್ಞನಾದ ಪರಮೇಶ್ವರನು ವೇದಗಳ ಅರ್ಥವನ್ನು ಹ್ಯಾಗೆ ಹೇಳಿದನೋ, ಹಾಗೆಯೇ ನಾನು ನಿಮಗೆ ಹೇಳಿದೆನು. ಇದು ಸತ್ಯವೇ ಹೌದು. ಸಂದೇಹವಿಲ್ಲವು.

ಬೇರೊಂದರಿಂದ ಪ್ರಕಾಶಿಸದೆ ತನ್ನಿಂದಲೇ ತಾನು ಪ್ರಕಾಶಿಸತಕ್ಕವನೂ, ಬೇರೊಂದರಿಂದ ಪರಿಶುದ್ಧನಾಗದೆ ತನ್ನಷ್ಟಿಗೆ ತಾನೇ ಪರಿಶುದ್ಧನೂ ಆಗಿರುವ ಶಿವನಿಗೆ ಸಕಲವೂ ಕೈಯನ್ನು ಹೊಂದಿದ ನೆಲ್ಲಿಕಾಯಿಯಂತೆ ಪ್ರತ್ಯಕ್ಷವೇ ಆಗಿರುವುದಷ್ಟೆ! ಈ ವಿಷಯದಲ್ಲಿ ಸಂದೇಹವಿಲ್ಲವು,, ಎಂದು ಬ್ರಹ್ಮನಿಂದ ನಿರೂಪಿತವಾಗಿದೆ.

ಎಂಬಲ್ಲಿಗೆ ಶಿವನಿಗೆ ಪರಮಾಪ್ತತ್ವನಿರ್ಣಯವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲಿ
ಮೊದಲನೆಯ ಸಂವಾದವು ಮುಗಿದುದು.



ಶ್ರೀತ್ರಿಪುರದಹನಾಯನಮಃ.

## ಪರಮಾಪ್ತರುದ್ರಸ್ಯ ಸಾತ್ವಿಕತ್ವನಿರ್ಣಯವಿಧಿಃ.

ಶ್ರೀರೇಣುಕಃ—ಭೋ ಚೋಳ! ಸಂಹಾರಕರ್ತಾ ರುದ್ರಸ್ತಮೋಗುಣ ವಿಶಿಷ್ಟಃ, ಅತಸ್ತತ್ಪ್ರತಿಪಾದಕಶ್ರುತಿಪುರಾಣಾದಿವಚನಾನಿ ತಾಮಸಾನ್ಯಪ್ರಮಾಣಾನಿ ತಿ ಮನಸಿ ಶಂಕಾಂ ನಿಧಾಯ ಪ್ರಾಕ್ಪ್ರಶ್ನಃ ಕೃತಸ್ತ್ವಯಾ, ತತ್ಪರಿಹಾರಃ ಕ್ರಿಯ ತಾಂ, ಋಗ್ವೇದೇ,—"ಸ್ಥಿರೇಭಿರಂಗೈಃ ಪುರುರೂಪ ಉಗ್ರೋ ಬಭ್ರುಶ್ಶುಕ್ರೇಭಿ ಪಿಪಿಶೇ ಹಿರಣ್ಯೈಃ" ಯಜುರ್ವೇದೇ ಶ್ರೀರುದ್ರೇ,—"ಯಾ ತೇ ರುದ್ರ ಶಿವಾ ತನೂಃ ಅಘೋರಾಽಪಾಪಕಾಶಿನೀ| ತಯಾನಸ್ತನುವಾಶಂತಮಯಾ ಗಿರಿಶಂತಾಭಿಚಾಕಶೀಹಿ", "ಯಾ ತೇ ರುದ್ರ ಶಿವಾ ತನೂಶ್ಶಿವಾ ವಿಶ್ವಾಹಭೇಷಜೀ | ಶಿವಾ ರುದ್ರಸ್ಯ ಭೇಷ ಜೀ ತಯಾ ನೋ ಮೃಡ ಜೀವಸೇ" ಅಥರ್ವಶಿಖಾಯಾಂ,—"ಪ್ರಥಮಾ ರಕ್ತಪೀ ತಾ ಬ್ರಹ್ಮದೈವತ್ಯಾ | ದ್ವಿತೀಯಾ ವಿದ್ಯುಮತೀ ಕೃಷ್ಣಾ ವಿಷ್ಣುದೈವತ್ಯಾ | ತೃತೀ

---

### ಪರಮಾಪ್ತನಾದ ರುದ್ರನಿಗೆ ಸಾತ್ವಿಕತ್ವನಿರ್ಣಯವಿಧಿಯು.

ರೇ—ಎಲೈ ಚೋಳನೇ ! ಸಂಹಾರಕಾರ್ಯಾಧಿಪತಿಯಾದ ರುದ್ರನು ತಮೋಗುಣವುಳ್ಳ ವನು. ಈ ಕಾರಣದಿಂದ ಆತನನ್ನು ಹೇಳತಕ್ಕ ಶ್ರುತಿಪುರಾಣಾದಿವಚನಗಳು ತಮೋಗುಣಯು ಕ್ತಗಳೇ ಆಗಿರುವುದರಿಂದ ಅವು ಪ್ರಮಾಣವಲ್ಲವೆಂದು ಸಂಶಯಪಡುತ್ತ ನೀನು ಮೊದಲು ಕೇಳಿ ದೆ, ಅದಕ್ಕೆ ಉತ್ತರವನ್ನು ಹೇಳುವೆವು ಕೇಳು; ಋಗ್ವೇದದಲ್ಲಿ—"ಶುಭ್ರವರ್ಣವೂ, ಹೊಂ ಬಣ್ಣವೂ ಆಗಿರುವ ಶರೀರಗಳಿಂದ ಅನೇಕವಿಧವಾದ ರೂಪುಗಳನ್ನು ಹೊಂದಿದ ಶಿವನು ಧ್ಯಾನಮಾ ಡಿಸಿಕೊಳ್ಳುವುದಕ್ಕೋಸ್ಕರ ಕೃಷ್ಣಪಿಂಗಳವಾದ ವರ್ಣವುಳ್ಳವನಾಗಿ ಪ್ರಕಾಶಿಸಿದನು" ಎಂದು ಯಜುರ್ವೇದದಲ್ಲಿಯ ಶ್ರೀರುದ್ರದಲ್ಲಿ—"ಎಲೈ ರುದ್ರನೇ ! ನಿನ್ನ ಯಾವ ಶರೀರವು ಮಂಗಳ ಸ್ವರೂಪವೂ, ಶಾಂತಿವಿಶಿಷ್ಟವೂ, ದೀಕ್ಷಾತ್ರಯದಿಂದ ಪಾಪರಹಿತರಾದ ಭಕ್ತರಲ್ಲಿ ಪ್ರಕಾಶಿಸು ತ್ತಿರುವುದೂ ಆಗಿರುತ್ತದೆಯೋ, ಆ ಶರೀರದಿಂದ ನೀನು ನಮಗೆ ಅಭಿಮುಖನಾಗಿ ಪ್ರಕಾಶಿಸು" ಎಂದೂ ಉಕ್ತವಾಗಿದೆ. ಪುನಃ ಶ್ರೀರುದ್ರದಲ್ಲಿ—"ಎಲೈ ಪರಮೇಶ್ವರನೇ ! ನಿನ್ನ—ಇಷ್ಟಲಿಂಗ ರೂಪವಾದ ಶರೀರವು ಸರ್ವಮಂಗಳೆಯಾದ ಶಕ್ತಿಯಿಂದ ಕೂಡಿರುವುದರಿಂದ ಮಂಗಳಕರವೂ, ನಿನ್ನ—ಪ್ರಾಣಲಿಂಗರೂಪವಾದ ಶರೀರವು ರುದ್ರಶಬ್ದವಾಚ್ಯವಾದ ಮಾಹೇಶ್ವರಜ್ವರಕ್ಕೆ ಔಷಧ ವೂ, ನಿನ್ನ—ಭಾವಲಿಂಗರೂಪವಾದ ಶರೀರವು ಸಮಸ್ತ ಮಾಯಾಪ್ರಪಂಚರೂಪವಾದ ಸಂಸಾರ ವೆಂಬ ರೋಗವನ್ನು ನಾಶಮಾಡುವುದರಲ್ಲಿ ಔಷಧವೂ ಆಗಿರುತ್ತದೆಯೋ ಆ ಶರೀರತ್ರಯದಿಂದ ನಿನ್ನ ಲಿಂಗತ್ರಯವನ್ನು ಪೂಜಿಸುವ ನಮ್ಮ ಅಂಗತ್ರಯವನ್ನು ಕಾಪಾಡು" ಎಂದುಕ್ತವಾಗಿದೆ. ಅಥರ್ವಶಿಖೆಯಲ್ಲಿ—"ಬ್ರಹ್ಮನ ಶರೀರವು—ರಕ್ತವರ್ಣವೂ, ಪೀತವರ್ಣವೂ ಆಗಿರುವುದಂ

ಯಾ ಶುಭಾ ಶುಕ್ಲಾ ರುದ್ರದೈವತ್ಯಾ" ಇತಿ. ವೇದಪಾದಸ್ತವೇ,—ಸುಗಂಧಿಭಿಸ್ಸುಂದರಭಸ್ಮಗೌರೈರನಂತಭೋಗ್ಯೈರ್ಮೃದುಲೈರಘೋರೈಃ || ಶಿವಂ ಕದಾ ಲಿಂಗತಿ ಮೇ ಮನೀಷಾ ಸ್ಥಿರೇಭಿರಂಗೈಃ ಪುರುರೂಪಮುಗ್ರಂ || ಮುರಾರಿನೇತ್ರಾರ್ಚಿತಪಾದಯುಗ್ಮಮುಮಾಂಘ್ರಿಲಾಕ್ಷಾಪರಿರಕ್ತಪಾಣಿಂ || ನಮಾಮಿ ದೇವಂ ವಿಷನೀಲಕಂಠಂ ಸುವರ್ಣದಂತಂ ಶುಚಿವರ್ಣಮಾರಾತ್" ವೇದಸಾರಸ್ತವೇ,—"ಅಪಾಪಕಾಶೀತಿ ವಪುಸ್ತ್ವ ಶಂ ತೇ ಶ್ರೇಷ್ಠಾಸ್ತ್ವದೀಯಾ ಭಗವನ್ನಪಾಪಾಃ" ಪರಿಶೇಷನ್ಯಾಯಾತ್ ಕೃಷ್ಣತನೋಸ್ತಾಮಸತ್ವಂ ವಿಜ್ಞೇಯಂ. ತಥಾ ಸ್ಕಾಂದೇ ಶರಭಾಧ್ಯಾಯೇ,—ನರಹರಿಂಪ್ರತಿ ಶರಭರುದ್ರವಾಕ್ಯಂ, "ಯತ್ತಾಮಸಕಲಾಲೇಶಗೃಹೀತಸ್ತ್ವಂ ಪಯೋನಿಧೌ || ನಿದ್ರಾಪರವಶಶ್ಶೇಷೇ ಸ ಕಥಂ ಸಾತ್ವಿಕೋ ಭವಾನ್" ಇತ್ಯಾದಿಭಿರ್ವಿಷ್ಣೋಸ್ತಾಮಸತ್ವಂ ರುದ್ರಸ್ಯ ಸಾತ್ವಿಕತ್ವಂ ಪ್ರಸಿದ್ಧಂ. ಅತಏವ ವಿಷ್ಣುಪ್ರತಿಪಾದಕಪುರಾಣಾನಿ ತಾಮಸಾನಿ ನಿರಯಪ್ರದಾನಿ. ತದುಕ್ತಂ ಭಾಗವತೇ,—"ಸಾ

---

ವಿಷ್ಣುವಿನ ಶರೀರವು—ಮಿಂಚಿನಂತೆ ಹೊಳೆಯುತ್ತ, ಕಪ್ಪಾಗಿರುವುದೆಂದೂ, ರುದ್ರನ ಶರೀರವು—ಅತಿಶಯ ಮಂಗಳಕರವೂ, ಶುಭ್ರವರ್ಣವೂ ಆಗಿರುವುದೆಂದೂ" ಹೇಳಲ್ಪಟ್ಟಿದೆ. ವೇದಪಾದಸ್ತವದಲ್ಲಿ—"ಸುಗಂಧವಿಶಿಷ್ಟಗಳೂ, ಭಸ್ಮದಂತೆ ಶುಭ್ರವರ್ಣಗಳೂ, ನಾಶರಹಿತವಾದ ಸುಖವುಳ್ಳವುಗಳೂ, ಅತ್ಯಂತ ಮೃದುವಾದವುಗಳೂ, ಶಾಂತಿವಿಶಿಷ್ಟಗಳೂ, ನಿತ್ಯಗಳೂ ಆದ ಶರೀರಗಳಿಂದ ಅನೇಕರೂಪಗಳನ್ನು ಹೊಂದಿ ಮಂಗಳಕರನಾಗಿರುವ ಶಿವನನ್ನು ನನ್ನ ಬುದ್ಧಿಯು ಯಾವಾಗ ಆಲಿಂಗಿಸುತ್ತದೆಯೋ, ನಾರಾಯಣನ ನೇತ್ರವೆಂಬ ಕಮಲದಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ, ಪಾರ್ವತೀದೇವಿಯ ಪಾದಗಳಲ್ಲಿ ಲಿಪ್ತವಾದ ಅರಗಿನ ರಸದಿಂದ ಎಲ್ಲಾ ಕಡೆಯಲ್ಲೂ ಕೆಂಪಾದ ಕೈಗಳುಳ್ಳವನೂ, ವಿಷದಿಂದ ಕಪ್ಪಾದ ಕಂಠವುಳ್ಳವನೂ, ಶುಭ್ರವಾದ ದಂತಗಳುಳ್ಳವನೂ, ಶ್ವೇತವರ್ಣನೂ ಆಗಿರುವ ಶಿವನನ್ನು ಸಮೀಪದಲ್ಲಿ ನಮಿಸುತ್ತೇನೆ" ಎಂದೂ, ವೇದಸಾರಸ್ತವದಲ್ಲಿ—"ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಶಿವನೇ! ನಿನ್ನ ಲಿಂಗರೂಪವಾದ ಶರೀರವು—ಪಾಪರಹಿತರಾದ ಭಕ್ತರಲ್ಲಿ ಪ್ರಕಾಶಿಸತಕ್ಕುದೆಂದು ವೇದದಿಂದ ಕೇಳಲ್ಪಟ್ಟಿರುವುದರಿಂದ ಪಾಪರಹಿತರಾದ ನಿನ್ನ ಭಕ್ತರು ಶ್ರೇಷ್ಠರಾಗಿರುವರು" ಎಂದೂ ಉಕ್ತವಾಗಿದೆ. ಸ್ಕಾಂದಪುರಾಣದ ಶರಭಾಧ್ಯಾಯದಲ್ಲಿ—"ಎಲೈ ವಿಷ್ಣುವೇ! ಯಾವಕಾರಣದಿಂದ ನೀನು ತಮೋಗುಣದೊಂದು ಕಳೆಯ ಒಂದಂಶದಿಂದ ಕೂಡಿದವನಾದ ಮಾತ್ರದಿಂದ ಕ್ಷೀರಸಮುದ್ರದ ಮಧ್ಯದಲ್ಲಿ ಶೇಷಶಾಯಿಯಾಗಿ ನಿದ್ದೆಗೈಯುತ್ತಾ ಪರವಶನಾದೆಯೋ, ಆ ಕಾರಣದಿಂದ ನೀನು ಹ್ಯಾಗೆ ಸತ್ವಗುಣಶಾಲಿಯಾಗುವೆ? ಎಂದು ಶರಭರುದ್ರನಿಂದ ನರಸಿಂಹನನ್ನು ಕುರಿತು ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ವಿಷ್ಣುವು—ತಮೋಗುಣವುಳ್ಳವನೆಂದೂ, ರುದ್ರನು—ಸತ್ವಗುಣವುಳ್ಳವನೆಂದೂ ಪ್ರಸಿದ್ಧವಾಗಿರುತ್ತದೆ. ಈ ಕಾರಣದಿಂದಲೇ ವಿಷ್ಣುವನ್ನು ಹೇಳುವ ಪುರಾಣಗಳು ತಾಮಸಗಳೆನಿಸಿ,

ತ್ವಿಕಾ ಮೋಕ್ಷದಾಃ ಪ್ರೋಕ್ತಾ ರಾಜಸಾಸ್ಸ್ವರ್ಗದಾಶ್ಶುಭಾಃ || ಅನ್ಯೇ ಪುರಾ
ವಹಾಸ್ತಾಮಸಾ ನಿರಯಪ್ರದಾಃ '' ಇತಿ.

ಇತಿ ಪರಮಾಪ್ತರುದ್ರಸ್ಯ ಸಾತ್ವಿಕತ್ವನಿರ್ಣಯವಿಧಿರ್ದ್ವಿತೀಯೋಪದೇಶೇ ದ್ವಿತೀಯಸ್ಸಂವಾದಃ.

ಶ್ರೀಹರಾಯನಮಃ.

## ಶಿವಾತ್ಸರ್ವವೇದೋತ್ಪತ್ತಿವಿಧಿಃ.

ಚೋಳಃ—ಭೋ ರೇಣುಕ! "ಯಜ್ಞೋ ವೈ ವಿಷ್ಣುಃ" ಇತಿ ಋ
ದವಾಕ್ಯಾತ್, "ವಿಷ್ಣುರ್ಯಜ್ಞಃ" ಇತಿ ಯಜುರ್ವೇದವಾಕ್ಯಾತ್, ತಸ್ಮಾದ್ಯಜ್ಞಾ
ರ್ವಹುತಃ | ಋಚಸ್ಸಾಮಾನಿ ಜಜ್ಞಿರೇ | ಛಂದಾಗ್ಂಸಿ ಜಜ್ಞಿರೇ ತಸ್ಮಾತ್ |
ಜುಸ್ತಸ್ಮಾದಜಾಯತ" ಇತಿ ಯಜುರಾರಣ್ಯೇ ಪುರುಷಸೂಕ್ತವಾಕ್ಯಾಚ್ಚ, ಸಾ
ಕಾದ್ಯಜ್ಞನಾರಾಯಣಾದ್ವೇದೋತ್ಪತ್ತಿರಭಿಹಿತಾ, ತತ್ಪರಿಹಾರಃ ಕಥಂ?

ಶ್ರೀ ರೇಣುಕಃ-ಭೋ ಚೋಳ! ತತ್ಪರಿಹಾರಸ್ಸಮ್ಯಕ್ಛ್ರೂಯತಾಂ, "
ಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ" ಇತಿ ಋಗ್ವೇದವಾಕ್ಯಾ

---

ತನ್ನನ್ನನುಸರಿಸತಕ್ಕವರಿಗೆ ನರಕವನ್ನುಂಟುಮಾಡುವವು. ಆ ವಿಷಯವು ಭಾಗವತದಲ್ಲಿ —
ತ್ವಿಕಪುರಾಣಗಳು ಮೋಕ್ಷದಾಯಕಗಳು. ರಾಜಸಪುರಾಣಗಳು ಸ್ವರ್ಗಭೋಗಪ್ರದಗಳು,
ಸಗಳೆನಿಸಿದ ಮಿಕ್ಕಪುರಾಣಗಳು ನರಕಪ್ರದಗಳು ಎಂದು ಹೇಳಲ್ಪಟ್ಟವು.' ಎಂದು ಹೇಳಲ್ಪ

ಎಂಬಲ್ಲಿಗೆ ಪರಮಾಪ್ತನಾದ ರುದ್ರನಿಗೆ ಸಾತ್ವಿಕತ್ವನಿರ್ಣಯವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.

### ಶಿವನದೆಸೆಯಿಂದ ಸಕಲವೇದೋತ್ಪತ್ತಿವಿಧಿಯು.

ಚೋ—ಎಲೈ ರೇಣುಕನೇ! "ವಿಷ್ಣುವು ಯಜ್ಞಸ್ವರೂಪನು" ಎಂದು ಹೇಳುವ
ಗ್ಯಜುರ್ವೇದಗಳ ವಾಕ್ಯಗಳಿರುವುದರಿಂದಲೂ, ಆ ಯಜ್ಞಸ್ವರೂಪನಾದ ನಾರಾಯಣ
ಯಿಂದ ಋಕ್ಸಾಮಾಥರ್ವಣ ವೇದಮಂತ್ರಗಳು ಹುಟ್ಟಿದವು" ಎಂದು ಹೇಳುವ ಯಾಜು
ಪುರುಷಸೂಕ್ತವಚನವಿರುವುದರಿಂದಲೂ ಯಜ್ಞನಾರಾಯಣನಿಗೆ ಸಾತ್ವಿಕತ್ವವೂ ಆತನದೆಸೆ
ವೇದಗಳ ಉತ್ಪತ್ತಿಯು ಹೇಳಲ್ಪಟ್ಟಿತು. ಅದಕ್ಕೆ ಪರಿಹಾರವು ಹೇಗೆ ಹೇಳು;

ರೇ— ಎಲೈ ಚೋಳನೇ! ಅದಕ್ಕೆ ಪರಿಹಾರವನ್ನು ಲೇಸಾಗಿ ಕೇಳು; "ಯಜ್ಞ
ತಿಯಾದ ಅಗ್ನಿಸ್ವರೂಪನಾದ ರುದ್ರನನ್ನು ಸ್ತುತಿಸುತ್ತೇನೆ" ಎಂದು ಹೇಳುವ ಋಗ್ವೇದ

ಯಜ್ಞನಾರಾಯಣೋ ಭೃತ್ಯರೂಪೇಣ ಯಜತಿ ಪೂಜಯತಿ ರುದ್ರಮಿತಿ ಯಜಃ ಇತಿ ವಿಗ್ರಹಃ. ಅರ್ಶಾದಿಭ್ಯೋಽಜಿತಿ ಅಚ್ಪ್ರತ್ಯಯಃ. ಯಜ್ಞನಾರಾಯಣಾಧೀಶೋ ರುದ್ರ ಏಕ ಏವ ಯಜ್ಞಶಬ್ದವಾಚ್ಯಃ, ತಸ್ಮಾತ್ಸರ್ವವೇದೋತ್ಪತ್ತಿರ್ನಿಶ್ಚಿತಾ, ತದುಕ್ತಂ ಋಗ್ವೇದೇ,—"ಗಾಥಪತಿಂ ಮೇಧಪತಿಂ ರುದ್ರಂ" ಯಜುರ್ವೇದೇ,—"ಆವೋ ರಾಜಾನಮಧ್ವರಸ್ಯ ರುದ್ರಂ" ಇತಿ. ತದುಕ್ತಮಾದಿತ್ಯಪುರಾಣೇ ಶಿವಸಹಸ್ರನಾಮಸ್ತೋತ್ರೇ,—ಶ್ರೀ ವಿಷ್ಣುಃ, "ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂತೋಽವಮೋಘವಿಕ್ರಮಃ" ಇತಿ. ಸ್ಕಾಂದೇ ಸೂತಸಂಹಿತಾಯಾಂ ಜ್ಞಾನಯೋಗಖಂಡೇ,—"ನಾಮತಶ್ಚಾರ್ಥತೋ ಯಸ್ತು ಮಹಾದೇವೋ ಮಹೇಶ್ವರಃ ॥ ಸ ಏವ ಸಾಂಬಸ್ಸರ್ವಜ್ಞೋ ಯಜ್ಞ್ಯಸ್ಸರ್ವಮಹಾಮಖೈಃ" ಇತಿ. ಯಜುರ್ವೇದಾರಣ್ಯೇ ಪುರುಷಸೂಕ್ತೇ,—"ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್" ವೇದಪಾದಸ್ತವೇ,—"ಸರ್ವಜ್ಞಂ ಸರ್ವಗಂ ಶರ್ವಂ ಕವಿಂ ವಂದೇ ತಮೀಶ್ವರಂ ॥ ಯತಶ್ಚ ಯಜುಷಾ ಸಾರ್ಧಂ ಋಚಸ್ಸಾಮಾನಿ ಜಜ್ಞಿರೇ" ಬೃಹದಾರಣ್ಯಕೋಪನಿಷದಿ,—"ಅರೇ ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತ

---

ವಿರುವುದರಿಂದ, ಯಜ್ಞನಾರಾಯಣನು ಸೇವಕನಾಗಿ ರುದ್ರನನ್ನು ಆರಾಧಿಸತಕ್ಕವನಾದ್ದರಿಂದ "ಯಜ್ಞಃ" ಎಂದು ಹೆಸರುಳ್ಳವನಾದನು. ಯಜ್ಞಶಬ್ದಕ್ಕೆ—"ಅರ್ಶಾದಿಭ್ಯೋಽಚ್" ಎಂಬ ಪಾಣಿನೀಯ ಸೂತ್ರದಿಂದ ಅಚ್ಪ್ರತ್ಯಯವು ಬಂದಿರುತ್ತದೆ. ಈ ಯಜ್ಞ[illegible]ನಿಗೊಡೆಯನಾದ ರುದ್ರನೊಬ್ಬನೇ ಯಜ್ಞಶಬ್ದವಾಚ್ಯನು, ಆ ರುದ್ರನದೆಸೆಯಿಂದಲೇ ಸರ್ವವೇದಗಳ ಉತ್ಪತ್ತಿಯು ನಿಶ್ಚೈಸಲ್ಪಟ್ಟಿತು. ಆ ವಿಷಯವು ಋಗ್ವೇದದಲ್ಲಿ—"ಗಾಥಪತಿಯೂ, ಮೇಧಪತಿಯೂ ಆದ ರುದ್ರನನ್ನು" ಎಂದೂ, ಯಜುರ್ವೇದದಲ್ಲಿ—"ಯಜ್ಞಕ್ಕಧಿಪತಿಯಾದ ರುದ್ರನನ್ನು" ಎಂದೂ ಉಕ್ತವಾಗಿದೆ. ಆ ವಿಷಯವೇ ಆದಿತ್ಯಪುರಾಣದಲ್ಲಿರುವ ಶಿವಸಹಸ್ರನಾಮಸ್ತೋತ್ರದಲ್ಲಿ—"ಯಜ್ಞಸ್ವರೂಪನೂ, ಯಜ್ಞಪತಿಯೂ" ಎಂದು ಶ್ರೀವಿಷ್ಣುವಿನಿಂದುಕ್ತವಾಗಿದೆ. ಜ್ಞಾನಯೋಗಖಂಡದಲ್ಲಿ—"ಯಾವನು ಹೆಸರಿನಿಂದಲೂ, ಅರ್ಥದಿಂದಲೂ ಮಹಾದೇವನೂ, ಮಹೇಶ್ವರನೂ ಆಗಿರುತ್ತಾನೋ, ಪಾರ್ವತೀಸಹಿತನಾದ ಆತನೇ ಸರ್ವಜ್ಞನೂ, ಸಮಸ್ತ ಮಹಾಯಜ್ಞಗಳಿಂದ ಆರಾಧಿಸಲ್ಪಡುವುದಕ್ಕೆ ಯೋಗ್ಯನೂ ಆಗಿರುತ್ತಾನೆ" ಎಂದೂ, ಪುರುಷಸೂಕ್ತದಲ್ಲಿ—"ದೇವತೆಗಳು ಯಜ್ಞಶಬ್ದವಾಚ್ಯನಾದ ರುದ್ರನನ್ನು ಪೂಜಾದ್ರವ್ಯಗಳಿಂದ ಪೂಜಿಸಿದರು" ಎಂದೂ ಹೇಳಲ್ಪಟ್ಟಿದೆ. ವೇದಪಾದಸ್ತವದಲ್ಲಿ—"ಯಾವನಿಂದ ಋಗ್ಯಜುಸ್ಸಾಮಾಥರ್ವಣ ವೇದಗಳು ಹುಟ್ಟಿದವೋ, ಆ ಕಾರಣದಿಂದ ಸರ್ವಜ್ಞನೂ, ಸರ್ವವ್ಯಾಪಕನೂ, ಸಂಹಾರಕತ್ವಾಧಿಪತಿಯೂ, ಕವಿಯೂ ಆದ ಆ ಈಶ್ವರನನ್ನು ನಮಿಸುತ್ತೇನೆ" ಎಂದುಕ್ತವಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ—"ನಾಲ್ಕುವೇದಗಳು ಶಿವನ ನಿಶ್ವಾಸವು" ಎಂದು ಹೇಳಲ್ಪಟ್ಟಿದೆ. ಪದ್ಮಪುರಾಣದಲ್ಲಿ—

ದೃಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವವೇದಇತಿ '' ಪಾದ್ಮೇ,— ಮದ್ವಚನಂ, '' ಯಸ್ಯದೇವಸ್ಯ ನಿಶ್ವಾಸಾದ್ವೇದಾಸ್ಸಾಂಗಾಸ್ಸಸೂತ್ರಗಾಃ || ಸ್ತುತಿಃ ಪ್ರಮುದೇ ತಸ್ಯ ಭಕ್ತ್ಯಾಽಹಂ ಮುಖರೋಽಭವಂ '' ಬ್ರಹ್ಮೋತ್ತರ ಶಿವಕವಚಸ್ತೋತ್ರೇ,—ವೃಷಭಯೋಗಿವಾಕ್ಯಂ, '' ಜಿಹ್ವಾಂ ಸದಾ ರಕ್ಷತು ಜಿಹ್ವಃ '' ಇತಿ. ಮಾನವಪುರಾಣೇ,—'' ವೇದಏವ ಸಮಸ್ತಸ್ಯ ಮಾನಂ ಸಾ ಕ್ಷನಾತನಃ || ಪ್ರಾಮಾಣ್ಯಂ ತಸ್ಯ ವೇದಸ್ಯ ಸ್ವತಏವ ನ ಚಾನ್ಯತಃ || ಸ್ಮೃ ಪುರಾಣಾನಿ ಭಾರತಾದೀನಿ ಸತ್ತಮಾಃ || ವೇದಮಾನತಯಾ ಮಾನಂ ನ ಸ್ವ ತಯಾ ಸದಾ '' ತಥಾ ಪೂರ್ವಮೀಮಾಂಸಾಸೂತ್ರೇ,—'' ತತ್ಪ್ರಮಾಣಂ ರಾಯಣಸ್ಯಾವಿಶಂಕಿತತ್ವಾತ್ '' ತಥಾ ಸ್ಕಾಂದೇ ಸೂತಸಂಹಿತಾಯಾಂ ಯಜ್ಞ ಭವಖಂಡೇ,—'' ಅನೇಕಭೇದಭಿನ್ನಾನಿ ತಥಾ ಶಾಸ್ತ್ರಾಂತರಾಣಿ ಚ || ಮೇ ಶಂಕರಸ್ಸಾಕ್ಷಾತ್ಸರ್ವಜ್ಞಸ್ಸಂಗ್ರಹೇಣ ಸಃ || ಪ್ರಸಾದಾದೇವ ರುದ್ರಸ್ಯ ಬ್ರಹ್ಮಾದಯಸ್ಸುರಾಃ || ಕುರ್ವಂತಿ ತಾನಿ ನಾಮಾನಿ ಕಥಿತಾನಿ ಮಹಾತ್ಮನಾ ಇತ್ಯಾದಿ ಪ್ರಸಿದ್ಧಂ. ಇತಿ ಸರ್ವಯಜ್ಞಾಧೀಶೇನ ಸರ್ವೇಶ್ವರೇಣ ಸರ್ವವೇ ತ್ಪತ್ತಿಃ ಪ್ರತಿಪಾದಿತಾ.

---

''ಯಾವ ಶಿವನ ನಿಶ್ವಾಸದದೆಸೆಯಿಂದ ವೇದಗಳು ಹುಟ್ಟಿದವೋ, ಆ ಮಹಾದೇವನನ್ನು ತೋಷಪಡಿಸುವುದಕ್ಕಾಗಿ ಯಾವಸ್ತೋತ್ರವೂ ಇಲ್ಲವು. ಆದರೆ ನಾನು ಭಕ್ತಿಯಿಂದ ಸ್ತು ನು,, ಎಂದು ಹನುಮಂತನಿಂದ ಹೇಳಲ್ಪಟ್ಟಿದೆ. ಸ್ಕಾಂದಪುರಾಣಾಂತರ್ಗತವಾದ ಬ್ರಹ್ಮ ರಖಂಡದಲ್ಲಿರುವ ಶಿವಕವಚಸ್ತೋತ್ರದಲ್ಲಿ—''ವೇದಗಳೇ ನಾಲಿಗೆಯಾಗುಳ್ಳ ಶಿವನು ನಾ ಲಿಗೆಯನ್ನು ಯಾವಾಗಲೂ ರಕ್ಷಿಸಲಿ,, ಎಂದು ವೃಷಭಯೋಗಿಯಿಂದ ಹೇಳಲ್ಪಟ್ಟಿದೆ. ಮಾ ಪುರಾಣದಲ್ಲಿ—''ಪ್ರಾಚೀನವಾದ ವೇದವೇ ಸಾಕ್ಷಾತ್ತಾಗಿ ಸರ್ವರಿಗೂ ಪ್ರಮಾಣವಾ ಆ ವೇದವು ಅನ್ಯಸಾಹಾಯ್ಯವನ್ನಪೇಕ್ಷಿಸದೆ ಸ್ವಯಂ ಪ್ರಮಾಣವಾದುದೆಂದೊಪ್ಪಬೇಕು. ತಿಗಳೂ ಭಾರತ ಮೊದಲಾದ ಪುರಾಣಗಳೂ ವೇದಪ್ರಾಮಾಣ್ಯವನ್ನಂಗೀಕರಿಸಿರುವುದರಿಂ ಪ್ರಮಾಣವಾಗಿರುತ್ತವೆಯಲ್ಲದೆ ಸ್ವತಃ ಪ್ರಮಾಣವಾಗಿಲ್ಲವು,, ಎಂದು ಮನುವಿನಿಂದ ಹೇ ಟ್ಟಿದೆ. ಪೂರ್ವಮೀಮಾಂಸಾಸೂತ್ರದಲ್ಲಿ—''ವ್ಯಾಸಮಹರ್ಷಿಗೆ ವೇದಪ್ರಾಮಾಣ್ಯವನ್ನಂಗೀ ಸುವುದರಲ್ಲಿ ಸಂಶಯವಿಲ್ಲದಿರುವುದರಿಂದ ಆ ವೇದವು ಪ್ರಮಾಣವಾಗಿದೆ,, ಎಂದು ಜೈಮಿನಿ ದುಕ್ತವಾಗಿದೆ. ಯಜ್ಞವೈಭವಖಂಡದಲ್ಲಿ—''ಸರ್ವಜ್ಞನಾದ ಆ ಶಿವನು—ವೇದಗಳನ್ನು ಕಭೇದವುಳ್ಳವುಗಳನ್ನಾಗಿ ಮಾಡಿದಂತೆ, ಇತರ ಶಾಸ್ತ್ರಗಳನ್ನೂ ಸಂಕ್ಷೇಪದಿಂದ ಅನೇಕ ಳ್ಳವುಗಳನ್ನಾಗಿ ಮಾಡಿದನು. ಆ ಶಿವನ ಅನುಗ್ರಹದದೆಸೆಯಿಂದಲೇ ವಿಷ್ಣು ಬ್ರಹ್ಮಾದಿ ಗಳು—ಆ ಶಿವನಿಂದ ಹೇಳಲ್ಪಟ್ಟ ಆಯಾನಾಮಗಳುಳ್ಳ ಶಾಸ್ತ್ರಗಳನ್ನು ರಚಿಸಿದರು,, ಹೇಳಲ್ಪಟ್ಟಿದೆ. ಇತ್ಯಾದಿ ವಚನವು ಪ್ರಸಿದ್ಧವಾಗಿದೆ.

ಹೇ ಚೋಳ! ದಕ್ಷಾಧ್ವರೇ ವೀರಭದ್ರೇಶ್ವರೇಣ ಭಗವತಾ ಯಜ್ಞನಾರಾಯಣಶಿರೋಭೇದನವಿಧಿಃ ಶ್ರೂಯತಾಂ, ಯಜುರ್ವೇದೇ ಶ್ರೀರುದ್ರೇ,— "ನಮಶ್ಶೂರಾಯ ಚಾವಭಿಂದತೇ ಚ" ಇತಿ. ತದುಕ್ತಂ ಶೈವೇ ವಾಯವೀಯಸಂಹಿತಾಯಾಂ,— "ವೀರಭದ್ರೋ ಮಹಾತೇಜಾ ಹಿಮಕುಂದೇಂದುಸನ್ನಿಭಃ ॥ ಭದ್ರಕಾಳಿಪ್ರಿಯೋ ನಿತ್ಯಂ ಮಾತೃಣಾಮಭಿರಕ್ಷಕಃ ॥ ಯಜ್ಞಸ್ಯ ಚ ಶಿರೋಹರ್ತಾ ದಕ್ಷಸ್ಯ ಚ ದುರಾತ್ಮನಃ ॥ ಉಪೇಂದ್ರೇಂದ್ರಾನಲಾದೀನಾಂ ದೇವಾನಾಮಂಗತಕ್ಷಕಃ" ಇತಿ. ತಕ್ಷೂ ತ್ವಕ್ಷೂ ತನೂಕರಣೇ ಇತಿಧಾತೋಃ ತಕ್ಷಶಬ್ದೋ ನಿಷ್ಪನ್ನಃ ಸ್ವಾರ್ಥೇಽನ್ಪ್ರತ್ಯಯಃ. ಇತ್ಯಾದಿವಾಕ್ಯೈರ್ಯಜ್ಞನಾರಾಯಣಶಿರಚ್ಛೇದನವಿಧಿರ್ವಿಜ್ಞೇಯಃ.

ಹೇ ಚೋಳ! ಪರಮೇಶ್ವರಪ್ರಣೀತಸರ್ವಶಾಸ್ತ್ರಪ್ರಾಮಾಣ್ಯಂ ಶ್ರೂಯತಾಂ, ಶಿವಧರ್ಮೋತ್ತರೇ,—ಕುಮಾರಃ, "ಅತೀತಾಶೇಷದೋಷೇಣ ಸರ್ವಜ್ಞೇನ ಶಿವೇನ ಯತ್ ॥ ಪ್ರಣೀತಮಮಲಂ ವಾಕ್ಯಂ ತತ್ಪ್ರಮಾಣಂ ನ ಸಂಶಯಃ ॥ ತಸ್ಮಾದೀಶ್ವರವಾಕ್ಯಾನಿ ಶ್ರದ್ಧೇಯಾನಿ ವಿಪಶ್ಚಿತಾ ॥ ಯಥಾರ್ಥಂ ಪುಣ್ಯಪಾಪೇಷು ತಥಾಶ್ರ

---

ಈಪ್ರಕಾರವಾಗಿ ಯಜ್ಞಾಧಿಪತಿಯಾದ ಶಿವನಿಂದ ಸರ್ವವೇದೋತ್ಪತ್ತಿಯುಂಟಾಯಿತೆಂದು ನಿರೂಪಿಸಲ್ಪಟ್ಟಿತು. ಎಲೈ ಚೋಳನೇ! ದಕ್ಷಯಾಗದಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ವೀರಭದ್ರಸ್ವಾಮಿಯು ವಿಷ್ಣುಶಿರಶ್ಛೇದವನ್ನು ಮಾಡಿದ ಸಂಗತಿಯನ್ನು ಕೇಳು; ಶ್ರೀರುದ್ರದಲ್ಲಿ— "ವಿಷ್ಣುವಿನ ಮತ್ತು ದಕ್ಷ ಮೊದಲಾದವರ ತಲೆಯನ್ನು ಕತ್ತರಿಸಿದ ವೀರಭದ್ರನಿಗೋಸ್ಕರ ನಮಸ್ಕಾರವು" ಎಂದುಕ್ತವಾಗಿದೆ. ಆ ವಿಷಯವು ವಾಯವೀಯಸಂಹಿತೆಯಲ್ಲಿ— "ಹಿಮದೊಡನೆಯೂ, ಮೊಲ್ಲೆಹೂವಿನೊಡನೆಯೂ, ಚಂದ್ರನೊಡನೆಯೂ ಸಮಾನವಾದ ಸಾತ್ವಿಕದೇಹವುಳ್ಳವನಾದ, ಮಹಾತೇಜಸ್ವಿಯಾದ, ಸಪ್ತಮಾತೃಕೆಯರಂ ರಕ್ಷಿಸತಕ್ಕವನಾದ, ಭದ್ರಕಾಳೀದೇವಿಗೆ ಪ್ರಿಯನಾದ ವೀರಭದ್ರೇಶ್ವರನು ದುರಾತ್ಮನಾದ ಯಜ್ಞನಾರಾಯಣನ ಶಿರಸ್ಸನ್ನೂ ಮತ್ತು ದುಷ್ಟನಾದ ದಕ್ಷನ ಶಿರಸ್ಸನ್ನೂ ಕತ್ತರಿಸಿದವನೂ, ವಿಷ್ಣು ಇಂದ್ರ ಅಗ್ನಿ ಮೊದಲಾದ ದೇವತೆಗಳ ಅವಯವಗಳನ್ನು ಕೆತ್ತಿದವನೂ ಆಗಿರುತ್ತಾನೆ" ಎಂದು ಹೇಳಲ್ಪಟ್ಟಿದೆ. ["ತಕ್ಷೂ ತ್ವಕ್ಷೂ ತನೂಕರಣೇ" ಎಂಬ ಧಾತುವಿನಿಂದ ತಕ್ಷಶಬ್ದವು ನಿಷ್ಪನ್ನವಾಗಿರುತ್ತದೆ. ಇಲ್ಲಿ ಸ್ವಾರ್ಥದಲ್ಲಿ "ಅನ್" ಪ್ರತ್ಯಯವು ಬಂದಿದೆ.] ಇತ್ಯಾದಿ ವಚನಗಳಿಂದ ಯಜ್ಞನಾರಾಯಣನ ಶಿರಚ್ಛೇದನ ವಿಧಿಯನ್ನು ತಿಳಿಯಬೇಕು. ಎಲೈ ಚೋಳನೇ! ಪರಶಿವನಿಂದುಕ್ತವಾದ ಸಕಲಶಾಸ್ತ್ರಗಳಿಗೆ ಪ್ರಾಮಾಣ್ಯವನ್ನು ಹೇಳುವೆವು ಕೇಳು; ಶಿವಧರ್ಮೋತ್ತರದಲ್ಲಿ— "ಸರ್ವದೋಷಾತೀತನೂ, ಸರ್ವಜ್ಞನೂ ಆದ ಶಿವನಿಂದ ಯಾವ ವೇದಾಗಮರೂಪವಾದ ವಾಕ್ಯಸಮೂಹವು ಹೇಳಲ್ಪಟ್ಟಿತೋ, ಅದು ಪ್ರಮಾಣವು. ಈ ವಿಷಯದಲ್ಲಿ ಸಂದೇಹವಿಲ್ಲವು. ಆದ್ದರಿಂದ ಈಶ್ವರನ ವಾಕ್ಯಗಳು ವಿದ್ವಾಂಸರ ನಂಬಿಕೆಗೆ ಯೋಗ್ಯಗಳಾಗಿರುತ್ತವೆ. ಪುಣ್ಯ ಪಾಪಗಳುಂಟೆಂದು ನಂಬದವನು—

ದ್ಧೋ ವ್ರಜತ್ಯಧಃ" ಭಗವದ್ಗೀತಾಯಾಂ,—ಶ್ರೀಕೃಷ್ಣಃ, "ಅಜ್ಞಶ್ಚಾಶ್ರದ್ದ
ನಶ್ಚ ಸಂಶಯಾತ್ಮಾ ವಿನಶ್ಯತಿ ||ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸ
ಶಯಾತ್ಮನಃ" ಇತ್ಯಾದಿವಾಕ್ಯೈಃ ಪರಮೇಶ್ವರಪ್ರಣೀತ ನಿಗಮಾಗಮಾದಿ ಸರ್ವ
ಸ್ತ್ರೇಷು ಶ್ರದ್ಧಾ ಕರ್ತವ್ಯಾ.

ಇತಿ ಶಂಭೋರ್ವೇದೋತ್ಪತ್ತಿವಿಧಿರ್ದ್ವಿತೀಯೋಪದೇಶೇ ತೃತೀಯಸ್ಸಂವಾದಃ.



ಶ್ರೀಸ್ಮರಹರಾಯನಮಃ.

## ಸರ್ವವೇದಪ್ರೋಕ್ತನ್ಯಾಯವಿಚಾರಃ.

ಚೋಳಃ—"ತ್ರೈವೇದ್ಯೈಸ್ಸಂಸ್ತುತಃ ಕೋ ವಾ ದೇವಾನಾಂ ಕೋ ವ
ದಃ || ತನ್ನಿರ್ಣಯಂ ತು ಕಥಯ ಶ್ರೀ ರೇಣುಕಗಣೇಶ ! ಮೇ"

ಶ್ರೀ ರೇಣುಕಃ—ಹೇ ಚೋಳ ! ಚತುರ್ಭಿರ್ವೇದೈಃ ಪ್ರತಿಪಾದಿತಂ ಶಿವಾ
ಕ್ಯಂ ಶ್ರೂಯತಾಂ, ಶಿವಸಂಕಲ್ಪೋಪನಿಷದಿ,—"ಯೋ ವೇದ ಉದಕಾ

---

ಸತ್ಯವಾಗಿಯೂ ಅಧೋಗತಿಯನ್ನು ಹೊಂದುವನು,, ಎಂದು ಕುಮಾರಸ್ವಾಮಿಯಿಂದ ಹೇ
ಸಲ್ಪಟ್ಟಿದೆ. ಭಗವದ್ಗೀತೆಯಲ್ಲಿ—"ಶಿವೋಕ್ತವಾದ ವೇದಾಗಮಗಳ ವಚನಗಳನ್ನು ತಿಳಿಯದ
ನೂ, ವೇದಾಗಮಪ್ರಾಮಾಣ್ಯದಲ್ಲಿ ನಂಬಿಕೆಯಿಲ್ಲದವನೂ, ಅವುಗಳ ವಿಷಯದಲ್ಲಿ ಸಂ
ಪಡತಕ್ಕವನೂ, ನಾಶವನ್ನೇ ಹೊಂದುವನು. ಸಂಶಯಾತ್ಮನಿಗೆ ಇಹಲೋಕ ಪರಲೋಕ ಸು
ಗಳಲ್ಲೊಂದೂ ದೊರಕುವುದಿಲ್ಲವು,, ಎಂದು ಶ್ರೀಕೃಷ್ಣನಿಂದ ಅರ್ಜುನನಿಗೆ ನಿರೂಪಿಸಲ್ಪ
ಇತ್ಯಾದಿ ವಚನಗಳಿರುವುದರಿಂದ ಪರಮೇಶ್ವರನಿಂದುಕ್ತವಾದ ವೇದಾಗಮಾದಿ ಸರ್ವಶಾಸ್ತ್ರಗ
ನಂಬಿಕೆಯನ್ನಿಡಬೇಕು.

ಎಂಬಲ್ಲಿಗೆ ಶಿವನದೆಸೆಯಿಂದ ವೇದೋತ್ಪತ್ತಿವಿಧಿಯನ್ನು ಹೇಳುವ ಎರಡನೆಯ ಉಪದೇಶದ
ಮೂರನೆಯ ಸಂವಾದವು ಮುಗಿದುದು.



## ಸರ್ವವೇದಪ್ರೋಕ್ತನ್ಯಾಯವಿಚಾರವು.

ಚೋ—ಎಲೈ ರೇಣುಕಗಣೇಶನೇ ! ಆ ವೇದಗಳಿಂದ ಸ್ತುತಿಸಲ್ಪಡುತ್ತಿರುವವನಾವ
ದೇವತೆಗಳಿಗೆ ವರವನ್ನಿತ್ತವನಾವನು ? ಆ ವಿಚಾರದಲ್ಲಿ ಯಥಾರ್ಥವನ್ನು ನನಗೆ ಹೇಳು;

ರೇ—ಎಲೈ ಚೋಳನೇ ! ನಾಲ್ಕುವೇದಗಳಿಂದ ಪ್ರತಿಪಾದಿಸಲ್ಪಟ್ಟಿರುವ ಶಿವಾಧಿಕ್ಯ
ಕೇಳು; ಶಿವಸಂಕಲ್ಪೋಪನಿಷತ್ತಿನಲ್ಲಿ—"ಸಕಲ ಲೋಕಗಳಿಗೊಡೆಯನಾದ ಯಾವ ಶಿವನು

ಯತೇ ಸರ್ವಲೋಕಮಹೇಶ್ವರಃ || ಋಗ್ಯಜುಸ್ಸಾಮಾಥರ್ವೈಶ್ಚ ತನ್ಮೇ ಮನಶ್ಶಿವಸಂಕಲ್ಪಮಸ್ತು '' ಪಾದ್ಮೇ ಶಿವರಾಘವಸಂವಾದೇ,—ಶಿವಃ, ,, ಯೋಗಿನಸ್ಸನಕಾದ್ಯಾಸ್ತು ಯೋಗಮಾಸ್ಥಾಯ ಯತ್ನತಃ || ಧ್ಯಾಯಂತಿ ಯತ್ಪರಂ ತೇಜಸ್ತದಿದಂ ಪಶ್ಯ ರಾಘವ || ಚತುರಃ ಪಶ್ಯ ವೇದಾಂಶ್ಚ ಸ್ತುವತಃ ಪರಮಂ ಶಿವಂ '' ಸ್ಕಾಂದೇ ಕಾಶಿಕಾಖಂಡೇ,—ಬ್ರಹ್ಮನಾರಾಯಣಾವುದ್ದಿಶ್ಯರುದ್ರಾಧಿಕ್ಯಂ ವೇದಾ ಊಚುಃ, ,,ಯದಿ ಮಾನ್ಯಾ ವಯಂ ದೇವೌ ಸೃಷ್ಟಿಸ್ಥಿತಿಕರೌ ವಿಭೂ ||ತಥಾ ಪ್ರಮಾಣಂ ವಕ್ಷ್ಯಾಮೋ ಭವತ್ಸಂದೇಹಭೇದಕಂ '' ತೌ ಹರಿವಿರಿಂಚೀ ವೇದಾನ್ಪ್ರತ್ಯೂಚುಃ, ,, ಯುಷ್ಮದುಕ್ತಂ ಪ್ರಮಾಣಂ ನೌ ಕಿಂ ತತ್ವಂ ಸಮ್ಯಗುಚ್ಯತಾಂ '' ಋಗ್ವೇದಃ,-,,ಯದಂತಸ್ಥಾನಿ ಭೂತಾನಿ ಯತಸ್ಸರ್ವಂ ಪ್ರವರ್ತತೇ || ಯದಾಹುಸ್ತತ್ಪರಂ ತತ್ವಂ ಸ ರುದ್ರಸ್ತ್ವೇಕ ಏವ ಹಿ '' ಯಜುರ್ವೇದಃ,— ,, ಯೋ ಯಜ್ಞೈರಖಿಲೈರೀಶೋ ಯೋಗೇನ ಚ ಸಮಿಜ್ಯತೇ || ಯೇನ ಪ್ರಮಾಣಂ ಹಿ ವಯಂ ಸ ಏಕಸ್ಸರ್ವದೃಕ್ಛಿವಃ '' ಸಾಮವೇದಃ,—,, ಯೇನೇದಂ ಭ್ರಾಮ್ಯತೇ ವಿಶ್ವಂ ಯೋಗಿಭಿರ್ಯೋ ವಿಚಿಂತ್ಯತೇ ||

---

ಪ್ರಾಣಿಗಳ ಹೃದಯಕಮಲದಿಂದಲೂ, ನಾಲ್ಕು ವೇದಗಳಿಂದಲೂ ರಕ್ಷಿಸಲ್ಪಡುತ್ತಾನೋ, ಆ ಪರಬ್ರಹ್ಮವು ನನ್ನ ಮನಸ್ಸಿಗೆ ಮಂಗಳಕರವಾದ ಸಂಕಲ್ಪವನ್ನುಂಟುಮಾಡಲಿ,, ಎಂದುಕ್ತವಾಗಿದೆ. ಪದ್ಮಪುರಾಣದ ಶಿವರಾಘವಸಂವಾದದಲ್ಲಿ —,,ಎಲೈ ರಾಮನೇ ! ಸನಕ, ಸನಂದನ ಮೊದಲಾದ ಮಹರ್ಷಿಗಳು ಯಮನಿಯಮಾದ್ಯಷ್ಟಾಂಗ ಯೋಗಬಲದಿಂದ ಬಹು ಪ್ರಯತ್ನಪೂರ್ವಕವಾಗಿ ಯಾವತೇಜಸ್ಸನ್ನು ಧ್ಯಾನಮಾಡಿದರೋ, ಅದೇ ಇದು ನೋಡು, ಪರಮಶಿವನಾದ ನನ್ನನ್ನು ಸ್ತುತಿಸುತ್ತಿರುವ ನಾಲ್ಕು ವೇದಗಳನ್ನೂ ನೋಡು,, ಎಂದು ಶಿವನಿಂದುಕ್ತವಾಗಿದೆ. ಸ್ಕಾಂದದಲ್ಲಿರುವ ಕಾಶಿಕಾಖಂಡದಲ್ಲಿ —,,ಸೃಷ್ಟಿಸ್ಥಿತಿಗಳನ್ನು ಮಾಡುವ ಎಲೈ ಬ್ರಹ್ಮವಿಷ್ಣುಗಳಿರಾ ! ನಮ್ಮನ್ನು ಮಾನ್ಯರನ್ನಾಗಿ ನೀವಿಬ್ಬರೂ ತಿಳಿದುಕೊಂಡಿದ್ದರೆ, ನಿಮಗುಂಟಾಗಿರುವ ಸಂದೇಹವನ್ನು ಪರಿಹರಿಸುವ ಪ್ರಮಾಣವನ್ನು ಹೇಳುವೆವು ಕೇಳಿರಿ,, ಎಂದು ಬ್ರಹ್ಮನಾರಾಯಣರನ್ನು ಕುರಿತು ವೇದಗಳಿಂದ ಹೇಳಲ್ಪಟ್ಟಿತು. ಆಗ್ಗೆ ಆ ಬ್ರಹ್ಮ ವಿಷ್ಣುಗಳಿಂದ (ವೇದಗಳನ್ನು ಕುರಿತು) ಎಲೈ ವೇದಗಳೇ ! ನೀವು ಹೇಳಿದುದು ನಮಗೆ ಪ್ರಮಾಣವಾದ್ದರಿಂದ ಯಥಾರ್ಥವನ್ನು ಚೆನ್ನಾಗಿ ಹೇಳಿರಿ, ಎಂದು ಹೇಳಲ್ಪಟ್ಟಿತು. ಋಗ್ವೇದದಲ್ಲಿ —,,ಯಾವನ ಉದರದಲ್ಲಿ ಸಮಸ್ತಪ್ರಾಣಿಗಳು ಇರುತ್ತವೋ, ಯಾವನದೆಸೆಯಿಂದ ಸಮಸ್ತ ಜಗತ್ತು ಉಂಟಾಗುತ್ತದೋ, ಯಾವುದನ್ನು ಪರತತ್ವವನ್ನಾಗಿ ಹೇಳುತ್ತಾರೋ, ಆ ರುದ್ರನು ಅದ್ವಿತೀಯನೇ ಹೌದು,, ಎಂದೂ, ಯಜುರ್ವೇದದಲ್ಲಿ—,,ಯಾವ ಈಶನು ಸಕಲ ಯಜ್ಞಗಳಿಂದಲೂ, ಯೋಗಗಳಿಂದಲೂ ಆರಾಧಿಸಲ್ಪಡುತ್ತಾನೋ, ಯಾವನಿಂದಲೇ ನಾವು ಪ್ರಮಾಣರಾಗಿರುತ್ತೇವೋ, ಆತನೊಬ್ಬನೇ ಸರ್ವಜ್ಞನಾದ ಶಿವನು,, ಎಂದೂ, ಸಾಮವೇದದಲ್ಲಿ —,,ಯಾವನಿಂದ ಈ ಮಾಯಾ ಪ್ರಪಂಚವು ಗಾಲಿಯಂತೆ

ಯದ್ಭಾಸಾ ಭಾಸತೇ ವಿಶ್ವಂ ಸ ಏಕಸ್ತ್ರ್ಯಂಬಕಃ ಪರಃ'' ಅಥರ್ವಣಃ,—''ಯಂ ಪ್ರಪಶ್ಯಂತಿ ದೇವೇಶಂ ಭಕ್ತಾನುಗ್ರಾಹಿಣಂ ಜನಾಃ ॥ ತಮಾಹುರೇಕಂ ಕೈವಲ್ಯಂ ಶಂಕರಂ ದುಃಖತಸ್ಕರಂ'' ಪ್ರಣವಸ್ತು,—''ಅಸೌ ಹಿ ಭಗವಾನೀಶಸ್ಸ್ವಯಂ ಜ್ಯೋತಿಸ್ಸನಾತನಃ ॥ ಆನಂದರೂಪಾತಸ್ಯೈಷಾ ಶಕ್ತಿರ್ನಾಗಂತುಕೀ ಶಿವಾ'' ಶ್ವೇತಾಶ್ವತರೋಪನಿಷದಿ,—''ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ ॥ ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ ॥ ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ॥ ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ''

ಇತಿ ಬ್ರಹ್ಮನಾರಾಯಣಾವುದ್ದಿಶ್ಯ ಸರ್ವವೇದಪ್ರೋಕ್ತನ್ಯಾಯವಿಚಾರೋ ದ್ವಿತೀಯೋಪದೇಶೇ ಚತುರ್ಥಸ್ಸಂವಾದಃ.

---

ಸ್ತುತಿಸಲ್ಪಡುತ್ತಿದೆಯೋ, ಯಾವನು ಯೋಗಿಗಳಿಂದ ಧ್ಯಾನಿಸಲ್ಪಡುತ್ತಾನೋ, ಯಾವನ ತೇಜಸ್ಸಿನಿಂದ ಪ್ರಪಂಚವು ಪ್ರಕಾಶಿಸುತ್ತಲಿದೆಯೋ, ಮುಕ್ಕಣ್ಣನಾದ ಆತನೊಬ್ಬನೇ ಶ್ರೇಷ್ಠನು ಎಂದೂ, ಅಥರ್ವಣವೇದದಲ್ಲಿ—''ಯಾವನನ್ನು ಜನರು ಭಕ್ತಾನುಗ್ರಾಹಕನನ್ನಾಗಿಯೂ, ಸಕಲದೇವತೆಗಳಗೊಡೆಯನನ್ನಾಗಿಯೂ, ತಿಳಿಯುತ್ತಾರೋ, ಆತನೊಬ್ಬನನ್ನೇ ಸಂಸಾರದುಃಖನಾಶಕನೂ, ಮುಕ್ತಿಪ್ರದನೂ ಆದ ಶಂಕರನನ್ನಾಗಿ ಹೇಳುವರು,, ಎಂದೂ ಹೇಳಲ್ಪಟ್ಟಿದೆ. ಪ್ರಣವದಿಂದ—''ಷಡ್ಗುಣೈಶ್ವರ್ಯಸಂಪನ್ನನಾದ ಈ ಶಿವನು, ನಿತ್ಯನೂ, ಸ್ವಯಂಪ್ರಕಾಶವಾನನೂ ಆಗಿರುತ್ತಾನೆ. ಆತನ ಆನಂದಸ್ವರೂಪಿಣಿಯೂ, ಸ್ವಭಾವಸಿದ್ಧವೂ ಆಗಿರುವ ಶಕ್ತಿಯೇ ಪಾರ್ವತಿಯು,, ಎಂದು ಹೇಳಲ್ಪಟ್ಟಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ — ''ಸಮಸ್ತಲೋಕಕ್ಕೊಡೆಯನೂ, ಸ್ತುತ್ಯನೂ ಆದ ಆ ಶಿವನನ್ನು ಈಶ್ವರರೊಳಗೆ ಅತಿಶಯವಾಗಿ ಶ್ರೇಷ್ಠನಾದ ಈಶ್ವರನನ್ನಾಗಿಯೂ, ದೇವತೆಗಳೊಳಗೆ ಶ್ರೇಷ್ಠವಾದ ದೇವತೆಯನ್ನಾಗಿಯೂ, ಪತಿಗಳೊಳಗೆ ಶ್ರೇಷ್ಠನಾದ ಪತಿಯನ್ನಾಗಿಯೂ ತಿಳಿಯುತ್ತೇವೆ. ಆತನಿಗೆ ಕಾರ್ಯಕಾರಣಗಳಿಲ್ಲವು. ಆತನೊಡನೆ ಸಮಾನನೂ, ಆತನಿಗಿಂತ ಶ್ರೇಷ್ಠನೂ ಇಲ್ಲವು. ಈತನ ಪರಾಖ್ಯವಾದ ನಿತ್ಯಸಮವೇತವಾದ ಶಕ್ತಿಯು ಸ್ವಭಾವಸಿದ್ಧವಾಗಿ, ಜ್ಞಾನಶಕ್ತಿಯೆಂದೂ, ಇಚ್ಛಾಶಕ್ತಿಯೆಂದೂ, ಕ್ರಿಯಾಶಕ್ತಿಯೆಂದೂ ನಾನಾವಿಧವಾಗಿರುತ್ತದೆ,, ಎಂದು ಹೇಳಲ್ಪಟ್ಟಿದೆ.

ಎಂಬಿಲ್ಲಿಗೆ ಬ್ರಹ್ಮನಾರಾಯಣರನ್ನುದ್ದೇಶಿಸಿ ಸರ್ವವೇದಗಳಿಂದ ಹೇಳಲ್ಪಟ್ಟಿರುವ ನ್ಯಾಯವಿಚಾರವಂ ಹೇಳುವ ಎರಡನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

ಶ್ರೀತ್ರ್ಯಂಬಕಾಯನಮಃ.

## ವೇದವರಪ್ರದಾನವಿಧಿಃ.

ಶ್ರೀರೇಣುಕಃ—ಭೋ ಜೋಳ! ವೇದಾನಾಂ ವರಪ್ರದಾನವಿಧಿಶ್ಶ್ರೂಯತಾಂ, ಕಠವಲ್ಲ್ಯುಪನಿಷದಿ,—“ ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ | ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ ” ಲೈಂಗೇ,—“ ವೇದಾಸ್ತು ಮೂರ್ತಿಮಂತಸ್ತೇ ಪ್ರಣೇಮುಸ್ತಂ ಮಹೇಶ್ವರಂ || ಬ್ರಹ್ಮಣಾಮುನಿಭಿಸ್ಸಾರ್ಧಂ ದೇವದೇವಮುಮಾಪತಿಂ ” ಆದಿತ್ಯಪುರಾಣೇ,—ದೇವಾನ್ಪ್ರತಿ ವೇದಪುರುಷಾ ರುದ್ರಾಧಿಕ್ಯಮೂಚುಃ, “ ಶೃಣ್ವಂತು ದೇವತಾ ಸ್ಸರ್ವಾಸ್ಸತ್ಯಮಸ್ಮತ್ಪರಂ ವಚಃ || ನಾಸ್ತಿ ರುದ್ರಾನ್ಮಹಾದೇವಾದಧಿಕಂ ದೈವತಂ ಪರಂ || ನ ಯಥಾ ಕೂರ್ಮರೋಮಾಣಿ ಶೃಂಗಂ ಚ ನರಮಸ್ತಕೇ || ನ ಯಥಾಸ್ತಿ ವಿಯತ್ಪುಷ್ಪಂ ನ ತಥಾಸ್ತಿ ಹರಾತ್ಪರಃ || (ತತ್ರ ಈಶ್ವರಉವಾಚ) “ ಮತ್ಪ್ರಸಾದಾದ್ಭವಿಷ್ಯಧ್ವಂ ಹೇ ವೇದಾ ಲೋಕಪೂಜಿತಾಃ || ಯುಷ್ಮಾನಾಶ್ರಿತ್ಯ ವಿಪ್ರೇಂದ್ರಾಃ ಕರ್ಮ ಕುರ್ವಂತು ನಾನ್ಯಥಾ || ಯೇ ತು ಯುಷ್ಮಾನನಾದೃತ್ಯ ಕರ್ಮ ಕುರ್ವಂತಿ ಮಾನವಾಃ || ನಿರಯೇ ತೇ ಪ್ರಪಂಚ್ಯಂತೇ ಯಾವದಿಂ

---

### ವೇದವರಪ್ರದಾನವಿಧಿಯು.

ರೇ—ಎಲೈ ಚೋಳನೇ! ವೇದಗಳಿಗೆ ವರವನ್ನು ಕೊಟ್ಟ ವಿಚಾರವಿಧಿಯನ್ನು ಕೇಳು; ಕಠವಲ್ಲಿಯಲ್ಲಿ—“ಸಮಸ್ತ ವೇದಗಳು ಯಾವ ವಸ್ತುವನ್ನು ತಿಳಿಯುತ್ತವೋ, ಸಕಲ ತಪಸ್ಸುಗಳು ಯಾವ ವಸ್ತುವನ್ನು ಹೇಳುತ್ತವೋ, ಯಾವ ವಸ್ತುವನ್ನಿಚ್ಛೈಸತಕ್ಕವರು ಬ್ರಹ್ಮಚರ್ಯವನ್ನಾಚರಿಸುತ್ತಾರೋ, ಅದನ್ನು ನಿನಗೆ ಸಂಗ್ರಹದಿಂದ ಹೇಳುವೆನು” ಎಂದುಕ್ತವಾಗಿರುತ್ತದೆ. ಲಿಂಗಪುರಾಣದಲ್ಲಿ—“ಆ ಪ್ರಸಿದ್ಧಗಳಾದ ವೇದಗಳು ಶರೀರಧಾರಿಗಳಾಗಿ ಬ್ರಹ್ಮನೊಡನೆಯೂ, ಮುನಿಗಳೊಡನೆಯೂ ಕೂಡಿ, ದೇವದೇವನೂ, ಉಮಾಪತಿಯೂ ಆದ ಆ ಮಹೇಶ್ವರನನ್ನು ನಮಿಸಿದವು” ಎಂದೂ, ಆದಿತ್ಯಪುರಾಣದಲ್ಲಿ—“ಎಲೈ ಸಮಸ್ತರಾದ ದೇವತೆಗಳಿರಾ! ಸತ್ಯವೂ ಶ್ರೇಷ್ಠವೂ ಆದ ನಮ್ಮ ಮಾತನ್ನು ಕೇಳಿ, ಮಹಾದೇವನಾದ ಶಿವನದೆಸೆಯಿಂದ ಉತ್ಕೃಷ್ಟವಾದ ಬೇರೆ ದೈವವಿಲ್ಲವು. ಆಮೆಗೆ ರೋಮಗಳಿಲ್ಲದಿರುವಂತೆ, ಮನುಷ್ಯನ ತಲೆಯ ಮೇಲೆ ಕೋಡಿಲ್ಲದಿರುವಂತೆ, ಆಕಾಶದಲ್ಲಿ ಪುಷ್ಪವಿಲ್ಲದಿರುವಂತೆ ಶಿವನಿಂದನ್ಯದೈವವಿಲ್ಲವು” ಎಂದು ವೇದಪುರುಷರು ದೇವತೆಗಳಿಗೆ ಹೇಳುವಾಗ್ಗೆ “ಎಲೈ ವೇದಪುರುಷರೇ! ನೀವು ನನ್ನ ಅನುಗ್ರಹದದೆಸೆಯಿಂದ ಲೋಕದಲ್ಲಿ ಪೂಜ್ಯರಾಗಿರಿ. ಬ್ರಹ್ಮರ್ಷಿಗಳು ನಿಮ್ಮನ್ನಾಶ್ರೈಸಿ ಸತ್ಕರ್ಮಗಳನ್ನಾಚರಿಸಲಿ. ಬೇರೊಂದು ರೀತಿಯಿಂದ ಬೇಡ. ನಿಮ್ಮನ್ನುಪೇಕ್ಷಿಸಿ ಕರ್ಮಗಳನ್ನಾಚರಿಸತಕ್ಕ

ಡ್ರಾಡಶತುರ್ದಶ || ಶ್ರೇಯಸೇ ತ್ರಿಷು ಲೋಕೇಷು ನ ವೇದಾದಧಿಕಂ ಪರಂ | ವಿದ್ಯತೇ ನಾತ್ರ ಸಂದೇಹ ಇತಿ ದತ್ತೋ ವರೋ ಮಯಾ'' ಮಾನವಪುರಾಣೇ,— ಮನುವಾಕ್ಯಂ, ,, ವೇದಾದನ್ಯತ್ರ ವೈ ಶಿಷ್ಯಂ ಯಃ ಪಶ್ಯತಿ ವಿಮೋಹಿತಃ | ಉತ್ಪತ್ತೌ ತಸ್ಯ ಸಾಂಕರ್ಯಂ ವಿದ್ಯತೇ ನ ಹಿ ಸಂಶಯಃ''

ಇತಿ ವೇದಾನಾಂ ವರಪ್ರದಾನನಿರ್ಣಯೋ ದ್ವಿತೀಯೋಪದೇಶೇ ಪಂಚಮಸ್ಸಂವಾದಃ



ಶ್ರೀತ್ರಿಪುರಾಂತಕಾಯನಮಃ.

## ವೈದಿಕಷಣ್ಮತಷಟ್ತಂತ್ರಷಡ್ದರ್ಶನಲಕ್ಷಣಂ.

ಚೋಳಃ—,, ವೈದಿಕಾನಾಂ ಷಣ್ಮತಾನಾಂ ಷಟ್ತಂತ್ರಾಣಾಂ ಚ ಲಕ್ಷಣಂ || ಬ್ರೂಹಿ ಮೇ ರೇಣುಕಾಚಾರ್ಯ ಸರ್ವದರ್ಶನಪಾರಗ ''

ಶ್ರೀರೇಣುಕಃ—ಭೋ ಚೋಳ! ಷಣ್ಮತಷಟ್ತಂತ್ರಷಡ್ದರ್ಶನಲಕ್ಷಣಂ ಸಂಕ್ಷೇಪತಶ್ಶ್ರೂಯತಾಂ, ಸರ್ವದರ್ಶನಸಿದ್ಧಾಂತೇ,— ,, ವಿದ್ಯಾಹ್ಯಷ್ಟಾದಶ ಪ್ರೋ...

---

ವರು ಹದಿನಾಲ್ಕುಮಂದಿ ಇಂದ್ರರು ಪಟ್ಟವಳ್ಳಾಳುವವರಿಗೂ ನರಕಾಗ್ನಿಯಲ್ಲಿ ಬೇಯುತ್ತಿರುವರು. ಮೂರು ಲೋಕಗಳಲ್ಲೂ ಶ್ರೇಯಸ್ಕರವಾದುದು ವೇದಕ್ಕಿಂತ ಬೇರೊಂದಿಲ್ಲವು. ಈ ವಿಷಯದಲ್ಲಿ ಸಂದೇಹವಿಲ್ಲವೆಂದು ನಾನು ವರವನ್ನು ಕೊಟ್ಟಿರುತ್ತೇನೆ'' ಎಂದು ಶಿವನಿಂದ ವಾಗಿದೆ. ಮಾನವಪುರಾಣದಲ್ಲಿ—,,ವೇದಾತಿರಿಕ್ತವಾದ ಶಾಸ್ತ್ರವನ್ನು ಅಜ್ಞಾನದಿಂದ ಶ್ರೇಷ್ಠವನ್ನಾಗಿ ತಿಳಿದವನ ಹುಟ್ಟುವಿಕೆಯಲ್ಲಿ ಸಾಂಕರ್ಯವಿರುತ್ತದೆಯೆನ್ನುವುದರಲ್ಲಿ ಸಂಶಯವಿಲ್ಲ'' ಎಂದು ಮನುವಿನಿಂದುಸರಲ್ಪಟ್ಟಿದೆ.

ಎಂಬಲ್ಲಿಗೆ ಶಿವನಿಂದ ವೇದಗಳಿಗೆ ವರಪ್ರದಾನವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲೈದನೆಯ ಸಂವಾದವು ಮುಗಿದುದು.



### ವೈದಿಕಷಣ್ಮತ ಷಟ್ತಂತ್ರ ಷಡ್ದರ್ಶನಲಕ್ಷಣವು.

ಚೋ— ಸಕಲಮತಸಿದ್ಧಾಂತಗಳನ್ನರಿತಿರುವ ಎಲೈ ರೇಣುಕಾಚಾರ್ಯನೇ! ವೈದಿಕವಾದ ಷಣ್ಮತಗಳ ಲಕ್ಷಣವನ್ನೂ, ಷಟ್ತಂತ್ರಗಳ ಲಕ್ಷಣವನ್ನೂ, ಷಡ್ದರ್ಶನಗಳ ಲಕ್ಷಣವನ್ನೂ ನನಗೆ ನಿರೂಪಿಸು.

ರೇ—ಎಲೈ ಚೋಳನೇ! ಷಣ್ಮತ ಷಟ್ತಂತ್ರ ಷಡ್ದರ್ಶನಗಳ ಲಕ್ಷಣವನ್ನು ಸಂಕ್ಷೇಪವಾಗಿ ಕೇಳು; ಸರ್ವದರ್ಶನಸಿದ್ಧಾಂತದಲ್ಲಿ—,,ವಿದ್ಯೆಗಳು ಹದಿನೆಂಟು ಬಗೆಯಾಗಿರುವವು

ವೈದಿಕಾಸ್ತತ್ರ ಷಣ್ಮತಾಃ || ಶಬ್ದತರ್ಕೌ ಸಾಂಖ್ಯಯೋಗೌ ಕರ್ಮಬ್ರಹ್ಮಮತೌ ಮತಾಃ || ಪಾಣಿನಿಶ್ಚ ಕಣಾದಶ್ಚ ಕಪಿಲಶ್ಚ ಪತಂಜಲಿಃ || ಜೈಮಿನಿರ್ವ್ಯಾಸ ಇತ್ಯೇತೇ ವೈದಿಕಾ ಮತಕಾರಕಾಃ|| ರುದ್ರಪ್ರಸಾದಸಂಯುಕ್ತಾಃ ಪಾಣಿನ್ಯಾದಿಮಹರ್ಷಯಃ|| ಷಟ್ಸೂತ್ರೈಸ್ಸ್ವಕೃತೈಸ್ಸರ್ವಾನ್ಶ್ರಾವಯಂತಿ ಜಗತ್ತ್ರಯೇ'' ಇತಿ ಷಣ್ಮತೋದ್ದೇಶವಿಧಿಃ.

ಅಥ ಷಟ್ತಂತ್ರಲಕ್ಷಣಂ ಶ್ರೂಯತಾಂ, ಶಿವಾಗಮೇ,-''ಲೌಕಿಕಂ ವೈದಿಕಂ ಶೈವಂ ಶೈವಂ ಸದಪಿ ವೈದಿಕಂ || ಅತಿಮಾತ್ರಂ ಚ ಮಂತ್ರಾಖ್ಯಮಿತಿ ತಂತ್ರಾಣಿ ಷಡ್ವಿದುಃ'' ತತ್ರ ತಲ್ಲಕ್ಷಣಂ ಸಂಕ್ಷೇಪೇಣ ಲಕ್ಷ್ಯತಿ. ''ವಣಿಗ್ಗೋರಕ್ಷಕೃಷ್ಯಾದಿಶಾಸ್ತ್ರಂ ಲೌಕಿಕಮುಚ್ಯತೇ || ಶ್ರುತಿಸ್ಮೃತಿಪುರಾಣಂ ವೈಖಾನಸಂ ವೈದಿಕಂ ಮತಂ || ಮಹಾವ್ರತಾದಿಶೈವಂ ಚ ಪಾಂಚರಾತ್ರಮವೈದಿಕಂ || ಸಿದ್ಧಾಂತಗಾಮಿ ತಂತ್ರಂ ತು ಶೈವಂ ಸದಪಿ ವೈದಿಕಂ ||ವಾಮದಕ್ಷಿಣಕಾಲಾದ್ಯಮತಿಮಾತ್ರಮಿಹೋಚ್ಯತೇ || ಗಾರುಡಂ ಭೂತತಂತ್ರಂ ಚ ಶಾಬರಂ ಬಿಲಸಾಧಕಂ || ಅನ್ಯಚ್ಚ ಷಟ್ಕರ್ಮಪರಂ ಮಂತ್ರತಂತ್ರಮಿತೀರಿತಂ'' ಇತಿ ಷಟ್ತಂತ್ರೋದ್ದೇಶಲಕ್ಷಣವಿಧಿಃ.

---

ಮೊದಲೇ ಹೇಳಲ್ಪಟ್ಟ ತಷ್ಟೆ, ಅವುಗಳಲ್ಲಿ ವ್ಯಾಕರಣ, ತರ್ಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ಎಂಬಿವೇ ವೈದಿಕಷಣ್ಮತಗಳು. ಪಾಣಿನಿ, ಕಣಾದ, ಕಪಿಲ, ಪತಂಜಲಿ, ಜೈಮಿನಿ, ವ್ಯಾಸ, ಇವರೇ ಆ ವೈದಿಕ ಮತಗಳಿಗೆ ಕ್ರಮದಿಂ ಕರ್ತೃಗಳು. ಪಾಣಿನಿ ಮೊದಲಾದ ಮುನಿಗಳು ಶಿವಾನುಗ್ರಹದಿಂದ ಆರುಬಗೆಯಾಗಿ ಸೂತ್ರಗಳನ್ನು ರಚಿಸಿ ತ್ರಿಲೋಕದವರೆಲ್ಲರನ್ನೂ ಶ್ರವಣಗೊಳಿಸುತ್ತಾರೆ,, ಎಂದುಕ್ತವಾಗಿದೆ. ಎಂಬಲ್ಲಿಗೆ ಷಣ್ಮತೋದ್ದೇಶವಿಧಿಯು ಮುಗಿದುದು. ಬಳಿಕ ಷಟ್ತಂತ್ರಲಕ್ಷಣವನ್ನು ಕೇಳು; ಶಿವಾಗಮದಲ್ಲಿ—''ಲೌಕಿಕ, ವೈದಿಕ, ಅವೈದಿಕಶೈವ, ವೈದಿಕಶೈವ, ಅತಿಮಾತ್ರ, ಮಂತ್ರ, ಈ ಪ್ರಕಾರವಾಗಿ ತಂತ್ರಗಳು ಆರುಬಗೆಯಾಗಿರುತ್ತವೆ,, ಎಂದು ಹೇಳಲ್ಪಟ್ಟಿದೆ. ಆ ಶಿವಾಗಮದಲ್ಲಿ ಅವುಗಳ ಲಕ್ಷಣವು ಸಂಕ್ಷೇಪವಾಗಿ ಹೇಳಲ್ಪಟ್ಟಿರುವುದು ಹೇಗೆಂದರೆ,—''ವ್ಯಾಪಾರ, ಗೋರಕ್ಷಣೆ, ವ್ಯವಸಾಯ, ಮೊದಲಾದುದನ್ನು ಹೇಳತಕ್ಕ ಶಾಸ್ತ್ರವು ಲೌಕಿಕತಂತ್ರವು. ಶ್ರುತಿ, ಸ್ಮೃತಿ, ಪುರಾಣ, ವೈಖಾನಸಗಳನ್ನು ಹೇಳುವ ಶಾಸ್ತ್ರವು ವೈದಿಕತಂತ್ರವು. ಮಹಾವ್ರತವೇ ಮೊದಲಾಗಿ ಪಾಂಚರಾತ್ರವೇ ಕಡೆಯಾಗುಳ್ಳುವನ್ನು ಹೇಳುವ ಶಾಸ್ತ್ರವು ಅವೈದಿಕಶೈವತಂತ್ರವು. ಕಾಮಿಕಾದಿ ಶಿವಸಿದ್ಧಾಂತವನ್ನು ಅನುಸರಿಸಿರುವ ಶಾಸ್ತ್ರವೇ ವೈದಿಕಶೈವತಂತ್ರವು. ವಾಮಾಗಮ, ದಕ್ಷಿಣಾಗಮ, ಕಾಲಾಗಮ, ಮೊದಲಾದುದನ್ನು ಹೇಳುವ ಶಾಸ್ತ್ರವು ಅತಿಮಾತ್ರತಂತ್ರವು. ಗಾರುಡ, ಭೂತ, ಶಾಬರ, ಬಿಲಸಾಧಕಗಳಿಗಿಂತಲೂ ಬೇರೆಯಾದ ಷಟ್ಕರ್ಮಪರವಾದ ಶಾಸ್ತ್ರವು ಮಂತ್ರ ತಂತ್ರವೆಂದು ಹೇಳಲ್ಪಡುತ್ತದೆ. ಎಂಬಲ್ಲಿಗೆ ಷಟ್ತಂತ್ರೋದ್ದೇಶಲಕ್ಷಣವಿಧಿಯು ಮುಗಿದುದು. ಬಳಿಕ ಷಡ್ದ

ಅಥ ಷಡ್ದರ್ಶನೋದ್ದೇಶವಿಧಿಃ ಶ್ರೂಯತಾಂ, ತತ್ರೈವ,—“ ದರ್ಶನಂ ಷ ಧಂ ಪ್ರೋಕ್ತಂ ಶೈವಂ ಶಾಕ್ತಂ ಚ ವೈಷ್ಣವಂ ॥ ಗಾಣಪತ್ಯಂ ಚ ಸೌರಂ ತಥಾ ಬ್ರಾಹ್ಮಮಿತಿಸ್ಮೃತಂ ” ಇತಿ. ವೀರತಂತ್ರೇ,—“ ತೇಷು ತೇಷ್ವತಿ ನಿಷ್ಠಾ ಸ್ತತ್ತತ್ಕರ್ಮಫಲಾದಿಕಂ ॥ ಪ್ರಯಚ್ಛಾಮಿ ಯಥಾಮಾರ್ಗಂ ಫಲಭೇದಾ ವಂತಿ ತೇ ”

ಇತಿ ಷಣ್ಮತಷಟ್ತಂತ್ರಷಡ್ದರ್ಶನೋದ್ದೇಶವಿಧಿರ್ದ್ವಿತೀಯೋಪದೇಶೇ ಷಷ್ಠಮಸ್ಸಂವಾದಃ.



ಶ್ರೀಗಂಗಾಧರಾಯನಮಃ.

## ಶಿವಶಾಸ್ತ್ರಪ್ರತಿಷ್ಠಾಫಲವಿಧಿಃ.

ಚೋಳಃ—“ ಶಾಸ್ತ್ರೋದ್ಧಾರೇ ಕಿಮು ಫಲಂ ಪ್ರಾರಂಭೇ ಗಣಪಾರ್ಚನ ಕಿಮರ್ಥಂ ತಜ್ಜಪಸ್ತೋತ್ರಂ ತತ್ಸರ್ವಂ ಕಥಯ ಪ್ರಭೋ ”

ಶ್ರೀರೇಣುಕಃ—ಹೇ ಚೋಳ ! ಶಿವಶಾಸ್ತ್ರಪ್ರತಿಷ್ಠಾಫಲವಿಧಿರಾದೌ ಶ್ರೂ ತಾಂ, ಶಿವಧರ್ಮೋತ್ತರೇ,-ಕುಂಭಸಂಭವಂಪ್ರತಿ ಕುಮಾರಃ, “ ಯಥಾಽಮರಾಣ

---

ರ್ಶನೋದ್ದೇಶವಿಧಿಯನ್ನು ಕೇಳು; ಆ ಆಗಮದಲ್ಲೇ—“ಶೈವ, ಶಾಕ್ತೇಯ, ವೈಷ್ಣವ, ಗಾ ಪತ, ಸೌರ, ಕಾಪಾಲ, ಎಂದು ದರ್ಶನವು ಆರುಬಗೆಯಾಗಿದೆ,, ಎಂದು ಹೇಳಲ್ಪಟ್ಟಿದೆ. ತಂತ್ರದಲ್ಲಿ— “ಆಯಾ ಷಣ್ಮತ ಷಟ್ತಂತ್ರ ಷಡ್ದರ್ಶನಗಳಲ್ಲಿ ವಿಶೇಷಾಸಕ್ತಿಯುಳ್ಳವರಿ ಆಯಾ ಕರ್ಮಕ್ಕನುಸಾರವಾಗಿ ಅಧಿಕ ಫಲವನ್ನು ಕೊಡುವೆನು,, ಎಂದು ನಿರೂಪಿತವಾಗಿದೆ.

ಎಂಬಲ್ಲಿಗೆ ಷಣ್ಮತ ಷಟ್ತಂತ್ರ ಷಡ್ದರ್ಶನೋದ್ದೇಶವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



### ಶಿವಶಾಸ್ತ್ರಪ್ರತಿಷ್ಠಾಫಲವಿಧಿಯು.

ಚೋ—ಎಲೈ ರೇಣುಕನೇ ! ಶಿವಶಾಸ್ತ್ರಗಳನ್ನು ಉದ್ಧರಿಸುವುದರಿಂದುಂಟಾಗುವ ವನ್ನೂ, ಶಾಸ್ತ್ರಾರಂಭಕಾಲದಲ್ಲಿ ವಿಘ್ನೇಶ್ವರನ ಪೂಜಾ ಜಪ ಸ್ತೋತ್ರಗಳನ್ನೂ ಮಾಡ ನ್ನುವುದಕ್ಕೆ ಕಾರಣವನ್ನು ನಿರೂಪಿಸು.

ರೇ—ಎಲೈ ಚೋಳನೇ ! ಶಿವಶಾಸ್ತ್ರವನ್ನುದ್ಧರಿಸುವುದರಿಂದುಂಟಾಗುವ ಫಲದ ವಿ ನ್ನು ಮೊದಲು ಕೇಳು; ಶಿವಧರ್ಮೋತ್ತರದಲ್ಲಿ—“ಸಮಸ್ತ ದೇವತೆಗಳೊಳಗೆ ಶಿವನು ಶ್ರೇ ನಾಗಿರುವಂತೆ ಸಮಸ್ತ ದಾನಗಳೊಳಗೆ ವಿದ್ಯಾದಾನವು ಶ್ರೇಷ್ಠವಾದದ್ದು. ಶಿವಶಾಸ್ತ್ರದ

ಸರ್ವೇಷಾಂ ಪರಮಃ ಪರಮೇಶ್ವರಃ ||ತಥೈವ ಸರ್ವದಾನಾನಾಂ ವಿದ್ಯಾದಾನಂ ಪರಂ ಸ್ಮೃತಂ || ವಿದ್ಯಾದಾನಂ ಪ್ರವಕ್ಷ್ಯಾಮಿ ಧನಿನಾಂ ಪುಸ್ತಕಾಶ್ರಿತಂ || ವಿಲಿಖ್ಯ ಲೇಖಯಿತ್ವಾ ಚ ದದ್ಯಾದ್ಭಕ್ತಾಯ ಪುಸ್ತಕಂ || ಯಾವದಕ್ಷರಸಂಖ್ಯಾನಂ ಶಿವಶಾಸ್ತ್ರಸ್ಯ ಪುಸ್ತಕೇ || ತಾವದ್ಯುಗಸಹಸ್ರಾಣಿ ದಾತಾ ಶಿವಪುರೇ ವಸೇತ್ ||ದಶಪೂರ್ವಾನ್ಸಮುದ್ಧೃತ್ಯ ದಶವಂಶಾಂಶ್ಚ ಪಶ್ಚಿಮಾನ್ || ಮಾತಾಪಿತರೌ ಪತ್ನೀಂಚ ಸ್ವರ್ಗೇ ಸ್ಥಾಪ್ಯ ಶಿವಂ ವ್ರಜೇತ್||ಯತ್ನಿರ್ಮತ್ಪುಸ್ತಕವರಮಲೇಖಂ ವಾ ನಿವೇದಯೇತ್|| ಶಿವಜ್ಞಾನಾಭಿಯುಕ್ತಾಯ ತಸ್ಯ ಪುಣ್ಯಫಲಂ ಶೃಣು || ಯಾವಚ್ಚ ಪತ್ರಸಂಖ್ಯಾಸ್ತು ಲೇಖನೀಯಂ ಸುಶೋಭನಂ || ತಾವದ್ಯುಗಸಹಸ್ರಂ ತು ಶಿವಲೋಕೇ ಮಹೀಯತೇ|| ಅಪಿ ಶ್ಲೋಕಂ ತದರ್ಧಂ ವಾ ಶಿವಶಾಸ್ತ್ರಸ್ಯ ಯಃ ಪಠೇತ್ || ವಾಚಯೇಚ್ಚಿಂತಯೇದ್ವಾಪಿ ಲಿಖೇದ್ವಾ ಲೇಖಯೇಚ್ಚ ಯಃ || ಶೃಣುಯಾದೇಕಚಿತ್ತಸ್ತು ತದರ್ಥಂ ನಾವಿಚಾರಯನ್ || ಅನ್ಯೇಭ್ಯಶ್ರಾವಯೇದ್ಯಸ್ತು ತಸ್ಯ ಪುಣ್ಯಫಲಂ ಶೃಣು || ತ್ರಿಃ ಪ್ರದಾಯ ಮಹೀಂ ಪೂರ್ಣಾಂ ಸರ್ವರತ್ನೈಶ್ಚ ಸಂಯುತಾಂ || ಶ್ಲೋಕಾರ್ಥಶ್ರವಣಾದೇವ ಯತ್ಫಲಂ ತದವಾಪ್ನುಯಾತ್ || ಯೋ ಹಿ ಸ್ಥಾಪಯಿತುಂ ಶಕ್ತೋ ನ ಕುರ್ಯಾನ್ಮೋಹತೋ ನರಃ || ತಸ್ಯಹಂತಾ ನ ಪಾಪೀಯಾನಿತಿ ವೇದಾಂತನಿರ್ಣ

---

ಕವನ್ನು ತಾನು ಬರೆದು ಅಥವಾ ಇತರರಿಂದ ಹಣವನ್ನು ಕೊಟ್ಟು ಬರೆಸಿ, ಆ ಪುಸ್ತಕವನ್ನು ಶಿವಭಕ್ತನಿಗಾಗಿ ಕೊಡತಕ್ಕವನು—ಆ ಪುಸ್ತಕದಲ್ಲಿ ಇರುವ ಅಕ್ಷರಗಳ ಲೆಕ್ಕದಷ್ಟು ಯುಗಗಳು ಕಳೆದು ಹೋಗುವವರೆಗೂ ಶಿವಲೋಕದಲ್ಲಿ ಇರುವನು. ಮತ್ತೂ ತನ್ನ ಹಿಂದಿನ ಹತ್ತು ವಂಶದವರನ್ನೂ, ತನ್ನ ಮುಂದಿನ ಹತ್ತು ವಂಶದವರನ್ನೂ, ತನ್ನ ತಾಯಿ ತಂದೆಗಳನ್ನೂ, ತನ್ನ ಹೆಂಡತಿಯನ್ನೂ ಸ್ವರ್ಗದಲ್ಲಿರಿಸಿ, ತಾನು ಶಿವಲೋಕವನ್ನು ಹೊಂದುವನು. ಯಾವನು ಬರೆಯಲ್ಪಡದಿರುವ ಬರೆಯಲ್ಪಡಲು ಯೋಗ್ಯವಾದ ಮಂಗಳಕರವಾದ ಉತ್ತಮವಾದ ಪುಸ್ತಕವನ್ನು ಶಿವಜ್ಞಾನಿಗೋಸ್ಕರ ಕೊಡುವನೋ, ಅವನಿಗುಂಟಾಗುವ ಫಲವನ್ನು ಕೇಳು; ಆ ಪುಸ್ತಕದಲ್ಲಿ ಎಷ್ಟು ಪತ್ರಗಳಿರುವವೋ, ಅಷ್ಟು ಯುಗಸಹಸ್ರವು ಪೂರೈಸುವವರೆಗೂ ಶಿವಲೋಕದಲ್ಲಿರುವನು. ಯಾವನು ಶಿವಶಾಸ್ತ್ರದ ಒಂದು ಶ್ಲೋಕವನ್ನು ಅಥವಾ ಅದರ ಅರ್ಧವನ್ನು ಓದಿದರೂ, ಓದಿಸಿದರೂ, ಚಿಂತಿಸಿದರೂ, ಬರೆದರೂ, ಬರೆಸಿದರೂ, ಅದರರ್ಥವನ್ನು ತಿಳಿಯದಿದ್ದರೂ ಸ್ಥಿರಚಿತ್ತನಾಗಿ ಕೇಳಿದರೂ, ತನಗೆ ಬೇಕಿಲ್ಲದಿದ್ದಾಗ್ಯೂ ಅನ್ಯರಿಗೋಸ್ಕರ ಕೇಳಿದರೂ ಅತನಿಗುಂಟಾಗುವ ಫಲವನ್ನು ಕೇಳು; ಸಮಸ್ತ ರತ್ನಗಳುಳ್ಳ ಸಮಸ್ತ ಭೂಮಿಯನ್ನು ಮೂರಾವೃತ್ತಿ ದಾನಮಾಡುವುದರಿಂದುಂಟಾಗುವ ಫಲವನ್ನು ಹೊಂದುವನು. ಯಾವನು ಶಿವಶಾಸ್ತ್ರವನ್ನು ಉದ್ಧರಿಸುವುದಕ್ಕೋಸ್ಕರ ಶಕ್ತನಾಗಿದ್ದರೂ ಅಜ್ಞಾನದದೆಸೆಯಿಂದ ಸ್ಥಾಪಿಸುವುದಿಲ್ಲವೋ, ಆ ಪಾಪಿಯನ್ನು ಕೊಂದವನು ಪಾಪಿಯೆನಿಸಿಕೊಳ್ಳುವುದಿಲ್ಲವೆಂದು ವೇದಾಂತದ ನಿರ್ಣಯವಾ

ಯಃ'' ಸ್ಕಾಂದೇ ಶಾಂಕರಸಂಹಿತಾಯಾಂ ಶಿವಷಣ್ಮುಖಸಂವಾದೇ,—ಶಿವ,
ದಾ ಯದಾ ಪ್ರಾಣಶಿವೈಕ್ಯಭಾಜಾಂ ಹಾನಿರ್ಭವೇದ್ಭೂಮಿತಲೇಽವತೀರ್ಯ ||
ಶದಾ ಮರ್ತ್ಯಕುಲೇ ಗಣೇಶಾಸ್ಸಂಭೂಯ ಕುರ್ವಂತಿ ಹಿ ಧರ್ಮಸಂಸ್ಥಾಂ'',
ಸೂತಃ,—'' ಇಮಂ ಶೈವಂ ಮಹಾಧರ್ಮಂ ಸ್ಥಾಪಯಧ್ವಂ ಮುನೀಶ್ವರಾಃ ||
ಕ್ತೋ ಯಸ್ಸ್ಥಾಪಿತುಂ ಧರ್ಮಮುಪೇಕ್ಷಾಂ ಕುರುತೇ ನರಃ || ನೋಽಸಿ ಪತ್ರ
ನಾಮ ನರಕಂ ಯಾತ್ಯಸಂಶಯಃ'' ಬ್ರಹ್ಮೋತ್ತರಖಂಡೇ,—'' ಶೃಣ್ವತಾಂ
ನೋ ದಾಂತಕಥಾಂ ಕೀರ್ತಯತಾಂ ಸತಾಂ || ತೇಷಾಂ ಪಾದರಜಾಂಸ್ಯೇವ
ರ್ಥಾನಿ ಮುನಯೋ ಜಗುಃ'' ಸೂತಸಂಹಿತಾಯಾಂ,—'' ಯಸ್ಸ್ಥಾಪಯಿತು
ದ್ಯುಕ್ತಶ್ಶ್ರದ್ಧಯೈವಾಕ್ಷಮೋಽಪಿ ಸಃ || ಸರ್ವಪಾಪವಿನಿರ್ಮುಕ್ತಸ್ಸಾಕ್ಷಾಚ್ಛಿವ
ವಾಪ್ನುಯಾತ್''

ಇತಿ ಶಿವಶಾಸ್ತ್ರಪ್ರತಿಷ್ಠಾಫಲವಿಧಿರ್ದ್ವಿತೀಯೋಪದೇಶೇ ಸಪ್ತಮಸ್ಸಂವಾದಃ



ಗಿರುತ್ತದೆ,, ಎಂದು ಕುಮಾರಸ್ವಾಮಿಯಿಂದ ಅಗಸ್ತ್ಯಮಹರ್ಷಿಗೆ ನಿರೂಪಿತವಾಗಿದೆ. ಸ್ಕಾಂ
ದಲ್ಲಿರುವ ಶಾಂಕರಸಂಹಿತೆಯಲ್ಲಿ—''ಪ್ರಾಣಲಿಂಗಾಂಗಿಗಳಿಗೆ ಭೂಲೋಕದಲ್ಲಿ ಹಾ
ಸಂಭವಿಸಿದ ಕಾಲಗಳಲ್ಲಿ ಪ್ರಮಥಶ್ರೇಷ್ಠರು ಭೂಲೋಕಕ್ಕೆ ಬಂದು ಮನುಷ್ಯಕುಲ
ಹುಟ್ಟಿ, ಶಿವಧರ್ಮವನ್ನು ಸ್ಥಾಪಿಸುವರೆಂಬಂಶವು ಪ್ರಸಿದ್ಧವಾಗಿರುತ್ತದೆ,, ಎಂದು ಷಣ್ಮು
ಶಿವನಿಂದ ನಿರೂಪಿತವಾಗಿದೆ. ಆ ಸಂಹಿತೆಯಲ್ಲೇ—''ಎಲೈ ಮುನಿಶ್ರೇಷ್ಠರೇ! ಈ ಶಿವ
ಧವಾದ ಧರ್ಮವನ್ನು ಸ್ಥಾಪಿಸಿರಿ. ಶಿವಧರ್ಮವನ್ನು ಸ್ಥಾಪಿಸುವುದರಲ್ಲಿ ಶಕ್ತನಾಗಿದ್ದರೂ
ಸಿದವನು ''ಅಸಿಪತ್ರವನ,, ವೆಂಬ ನರಕವನ್ನನುಭವಿಸುವನು. ಈ ವಿಷಯದಲ್ಲಿ ಸಂಶಯ
ಎಂದು ಸೂತನಿಂದುಕ್ತವಾಗಿದೆ. ಬ್ರಹ್ಮೋತ್ತರಖಂಡದಲ್ಲಿ—''ಶಿವಸಂಬಂಧವಾದ ಕ
ಮ್ನ ಕೇಳುತ್ತಿರುವ, ಶಿವನಾಮಗಳನ್ನು ಕೀರ್ತಿಸುತ್ತಿರುವ ಆ ಸತ್ಪುರುಷರ ಪಾದಧೂ
ನಮಗೆ ಗಂಗಾದಿ ತೀರ್ಥಸ್ನಾನಫಲವನ್ನುಂಟುಮಾಡುತ್ತವೆ. ಎಂದು ವಸಿಷ್ಠಾದಿ ಮು
ಹೇಳಿದರು,, ಎಂದು ಹೇಳಲ್ಪಟ್ಟಿದೆ. ಸೂತಸಂಹಿತೆಯಲ್ಲಿ—''ಶಿವಧರ್ಮವನ್ನು ಸ್ಥಾಪಿಸ
ನಾಗಿದ್ದರೂ ಶ್ರದ್ಧೆಯನ್ನು ಹೊಂದಿ ಸ್ಥಾಪಿಸುವುದಕ್ಕೆ ಯತ್ನಿಸತಕ್ಕವನು ಸಕಲವಿಧವಾದ
ಪಗಳಿಂದ ಬಿಡಲ್ಪಟ್ಟವನಾಗಿ ಶಿವನನ್ನು ಸೇರುವನು,, ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಶಿವಶಾಸ್ತ್ರಪ್ರತಿಷ್ಠಾಫಲವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲಿ
ಏಳನೆಯ ಸಂವಾದವು ಮುಗಿದುದು.



ಶ್ರೀಲಿಂಧಕರಿಪವೇನಮಃ.

## ಗಣಪತಿಪಟ್ಟಾಭಿಷೇಕವಿಧಿಃ.

ಶ್ರೀ ರೇಣುಕಃ—ಹೇ ಚೋಳ! ಮಹೇಶ್ವರಜ್ಯೇಷ್ಠಪುತ್ರಸ್ಯ ಗಜಾನನಸ್ಯ ಪಟ್ಟಾಭಿಷೇಕಲಕ್ಷಣಂ ಶ್ರೂಯತಾಂ, ಲೈಂಗೇ,—"ವಾರಾಣಸೀಂ ಪುರೀಂದೇವ್ಯಾ ಜಾಜಗಾಮ ಮಹೇಶ್ವರಃ ‖ ಅವಿಮುಕ್ತೇ ಸುಖಾಸೀನಂ ಪ್ರಣಮ್ಯ ವೃಷಭಧ್ವಜಂ ‖ ಅಪೃಚ್ಛತ್ಕ್ಷೇತ್ರಮಾಹಾತ್ಮ್ಯಂ ಭವಾನೀ ಹರ್ಷಿತಾನನಾ ‖ ಅಥಾಹಾರ್ಧೇಂದುತಿಲಕಃ ಕ್ಷೇತ್ರಮಾಹಾತ್ಮ್ಯಮುತ್ತಮಂ ದರ್ಶಯಾಮಾಸ ಚೋದ್ಯಾನಂ ಪರಿತ್ಯಜ್ಯ ಗಣೇಶ್ವರಾನ್ ‖ ತತ್ರೈವ ಭಗವಾನ್ಜಾತೋ ಗಜವಕ್ತ್ರೋ ವಿನಾಯಕಃ‖ ಜಗತ್ತ್ರಯೇಪಿ ಸರ್ವತ್ರ ತ್ವಂ ಹಿ ವಿಘ್ನಗಣೇಶ್ವರಃ ‖ ಸಂಪೂಜ್ಯೋ ವಂದನೀಯಶ್ಚ ಭವಿಷ್ಯಸಿ ನ ಸಂಶಯಃ ‖ ಮಾಂ ಚ ನಾರಾಯಣಂ ವಾಪಿ ಬ್ರಹ್ಮಾಣಮಪಿ ಪುತ್ರಕ ‖ ಯಜಂತಿ ಯಜ್ಞೈರ್ವಾವಿಪ್ರೈರಗ್ರೇ ಪೂಜ್ಯೋ ಭವಿಷ್ಯಸಿ ‖ ತ್ವಾಮನಭ್ಯರ್ಚ್ಯ ಕಲ್ಯಾಣಂ ಶ್ರೌತಂ ಸ್ಮಾರ್ತಂ ಚ ಲೌಕಿಕಂ ‖ ಕುರುತೇ ತಸ್ಯ ಕಲ್ಯಾಣಮಕಲ್ಯಾಣಂ ಭವಿಷ್ಯತಿ ‖ ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಶ್ಶೂದ್ರೈರನ್ಯೈರ್ಗಜಾನನ ‖ ಸಂಪೂಜ್ಯಸ್ಸರ್ವಸಿದ್ಧ್ಯರ್ಥಂ ಭಕ್ಷ್ಯಭೋಜ್ಯಾದಿಭಿಶ್ಶುಭೈಃ ‖ ತ್ವಾಂ ಗಂ

---

### ಗಣಪತಿಪಟ್ಟಾಭಿಷೇಕವಿಧಿಯು.

ರೇ — ಎಲೈ ಚೋಳನೇ! ಶಿವನ ಹಿರಿಯಮಗನಾದ ವಿನಾಯಕನ ಪಟ್ಟಾಭಿಷೇಕಲಕ್ಷಣವನ್ನು ಕೇಳು; ಲಿಂಗಪುರಾಣದಲ್ಲಿ — "ಶಿವನು ಮಹಾದೇವಿಯೊಡನೆ ಕಾಶೀಪಟ್ಟಣಕ್ಕೆ ಬಂದು ಅವಿಮುಕ್ತಕ್ಷೇತ್ರದಲ್ಲಿ ಕುಳಿತಿದ್ದಾಗ್ಗೆ ನಮಸ್ಕಾರಮಾಡಿ ಕ್ಷೇತ್ರಮಾಹಾತ್ಮ್ಯವನ್ನು ಕೇಳಿದ ಪಾರ್ವತಿಗೆ ಆ ಕ್ಷೇತ್ರದ ಮಹಿಮೆಯನ್ನು ತೋರ್ಪಡಿಸಿ, ವಿಹಾರಯೋಗ್ಯವಾದ ವನವನ್ನು ಪ್ರವೇಶಿಸಿದಾಗ್ಯೆ ಹುಟ್ಟಿದ ಗಜಮುಖನಾದ ವಿಘ್ನೇಶ್ವರನನ್ನು ಎಲೈ ವಿಘ್ನೇಶನೇ! ಮೂರುಲೋಕದಲ್ಲಿ ನೀನು ವ್ಯಾಪಕನೂ, ಪ್ರಮಥರಿಗೊಡೆಯನೂ, ಲೋಕಪೂಜ್ಯನೂ, ಲೋಕವಂದ್ಯನೂ ಆಗುವೆ. ಈ ವಿಷಯದಲ್ಲಿ ಸಂಶಯವಿಲ್ಲವು. ಎಲೈ ಮಗನೇ! ಬ್ರಾಹ್ಮಣರಿಂದ ಯಜ್ಞಗಳಲ್ಲಿ ನಾನೂ, ನಾರಾಯಣನೂ, ಬ್ರಹ್ಮನೂ ಪೂಜಿಸಲ್ಪಡುವುದಕ್ಕೆ ಮೊದಲೇ ನೀನು ಪೂಜಿಸಲ್ಪಡುವೆ. ಮಂಗಳಕರನಾದ ನಿನ್ನನ್ನು ಪೂಜಿಸದೆ ವೇದೋಕ್ತಕರ್ಮವನ್ನೂ, ಸ್ಮೃತ್ಯುಕ್ತಕರ್ಮವನ್ನೂ, ಲೌಕಿಕಕಾರ್ಯವನ್ನೂ ಮಾಡುವವನಿಗೆ ಅಮಂಗಳವುಂಟಾಗುವುದು. ಎಲೈ ಗಜಮುಖನೇ! ನೀನು ಬ್ರಾಹ್ಮಣಾದಿ ನಾಲ್ಕುಜಾತಿಯವರಿಂದಲೂ, ಅನ್ಯರಿಂದಲೂ ಸಕಲಕಾರ್ಯಸಿದ್ಧಿಗೋಸ್ಕರ ಭಕ್ಷ್ಯಭೋಜ್ಯಾದಿಗಳಿಂದ ಪೂಜೆಯಂ ಮಾಡಿಸಿಕೊಳ್ಳಲು ಯೋಗ್ಯನಾಗಿರುವೆ. ಮೂರುಲೋಕಗಳಲ್ಲಿ ದೇವತೆಗಳಿಂದಲೂ ಇತರರಿಂದಲೂ ಗಂಧಪುಷ್ಪಾದಿಗಳಿಂದ ನಿನ್ನನ್ನು ಪೂಜಿಸದೇ ಹೋ

ಧಪುಷ್ಪಧೂಪಾದ್ಯೈರಸಭ್ಯರ್ಚ್ಯ ಜಗತ್ರಯೇ || ದೇವೈರಪಿ ತಥಾನ್ಯೈಃಕ್ಷ್ಟ
ನಾಸ್ತಿ ಕುತ್ರಚಿತ್ || ಅಭ್ಯರ್ಚಯಂತಿ ಯೇ ಲೋಕೇ ಮಾನವಾಸ್ತ್ವಾಂ
ಶಂ || ತೇ ಚಾರ್ಚನೀಯಾಶ್ಶಕ್ರಾದ್ಯೈರ್ಭವಿಷ್ಯಂತಿ ನ ಸಂಶಯಃ || ಅಜಂ
ಚ ರುದ್ರಂ ವಾ ಶಕ್ರಮನ್ಯಾನ್ಸುರಾನಪಿ || ವಿಘ್ನೈರ್ಬಾಧಯಸಿ ತ್ವಾಂ
ಯಂತಿ ಫಲಾರ್ಥಿನಃ || ಇತಿ ಪಟ್ಟಾಭಿಷಿಕ್ತಂ ತಂ ಕೃತ್ವಾ ಗೌರೀಪತಿಃ
ಗಣೈಸ್ಸಾರ್ಧಂ ನಮಸ್ಕೃತ್ಯೋದತಿಷ್ಠತ್ತಸ್ಯ ಚಾಗ್ರತಃ || ತದಾಪ್ರಭೃತಿ
ಸ್ಮಿನ್ಪೂಜಯಂತಿ ಗಣೇಶ್ವರಂ" ಶಿಲ್ಪಶಾಸ್ತ್ರಪ್ರಸಿದ್ಧಷೋಡಶಗಣಪತಿಸ್ವರೂಪ
ವಿಸ್ತರಭಯಾನ್ನೇಹಲಿಖಿತಂ.

ಇತಿ ಗಣಪತಿಪಟ್ಟಾಭಿಷೇಕವಿಧಿರ್ದ್ವಿತೀಯೋಪದೇಶೇಽಷ್ಟಮಸ್ಸಂವಾದಃ



ಶ್ರೀಕ್ರತುಧ್ವಂಸಿನೇನಮಃ.

## ಗಣಪತಿಮಂತ್ರಜಪಸ್ತುತಿಃ.

ಶ್ರೀ ರೇಣುಕಃ—ಹೇ ಚೋಳ ! ಸರ್ವದರ್ಶನಪರೈರ್ಜನೈರಾರಭ್ಯಮಾ
ಲಕರ್ಮಣಾಂ ನಿರ್ವಿಘ್ನಾರ್ಥಂ ಪ್ರಾತರ್ಗಣಪತಿಗಾಯತ್ರೀಮಂತ್ರಜಪಸ್ತು

---

ದಲಿಕ್ಕೆ ಯೋಗ್ಯವಾದುದು ಯಾವುದೂ ಇಲ್ಲ. ಲೋಕದಲ್ಲಿ ವಿಘ್ನೇಶ್ವರನೆನಿಸಿದ ನಿನ್ನ
ಸುವ ಮಾನವರು ಇಂದ್ರಾದಿ ದೇವತೆಗಳಿಂದ ಪೂಜ್ಯರಾಗುವರು. ಸಂದೇಹವಿಲ್ಲವು.
ಪೇಕ್ಷಿಸತಕ್ಕವರು ಕರ್ಮಾರಂಭಕಾಲದಲ್ಲಿ ನಿನ್ನನ್ನು ಪೂಜಿಸದೆ ಬಿಟ್ಟರೆ, ಬ್ರಹ್ಮನನ್ನಾ
ರುದ್ರನನ್ನಾದರೂ, ಇಂದ್ರನನ್ನಾದರೂ, ಇತರ ದೇವತೆಗಳನ್ನಾದರೂ ನೀನು ವಿಘ್ನಗಳಿ
ದರೆಪಡಿಸುವೆ. ಎಂದು ಹೇಳಿ ಪಟ್ಟಾಭಿಷಿಕ್ತನಾದ ಆ ಗಣಪತಿಯನ್ನು ಪಾರ್ವತೀಪತಿಯು
ಥರೊಡನೆ ಮಣಿದು ಮೇಲಕ್ಕೆದ್ದನು. ಆ ಕಾಲ ಮೊದಲ್ಗೊಂಡು ಈ ಲೋಕದಲ್ಲಿ
ನನ್ನು ಪೂಜಿಸುತ್ತಾರೆ,, ಎಂದು ಶಿವನಿಂದ ಉಕ್ತವಾಗಿದೆ. ಶಿಲ್ಪಶಾಸ್ತ್ರದಲ್ಲಿ ಪ್ರಸಿ
ರುವ ಷೋಡಶಗಣಪತಿಯ ಸ್ವರೂಪವು ಗ್ರಂಥವಿಸ್ತಾರಭೀತಿಯಿಂದಿಲ್ಲಿ ನಿರೂಪಿತವಾಗಿ
ಎಂಬಿಲ್ಲಿಗೆ ಗಣಪತಿಪಟ್ಟಾಭಿಷೇಕವಿಧಿಯನ್ನು ಹೇಳುವ ಎರಡನೆಯ ಉಪದೇಶದ
ಎಂಟನೆಯ ಸಂವಾದವು ಮುಗಿದುದು.



### ಗಣಪತಿಮಂತ್ರಜಪಸ್ತೋತ್ರವು.

ರೇ—ಎಲೈ ಚೋಳನೇ ! ಸಕಲಮತೀಯರಿಂದ ತಮ್ಮಿಂದ ಪ್ರಾರಂಭಿಸಲ್ಪಡು
ಕರ್ಮಗಳಿಗೆ ವಿಘ್ನಗಳುಂಟಾಗದಿರುವುದಕ್ಕಾಗಿ ಪ್ರಾತಃಕಾಲದಲ್ಲಿ ಗಣಪತಿಗಾಯತ್ರೀ

ವ್ಯಾ, ತದುಕ್ತಮಭಿಯುಕ್ತೈಃ,—''ಓಂ ಏಕದಂತಾಯ ವಿದ್ಮಹೇ ಹೇರಂಬಾಯ ಧೀಮಹಿ ತನ್ನೋ ಗಣಪತಿಃ ಪ್ರಚೋದಯಾತ್''—''ನಾಯಕಂ ಸರ್ವಲೋಕಾನಾಂ ವಿನಾಯಕಮನಾಯಕಂ || ನಾನಾಕಲ್ಪಧರಂ ನೌಮಿ ವಿಘ್ನಹೀನಂ ಗಣಾಧಿಪಂ || ಭವಸಂಚಿತಪಾಪೌಘವಿಧ್ವಂಸನ ವಿಚಕ್ಷಣಂ || ವಿಘ್ನಾಂಧಕಾರಭಾಸ್ವಂತಂ ವಿಘ್ನರಾಜಮಹಂ ಭಜೇ || ಗಜಾನನಕಟದ್ವಂದ್ವನಿಸ್ಸೃತಾಮದನಿರ್ಝರಾಃ || ಪ್ರಕ್ಷಾಲಯಂತು ನಃ ಕ್ಷಿಪ್ರಂ ವಿಘ್ನಸಂಘಾತಕರ್ದಮಂ || ವಿಘ್ನಧ್ವಾಂತನಿವಾರಣೈಕತರಣಿರ್ವಿಘ್ನಾಟವೀಹವ್ಯವಾಟ್'' ಇತ್ಯಾದಿ ಬಹುಪ್ರಸಿದ್ಧಂ.

ಇತಿ ಗಣಪತಿಗಾಯತ್ರೀಮಂತ್ರಜಪಸ್ತೋತ್ರವಿಧಿರ್ದ್ವಿತೀಯೋಪದೇಶೇ ನವಮಸ್ಸಂವಾದಃ.

ಇತಿ ಶ್ರೀ ಸೋಸಲಿ ರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕಸಂವಾದರೂಪಶಿವಾಧಿಕ್ಯಶಿಖಾಮಣೌ ಶಿವಸ್ಯ ಪರಮಾಪ್ತತ್ವಾದಿ ನವಮಸಂವಾದ ವಿಚಾರೋ ದ್ವಿತೀಯೋಪದೇಶಃ.



ಸ್ತೋತ್ರವು ಮಾಡಲ್ಪಡಲು ಯೋಗ್ಯವಾದದ್ದು. ಆ ವಿಷಯವು ಅಭಿಯುಕ್ತರಿಂದ ಹೇಳಲ್ಪಟ್ಟಿದೆ. "ಓಂ ಏಕದಂತಾಯ ವಿದ್ಮಹೇ ತನ್ನೋಗಣಪತಿಃ ಪ್ರಚೋದಯಾತ್" ಇತ್ಯಾದಿ.

ಎಂಬಲ್ಲಿಗೆ ಗಣಪತಿಗಾಯತ್ರೀಮಂತ್ರಜಪಸ್ತೋತ್ರವಿಧಿಯನ್ನು ಹೇಳುವ ಎರಡನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀ ನವುಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಎರಡನೆಯ ಉಪದೇಶವು ಸಂಪೂರ್ಣವಾಯಿತು.



ಶ್ರೀ ಅಂಧಕರಿಪವೇನಮಃ.

## ತೃತೀಯೋಪದೇಶಃ ಪ್ರಾರಭ್ಯತೇ.

### ಶೈವಾವೈದಿಕಕಾಪಾಲಿಕಮತನಿರ್ಣಯಃ.

ಚೋಳಃ—ಸ್ವಾಮಿನ್ ! ಅವೈದಿಕಷಣ್ಮತಲಕ್ಷಣಂ ಸರ್ವಪ್ರಾಪ್ಯಪದಂ ಕಥಯ ?

ಶ್ರೀ ರೇಣುಕಃ—ಹೇ ಚೋಳ ! ವೈದಿಕಷಣ್ಮತಸ್ವರೂಪಂ ಸಂಕ್ಷೇಪತಃ ಶ್ರೂಯತಾಂ, ದಕ್ಷಿಣತಂತ್ರೇ,—"ಕಾಪಾಲಿಕಂ ಪಾಂಚರಾತ್ರಂ ಮಾಯಾವಾದಮತಂ ತಥಾ || ಬೌದ್ಧಕ್ಷಪಣಚಾರ್ವಾಕಾ ಏತೇ ಹಿ ಷಡವೈದಿಕಾಃ" ತತ್ರ ಕ್ರಮೇಣ ಶೈವಾಽವೈದಿಕಕಾಪಾಲಿಕಮತಭೇದಶ್ಶ್ರೂಯತಾಂ, "ಕಾಪಾಲಿಕಂ ತಥಾ ಯಾಮ್ಯಮಾಗ್ನೇಯಂ ತು ತತಃಪರಂ || ವೀರಶೈವಂ ಪಾಶುಪತಮಸ್ಥಿಧಾರೀ ಷಡ್ವಿಧಂ || ಕುಂಡಕಂಬುಕಪಾಲಾನಿ ಮಧುಪೂರ್ಣಾನಿ ಬಿಭ್ರತಃ || ಕಿಂ ನ ಪಶ್ಯ ಲೋಕೋಽಯಂ ಬ್ರಹ್ಮವಿಷ್ಣುಮಹೇಶ್ವರಾನ್ || ಪ್ರವೃತ್ತೇ ಭೈರವಗಣೇ ಸ

---

## ಮೂರನೆಯ ಉಪದೇಶ ಪ್ರಾರಂಭವು.

### ಶೈವಾವೈದಿಕಕಾಪಾಲಿಕಮತನಿರ್ಣಯವು.

ಚೋಳನು— ಎಲೈ ಸ್ವಾಮಿ! ವೈದಿಕಗಳಲ್ಲದ ಷಣ್ಮತಗಳ ಲಕ್ಷಣವನ್ನೂ, ಸರ್ವರಿಗೂ ದೇಹವನ್ನು ಬಿಟ್ಟನಂತರದಲ್ಲಿ ಹೊಂದಲು ಯೋಗ್ಯವಾದ ಪರವಸ್ತುಸ್ವರೂಪವನ್ನು ನಿರೂಪಿಸು.

ಶ್ರೀ ರೇಣುಕನು — ಎಲೈ ಚೋಳನೇ ! ಅವೈದಿಕ ಷಣ್ಮತಗಳ ಸ್ವರೂಪವನ್ನು ಸಂಕ್ಷೇಪವಾಗಿ ನಿರೂಪಿಸುವೆನು ಕೇಳು;

ದಕ್ಷಿಣತಂತ್ರದಲ್ಲಿ —"ಕಾಪಾಲಿಕ, ಪಾಂಚರಾತ್ರ, ಮಾಯಾವಾದ, ಬೌದ್ಧ, ಕ್ಷಪಣ, ಚಾರ್ವಾಕ—ಈ ಆರು ಅವೈದಿಕಮತಗಳು" ಎಂದುಕ್ತವಾಗಿದೆ. ಆ ದಕ್ಷಿಣತಂತ್ರದಲ್ಲಿ-ಶೈವದಲ್ಲಿ ಅವೈದಿಕವಾದ ಕಾಪಾಲಿಕಮತಭೇದವನ್ನು ಕ್ರಮದಿಂದ ಕೇಳು; "ಕಾಪಾಲಿಕ, ಯಾಮ್ಯ, ಆಗ್ನೇಯ, ವೀರಶೈವ, ಪಾಶುಪತ, ಅಸ್ಥಿಧಾರಿ, ಎಂದು ಆರು ವಿಧವಾಗಿರುವ; ಸುರೆಯಿಂ ತುಂಬಲ್ಪಟ್ಟ ಕಮಂಡುಲು, ಶಂಖ, ಕಪಾಲಗಳನ್ನು ಹಿಡಿದುಕೊಂಡಿರುವ ಬ್ರಹ್ಮ ವಿಷ್ಣು ರುದ್ರರನ್ನು ಈ ಜನವು ನೋಡುವುದಿಲ್ಲವೇ ಏನು ? ಎಂಬುದನ್ನು ಮಂತ್ರವನ್ನು ಹೇಳುತ್ತ ಮನುಷ್ಯನ ಕಪಾಲದಲ್ಲಿ ಸುರೆಯನ್ನು ಕುಡಿಯುತಕ್ಕುದನ್ನು ಹೇಳತಕ್ಕುದು ಕಾಪಾಲಿಕಮತವು. ಭೈರವಚಕ್ರವು ಪ್ರವೃತ್ತಿಯಾಗಲು ಸಮಸ್ತ ಬ್ರಾಹ್ಮಣಾದಿ ಜಾತಿಗಳು ಒಂದ

ವರ್ಣಾ ದ್ವಿಜಾತಯಃ || ನಿವೃತ್ತೇ ಭೈರವಗಣೇ ಸರ್ವೇ ವರ್ಣಾಃ ಪೃಥಕ್ಪೃಥಕ್ ''
ಇತ್ಯಾದಿವಚನೈರಷ್ಟವಿಧಭೈರವಮತಂ ತ್ರಿಮೂರ್ತಿನಿರಸನಪರಮೇವ.

ಇತಿ ಶೈವಾವೈದಿಕಕಾಪಾಲಿಕಮತನಿರ್ಣಯಸ್ತೃತೀಯೋಪದೇಶೇ
ಪ್ರಥಮಸ್ಸಂವಾದಃ.



ಶ್ರೀಸೋಮಶೇಖರಾಯನಮಃ.

## ವೈಷ್ಣವಾವೈದಿಕಪಾಂಚರಾತ್ರಮತನಿರ್ಣಯಃ

ರೇ—ಹೇ ಚೋಳ ! ವೈಷ್ಣವಾವೈದಿಕಪಾಂಚರಾತ್ರಮತಭೇದಶ್ಶ್ರೂಯತಾಂ, ವೈಖಾನಸತಂತ್ರೇ,—'' ......... ಪಾಂಚರಾತ್ರಮಥೋಚ್ಯತೇ || ತದ್ವೇದರಹಿತಂ ತಂತ್ರಂ ದೀಕ್ಷಾತಂತ್ರಂ ಚತುರ್ವಿಧಾಃ || ಪ್ರಥಮಂ ಚಾಗಮಶ್ಚೈವ ದ್ವಿತೀಯಂ ಮಂತ್ರಸಿದ್ಧಿದಂ || ತೃತೀಯಂ ತಂತ್ರಸಿದ್ಧಾಂತಂ ತಂತ್ರಾಂತರಮತಃಪರಂ || ಏವಂ ತತ್ರೈವ ಸಿದ್ಧಾಂತಂ ದೀಕ್ಷಾಪೂರ್ವಂ ಚ ನಾಮತಃ || ವೈಖಾನಸಂ ವೈದಿಕಂ ಸ್ಯಾತ್ಪಾಂಚರಾತ್ರಮವೈದಿಕಂ'' ಶಾಂಡಿಲ್ಯಸಂಹಿತಾಯಾಂ,—'' ಕಳತ್ರಸಾಮಾನ್ಯಮಜಾತಿಭೇದ ಉಚ್ಛಿಷ್ಟಪಾದೋದಕಸೇವನಂ ಚ || ವೇದಾರ್ಥವಿಪ್ಲಾವನಮೀಶನಿಂದಾ ಪಂಚವ್ರತಾಖ್ಯಾ ಇಹ ಪಾಂಚರಾತ್ರಾಃ''

---

ವವು, ಭೈರವಚಕ್ರವು ನಿವೃತ್ತಿಯಾಗಲು ಸಮಸ್ತ ಬ್ರಾಹ್ಮಣಾದಿ ವರ್ಣಗಳು ಬೇರೆಬೇರೆಯಾಗುವವು,, ಇತ್ಯಾದಿ ವಚನಗಳಿರುವುದರಿಂದ ಎಂಟುಪ್ರಕಾರವಾಗಿರುವ ಭೈರವಮತವು ತ್ರಿಮೂರ್ತಿಗಳಂ ದೂಷಿಸತಕ್ಕುದೇ ಆಗಿದೆ.

ಎಂಬಲ್ಲಿಗೆ ಶೈವಾವೈದಿಕಕಾಪಾಲಿಕಮತನಿರ್ಣಯವಿಧಿಯನ್ನು ಹೇಳುವ ಮೂರನೆಯ
ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.

———:ಜ್ಞ:———

ವೈಷ್ಣವಾವೈದಿಕ ಪಾಂಚರಾತ್ರಮತನಿರ್ಣಯವು.

ರೇ—ಎಲೈ ಚೋಳನೇ ! ವೈಷ್ಣವಾವೈದಿಕಪಾಂಚರಾತ್ರಮತಭೇದವನ್ನು ಕೇಳು; ವೈಖಾನಸತಂತ್ರದಲ್ಲಿ—''ಆ ಅವೈದಿಕಪಾಂಚರಾತ್ರತಂತ್ರದಲ್ಲಿ ದೀಕ್ಷೆಯು ಆಗಮದೀಕ್ಷಾಸಿದ್ಧಾಂತ, ಮಂತ್ರದೀಕ್ಷಾಸಿದ್ಧಾಂತ, ತಂತ್ರದೀಕ್ಷಾಸಿದ್ಧಾಂತ, ತಂತ್ರಾಂತರದೀಕ್ಷಾಸಿದ್ಧಾಂತವೆಂದು ನಾಲ್ಕುಪ್ರಕಾರವಾಗಿರುತ್ತದೆ,, ಎಂದು ಹೇಳಲ್ಪಟ್ಟಿದೆ. ಶಾಂಡಿಲ್ಯಸಂಹಿತೆಯಲ್ಲಿ—''ಕಳತ್ರಸಮಾನತೆಯು, ಜಾತಿಭೇದವಿಲ್ಲವೆನ್ನುವುದು, ಉಚ್ಛಿಷ್ಟಾನ್ನಸೇವನೆ ಕಾಲ್ತೊಳೆದ ನೀರನ್ನು ಕುಡಿಯುವದು, ಶಬ್ದಶಕ್ತಿಯಿಂದ ವೇದಾರ್ಥವನ್ನು ವ್ಯತ್ಯಾಸಗೊಳಿಸುವುದು, ಶಿವನನ್ನು ನಿಂದಿಸುವುದು, ಈ ಐದು ಪಾಂಚರಾತ್ರಮತೀಯರ ವ್ರತಗಳು,, ಎಂದು ಹೇಳಲ್ಪಟ್ಟಿದೆ.

ಇತಿ ವೈಷ್ಣವಾವೈದಿಕಪಾಂಚರಾತ್ರಮತನಿರ್ಣಯಸ್ತೃತೀಯೋಪದೇಶೇ ದ್ವಿತೀಯಸ್ಸಂವಾದಃ.

ಶ್ರೀಸಿದ್ಧಲಿಂಗಾಯನಮಃ.

## ವೈದಿಕಾವೈದಿಕಮಾಯಾವಾದಮತಭೇದಃ.

ರೇ—ಹೇ ಚೋಳ! ವೈದಿಕಾವೈದಿಕಮಾಯಾವಾದಮತಭೇದಶ್ಶ್ರೂಯತಾಂ, [illegible] ತ್ಯಪುರಾಣೇ,—"ನಾಸದ್ರೂಪಾ ನ ಸದ್ರೂಪಾ ಮಾಯಾ ನೈವೋಭಯಾತ್ಮಿ[illegible] ಸದಸದ್ಭ್ಯಾಮನ್ಯರೂಪಾ ಮಿಥ್ಯಾರೂಪಾ ಸನಾತನೀ" ಪರಾಶರಪುರಾಣೇ,—[illegible] ರಾಶರಃ,"ಭಾತಿ ಪ್ರತ್ಯಕ್ಷವೇದಸ್ಯ ಯದ್ವಿರುದ್ಧತಯಾ ಶುಕ|| ವೈದಿಕೈಸ್ತತ್ಸ[illegible] ಜ್ಯಂ ನೈವ ಗ್ರಾಹ್ಯಂ ಕದಾಚನ|| ಅಕ್ಷಪಾದಪ್ರಣೀತೇ ಚ ಕಾಣಾದೇ ಸಾಂಖ್ಯ[illegible] ಗಯೋಃ|| ತ್ಯಾಜ್ಯಶ್ಶ್ರುತಿವಿರುದ್ಧಾಂಶಶ್ಶ್ರುತ್ಯೈಕಶರಣೈರ್ನೃಭಿಃ" ಇತ್ಯಾದಿ.

ಇತಿ ವೈದಿಕಾವೈದಿಕಮಾಯಾವಾದಮತಭೇದನಿರ್ಣಯಸ್ತೃತೀಯೋಪದೇಶೇ ತೃತೀಯಸ್ಸಂವಾದಃ

---

ಎಂಬಲ್ಲಿಗೆ ವೈಷ್ಣವಾವೈದಿಕ ಪಾಂಚರಾತ್ರಮತನಿರ್ಣಯವಿಧಿಯನ್ನು ಹೇಳುವ ಮೂರನೆ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.

ವೈದಿಕಾವೈದಿಕಮಾಯಾವಾದಮತಭೇದವು

ರೇ—ಎಲೈ ಚೋಳನೇ! ಮಾಯಾವಾದಮತದಲ್ಲಿರುವ ವೈದಿಕಾವೈದಿಕಮತಭೇ[illegible]ನ್ನು ಕೇಳು; ಆದಿತ್ಯಪುರಾಣದಲ್ಲಿ—"ಮಾಯೆಯು ಸದ್ರೂಪವೂ, ಅಸದ್ರೂಪವೂ, ಸದಸ[illegible]ಪವೂ ಆಗಿಲ್ಲ. ಸದಸತ್ತುಗಳಿಂದನ್ಯವೂ, ನಿತ್ಯವೂ, ಮಿಥ್ಯಾರೂಪವೂ ಆಗಿರುತ್ತದೆ,, ಎಂದು [illegible]ಳಲ್ಪಟ್ಟದೆ. ಪರಾಶರಪುರಾಣದಲ್ಲಿ—"ಎಲೈ ಶುಕಮುನಿಯೇ! ಪ್ರತ್ಯಕ್ಷಪ್ರಮಾಣ[illegible] ವೇದಕ್ಕೆ ವಿರುದ್ಧವಾದುದನ್ನು ವೈದಿಕರು ಅಂಗೀಕರಿಸಕೂಡದು. ವೇದಗಳಿಗೆ ಪ್ರಾಮಾ[illegible]ನ್ನೊಪ್ಪತಕ್ಕವರು ತರ್ಕ, ಸಾಂಖ್ಯ, ಯೋಗಶಾಸ್ತ್ರಗಳಲ್ಲಿ ವೇದವಿರುದ್ಧವಾಗಿರುವ ಭಾಗಗಳ[illegible] ಬಿಡಬೇಕು" ಎಂದು ಪರಾಶರನಿಂದ ಶುಕನಿಗೆ ನಿರೂಪಿಸಲ್ಪಟ್ಟಿದೆ.

ಎಂಬಲ್ಲಿಗೆ ವೈದಿಕಾವೈದಿಕಮಾಯಾವಾದಮತಭೇದನಿರ್ಣಯವಿಧಿಯನ್ನು ಹೇಳುವ ಮೂರನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.

ಶ್ರೀಃ.

## ಬೌದ್ಧಮತನಿರ್ಣಯಃ.

ರೇ—ಭೋ ಜೋಳ! ಕೇವಲಮತಸ್ವರೂಪಂ ಶ್ರೂಯತಾಂ, ಸರ್ವದರ್ಶನಸಿದ್ಧಾಂತೇ,—“ ವೇದಾಪ್ರಾಮಾಣ್ಯಸಿದ್ಧಾಂತಾ ಬೌದ್ಧಕ್ಷಪಣನಾಸ್ತಿಕಾಃ|| ಯುಕ್ತ್ಯಾ ಪ್ರಹಸನೀಯಾಸ್ತೇ ವೇದಪ್ರಾಮಾಣ್ಯವಾದಿಭಿಃ ” ತತ್ರ ಬೌದ್ಧಮತಭೇದಃ, “ಬುದ್ಧಪ್ರಣೀತಶಾಸ್ತ್ರಂ ತು ಬೌದ್ಧಂ ಷೋಡಶಲಕ್ಷಕಂ||ಚತುರ್ಣಾಂ ಮತಭೇದೇನ ಬೌದ್ಧಂ ಶಾಸ್ತ್ರಂ ಚತುರ್ವಿಧಂ|| ಆದ್ಯೋ ವೈಭಾಷಿಕೋ ಬೌದ್ಧಶ್ಶಿಷ್ಯಸ್ಸೌತ್ರಾಂತಿಕಃ ಪರಃ || ಯೋಗಾಚಾರ್ಯಸ್ತೃತೀಯೋऽತ್ರ ತುರ್ಯೋ ಮಾಧ್ಯಮಿಕಸ್ಸ್ಮೃತಃ||ಶಿಲಾಮೃದ್ದಾರುಚಿತ್ರೇಷು ದೇವತಾ ಬುದ್ಧಿಕಲ್ಪಿತಾ || ಅಕಲ್ಪಿತಸ್ವಯಂಜ್ಯೋತಿರೂಪಾ ಬುದ್ಧಿರ್ದೇವತಾ”

ಇತಿ ಬೌದ್ಧಮತನಿರ್ಣಯಸ್ತೃತೀಯೋಪದೇಶೇ ಚತುರ್ಥಸ್ಸಂವಾದಃ.



---

### ಬೌದ್ಧಮತನಿರ್ಣಯವು.

ರೇ —ಎಲೈ ಜೋಳನೇ ! ಅವೈದಿಕನಾದ ಬೌದ್ಧಮತದ ಸ್ವರೂಪವನ್ನು ಕೇಳು; ಸರ್ವದರ್ಶನಸಿದ್ಧಾಂತದಲ್ಲಿ — “ವೇದಗಳಿಗೆ ಪ್ರಾಮಾಣ್ಯವನೊಪ್ಪದಿರುವ ಬೌದ್ಧ, ಕ್ಷಪಣ, ನಾಸ್ತಿಕರು ವೇದಪ್ರಾಮಾಣ್ಯವನ್ನು ಹೇಳತಕ್ಕವರಿಂದ ಯುಕ್ತಿಯಿಂದ ಪರಿಹಸನೀಯರಾಗಿರುತ್ತಾರೆ” ಎಂದು ಹೇಳಲ್ಪಟ್ಟಿದೆ. ಆ ಸರ್ವದರ್ಶನಸಿದ್ಧಾಂತದಲ್ಲಿ ಹದಿನಾರುಲಕ್ಷ ಗ್ರಂಥಸಂಖ್ಯೆಯುಳ್ಳುದಾಗಿ ಬುದ್ಧನಿಂದ ರಚಿತವಾಗಿರುವ ಶಾಸ್ತ್ರವು ಬೌದ್ಧವೆಂದು ಹೇಳಲ್ಪಡುತ್ತದೆ. ಅದು ನಾಲ್ವರ ಅಭಿಪ್ರಾಯಭೇದದಿಂದ ನಾಲ್ಕುಬಗೆಯಾಗಿದೆ. ವೈಭಾಷಿಕಬೌದ್ಧನು ಮೊದಲನೆಯವನು. ಆತನ ಶಿಷ್ಯನಾದ ಸೌತ್ರಾಂತಿಕಬೌದ್ಧನು ಎರಡನೆಯವನು. ಯೋಗಾಚಾರ್ಯನು ಮೂರನೆಯ ಬೌದ್ಧನು. ಮಾಧ್ಯಮಿಕನು ನಾಲ್ಕನೆಯ ಬೌದ್ಧನು. ಕಲ್ಲಿನಲ್ಲೂ, ಮಣ್ಣಿನಲ್ಲೂ, ಮರದಲ್ಲೂ, ಚಿತ್ರದಲ್ಲೂ ದೇವತಾಭಾವನೆಯು ಬುದ್ಧೀಂದ್ರಿಯದಿಂದ ಕಲ್ಪಿತವಾದುದರಿಂದ, ಯಾವುದರಿಂದಲೂ ಕಲ್ಪಿತವಾಗದೆ ಸ್ವಯಂಪ್ರಕಾಶಮಾನವಾದ ಬುದ್ಧಿಯನ್ನೇ ಈಶ್ವರನನ್ನಾಗಿ ನಂಬತಕ್ಕವನೇ ಬೌದ್ಧನು” ಎಂದು ಹೇಳಲ್ಪಟ್ಟಿದೆ.

ಎಂಬಿಲ್ಲಿಗೆ ಬೌದ್ಧಮತನಿರ್ಣಯವನ್ನು ಹೇಳುವ ಮೂರನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



ಶ್ರೀಃ

## ಜೈನಮತಭೇದಃ.

ರೇ—ಹೇ ಚೋಳ! ಜೈನಮತಭೇದಶ್ಶ್ರೂಯತಾಂ, "ವದಂತಿ ಸಪ್ತತತ್ವಾನಿ ನವ ತತ್ವಾನಿ ಕೇಚನ ||ಆರ್ಹತಾಂ ಕೇನ ತಚ್ಛಾಸ್ತ್ರಂ ದ್ವಿಧೈವ ಪರಿಪಠ್ಯತೇ|| ಜೀವಾಜೀವಾ ಶ್ರವಾಶ್ಚೈವಸಂವರೋ ನಿರ್ಜರಸ್ತಥಾ|| ಬಂಧೋ ಮೋಕ್ಷ ಇತಿ ಖ್ಯಾತಾಸ್ಸಪ್ತಭಂಗ್ಯೋ ಜಿನಾಗಮೇ||ದರ್ಶನಜ್ಞಾನಚಾರಿತ್ರೈಃ ಪಂಚಭಿಃ ಪರಮೇಷ್ಠಿಭಿಃ||ವ್ರತೈ ಪಂಚಾಣುಪೂರ್ವೈಶ್ಚ ತ್ಯಕ್ತದ್ರವ್ಯತ್ರಯೈಸ್ಸ್ಮೃತಾಃ ||ಅಹಿಂಸಾಪರಮೋಧರ್ಮಸ್ತತೋ ಧರ್ಮಸ್ತು ನಾಪರಃ || ಪಶುಹಿಂಸಾಪರೋ ಯಜ್ಞಃ ಕಥಂ ಧರ್ಮಮಯೋ ಭವೇತ್||ಪಶುಶ್ಚೇನ್ನಿಹತಸ್ಸ್ವರ್ಗಂ ಜೋತಿಷ್ಟೋಮೇ ಗಮಿಷ್ಯತಿ||ಸ್ವಪಿತಾ ಯಜಮಾನೇನ ತತ್ರ ಕಸ್ಮಾನ್ನಹಿಂಸ್ಯತೇ'' ಇತ್ಯಾದಿಪ್ರಸಿದ್ಧಂ.

ಇತಿ ಜೈನಮತಭೇದನಿರ್ಣಯಸ್ತೃತೀಯೋಪದೇಶೇ ಪಂಚಮಸ್ಸಂವಾದಃ.

---

### ಜೈನಮತನಿರ್ಣಯವು.

ರೇ—ಎಲೈ ಚೋಳನೇ ! ಆ ಸರ್ವದರ್ಶನಸಿದ್ಧಾಂತದಲ್ಲಿ ಹೇಳಲ್ಪಟ್ಟಿರುವ ಜೈನಭೇದವನ್ನು ಕೇಳು; ಜೈನಶಾಸ್ತ್ರವು—ಏಳು ತತ್ವಗಳೆಂದು ಹೇಳತಕ್ಕದೊಂದು, ಒಂಭತ್ತು ತತ್ವಗಳನ್ನು ಹೇಳತಕ್ಕದೊಂದು, ಹೀಗೆ ಎರಡುಬಗೆಯಾಗಿದೆ. ಜೀವ, ಅಜೀವ, ಆಶ್ರವ, ಸಂವರ, ನಿರ್ಜರ, ಬಂಧ, ಮೋಕ್ಷಗಳೆಂದು ಸಪ್ತಭಂಗಿಗಳು ಜಿನಾಗಮದಲ್ಲಿ ಪ್ರಸಿದ್ಧವಾಗಿರುವ ದರ್ಶನ. ಜ್ಞಾನ, ಚರಿತ್ರಗಳಿಂದಲೂ, ಪ್ರಣವಸ್ವರೂಪರೆನಿಸಿದ ಆರ್ಹತ, ಅಶರೀರ, ಆಚಾರ್ಯ ಉಪಾಧ್ಯಾಯ, ಮುನಿ, ಎಂಬ ಪಂಚಪರಮೇಷ್ಠಿಗಳಿಂದಲೂ, ಸುಳ್ಳು, ಕೊಲೆ, ಕಳವು ಅನ್ಯರ ಮಡದಿಯರಲ್ಲಿ ಇಚ್ಛೆ, ಅತ್ಯಾಶೆಗಳನ್ನು ಬಿಟ್ಟು; ಪಂಚಾಣುವ್ರತಗಳಿಂದಲೂ ಕೂಡಿದವನಾಗಿ, ಅತ್ತಿಹಣ್ಣು, ಜೇನುತುಪ್ಪ, ಗಿಣ್ಣಹಾಲು, ಈ ಮೂರನ್ನು ಬಿಟ್ಟವನೇ ಜೈನನೆಂದು ಹೇಳಲ್ಪಡುವನು. ಪ್ರಾಣಿಹಿಂಸೆಯಂ ಮಾಡದಿರುವಿಕೆ ಎಂಬ ಧರ್ಮಕ್ಕಿಂತ ಶ್ರೇಷ್ಠವಾದ ಧರ್ಮವಿಲ್ಲವು. ಪಶುಹಿಂಸೆಯನ್ನು ಮಾಡುವ ಯಜ್ಞವು ಧರ್ಮವಲ್ಲವು. 'ಜ್ಯೋತಿಷ್ಟೋಮರೂಪವಾದ ಯಾಗದಲ್ಲಿ ಕೊಲ್ಲಲ್ಪಡುವ ಪಶುವು ಯಜಮಾನನನ್ನು ಸ್ವರ್ಗಕ್ಕೆ ಕಳುಹಿಸುವುದಾದರೆ, ಯಜ್ಞದಲ್ಲಿ ಯಜಮಾನನು ತನ್ನ ತಂದೆಯನ್ನು ಯಾವಕಾರಣದಿಂದ ಕೊಲ್ಲುವುದಿಲ್ಲವೆ' ಇತ್ಯಾದಿ ವಚನವು ಪ್ರಸಿದ್ಧವಾಗಿದೆ.

ಎಂಬಿಲ್ಲಿಗೆ ಜೈನಮತನಿರ್ಣಯವನ್ನು ಹೇಳುವ ಮೂರನೆಯ ಉಪದೇಶದಲ್ಲೈದನೆಯ ಸಂವಾದವು ಮುಗಿದುದು.

ಶ್ರೀಃ.

# ಚಾರ್ವಾಕಮತಭೇದಃ.

ರೇ—ಭೋ ಚೋಳ! ತತ್ರ ಚಾರ್ವಾಕಮತಭೇದಶ್ಶ್ರೂಯತಾಂ, "ತತ್ರ ಪ್ರತ್ಯಕ್ಷಸಿದ್ಧಾನಾಂ ಬಾಧಕಂ ಸರ್ವಬೋಧಕಂ || ಇತಿ ಲೋಕಾಯತಮತಂ ದ್ವೇಧಾ ವ್ಯಾಖ್ಯಾತೃಭೇದತಃ || ಲೋಯತಿಕಪಕ್ಷೇ ತು ತತ್ವಂ ಭೂತಚತುಷ್ಟಯಂ || ಪೃಥಿವ್ಯಾಪಸ್ತಥಾ ತೇಜೋ ವಾಯುರಿತ್ಯಪಿ ನಾಪರಃ || ಜಡಭೂತವಿಕಾರೇಷು ಚೈತನ್ಯಂ ಯತ್ತು ದೃಶ್ಯತೇ || ತಾಂಬೂಲೀಪೂಗಚೂರ್ಣಾನಾಂ ಯೋಗಾದ್ರಾಗ ಇವೋತ್ಥಿತಃ || ಸ್ವಭಾವೇನ ಸುಖಂ ದುಃಖಂ ಯತೋಽನ್ಯನ್ನೈವ ಕಾರಣಂ || ಶಿಖಿನೋಽಚಿತ್ರಯತ್ಕೋ ವಾ ಕೋಕಿಲಾಂಶ್ಚಾಪ್ಯಕೂಜಯತ್ || ಸ್ಥೂಲಃ ಕೃಶತರೋ ವೃದ್ಧೋ ಯುವೇತ್ಯಾದಿವಿಶೇಷಣೈಃ || ವಿಶಿಷ್ಟೋ ದೇಹ ಏವಾತ್ಮಾ ನ ತತೋ ನ್ಯೋ ವಿಲಕ್ಷಣಃ || ಇಹಲೋಕಾತ್ಪರೋ ನಾನ್ಯಸ್ಸ್ವರ್ಗೋಽಸ್ತಿ ನರಕೋ ನ ಚ || ಸ್ವರ್ಗಾನುಭೂತಿರ್ದೃಷ್ಟಾತ್ರ ದ್ವ್ಯಷ್ಟವರ್ಷವಧೂರತಿಃ || ಕ್ಷೌಮವಸ್ತ್ರಸುಗಂಧಸ್ರ

## ಚಾರ್ವಾಕಮತಭೇದವು.



ರೇ—ಎಲೈ ಚೋಳನೇ! ಆ ಸರ್ವದರ್ಶನಸಿದ್ಧಾಂತದಲ್ಲಿ ಚಾರ್ವಾಕಮತಭೇದವನ್ನು ಕೇಳು; "ಕಣ್ಣಿಗೆ ಕಾಣಿಸುತ್ತಿರುವ ವಸ್ತುಗಳನ್ನು ಕುರಿತು ವ್ಯಾಖ್ಯಾನಮಾಡತಕ್ಕವರ ಅಭಿಪ್ರಾಯಭೇದದಿಂದ ಆ ಚಾರ್ವಾಕಮತವು—ಸರ್ವಬಾಧಕಚಾರ್ವಾಕ, ಸರ್ವಬೋಧಕಚಾರ್ವಾಕ ಎಂದು ಎರಡುಬಗೆಯಾಗಿ ಹೇಳಲ್ಪಟ್ಟಿತು. ಈ ಚಾರ್ವಾಕರು—ಭೂಮಿ, ನೀರು, ಬೆಂಕಿ, ಗಾಳಿ ಎಂಬ ನಾಲ್ಕೇ ತತ್ವಗಳನ್ನಂಗೀಕರಿಸಿರುತ್ತಾರೆ. ವೀಳ್ಯದೆಲೆ, ಅಡಿಕೆ, ಸುಣ್ಣ ಈ ಮೂರು ಪದಾರ್ಥಗಳ ಸಂಬಂಧದಿಂದ ಅರುಣ್ಯವು ಹುಟ್ಟುವಂತೆ ಜಡವಾದ ಭೂತವಿಕಾರಗಳಲ್ಲಿ ಚೈತನ್ಯವು ತೋರುತ್ತದೆ. ನವಿಲಿನಲ್ಲಿ ನಾನಾಬಣ್ಣಗಳು ಕೋಗಿಲೆಯಲ್ಲಿ ಪಂಚಮಸ್ವರವು ಸ್ವಭಾವದಿಂದ ಹುಟ್ಟುವಂತೆ ಸುಖದುಃಖಗಳು ಪ್ರಾಣಿಗಳಿಗೆ ಸ್ವಭಾವದಿಂದ ಉಂಟಾಗುತ್ತವೆ. ಸ್ಥೂಲತ್ವ, ಕೃಶತ್ವ, ವೃದ್ಧತ್ವ, ಯೌವನ ಮೊದಲಾದ ಧರ್ಮಗಳಿಂದ ಕೂಡಿದ ದೇಹವೇ ಆತ್ಮನು, ಇದಕ್ಕಿಂತ ಬೇರೆಯಾದ ಆತ್ಮನಿಲ್ಲವು. ಈ ಲೋಕಕ್ಕಿಂತ ಬೇರೆ ಸ್ವರ್ಗ ನರಕಾದಿಗಳಿಲ್ಲ. ಹದಿನಾರುವರ್ಷ ಪ್ರಾಯವುಳ್ಳ ಹುಡುಗಿಯಲ್ಲಿ ರತಿಸುಖಾನುಭವವು, ಪಟ್ಟವಸ್ತ್ರಧಾರಣ, ಸುಗಂಧದ್ರವ್ಯಾನುಭವ ಪುಷ್ಪಮಾಲಿಕಾಧಾರಣ, ಚಂದನಾದ್ಯನುಲೇಪಗಳೇ ಸ್ವರ್ಗಸುಖಾನುಭವಗಳಾಗಿರುತ್ತವೆ. ಅದು ಈ ಲೋಕದಲ್ಲೇ ಪ್ರತ್ಯಕ್ಷಸಿದ್ಧವಾಗಿದೆ. ಶತ್ರುಗಳಿಂದಲೂ, ಆಯುಧಗಳಿಂದಲೂ, ರೋಗಗಳಿಂ

ಕ್ಷಂದನಾದಿನಿಷೇವಣಂ ‖ ನರಕಾನುಭವೋ ವೈರಿಶಸ್ತ್ರವ್ಯಾಧ್ಯಾದ್ಯುಪದ್ರವಃ ‖ ಕ್ಷಾಹಾರಃ ಸ್ತ್ರೀವಿಯೋಗಃ ಪರಸೇವಾದಿಕೋಽಭವೇತ್ ‖ ಮೋಕ್ಷಸ್ತು ಮರಣಂ ಪ್ರಾಣಸಂಜ್ಞಾವಾಯುನಿವರ್ತನಂ ‖ ಅತಸ್ತದರ್ಥಮಾಯಾಸಂ ಕರ್ತುಂ ನಾರ್ಹಂತಿ ಪಂಡಿತಾಃ ‖ ಯಾವಜ್ಜೀವಂ ಸುಖಂ ಜೀವೇದೃಣಂ ಕೃತ್ವಾ ಘೃತಂ ಪಿಬೇತ್ ‖ ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ‖ ಯದಿ ಗಚ್ಛೇತ್ಪರಂ ಲೋಕಂ ದೇಹಾದೇಷ ವಿನಿರ್ಗತಃ ‖ ಕಸ್ಮಾದ್ಭೂಯೋ ನ ಚಾಯಾತಿ ಬಂಧುಸ್ನೇಹಸಮಾಕುಲಃ ‖ ಪ್ರತ್ಯಕ್ಷಗಮ್ಯಮೇವಾಸ್ತಿ ನಾಸ್ತ್ಯದೃಷ್ಟಮದೃಷ್ಟತಃ ‖ ಅದೃಷ್ಟವಾದಿಭಿಃ ಕ್ವಾಪಿ ನಾದೃಷ್ಟಂ ದೃಷ್ಟಮುಚ್ಯತೇ ‖ ಕೃಷಿಗೋರಕ್ಷವಾಣಿಜ್ಯದಂಡನೀತ್ಯಾದಿಭಿರ್ಬುಧಃ ‖ ದೃಷ್ಟೈರೇವ ಸದೋಪಾಯೈರ್ಭೋಗಾನನುಭವೇದಿತಿ ''

ಇತಿ ಚಾರ್ವಾಕಮತಭೇದನಿರ್ಣಯಸ್ತೃತೀಯೋಪದೇಶೇ

ಷಷ್ಠಸ್ಸಂವಾದಃ.



ವಲೂ, ಕದನ್ನಭೋಜನದಿಂದಲೂ, ಸ್ತ್ರೀವಿರಹದಿಂದಲೂ, ದುಃಖವನ್ನನುಭವಿಸುವುದೇ ನರಕಾನುಭವವಾಗಿದೆ. ಮರಣವೇ ಮೋಕ್ಷವೆನಿಸುವುದು. ಪ್ರಾಣವು ಈ ದೇಹವನ್ನು ಬಿಟ್ಟು ಹೋಗುವುದೇ ಮರಣವು. ಈ ಕಾರಣದದೆಸೆಯಿಂದ ಪಂಡಿತರು ಆ ಮೋಕ್ಷವನ್ನು ಹೊಂದುವುದಕ್ಕಾಗಿ ಶ್ರಮಪಡತಕ್ಕವರಲ್ಲವು. ಈ ಲೋಕದಲ್ಲಿ ಸುಖದಿಂದಿರುವಿಕೆಯೇ ಸ್ವರ್ಗಾನುಭವವಾಗಿರುವುದರಿಂದ ಬದುಕಿರುವವರೆಗೂ ಸಾಲವನ್ನಾದರೂ ಮಾಡಿ ತುಪ್ಪವನ್ನು ಕುಡಿದು ಸುಖದಿಂದಿರಬೇಕು. ಏಕೆಂದರೆ, ಸುಟ್ಟು ಬೂದಿಯಾದ ಬಳಿಕ ದೇಹಕ್ಕೆ ಪುನರಾಗಮನವಿಲ್ಲವು. ದೇಹವನ್ನು ಬಿಟ್ಟು ಹೋದ ಪ್ರಾಣವು ಪರಲೋಕವನ್ನು ಹೊಂದಿದರೆ ಈ ಲೋಕದಲ್ಲಿರುವ ಬಂಧುಗಳಲ್ಲಿರುವ ಪ್ರೇಮದಿಂದ ಹಿಂದಿರುಗಿ ಈ ಲೋಕಕ್ಕೆ ಏಕೆ ಬರುವುದಿಲ್ಲ. ಕಣ್ಣಿಗೆ ಕಾಣತಕ್ಕುದೆಯಲ್ಲದೆ ಕಾಣದಿರುವುದಿಲ್ಲವು. ಅದೃಷ್ಟವಾದಿಗಳಿಂದ ಅದೃಷ್ಟರೂಪವಾದ ಕಾರಣದಿಂದ ಕಾಣದಿರುವುದು ಕಾಣಲ್ಪಟ್ಟಿತೆಂದು ಎಲ್ಲೂ ಹೇಳಲ್ಪಟ್ಟಿರುವುದಿಲ್ಲವು. ವಿದ್ವಾಂಸನು—ಕೃಷಿ, ಗೋರಕ್ಷಣೆ, ವಾಣಿಜ್ಯ, ದಂಡನೀತಿ ಮೊದಲಾದ ಕಾಣುತ್ತಿರುವ ಉಪಾಯಗಳಿಂದಲೇ ಎಲ್ಲಾಗಲೂ ಸುಖಗಳನ್ನನುಭವಿಸಬೇಕು,, ಎಂದುಕ್ತವಾಗಿದೆ. ಇದೇ ಸರ್ವಬಾಧಕಚಾರ್ವಾಕಮತವು.

ಎಂಬಿಲ್ಲಿಗೆ ಚಾರ್ವಾಕಮತಭೇದನಿರ್ಣಯವನ್ನು ಹೇಳುವ ಮೂರನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ಶ್ರೀಃ

## ಸರ್ವಮತದರ್ಶನಪ್ರಾಪ್ಯಸ್ಥಾನಭೂತಶಿವಪದ ಸ್ವರೂಪನಿರ್ಣಯಃ.



ಚೋ—ಶ್ರೀ ರೇವಣಸಿದ್ಧೇಶ ! ಷಣ್ಮತಾನಾಂ ಷಡ್ದರ್ಶನಾನಾಂ ಷಡ್ವಾದಾನಾಂ ಚ ನಾಮಾನಿ ಸರ್ವಪ್ರಾಪ್ಯಸ್ಥಾನಸ್ವರೂಪಂ ಚ ನಿಗದ್ಯತಾಂ,

ರೇ—ಭೋ ಚೋಳ ! ಪ್ರಕಾರಾಂತರೇಣ ಮತದರ್ಶನವಾದನಾಮಧೇಯಾನ್ಯಾಕರ್ಣ್ಯ, ತದನಂತರಂ ಸರ್ವಪ್ರಾಪ್ಯಸ್ಥಾನಶಿವಪದಸ್ವರೂಪಂ ಶ್ರೂಯತಾಂ, ಶಾಸ್ತ್ರಾಂತರೇ,—"ತಾನಿ ಲೋಕಾಯತಂ ಬೌದ್ಧಮಾರ್ಹತಂ ಶೈವವೈಷ್ಣವೇ|| ವೈದಿಕಂ ಚೇತಿ ಭಿನ್ನಾನಿ ಷಣ್ಮತಾನಿ ವದಂತಿ ತೇ || ಸೌರಂ ವೈನಾಯಕಂ ಬ್ರಾಹ್ಮಂ ಶಾಕ್ತೇಯಂ ಶೈವವೈಷ್ಣವೇ ||ಇತ್ಯಾಹುರ್ದರ್ಶನಾನ್ಯನ್ಯೇ ಷಡ್ದೈವತಸಮಾಶ್ರಯಾತ್ ||ಕಾಲವಾದಃ ಕರ್ಮವಾದೋ ಮಾಯಾವಾದೋ ನಿರೀಶ್ವರಃ|| ಸೇಶ್ವರಶ್ಚ ತತೋ ಬಹ್ವೀಶ್ವರೋ ವಾದಾಷ್ಷಡೀರಿತಾಃ" ಮಾನವಪುರಾಣೇ,-ಮನುಃ, "ಮಾರ್ಗೋ ವೇದವಿರುದ್ಧೋ ಯಸ್ಸೋಽಪಿ ಕಾಲೇನದೇಹಿನಾಂ|| ತತ್ತನ್ಮಾರ್ಗಾಭಿಮಾನಿನ್ಯಾ ದೇವತಾಯಾಃ ಪ್ರಸಾದತಃ||ಹೇತುಸ್ಸ್ಯಾದ್ವೇದಮಾರ್ಗಸ್ಯ ಪ್ರಾಪ್ತಯೇ ನ ಹಿ ಸಂಶಯಃ ||

---

### ಸರ್ವಮತದರ್ಶನಗಮ್ಯಸ್ಥಾನವಾದ ಶಿವಪದಸ್ವರೂಪನಿರ್ಣಯವು.

ಚೋ—ಶ್ರೀ ರೇವಣಸಿದ್ಧೇಶನೇ ! ಷಣ್ಮತ, ಷಡ್ದರ್ಶನ, ಷಡ್ವಾದಗಳ ನಾಮಧೇಯಗಳನ್ನೂ, ಸರ್ವರಿಂದ ಹೊಂದುವುದಕ್ಕೆ ಯೋಗ್ಯವಾದ ಸ್ಥಾನದ ಸ್ವರೂಪವನ್ನೂ ನಿರೂಪಿಸು.

ರೇ—ಎಲೈ ಚೋಳನೇ ! ಬೇರೊಂದು ರೀತಿಯಿಂದ ಷಣ್ಮತ ಷಡ್ದರ್ಶನವಾದಗಳ ಹೆಸರುಗಳನ್ನು ಕೇಳಿದ ಬಳಿಕ ಸರ್ವಮತದವರಿಂದಲೂ ಹೊಂದಲಿಕ್ಕೆ ಯೋಗ್ಯವಾದ ಸ್ಥಾನವೆನಿಸಿದ ಶಿವಾಖ್ಯವಾದ ವಸ್ತುವಿನ ಸ್ವರೂಪವನ್ನು ಕೇಳು, ಶಾಸ್ತ್ರಾಂತರದಲ್ಲಿ—"ಪರಸ್ಪರ ಭಿನ್ನವಾಗಿರುವ ಲೋಕಾಯತ, ಬೌದ್ಧ, ಆರ್ಹತ, ಶೈವ, ವೈಷ್ಣವ, ವೈದಿಕಗಳೆಂಬವುಗಳನ್ನು ಷಣ್ಮತಗಳೆಂದೂ, ಸೌರ, ವೈನಾಯಕ, ಬ್ರಾಹ್ಮ, ಶಾಕ್ತೇಯ, ಶೈವ, ವೈಷ್ಣವಗಳು ಷಡ್ದರ್ಶನಗಳೆಂದೂ, ಕಾಲವಾದ, ಕರ್ಮವಾದ, ಮಾಯಾವಾದ, ನಿರೀಶ್ವರವಾದ, ಸೇಶ್ವರವಾದ, ಬಹ್ವೀಶ್ವರವಾದಗಳು ಷಡ್ವಾದಗಳೆಂದೂ ಹೇಳಲ್ಪಟ್ಟದೆ. ಮಾನವಪುರಾಣದಲ್ಲಿ—"ವೇದವಿರುದ್ಧವಾದ ಮಾರ್ಗವು ಜೀವರಿಗೆ ಆಯಾ ಮಾರ್ಗಕ್ಕೆ ಭಿಮಾನಿಯಾದ ದೇವತೆಯ ಅನುಗ್ರಹದದೆಸೆಯಿಂದ ವೇದಮಾರ್ಗಪ್ರಾಪ್ತಿಗೆ ಕಾರಣವಾಗುವುದು. ಈ ವಿಷಯದಲ್ಲಿ ಸಂಶಯವಿಲ್ಲವು. ವೇದಮಾರ್ಗದಲ್ಲಿ ರತಕ್ಕೆ ರುದ್ರನು ಮುಕ್ತಿಪ್ರದನಾಗಿರುತ್ತಾನೆ,, ಎಂದುಕ್ತವಾಗಿದೆ. ಸತ್ವದರ್ಶನಸಿದ್ಧಾಂತದಲ್ಲಿ—

ವೇದಮಾರ್ಗಸ್ಥಿತೋ ರುದ್ರಸ್ಸಾಕ್ಷಾನ್ಮುಕ್ತಿಫಲಪ್ರದಃ '' ಸರ್ವದರ್ಶನಸಿದ್ಧಾಂತ್ಸ್ವ
'' ವಾದಿಭಿರ್ದರ್ಶನೈಸ್ಸರ್ವೈರ್ದೃಶ್ಯತೇ ವಸ್ತ್ವನೇಕವತ್ ‖ ವೇದಾಂತವೇದ್ಯಂ
ರುದ್ರಮೇಕರೂಪಮುಪಾಸ್ಮಹೇ '' ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭ
ಖಂಡೇ,—'' ಯಥಾ ತೋಯಪ್ರವಾಹಾಣಾಂ ಸಮುದ್ರಃ ಪರಮಾವಧಿಃ ‖ ತ
ವ ಸರ್ವಜೀವಾನಾಮೇಕೋ ದೇವೋ ಮಹೇಶ್ವರಃ '' ಇತ್ಯಾದಿಪ್ರಸಿದ್ಧಂ.

ಇತಿ ಸರ್ವಮತದರ್ಶನಪ್ರಾಪ್ಯಸ್ಥಾನಭೂತಶಿವಪದಸ್ವರೂಪನಿರ್ಣಯಸ್ತೃ
ತೀಯೋಪದೇಶೇ ಸಪ್ತಮಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳ
ರೇಣುಕಸಂವಾದರೂಪಶಿವಾಧಿಕ್ಯಶಿಖಾಮಣೌ ಕಾಪಾಲಿಕಾ
ದಿಸಪ್ತಸಂವಾದವಿಚಾರಸ್ತೃತೀಯೋಪದೇಶಃ.



''ಸಮಸ್ತವಾದಿಗಳಿಂದಲೂ, ದರ್ಶನದವರಿಂದಲೂ, ಅದ್ವಿತೀಯವಾಗಿರುವ ಪರಬ್ರಹ್ಮವು
ಅನೇಕಪ್ರಕಾರವಾಗಿ ತಿಳಿಯಲ್ಪಡುತ್ತದೆ. ಉಪನಿಷದ್ವೇದ್ಯನಾದ, ಆ ರುದ್ರಪದವಾಚ್ಯ
ಶಿವನನ್ನು ಏಕರೂಪನನ್ನಾಗಿ ಉಪಾಸಿಸುತ್ತೇವೆ,, ಎಂದು ನಿರೂಪಿಸಲ್ಪಟ್ಟಿದೆ. ಸ್ಕಾಂದ
ರುವ ಸೂತಸಂಹಿತೆಯಲ್ಲಿಯ ಯಜ್ಞವೈಭವಖಂಡದಲ್ಲಿ —''ಜಲಪ್ರವಾಹಗಳಿಗೆ ಸಮು
ಪ್ರಾಪ್ಯಸ್ಥಾನವಾಗಿರುವಂತೆ ಸಕಲ ಜೀವರಿಗೆ ಮಹೇಶ್ವರನೊಬ್ಬನೇ ಪ್ರಾಪ್ಯಸ್ಥಾನ
ತ್ತಾನೆ,, ಎಂದು ಹೇಳಲ್ಪಟ್ಟಿದೆ. ಇತ್ಯಾದಿಯಾದುದು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಸರ್ವಮತದರ್ಶನಗಮ್ಯಸ್ಥಾನವಾದ ಶಿವಪದಸ್ವರೂಪನಿರ್ಣಯವನ್ನು ಹೇಳು
ಮೂರನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.



ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ
ಟಿಪ್ಪಣಿಯಲ್ಲಿ ಮೂರನೆಯ ಉಪದೇಶವು ಸಂಪೂರ್ಣವಾಯಿತು.



ಶ್ರೀಮಹಾನಟಾಯನಮಃ.

# ಚತುರ್ಥೋಽಪದೇಶಃಪ್ರಾರಭ್ಯತೇ.



## ವಿಷ್ಣುಪದವಿಗ್ರಹನಿರ್ಣಯಃ.

ಚೋಳಃ—ಸ್ವಾಮಿನ್ ರೇಣುಕಗಣೇಶ ! "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ" ಇತಿ ಋಗ್ವೇದವಾಕ್ಯಾತ್ ವಿಷ್ಣೋರೇವ ಸಕಲಜೀವ ಪ್ರಾಪ್ಯಪರಮಸ್ಥಾನತ್ವಮಭಿಹಿತಂ, ನ ತು ರುದ್ರಸ್ಯ. ತತ್ರತ್ಯವಿಷ್ಣುಪದಂ—ನಾರಾಯಣಪ್ರಸಿದ್ಧಂ "ವಿಷ್ಣುರ್ನಾರಾಯಣಃ ಕೃಷ್ಣಃ" ಇತ್ಯಮರವಾಕ್ಯಾತ್ ಕಿಂತು ವ್ಯಾಪ್ತ್ಯರ್ಥಕೇನ ವಿಷ್ಲ್ ಧಾತುನಾ ನಿಷ್ಪನ್ನಂ, ವ್ಯಾಪ್ತುಂ ಶೀಲಮಸ್ಯಾಸ್ತೀತ್ಯಸ್ಯ ವಿಗ್ರಹಃ ಕಾರ್ಯಃ.

ಶ್ರೀ ರೇಣುಕಃ—ಭೋ ಚೋಳ! ತಥಾವಿಷ್ಣುಪದಸ್ಯ ವಿಗ್ರಹೋ ನ ಕರ್ತವ್ಯಃ, ವಿಃ—ಪಕ್ಷೀ ಗರುಡಃ ಇತ್ಯರ್ಥಃ. "ವಿವಿಷ್ಕಿರಪತತ್ರಯಃ" ಇತ್ಯಮರೋಕ್ತೇಃ, ತೇನ, ಷ್ಣಾತಿ ಗಚ್ಛತೀತಿ ವಿಷ್ಣುಃ ಷ್ಣುಗತಾವಿತಿ ಧಾತೋಃ, ಇತ್ಥಂ ತಸ್ಯ ವಿಗ್ರಹಃ ಪ್ರಸಿದ್ಧಃ. ತದುಕ್ತಂ "ಗರುಡೇನ ವಿನಾ ಷ್ಣಾತಿ ಗಗನೇ ಮಧುಸೂದನಃ"

---

# ನಾಲ್ಕನೆಯ ಉಪದೇಶ ಪ್ರಾರಂಭವು.

## ವಿಷ್ಣುಪದವಿಗ್ರಹನಿರ್ಣಯವು.

ಚೋಳನು - ಎಲೈ ಸ್ವಾಮಿ! "ವಿಷ್ಣುಪದವನ್ನು ಶ್ರೇಷ್ಠವಾದುದನ್ನಾಗಿ ವಿದ್ವಾಂಸರು ಯಾವಾಗಲೂ ತಿಳಿಯುತ್ತಾರೆ" ಎಂದು ಋಗ್ವೇದವಾಕ್ಯವಿರುವುದರದೆಸೆಯಿಂದ ನಾರಾಯಣನಿಗೇ ಸಕಲ ಜೀವಪ್ರಾಪ್ಯಸ್ಥಾನತ್ವವು ಹೇಳಲ್ಪಟ್ಟಿತು. ಅದು ರುದ್ರನಿಗೆ ಹೇಳಲ್ಪಟ್ಟಿಲ್ಲವು. ಆ ಮಂತ್ರದಲ್ಲಿರುವ ವಿಷ್ಣುಪದವು—"ವಿಷ್ಣುರ್ನಾರಾಯಣಃ ಕೃಷ್ಣಃ" ಎಂದು ಅಮರವಾಕ್ಯವಿರುವುದರಿಂದ ನಾರಾಯಣನಲ್ಲಿ ಪ್ರಸಿದ್ಧವಾಗಿದೆ. ವ್ಯಾಪ್ತ್ಯರ್ಥಕವಾದ ವಿಷ್ಲ್ ಎಂಬ ಧಾತುವಿನಿಂದುಂಟಾಗಿದೆ. ಇದಕ್ಕೆ ವ್ಯಾಪ್ತುಂ ಶೀಲಮಸ್ಯ ಎಂದು ವಿಗ್ರಹವು.

ಶ್ರೀ ರೇಣುಕನು—ಎಲೈ ಚೋಳನೇ ! ನೀನು ಹೇಳಿರುವ ಪ್ರಕಾರವಾಗಿ ವಿಷ್ಣುಶಬ್ದಕ್ಕೆ ವಿಗ್ರಹವನ್ನು ಮಾಡಲಾಗದು. "ವಿವಿಷ್ಕಿರಪತತ್ರಯಃ" ಎಂದು ಅಮರವಾಕ್ಯವಿರುವುದರಿಂದ, ವಿಃ ಎಂದರೆ ಪಕ್ಷಿಯು—ಗರುಡನೆಂದರ್ಥವು. ತೇನ-ಆ ಗರುಡನಿಂದ, ಷ್ಣಾತಿ—ಸಂಚಾರಮಾಡುತ್ತಾನೆ. ಆದ್ದರಿಂದ ನಾರಾಯಣನು ವಿಷ್ಣುವೆಂಬ ನಾಮವನ್ನು ಹೊಂದಿರುತ್ತಾನೆ. ಷ್ಣಾತಿ ಎಂಬುವದು ಗತ್ಯರ್ಥಕವಾದ ಷ್ಣು ಎಂಬ ಧಾತುವಿನ ಪ್ರಥಮಪುರುಷೈಕವಚನರೂಪವಾ

ಇತಿ. ಅತಸ್ತಸ್ಮಿನ್ಮಂತ್ರೇ ವಿಷ್ಣೋರಿತಿ ಪಂಚಮೀವಿಭಕ್ತಿಃ. ಪದಂ-ರುದ್ರಪದಂ, ಮಂ—ಶ್ರೇಷ್ಠಂ, ವಿಷ್ಣುಸ್ಥಾನಾತ್ ಶೈವಂ ಪದಂ ಶ್ರೇಷ್ಠಮಿತ್ಯರ್ಥಃ. ತದುಕ್ತಂ ಶಿವಸಂಕಲ್ಪೋಪನಿಷದಿ,—"ಪರಾತ್ಪರತರೋ ಬ್ರಹ್ಮಾ ತತ್ಪರಾತ್ಪರತೋ ಹರಿಃ ತತ್ಪರಾತ್ಪರತಶ್ಶಂಭುಃ ತನ್ಮೇ ಮನಶ್ಶಿವಸಂಕಲ್ಪಮಸ್ತು" ಇತಿ. ಪರಾಶರಪುರಾಣೇ,—ಪರಾಶರಃ, "ಸ್ಸದೇವತಾಭ್ಯಸ್ಸಮಸ್ತಾಭ್ಯಸ್ಸ್ರಷ್ಟಾ ಬ್ರಹ್ಮಾ ಪರಸ್ಸ್ಮೃತಃ ಬ್ರಹ್ಮಣಸ್ತು ಮಹಾವಿಷ್ಣುರ್ವರಿಷ್ಠಸ್ಸರ್ವಪಾಲಕಃ ‖ ವಿಷ್ಣೋರಪಿ ವರಸ್ಸಾಕ್ಷಾದ್ರುದ್ರಸ್ಸಂಹಾರಕಾರಕಃ ‖ ಸರ್ವೇಷಾಮಪಿ ದೇವಾನಾಂ ವರಿಷ್ಠಃ ಪರಮಶ್ಶಿವಃ" (ತದ್ವಿಷ್ಣೋಃ ಪರಮಂ ಪದಮಿತಿ ಶ್ರುತ್ಯರ್ಥಪ್ರಕಾಶಕೇ ಪುರಾಣವಚನೇ ಪಂಚಮೀವಿಭಕ್ತಿರ್ನಿಶ್ಚಿತವ್ಯಾ) ಬ್ರಹ್ಮಗೀತಾಯಾಂ,—ಬ್ರಹ್ಮಾ, "ಪದಂ ಯತ್ಪರಮಂ ವಿಷ್ಣೋಸ್ತದೇವಾಖಿಲದೇಹಿನಾಂ ‖ ಪದಂ ಪರಮಮದ್ವೈತಂ ಸ ಶಿವಸ್ಸಾಂಬ ಈಶ್ವರಃ" ಇತಿ.

ಇತಿ ವಿಷ್ಣುಪದವಿಗ್ರಹನಿರ್ಣಯಶ್ಚತುರ್ಥೋಪದೇಶೇ ಪ್ರಥಮಸ್ಸಂವಾದಃ



ಗಿದೆ. ಈ ರೀತಿಯಾಗಿ ಅದಕ್ಕೆ ವಿಗ್ರಹವು ಪ್ರಸಿದ್ಧವಾಗಿದೆ. ಆ ವಿಷಯವು "ನಾರಾಯಣನು ಅಂತರಿಕ್ಷದಲ್ಲಿ ಗರುಡವಾಹನನಾಗಿ ಸಂಚರಿಸುತ್ತಾನೆ" ಎಂದು ಹೇಳಲ್ಪಟ್ಟಿದೆ. ಅಷ್ಟೇ ಆ ಮಂತ್ರದಲ್ಲಿರುವ 'ವಿಷ್ಣೋಃ' ಎಂಬ ಪದವು ಪಂಚಮೀವಿಭಕ್ತಿಯೆಂದು ತಿಳಿಯಬೇಕು. ವಿಷ್ಣುಪದಕ್ಕಿಂತಲೂ ರುದ್ರಪದವು ಶ್ರೇಷ್ಠವೆಂದು ಅರ್ಥವು. ಆ ವಿಷಯವು ಶಿವಸಂಕಲ್ಪೋಪನಿಷತ್ತಿನಲ್ಲಿ—"ಬ್ರಹ್ಮನು ಸರ್ವೋತ್ಕೃಷ್ಟವಾದ ಇಂದ್ರಾದಿ ದೇವಸಮೂಹಕ್ಕಿಂತಲೂ ಶ್ರೇಷ್ಠನು. ಆ ಬ್ರಹ್ಮನದೆಸೆಯಿಂದ ನಾರಾಯಣನು ಶ್ರೇಷ್ಠನು. ಆ ವಿಷ್ಣುವಿನದೆಸೆಯಿಂದ ಶಿವನು ಶ್ರೇಷ್ಠನು. ಆ ಶಿವಸ್ವರೂಪವೇ ನನ್ನ ಮನಸ್ಸನ್ನು ಕುರಿತು ಶಿವಸಂಕಲ್ಪವುಳ್ಳದಾಗಲಿ" ಎಂದು ಹೇಳಲ್ಪಟ್ಟಿದೆ. ಪಾರಾಶರಪುರಾಣದಲ್ಲಿ—"ಸಮಸ್ತ ದೇವತೆಗಳಿಗಿಂತ ಸೃಷ್ಟಿಕರ್ತನಾದ ಬ್ರಹ್ಮನು ಶ್ರೇಷ್ಠನು. ಆತನಿಗಿಂತ ಸ್ಥಿತಿಕರ್ತನಾದ ವಿಷ್ಣು ಶ್ರೇಷ್ಠನು. ಆತನಿಗಿಂತ ಸಂಹಾರಕರ್ತೃವಾದ ರುದ್ರನು ಶ್ರೇಷ್ಠನು. ಸಕಲ ದೇವತೆಗಳೊಳಗೆ ಪರಮಶಬ್ದವಾಚ್ಯನಾದ ಶಿವನು ಶ್ರೇಷ್ಠನಾಗಿರ್ಪನು" ಎಂದು ಉಕ್ತವಾಗಿದೆ. ಬ್ರಹ್ಮಗೀತೆಯಲ್ಲಿ—"ವಿಷ್ಣುವಿಗಿಂತ ಅಧಿಕವಾದ ಪರಮಪದವು ಯಾವುದುಂಟೋ ಅದೇ ಸಮಸ್ತ ಜೀವರಿಗೆ ಅದ್ವೈತವಾದ ಪರಮಪದವಾಗುವುದು. ಉಮಾಸಹಿತನಾದ ಶಿವನು ಆ ಪರಮಪದನಾಗಿರುವನು" ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ವಿಷ್ಣುಪದವಿಗ್ರಹನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



ಶ್ರೀಃ

## ನಾರಾಯಣಶಬ್ದವಿಗ್ರಹನಿರ್ಣಯಃ.

ಚೋ–“ ವಿಶ್ವಂ ನಾರಾಯಣಂ ಹರಿಂ ”–“ ಯಚ್ಚ ಕಿಂಚಿಜ್ಜಗತ್ಸರ್ವಂ ”–“ ವ್ಯಾಪ್ಯ ನಾರಾಯಣಸ್ಸ್ಥಿತಃ” ಇತಿ ಯಜುರ್ವೇದ ನಾರಾಯಣೋಪನಿಷದ್ವಾಕ್ಯಬಲಾತ್, ನಾರಾಯಣ ಏವ ಸರ್ವಜಗದ್ವ್ಯಾಪಕ ಇತಿ ನಿಶ್ಚೀಯತೇ.

ರೇ–ಹೇ ಚೋಳ ! ಶಿವಜ್ಞಾನಸಾಮರ್ಥ್ಯಬಲಾನ್ನಾರಾಯಣಸ್ಯ ವ್ಯಾಪಕತ್ವಂ ಸಿದ್ಧಂ, ತದುಕ್ತಂ ವೇದಪಾದಸ್ತವೇ,–“ ಹರಂ ಹರಿನಿಯಂತಾರಂ ಪರಂ ತಮುಪಮಾನತಃ ||ಯದಾಜ್ಞಯಾ ಜಗತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ”– “ನಾರಾಯಣಪರೋಜ್ಯೋತಿರಾತ್ಮಾ” “ನಾರಾಯಣಪರಂಬ್ರಹ್ಮ” ಇತಿ ಪೂರ್ವೋಕ್ತೋಪನಿಷದಿ ವರ್ತತೇ, “ತದ್ವಿಷ್ಣೋಃ ಪರಮಂ ಪದಂ” ಇತ್ಯತ್ರ ಯಥಾ ಪಂಚಮೀವಿಭಕ್ತಿರಿತಿ ಪೂರ್ವಂ ನಿಶ್ಚಿತಾ, ತಥಾಽತ್ರ ನಾರಾಯಣಪರೋಜ್ಯೋತಿಃ, ನಾರಾಯಣಪರಂ ಇತ್ಯುಭಯತ್ರಾಪಿ ಪಂಚಮೀವಿಭಕ್ತಿರ್ನಿಶ್ಚೇತವ್ಯಾ. ತದುಕ್ತಂ ಶಿವಸಂಕಲ್ಪೋಪನಿಷದಿ,–“ಪರಾತ್ಪರತರಂ ಯಚ್ಚ ತತ್ಪರಾಚ್ಚೈವ ಯತ್ಪರಂ| ತತ್ಪರಾತ್ಪರತೋ ಜ್ಞಾನಂ ತನ್ಮೇ ಮನಶ್ಶಿವಸಂಕಲ್ಪಮಸ್ತು” ತಥಾ ಲೈಂಗೇ,–“ಪರಾತ್ಪರತರಂ ಪ್ರಾ

---

### ನಾರಾಯಣಶಬ್ದವಿಗ್ರಹನಿರ್ಣಯವು.

ಚೋ–ನಾರಾಯಣಶಬ್ದವಾಚ್ಯನಾದ ವಿಷ್ಣುವು ವಿಶ್ವರೂಪನೆಂದೂ, ಸಕಲ ಪ್ರಪಂಚ ವ್ಯಾಪಕನೆಂದೂ, ಹೇಳುವ ನಾರಾಯಣೋಪನಿಷದ್ವಾಕ್ಯಗಳ ಬಲದಿಂದ ನಾರಾಯಣನೇ ಸಕಲ ಜಗದ್ವ್ಯಾಪಕನೆಂಬಂಶವು ನಿಶ್ಚೈಸಲ್ಪಡುತ್ತದೆ.

ರೇ–ಎಲೈ ಚೋಳನೇ ! ನಾರಾಯಣನು–ಶಿವಜ್ಞಾನಬಲದಿಂದ ವ್ಯಾಪಕನಾಗಿರ್ಪನು. ಆ ವಿಷಯವು ವೇದಪಾದಸ್ತವದಲ್ಲಿ–“ಯಾವನ ಅಪ್ಪಣೆಯಿಂದ ನಾರಾಯಣನು ಸರ್ವಲೋಕವನ್ನು ವ್ಯಾಪಿಸಿರುತ್ತಾನೋ, ಆ ನಿಯಾಮಕನಾದ ಪರಮಾತ್ಮನಾದ ಹರನನ್ನು ನಮಸ್ಕರಿಸುತ್ತೇನೆ,, ಎಂದುಕ್ತವಾಗಿದೆ. “ತೇಜೋರೂಪನಾದ ಪರಮಾತ್ಮನು ನಾರಾಯಣನಿಗಿಂತ ಪರನು” “ನಾರಾಯಣನಿಗಿಂತ ಪರವಾದದ್ದು ಪರಬ್ರಹ್ಮವು,, ಎಂದು ಪೂರ್ವೋಕ್ತವಾದ ಉಪನಿಷತ್ತಿನಲ್ಲಿ ಉಕ್ತವಾಗಿದೆ. ತದ್ವಿಷ್ಣೋಃ ಪರಮಂ ಪದಂ,, ಎಂಬ ಸ್ಥಳದಲ್ಲಿರುವ ವಿಷ್ಣುಪದವು ಪಂಚಮೀವಿಭಕ್ತ್ಯಂತವಾದುದೆಂದು ನಿಶ್ಚೈಸಲ್ಪಟ್ಟಂತೆ “ನಾರಾಯಣಪರೋಜ್ಯೋತಿಃ,, “ನಾರಾಯಣಪರಂಬ್ರಹ್ಮ” ಎಂಬುಭಯ ಸ್ಥಳಗಳಲ್ಲೂ ಪಂಚಮೀವಿಭಕ್ತಿಯೆಂದು ನಿಶ್ಚಯವಾಗಿ ತಿಳಿಯಬೇಕು. ಲಿಂಗಪುರಾಣದಲ್ಲಿ–“ಶಿವನನ್ನು ಬ್ರಹ್ಮವಿಷ್ಣುವಾಯ್ವಗ್ನಿ ಮೊದಲಾದವರಿಗೆ ತಂದೆಯನ್ನಾಗಿಯೂ, ಪರಕ್ಕಿಂತ ಪರನಾದವನನ್ನಾಗಿಯೂ ಶ್ರುತಿಗಳು ಯಾವಾಗಲೂ

ಹುಃಪರಾತ್ಪರತರಂ ಧ್ರುವಂ|| ಬ್ರಹ್ಮಣೋ ಜನಕಂ ವಿಷ್ಣೋರ್ವಹ್ನೇರ್ವಾಯೋಸ್ಸದಾ ಶಿವಂ'' ಆದಿತ್ಯಪುರಾಣೇ ಮಾನವೀಯಸಂಹಿತಾಯಾಂ,—ವಿಷ್ಣುಃ, "ಹೃತ್ಪುಂಡರೀಕಸುಷಿರೇ ಯೋಗಿನಾಂ ಸಂಸ್ಥಿತಶ್ಶಿವಃ || ವದಂತಿ ಸೂರಯಸ್ತ್ವಾಂ ಪರಬ್ರಹ್ಮಸ್ವರೂಪಿಣಂ || ಭವಂತಂ ತತ್ವಮಿತ್ಯಾಹುಸ್ತೇಜೋರಾಶಿಂ ಪರಾತ್ಪರಂ || ಪರಮಾತ್ಮಾನ ಮಿತ್ಯಾಹುಸ್ಸರ್ವಜ್ಞಂ ತ್ವಾಮನಾಮಯಂ'' ಅತ್ರ ವಿಷ್ಣುವಾಕ್ಯೇನ ಶಿವಸ್ಯ—ಪರಬ್ರಹ್ಮ ಪರಮಾತ್ಮ ಪರತತ್ವ ಪರಮತೇಜೋರಾಶಿಸ್ವರೂಪತ್ವಂ ನಿಶ್ಚಿತಂ, ತಥಾ ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—"ನಾರಾಯಣಾತ್ಪರಂಜ್ಯೋತಿರಾತ್ಮಾ ನಾರಾಯಣಾತ್ಪರಃ || ನಾರಾಯಣಾತ್ಪರಂಬ್ರಹ್ಮ ತತ್ವಂ ನಾರಾಯಣಾತ್ಪರಂ'' ಇತ್ಯಾದಿಬಹುಪ್ರಸಿದ್ಧಂ. ಹೇ ಚೋಳ ! ಇದಾನೀಂ ನಾರಾಯಣಶಬ್ದವಿಗ್ರಹಶ್ಶ್ರೂಯತಾಂ, ನಾರಾಃ—ಆಪಃ ತಾಸು, ಅಯನಂ—ಸ್ಥಾನಂ ಶಯನಂವಾ ಯಸ್ಯಸ ನಾರಾಯಣಃ, ತದುಕ್ತಂ ಸೂತಸಂಹಿತಾಯಾಂ,—"ಆಪೋ ನಾರಾ ನರೋ ರುದ್ರಃ ಪುರುಷಃ ಕೃಷ್ಣಪಿಂಗಲಃ || ತತ್ಸೂನವಸ್ತ್ವಪಸ್ತ್ವಯನಂ ತೇನ ನಾರಾಯಣೋ ಹರಿಃ'' ತಥಾ ಶಿವರಾಘವಸಂವಾದೇ,—"ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ || ತಾಸು ಯಸ್ಯಾಯನಂ ಪ್ರೋಕ್ತಂ ತತೋ ನಾರಾಯಣಸ್ಸ್ಮೃತಃ'' ತಥಾ ಲೈಂಗೇ,—"ಅಪ್ಸು ಶೇತೇ ಯತಸ್ತಸ್ಮಾದಸೌ ನಾರಾಯಣಸ್ಸ್ಮೃತಃ'' ಇತಿ.

---

ಹೇಳುತ್ತಿರುವವು,, ಎಂದುಕ್ತವಾಗಿದೆ. ಮಾನವೀಯಸಂಹಿತೆಯಲ್ಲಿ— "ಎಲೈ ಶಿವನೇ ! ಯೋಗಿಗಳ ಹೃದಯಕಮಲದಲ್ಲಿ ವಾಸಿಸುತ್ತಿರುವ ಆ ನಿನ್ನನ್ನು ಪಂಡಿತರು ಪರಬ್ರಹ್ಮವನ್ನಾಗಿಯೂ, ತೇಜೋರಾಶಿಯನ್ನಾಗಿಯೂ, ಪರತತ್ವವನ್ನಾಗಿಯೂ, ಭವರೋಗರಹಿತನನ್ನಾಗಿಯೂ, ಸರ್ವಜ್ಞನನ್ನಾಗಿಯೂ, ಪರಮಾತ್ಮನನ್ನಾಗಿಯೂ ಹೇಳುತ್ತಾರೆ,, ಎಂದು ವಿಷ್ಣುವಿನಿಂದುಕ್ತವಾದ ಇದರಿಂದ ಶಿವನಿಗೆ ಪರಬ್ರಹ್ಮತ್ವವೂ, ಪರಮಾತ್ಮತ್ವವೂ, ಪರತತ್ವಮಯತ್ವವೂ, ಪರಮತೇಜೋರಾಶಿಸ್ವರೂಪತ್ವವೂ ನಿಶ್ಚೈಸಲ್ಪಟ್ಟಿತು. ಆ ಪ್ರಕಾರವಾಗಿಯೇ ಸನತ್ಕುಮಾರಸಂಹಿತೆಯಲ್ಲಿ- "ತೇಜೋರೂಪವಾದ ಶಿವತತ್ವವು ನಾರಾಯಣನಿಗಿಂತ ಪರವಾದುದು,, ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಎಲೈ ಚೋಳನೇ ! ಈಗ ನಾರಾಯಣಶಬ್ದಕ್ಕೆ ವಿಗ್ರಹವನ್ನು ಕೇಳು; ನಾರಾಃ ಅಯನಂ—ಅಥವಾ ಶಯನಂ—ಯಸ್ಯಸಃ—ಎಂದು ವಿಗ್ರಹವು ಕ್ಷೀರಸಮುದ್ರಜಲದಲ್ಲಿ ಶಯನಮಾಡಿದವನೆಂದರ್ಥವು. ಆ ವಿಷಯವು ಸೂತಸಂಹಿತೆಯಲ್ಲಿ— "ನರಃ ಎಂದರೆ ಶಿವನು; ಶಿವನಿಂದ ಜನಿಸಿದ ಜಲಗಳು ನಾರಾಃ ಎಂದೆನಿಸಿಕೊಳ್ಳುವವು. ಆ ಜಲದಲ್ಲಿ ನಿದ್ರಿಸಿದ ವಿಷ್ಣುವಿಗೆ ನಾರಾಯಣನೆಂಬ ಹೆಸರುಂಟಾಯಿತು,, ಎಂದು ಹೇಳಲ್ಪಟ್ಟಿದೆ. ಈ ವಿಷಯವು ಶಿವರಾಘವಸಂವಾದದಲ್ಲೂ, ಲೈಂಗದಲ್ಲೂ ಹೇಳಲ್ಪಟ್ಟಿದೆ.

ಇತಿ ನಾರಾಯಣಶಬ್ದವಿಗ್ರಹನಿರ್ಣಯಶ್ಚತುರ್ಥೋಪದೇಶೇ ದ್ವಿತೀಯಸ್ಸಂವಾದಃ.



ಶ್ರೀಃ.

## ಕೇಶವಶಬ್ದವಿಗ್ರಹನಿರ್ಣಯಃ.

ಚೋ–" ಬ್ರಹ್ಮಾದಿಕಾರಣಂ ದೇವಃ ಕೇಶವಶ್ಚೇತಿ ಸೂರಯಃ||ವದಂತಿ ತತ್ಕಥಂ ಶಂಭೋರ್ಬ್ರಹ್ಮವಿಷ್ಣ್ವಾದಿಕರ್ತೃತಾ " ಇತಿ ಭಾಗವತೋಕ್ತೇಃ ಬ್ರಹ್ಮವಿಷ್ಣುರುದ್ರಾಣಾಮುತ್ಪತ್ತಿಹೇತುಃ ಕೇಶವಃ, ತಸ್ಯ ನಿಘಂಟುಪ್ರಸಿದ್ಧಕೇಶವಶಬ್ದಸ್ಯ, ಕಶ್ಚ-ಅಶ್ಚ-ಈಶಶ್ಚ ಕೇಶಾಃ—ಬ್ರಹ್ಮವಿಷ್ಣುರುದ್ರಾಃ ಅಸ್ಮಿನ್ ಸಂತೀತಿ ವಿಗ್ರಹಃ. " ಮೂರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಂಬುನೋಃ" ಇತ್ಯಮರವಾಕ್ಯಾತ್, " ಅಕಾರೋ ವಾಸುದೇವಸ್ಸ್ಯಾತ್, ಇತ್ಯೇಕಾಕ್ಷರ ನಿಘಂಟುವಾಕ್ಯಾತ್ , " ಶಂಭುರೀಶಃ ಪಶುಪತಿಃ " ಇತ್ಯಮರವಾಕ್ಯಾತ್, " ಸತ್ಯಂ ಸತ್ಯಂ ಪುನಸ್ಸತ್ಯಂ ನ ದೇವಃ ಕೇಶವಾತ್ಪರಃ" ಇತಿ ಸ್ಕಾಂದೇ ವ್ಯಾಸವಾಕ್ಯಾಚ್ಚ. ಇತ್ಥಂ ಚ ಆದಿನಾರಾಯಣೇ ಕೇಶವಶಬ್ದಃ ಪ್ರಸಿದ್ಧಃ.

ರೇ— ಭೋ ಚೋಳ! ನಿಘಂಟುಪ್ರಸಿದ್ಧಕೇಶವಶಬ್ದವಿಗ್ರಹಸ್ತು ಶ್ರೂಯತಾಂ, ಕಚಃ ಕೇಶಶ್ಶಿರೋರುಹಃ " ಇತ್ಯಮರವಾಕ್ಯಾತ್, " ಕೇಶಾದ್ವೋಽನ್ಯತರ

---

ಎಂಬಿಲ್ಲಿಗೆ ನಾರಾಯಣಶಬ್ದವಿಗ್ರಹನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



ಕೇಶವಶಬ್ದವಿಗ್ರಹನಿರ್ಣಯವು.

ಚೋ — ಕೇಶವನನ್ನು ಪಂಡಿತರು ಬ್ರಹ್ಮಾದಿಗಳಿಗೆ ಕಾರಣನನ್ನಾಗಿ ಹೇಳುವುದರಿಂದ ಶಿವನನ್ನು ಬ್ರಹ್ಮವಿಷ್ಣ್ವಾದಿಗಳಿಗೆ ಕಾರಣನನ್ನಾಗಿ ಹೇಳತಕ್ಕದು ಸಂಗತವಾಗುವುದಿಲ್ಲವೆಂಬಂಶವನ್ನು ಹೇಳುವ ಭಾಗವತಗ್ರಂಥದ ವಚನವಿರುವುದರಿಂದ ಕೇಶವನೇ ಬ್ರಹ್ಮ ವಿಷ್ಣು ರುದ್ರರಿಗೆ ತಂದೆಯಾಗಿರುವನು. ನೈಘಂಟುಕವಾದ ಆ ಕೇಶವಶಬ್ದಕ್ಕೆ ಕಶ್ಚ, ಅಶ್ಚ, ಈಶಶ್ಚ ಕೇಶಾಃ ಅಸ್ಮಿನ್ ಸಂತಿ. ಎಂದು ವಿಗ್ರಹವಿರುತ್ತದೆ. ಬ್ರಹ್ಮ ವಿಷ್ಣು ರುದ್ರರು ಈ ಕೇಶವನಲ್ಲಿ ಹುಟ್ಟಿದರೆಂದರ್ಥವು. "ಕೇಶವನಿಗಿಂತ ಬೇರೊಬ್ಬ ದೇವನಿಲ್ಲವು" ಎಂದು ಸ್ಕಾಂದದಲ್ಲಿ ವ್ಯಾಸನ ವಚನವಿರುವುದರಿಂದ, ಆದಿನಾರಾಯಣನಲ್ಲಿ ಕೇಶವಶಬ್ದವು ರೂಢವಾಗಿರ್ಪುದು.

ರೇ - ಎಲೈ ಚೋಳನೇ ! ನೈಘಂಟುಕವಾದ ಕೇಶವಶಬ್ದಕ್ಕೆ ವಿಗ್ರಹವನ್ನು ಕೇಳು; "ಕಚಃ ಕೇಶಶ್ಶಿರೋರುಹಃ" ಎಂದು ಅಮರವಾಕ್ಯವಿರುವುದರಿಂದ "ಕೇಶಃ" ಎಂದರೆ ಕೂದಲು

ಸ್ಯಾಂ" ಇತಿ ಪಾಣಿನಿಸೂತ್ರಾತ್, ಪ್ರಶಸ್ತಾಃ ಕೇಶಾಃ ಅಸ್ಯ ಸಂತೀತಿ ಕೇಶವಃ
ಅಥವಾ ಸ್ವಭಕ್ತಸ್ಯ ವಸುದೇವಸ್ಯ ಪುತ್ರೋತ್ಪತ್ತಿನಿಮಿತ್ತಾರ್ಥಂ, ಶುಕ್ಲಕೃಷ್ಣ
ರೂಪಂ ಸ್ವಶಿರಃಕೇಶದ್ವಯಮುತ್ಪಾಟ್ಯ ಪ್ರದಾನಾತ್ ಕೇಶವೋ ವಾ ಭವತಿ
ತದುಕ್ತಂ ಭಾಗವತೇ,—"ಸ ಚಾಪಿ ಕೇಶೋ ಹರೇರುದ್ಬಬರ್ಹ ಶುಕ್ಲಂ ಚೈಕ
ಪರಂ ಚಾಪಿ ಕೃಷ್ಣಂ, ತೌ ಚಾಪಿ ಕೇಶಾವಾವಿಶೇತಾಂ, ಯದೂನಾಂ ಕು
ಸ್ತ್ರಿಯೌ ರೋಹಿಣೀಂ ದೇವಕೀಂ ಚ, ತಯೋರೇಕೋ ಬಲದೇವೋ ಬಭೂ
ಯೋಽಸೌ ಶ್ವೇತಸ್ತಸ್ಯ ದೇವಸ್ಯ ಕೇಶಃ, ಕೃಷ್ಣೋ ದ್ವಿತೀಯಃ, ಕೇಶವಸ್ಸಂಬಭೂ
ಯೋಽಸೌ ಕೇಶೋ ವರ್ಣತಃ ಕೃಷ್ಣ ಉಕ್ತಃ" ಇತಿ. ತಥಾ ಮಹಾಭಾರತೇ ಪ್ರ
ದ್ಧಂ. ಲೋಕೇ ಭೃತ್ಯಸ್ಸ್ವಕರ್ತುಃ ಕೇಶಾಂಗುಳಿಪ್ರದಾತಾ, ಅತ್ರ ಸ್ವದಾಸಸ್ಯ ವ
ದೇವಸ್ಯ ಕೇಶಪ್ರದಾತಾ ಆದಿಕೇಶವಃ, ಸ್ವದಾಸಸ್ಯ ದಾಸ ಇತಿ ವಿಜ್ಞೇಯಃ"
ಕ್ತಂ ಮನುಸ್ಮೃತೌ,—"ಪದ್ಯಮಂಗುಳಿವಿಚ್ಛೇದ ಉರೋವಿನ್ಯಸ್ತಮಕ್ಷರಂ
ತನ್ನಾಮಕರಣಂ ಚೈವ ದಾಸಭಾವಂ ಚತುಷ್ಟಯಂ" ತತ್ತ್ವವದಾಸ್ತಾಂ,

---

ಎಂದರ್ಥವು. ಆ ಕೇಶಶಬ್ದದ ಮೇಲೆ ಪ್ರಶಸ್ತಾರ್ಥದಲ್ಲಿ 'ಕೇಶಾದ್ವೋಽನ್ಯತರಸ್ಯಾಂ,, ಎ
ಪಾಣಿನೀಯ ಸೂತ್ರದಿಂದ, ವಃ ಎಂಬ ಪ್ರತ್ಯಯವು ಬಂದುದರಿಂದ "ಕೇಶವಃ,, ಎಂಬ ಶ
ನಿಷ್ಪನ್ನವಾಯಿತು. ಪ್ರಶಸ್ತಾಃ ಕೇಶಾಃ ಅಸ್ಯ ಸಂತಿ ಎಂದು ವಿಗ್ರಹವು. ಆದ್ದರಿಂದ ನಾ
ಯಣನಿಗೆ ಪ್ರಶಸ್ತವಾದ ಕೇಶಗಳಿರುವುದರಿಂದ "ಕೇಶವಃ,. ಎಂಬ ಹೆಸರುಂಟಾಯಿತು.

ಅಥವಾ ತನಗೆ ಭಕ್ತನಾದ ವಸುದೇವನಿಗೆ ಪುತ್ರೋತ್ಪತ್ತಿಗಾಗಿ ತನ್ನ ತಲೆಯ ಕೂ
ಗಳಲ್ಲಿ ಬಿಳಿಯ ಕೂದಲೊಂದನ್ನೂ, ಕಪ್ಪು ಕೂದಲೊಂದನ್ನೂ ಕಿತ್ತುಕೊಟ್ಟುದರಿಂದ 'ಕೇ
ಎಂಬ ಹೆಸರುಂಟಾಗಿದ್ದರೂ ಇರಬಹುದು. ಆ ವಿಷಯವು ಭಾಗವತದಲ್ಲಿ—"ಆದಿಕೇ
ಶುಕ್ಲಕೃಷ್ಣವರ್ಣಗಳಾದ ತಲೆಯ ಕೂದಲುಗಳೆರಡು ವಸುದೇವನ ಹೆಂಡತಿಯರಾದ ರೋ
ದೇವಕಿ ಎಂಬ ಸ್ತ್ರೀಯರ ಬಸುರನ್ನು ಹೊಕ್ಕವು. ಬಿಳಿಕೂದಲಿನಿಂದ ರೋಹಿಣಿಯಲ್ಲಿ ಬಲರಾ
ನು, ಕಪ್ಪುಕೂದಲಿನಿಂದ ದೇವಕಿಯಲ್ಲಿ ಕೃಷ್ಣನು ಹುಟ್ಟಿದನು,, ಎಂದು ಹೇಳಲ್ಪಟ್ಟಿದೆ. ಈ
ಯವು ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ. ಲೋಕದಲ್ಲಿ ಭೃತ್ಯನು ತನ್ನ ಯಜಮಾನನಿಗೆ
ಕೇಶಾಂಗುಳಿಗಳನ್ನು ಕೊಡತಕ್ಕುದು ಪ್ರಸಿದ್ಧವಾಗಿದ್ದರೂ, ಆದಿಕೇಶವನು ತನ್ನ ಭೃತ್ಯನ
ವಸುದೇವನಿಗೆ ಕೇಶವನ್ನು ಕೊಟ್ಟವನಾದ್ದರಿಂದ ಭೃತ್ಯನಿಗೆ ಭೃತ್ಯನೆಂದು ತಿಳಿಯಬೇಕು. ಯ
ಮಾನನಿಗೆ ಕೇಶವನ್ನೂ ಬೆರಳನ್ನೂ ಕೊಡತಕ್ಕುದು ಭೃತ್ಯಲಕ್ಷಣವೆಂಬಂಶವು ಮನುಸ್ಮೃ
ಲ್ಲಿ—"ಒಡೆಯನ ಚರಿತ್ರೆಯನ್ನು ಹೇಳುವ ಪದ್ಯಗಳನ್ನು ಹಾಡುವುದೂ, ಒಡೆಯನಿಗಾ
ಳನ್ನು ಕತ್ತರಿಸಿಕೊಳ್ಳುವುದೂ, ಆತನ ಹೆಸರನ್ನು ಎದೆಯಮೇಲೆ ಕೆತ್ತಿಸಿಕೊಳ್ಳುವುದೂ,
ವಾ ಅವನ ಹೆಸರಿನಿಂದ ಗುರುತು ಮಾಡಲ್ಪಟ್ಟ ದವಾಲಿಯನ್ನು ಧರಿಸಿಕೊಳ್ಳುವುದೂ,

ಹೇ ಚೋಳ! ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ ಸಹ ಭೂತೈರ್ನಕಾರಣಂ ಕಾರಣಂ ತು ಧ್ಯೇಯಸ್ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುಃ'' ಇತ್ಯಥರ್ವಶಿಖೋಪನಿಷದ್ವಚನೇನ ಪೂರ್ವೋಕ್ತನಿಘಂಟುವಾಕ್ಯೈಶ್ಚ ತ್ರಿಮೂರ್ತಿಜನಕಸ್ಯ ಶಿವಸ್ಯ ಕೇಶವಶಬ್ದೋ ಬಹುಪ್ರಸಿದ್ಧಃ. ಅಥವಾ—ಕೇಶವಶಬ್ದಸ್ಯ ಕೇ—ಶಿರಸಿ, ಶವಃ—ವಿಷ್ಣುಶವಃ ಯಸ್ಯಸಃ ಕೇಶವಃ. ಇತಿ ವಿಗ್ರಹೇ ಕೃತೇ ವಿಷ್ಣೋರ್ಮೃತಶರೀರಂ ಮಸ್ತಕೇ ಧೃತವಾನ್ ಶಿವ ಇತ್ಯರ್ಥೋ ಜಾಯತೇ ಶಿವಸ್ಯ ಶಿರಸಿ ವಿಷ್ಣುಕಳೇಬರಧಾರಿತ್ವಂ ಪ್ರಸಿದ್ಧಂ. ತದುಕ್ತಂ ಮಾನವಪುರಾಣೇ,—"ನಿರ್ಭಿದ್ಯ ಹೃದಯಂ ವಿಷ್ಣೋಸ್ಸಾರ್ಧಂ ಪ್ರಮಥಪುಂಗವೈಃ || ವಿವೇಶ ಶೂಲೇನಾದಾಯ ತತ್ಕಳೇಬರಮೀಶ್ವರಃ'' ಬೋದಾಯನಮುನಿನಾ,—"ಪಾಣೌ ಬ್ರಹ್ಮಕಪಾಲಮುಜ್ವಲತರಂ ಸ್ಕಂಧೇ ಮುರಾರೇರ್ವಪುಃ''

ಇತಿ ಕೇಶವಶಬ್ದವಿಗ್ರಹನಿರ್ಣಯಶ್ಚತುರ್ಥೋಽಪದೇಶೇ ತೃತೀಯಸ್ಸಂವಾದಃ.

---

ಹೆಸರನ್ನು ತಾನೂ ತನ್ನ ಮಕ್ಕಳೂ ಕರೆದುಕೊಳ್ಳುವುದೂ, ಈ ನಾಲ್ಕು ದಾಸತ್ವದ ಲಕ್ಷಣವು,, ಎಂದು ಹೇಳಲ್ಪಟ್ಟಿದೆ. ಎಲೈ ಚೋಳನೇ! ಬ್ರಹ್ಮ ವಿಷ್ಣು ರುದ್ರ ಇಂದ್ರರು ಶಿವನಿಂದ ಹುಟ್ಟುರುತ್ತಾರೆ. ಆದ್ದರಿಂದ ಸರ್ವಕಾರಣನೂ, ಸರ್ವೈಶ್ವರ್ಯಸಂಪನ್ನನೂ, ಸರ್ವೇಶ್ವರನೂ, ಸುಖಾವಾಸಸ್ಥಾನನೂ, ಆದ ಶಿವನೊಬ್ಬನೇ ಹೃದಯಾಕಾಶಮಧ್ಯದಲ್ಲಿ ಧ್ಯೇಯನು,, ಎಂದು ಹೇಳುವ ಅಥರ್ವಶಿಖೋಪನಿಷದ್ವಚನವಿರುವುದರಿಂದಲೂ, ಪೂರ್ವೋಕ್ತನಿಘಂಟುವಾಕ್ಯಗಳಿಂದಲೂ ತ್ರಿಮೂರ್ತಿಜನಕನಾದ ಶಿವನಿಗೇ ಕೇಶವಶಬ್ದವು ಬಹಳವಾಗಿ ಪ್ರಸಿದ್ಧವಾಗಿದೆ. ಅಥವಾ ಕೇಶವಶಬ್ದಕ್ಕೆ—"ಕೇ-ಶವಃ-ಯಸ್ಯಸಃ, ಎಂದು ವಿಗ್ರಹವನ್ನು ಮಾಡಿದಾಗ್ಯೂ ಶಿವನೆಂದರ್ಥವಾಗುತ್ತದೆ. ಶಿವನು ವಿಷ್ಣುವಿನ ಮೃತಶರೀರವನ್ನು ತಲೆಯಮೇಲೆ ಹೊತ್ತುಕೊಂಡನೆಂಬಂಶವು ಪ್ರಸಿದ್ಧವಾಗಿದೆ. ಆ ವಿಷಯವು ಮಾನವಪುರಾಣದಲ್ಲಿ—"ಶಿವನು ವಿಷ್ಣುವಿನ ಹೃದಯವನ್ನು ಬಗೆದು ಆ ಮೃತನ ಶರೀರವನ್ನು ತ್ರಿಶೂಲದಿಂದ ತಲೆಯಮೇಲೆ ಹೊತ್ತುಕೊಂಡು ತನ್ನ ಕೈಲಾಸಲೋಕವನ್ನು ಸೇರಿದನು,, ಎಂದು ಹೇಳಲ್ಪಟ್ಟಿದೆ. ಬೋಧಾಯನಮುನಿಯಿಂದ—"ಶಿವನು—ಕೈಯಲ್ಲಿ ಅತ್ಯಂತ ಪ್ರಕಾಶಮಾನವಾದ ಬ್ರಹ್ಮಕಪಾಲವನ್ನೂ, ಹೆಗಲಿನಲ್ಲಿ ಮುರಾರಿಯ ಶರೀರವನ್ನೂ ಧರಿಸಿರುತ್ತಾನೆ,, ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಕೇಶವಶಬ್ದವಿಗ್ರಹನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.

ಶ್ರೀಃ.

# ಪುರುಷಶಬ್ದನಿರ್ಣಯಃ.

ಚೋ—"ಸಹಸ್ರಶೀರ್ಷಾಪುರುಷಃ" ಇತಿ ಪುರುಷಸೂಕ್ತವಚನೇನ, "ಶ್ರೀ ಪತಿಃ ಪುರುಷೋತ್ತಮಃ" ಇತ್ಯಮರೋಕ್ತ್ಯಾ ಚ ಶ್ರೀಪತೌ ಹರಾವೇವ ಪುರುಷ ಶಬ್ದವಾಚ್ಯತಾಽಸ್ತಿ ನತು ರುದ್ರೇ.

ರೇ—ಹೇ ಚೋಳ! ಹರೌ ಪುರುಷಶಬ್ದವಾಚ್ಯತ್ವಕಥನಂ ಭ್ರಾಂತಿಮೂಲಕ ಶಶ ಶಶವಿಷಾಣವತ್ ರಮಣೀಯಂ. ಪುರುಷಸೂಕ್ತಂ ತು ಶಿವಪ್ರತಿಪಾದಕಂ, ಆ ಸ್ತಾಂ ತು, ಪುರುಷತ್ವಂ ತು ಶಿವಸ್ಯೈವ ವರ್ತತೇ, ನ ವಿಷ್ಣೋರಿತಿ ಜಾನೀಹಿ, ಕುತ್ರ ತ್ರದುಕ್ತಂ ಯಜುರ್ವೇದೀಯನಾರಾಯಣೋಪನಿಷದಿ,—"ತತ್ಪುರುಷಾಯ ವಿ ಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ ಪ್ರಚೋದಯಾತ್" ತಥಾ ಸಾ ಮವೇದೇ,—ಸೋಽಭ್ಯಾಯ ಪುರುಷಾಯೋತ್ತಮಪುರುಷಾಯ ಮಹಾಪುರುಷಾ ಬ್ರಹ್ಮಚಾರಿಣೇ ಚಂದ್ರಲಲಾಟಾಯ ಕೃತ್ತಿವಾಸಸೇ ನಮೋ ನಮಃ" ಅಥರ್ವಶಿರ "ತಮೀಶಾನಂ ಪುರುಷಂ ದೇವಮೀಡ್ಯಂ" ಮುಂಡಕೋಪನಿಷದಿ,—"ಯ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ | ತ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಇತಿ. ಭ ವದ್ಗೀತಾಯಾಂ,—ಶ್ರೀ ಕೃಷ್ಣಃ, "ತಮೇವ ಚಾದ್ಯಂ ಪುರುಷಂ ಪ್ರಪದ್ಯೇ

---

## ಪುರುಷಶಬ್ದನಿರ್ಣಯವು.

ಚೋ—"ಸಹಸ್ರಶೀರ್ಷಾ ಪುರುಷಃ,, ಎಂಬ ಪುರುಷಸೂಕ್ತವಚನವಿರುವುದರಿಂದಲ "ಶ್ರೀಪತಿಃ ಪುರುಷೋತ್ತಮಃ,, ಎಂಬ ಅಮರವಚನವಿರುವುದರಿಂದಲೂ ಲಕ್ಷ್ಮೀಪತಿಯ ವಿಷ್ಣುವಿನಲ್ಲೇ ಪುರುಷಶಬ್ದವು ವರ್ತಿಸುತ್ತದೆ.

ರೇ—ಎಲೈ ಚೋಳನೇ! ವಿಷ್ಣುವು ಪುರುಷಶಬ್ದವಾಚ್ಯನೆಂದು ಹೇಳತಕ್ಕುದು ಭ್ರಾಂತಿಮೂಲಕವಾಗಿದೆ. ಹಾಗೆ ಹೇಳತಕ್ಕುದು ಮೊಲಕ್ಕೆ ಕೋಡಿದೆಯೆಂದು ಹೇಳಿದರೆ ಎಷ್ಟು ರಮಣೀಯವೋ ಅಷ್ಟು ರಮಣೀಯವಾಗಿದೆ. ಪುರುಷಸೂಕ್ತವು ಶಿವಪರವಾದುದಲ್ಲದೆ ವಿಷ್ಣುಪರವಾದುದಲ್ಲವು. ಆ ವಿಷಯವಿರಲಿ, ಪುರುಷತ್ವವು ಶಿವನಿಗೇ ಇರುತ್ತದೆಯಲ್ಲದೆ ವಿಷ್ಣುವಿಗಿಲ್ಲವೆಂದು ತಿಳಿಯುವವನಾಗು. ಏತಕ್ಕೆಂದರೆ ಆ ವಿಷಯವು ..ನಾರಾಯಣೋಪನಿಷತ್ತಿನಲ್ಲೂ ಸಾಮವೇದದಲ್ಲೂ, ಅಥರ್ವಶಿರಸ್ಸಿನಲ್ಲೂ, ಮುಂಡಕೋಪನಿಷತ್ತಿನಲ್ಲೂ ಹೇಳಲ್ಪಟ್ಟಿದೆ. ಈ ರೀತಿಯಾಗಿ ಗೀತೆಯಲ್ಲಿ—"ಯಾವ ಪರಬ್ರಹ್ಮದದೆಸೆಯಿಂದ ಅನಾದಿಕಾಲಸಿದ್ಧವಾದ ಜಗತ್ ವರ್ತನೆಯು ಹೇಳಲ್ಪಟ್ಟಿತೋ, ಆ ಆದಿಪುರುಷನಾದ ಪರಶಿವನನ್ನೇ ನಾನು ಹೊಂದುತ್ತೇನೆ

ತಃ ಪ್ರವೃತ್ತಿಃ ಪ್ರಸೃತಾ ಪುರಾಣೀ'' ಇತ್ಯಾದಿಭಿಃ ರುದ್ರ ಏಕಏವ ಪುರುಷಶಬ್ದವಾಚ್ಯಃ. ನಾನ್ಯಃ. ತತ್ತಾವದಾಸ್ತಾಂ, ಭೋ ಚೋಳ! ಭವದಿಷ್ಟದೇವತಾಯಾ ನಾರಾಯಣ್ಯಾಸ್ಸದಾ ಸ್ತ್ರೀತ್ವಂ ಶ್ರೂಯತಾಂ, ಯಜುರ್ವೇದೇ,—"ವಾಸುದೇವಃ ಪರಾಪ್ರಕೃತಿಃ'' ವಿಷ್ಣುರ್ಯೋನಿಂ ಕಲ್ಪಯತು'' ಶ್ವೇತಾಶ್ವತರೋಪನಿಷದಿ,—"ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ'' ಇತಿ. ಸ್ಕಾಂದೇ ಶರಭಾಧ್ಯಾಯೇ,—ನರಹರಿಂಪ್ರತಿ ಶರಭೇಶ್ವರವಾಕ್ಯಂ, "ಪ್ರಕೃತಿಸ್ತ್ವಂ ಪುಮಾನ್ರುದ್ರಸ್ತ್ವಯಿ ತದ್ವೀರ್ಯಮಾಹಿತಂ ‖ ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ'' ಶಿವಾಷ್ಟೋತ್ತರಶತನಾಮಸ್ತೋತ್ರೇ,—ವಿಷ್ಣುಃ, "ಶಂಕರಶ್ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ'' ಇತಿ. ವೀರಭದ್ರಾಷ್ಟೋತ್ತರಶತನಾಮಸ್ತೋತ್ರೇ,—ನರಹರಿಃ, "ನಮೋ ವಿಷ್ಣುಕಳತ್ರಾಯ ವಿಶ್ವಕ್ಷೇತ್ರಾಯ ಭಾನವೇ'' ಬೋಧಾಯನಮುನಿಃ,—"ಅಶ್ವೀಕೃತತ್ರ್ಯೀಕೃತವೇದರಾಶಿರಸ್ತ್ರೀಕೃತಸ್ತ್ರೀಕೃತದಾನವಾರಿಃ'' ಇತ್ಯಾದಿಪ್ರಸಿದ್ಧಂ.

ಇತಿ ಶಿವಸ್ಯಪುರುಷಶಬ್ದನಿರ್ಣಯಶ್ಚತುರ್ಥೋಽಪದೇಶೇ ಚತುರ್ಥಸ್ಸಂವಾದಃ.

---

ಎಂದು ಶ್ರೀ ಕೃಷ್ಣನಿಂದ ನಿರೂಪಿತವಾಗಿದೆ. ಇತ್ಯಾದಿ ವಚನಗಳಿಂದ ರುದ್ರನೊಬ್ಬನೇ ಪುರುಷಶಬ್ದವಾಚ್ಯನೆಂದು ಸಿದ್ಧವಾಗುತ್ತದೆ. ಅದಂತಿರಲಿ, ಎಲೈ ಚೋಳನೇ ! ನಿನ್ನಿಷ್ಟದೇವತೆಯಾದ ನಾರಾಯಣನಿಗೆ ಸ್ತ್ರೀತ್ವವಿರುವುದನ್ನು ಕೇಳು; ಯಜುರ್ವೇದದಲ್ಲಿ—"ವಾಸುದೇವನು ಪರಾಖ್ಯವಾದ ಮಾಯೆಯಾಗಿ ಕಲ್ಪಿಸಲ್ಪಡಲಿ'' ಎಂದೂ, ಆ ಪ್ರಕಾರವಾಗಿ ಶ್ವೇತಾಶ್ವತರೋಪನಿಷತ್ತಿನಲ್ಲಿ—"ಮಾಯೆಯನ್ನು ಪ್ರಕೃತಿಯನ್ನಾಗಿಯೂ, ಮಹೇಶ್ವರನನ್ನು ಮಾಯೆಯುಳ್ಳವನನ್ನಾಗಿಯೂ ತಿಳಿಯಬೇಕು,, ಎಂದೂ ಉಕ್ತವಾಗಿದೆ. ಸ್ಕಾಂದದಲ್ಲಿರುವ ಶರಭಾಧ್ಯಾಯದಲ್ಲಿ—"ಎಲೈ ನರಹರಿಯೇ ! ನೀನು ಪ್ರಕೃತಿಯು, (ಮಾಯೆಯು) ರುದ್ರನು ಪುರುಷನು, ನಿನ್ನಲ್ಲಿ ಆ ರುದ್ರನ ವೀರ್ಯವು ಇಡಲ್ಪಟ್ಟುದಾದುದರಿಂದ ಬ್ರಹ್ಮನು ನಿನ್ನ ನಾಭಿಕಮಲದದೆಸೆಯಿಂದ ಹುಟ್ಟಿದನು,, ಎಂದು ಶರಭೇಶ್ವರನಿಂದ ನರಹರಿಗೆ ಹೇಳಲ್ಪಟ್ಟಿತು. ಶಿವಾಷ್ಟೋತ್ತರಶತನಾಮಸ್ತೋತ್ರದಲ್ಲಿ—"ವಿಷ್ಣುವಲ್ಲಭನು,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ವೀರಭದ್ರಾಷ್ಟೋತ್ತರಶತನಾಮಸ್ತೋತ್ರದಲ್ಲಿ—"ವಿಷ್ಣುವೇ ಮಡದಿಯಾಗುಳ್ಳವನಿಗೋಸ್ಕರ ನಮಸ್ಕಾರವು,, ಎಂದು ನೃಸಿಹ್ಮನಿಂದುಕ್ತವಾಗಿದೆ. ಬೋಧಾಯನಮುನಿಯು—"ವೇದಗಳ ಸಮೂಹವು ಅಶ್ವಸಮೂಹವಾಗಿ ಮಾಡಲ್ಪಟ್ಟಿತು. ಮಡದಿಯಾಗಿರುವ ವಿಷ್ಣುವು ಬಾಣವಾಗಿ ಮಾಡಲ್ಪಟ್ಟನು,, ಎಂದು ಹೇಳಿದ್ದಾನೆ. ಇತ್ಯಾದ್ಯಂಶವು ಪ್ರಸಿದ್ಧವಾಗಿರ್ಪುದು.

ಎಂಬಿಲ್ಲಿಗೆ ಪುರುಷಶಬ್ದನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



ಶ್ರೀಃ.

## ಪುರುಷಶಬ್ದನಿರ್ಣಯಃ.

ಚೋ—“ ಸಹಸ್ರಶೀರ್ಷಾಪುರುಷಃ” ಇತಿ ಪುರುಷಸೂಕ್ತವಚನೇನ, “ ಶ್ರೀಪತಿಃ ಪುರುಷೋತ್ತಮಃ” ಇತ್ಯಮರೋಕ್ತ್ಯಾ ಚ ಶ್ರೀಪತೌ ಹರಾವೇವ ಪುರುಷಶಬ್ದವಾಚ್ಯತಾಽಸ್ತಿ ನತು ರುದ್ರೇ.

ರೇ—ಹೇ ಚೋಳ! ಹರೌ ಪುರುಷಶಬ್ದವಾಚ್ಯತ್ವಕಥನಂ ಭ್ರಾಂತಿಮೂಲಕತ್ವಾತ್ ಶಶವಿಷಾಣವತ್ ರಮಣೀಯಂ. ಪುರುಷಸೂಕ್ತಂ ತು ಶಿವಪ್ರತಿಪಾದಕಂ ... ಷ್ಣುತು, ಪುರುಷತ್ವಂ ತು ಶಿವಸ್ಯೈವ ವರ್ತತೇ, ನ ವಿಷ್ಣೋರಿತಿ ಜಾನೀಹಿ, ಕುತಃ? ತ್ತದುಕ್ತಂ ಯಜುರ್ವೇದೀಯನಾರಾಯಣೋಪನಿಷದಿ,—“ ತತ್ಪುರುಷಾಯ ... ಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ ಪ್ರಚೋದಯಾತ್” ತಥಾ ... ಮವೇದೇ,—ಸೋಭ್ಯಾಯ ಪುರುಷಾಯೋತ್ತಮಪುರುಷಾಯ ಮಹಾಪುರುಷಾಯ ಬ್ರಹ್ಮಚಾರಿಣೇ ಚಂದ್ರಲಲಾಟಾಯ ಕೃತ್ತಿವಾಸಸೇ ನಮೋ ನಮಃ” ಅಥರ್ವಶಿರಸಿ “ ತಮೀಶಾನಂ ಪುರುಷಂ ದೇವಮೀಡ್ಯಂ” ಮುಂಡಕೋಪನಿಷದಿ,—“ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ | ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ” ಇತಿ.ಭಗ ವದ್ಗೀತಾಯಾಂ,—ಶ್ರೀ ಕೃಷ್ಣಃ, “ ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ...

---

### ಪುರುಷಶಬ್ದನಿರ್ಣಯವು.

ಚೋ—“ಸಹಸ್ರಶೀರ್ಷಾ ಪುರುಷಃ,, ಎಂಬ ಪುರುಷಸೂಕ್ತವಚನವಿರುವುದರಿಂದಲೂ “ಶ್ರೀಪತಿಃ ಪುರುಷೋತ್ತಮಃ,, ಎಂಬ ಅಮರವಚನವಿರುವುದರಿಂದಲೂ ಲಕ್ಷ್ಮೀಪತಿಯಾದ ವಿಷ್ಣುವಿನಲ್ಲೇ ಪುರುಷಶಬ್ದವು ವರ್ತಿಸುತ್ತದೆ.

ರೇ—ಎಲೈ ಚೋಳನೇ ! ವಿಷ್ಣುವು ಪುರುಷಶಬ್ದವಾಚ್ಯನೆಂದು ಹೇಳತಕ್ಕುದು ಭ್ರಾಂತಿಮೂಲಕವಾಗಿದೆ. ಹಾಗೆ ಹೇಳತಕ್ಕುದು ಮೊಲಕ್ಕೆ ಕೋಡಿದೆಯೆಂದು ಹೇಳಿದರೆ ಎಷ್ಟು ರಮಣೀಯವೋ ಅಷ್ಟು ರಮಣೀಯವಾಗಿದೆ. ಪುರುಷಸೂಕ್ತವು ಶಿವಪರವಾದುದಲ್ಲದೆ ವಿಷ್ಣುಪರವಾದುದಲ್ಲವು. ಆ ವಿಷಯವಿರಲಿ, ಪುರುಷತ್ವವು ಶಿವನಿಗೇ ಇರುತ್ತದೆಯಲ್ಲದೆ ವಿಷ್ಣುವಿಗಿಲ್ಲವೆಂದು ತಿಳಿಯುವವನಾಗು. ಏತಕ್ಕೆಂದರೆ ಆ ವಿಷಯವು ..ನಾರಾಯಣೋಪನಿಷತ್ತಿನಲ್ಲಿ, ಸಾಮವೇದದಲ್ಲೂ, ಅಥರ್ವಶಿರಸ್ಸಿನಲ್ಲೂ, ಮುಂಡಕೋಪನಿಷತ್ತಿನಲ್ಲೂ ಹೇಳಲ್ಪಟ್ಟಿದೆ. ಈ ರೀತಿಯಾಗಿ ಗೀತೆಯಲ್ಲಿ—“ಯಾವ ಪರಬ್ರಹ್ಮದದೆಸೆಯಿಂದ ಅನಾದಿಕಾಲಸಿದ್ಧವಾದ ಜಗತ್ಪ್ರವರ್ತನೆಯು ಹೇಳಲ್ಪಟ್ಟಿತೋ, ಆ ಆದಿಪುರುಷನಾದ ಪರಶಿವನನ್ನೇ ನಾನು ಹೊಂದುತ್ತೇನೆ

ತಃ ಪ್ರವೃತ್ತಿಃ ಪ್ರಸೃತಾ ಪುರಾಣೀ'' ಇತ್ಯಾದಿಭಿಃ ರುದ್ರ ಏಕಏವ ಪುರುಷಶಬ್ದವಾಚ್ಯಃ. ನಾನ್ಯಃ. ತತ್ತಾವದಾಸ್ತಾಂ, ಭೋ ಚೋಳ! ಭವದಿಷ್ಟದೇವತಾಯಾ ನಾರಾಯಣಸ್ಯಾಸ್ಸದಾ ಸ್ತ್ರೀತ್ವಂ ಶ್ರೂಯತಾಂ, ಯಜುರ್ವೇದೇ,—"ವಾಸುದೇವಃ ಪರಾಪ್ರಕೃತಿಃ'' ವಿಷ್ಣುರ್ಯೋನಿಂ ಕಲ್ಪಯತು'' ಶ್ವೇತಾಶ್ವತರೋಪನಿಷದಿ,—"ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ'' ಇತಿ. ಸ್ಕಾಂದೇ ಶರಭಾಧ್ಯಾಯೇ,—ನರಹರಿಂಪ್ರತಿ ಶರಭೇಶ್ವರವಾಕ್ಯಂ, "ಪ್ರಕೃತಿಸ್ತ್ವಂ ಪುಮಾನ್ರುದ್ರಸ್ತ್ವಯಿ ತದ್ವೀರ್ಯಮಾಹಿತಂ || ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ'' ಶಿವಾಷ್ಟೋತ್ತರಶತನಾಮಸ್ತೋತ್ರೇ,—ವಿಷ್ಣುಃ, "ಶಂಕರಶ್ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ'' ಇತಿ. ವೀರಭದ್ರಾಷ್ಟೋತ್ತರಶತನಾಮಸ್ತೋತ್ರೇ,—ನರಹರಿಃ, "ನಮೋ ವಿಷ್ಣುಕಳತ್ರಾಯ ವಿಷ್ವಕ್ಸೇತ್ರಾಯ ಭಾನವೇ'' ಬೋಧಾಯನಮುನಿಃ,—"ಅಶ್ವೀಕೃತತ್ರ್ಯೀಕೃತವೇದರಾಶಿರಸ್ತ್ರೀಕೃತಸ್ತ್ರೀಕೃತದಾಸವಾರಿಃ'' ಇತ್ಯಾದಿಪ್ರಸಿದ್ಧಂ.

ಇತಿ ಶಿವಸ್ಯಪುರುಷಶಬ್ದನಿರ್ಣಯಶ್ಚತುರ್ಥೋಽಪದೇಶೇ ಚತುರ್ಥಸ್ಸಂವಾದಃ.

---

ಎಂದು ಶ್ರೀ ಕೃಷ್ಣನಿಂದ ನಿರೂಪಿತವಾಗಿದೆ. ಇತ್ಯಾದಿ ವಚನಗಳಿಂದ ರುದ್ರನೊಬ್ಬನೇ ಪುರುಷ ಶಬ್ದವಾಚ್ಯನೆಂದು ಸಿದ್ಧವಾಗುತ್ತದೆ. ಅದೆಂತಿರಲಿ, ಎಲೈ ಚೋಳನೇ! ನಿನ್ನಿಷ್ಟದೇವತೆಯಾದ ನಾರಾಯಣನಿಗೆ ಸ್ತ್ರೀತ್ವವಿರುವುದನ್ನು ಕೇಳು; ಯಜುರ್ವೇದದಲ್ಲಿ—"ವಾಸುದೇವನು ಪರಾಖ್ಯವಾದ ಮಾಯೆಯಾಗಿ ಕಲ್ಪಿಸಲ್ಪಡಲಿ'' ಎಂದೂ, ಆ ಪ್ರಕಾರವಾಗಿ ಶ್ವೇತಾಶ್ವತರೋಪನಿಷತ್ತಿನಲ್ಲಿ—"ಮಾಯೆಯನ್ನು ಪ್ರಕೃತಿಯನ್ನಾಗಿಯೂ, ಮಹೇಶ್ವರನನ್ನು ಮಾಯೆಯುಳ್ಳವನನ್ನಾಗಿಯೂ ತಿಳಿಯಬೇಕು,, ಎಂದೂ ಉಕ್ತವಾಗಿದೆ. ಸ್ಕಾಂದದಲ್ಲಿರುವ ಶರಭಾಧ್ಯಾಯದಲ್ಲಿ—"ಎಲೈ ನರಹರಿಯೇ! ನೀನು ಪ್ರಕೃತಿಯು, (ಮಾಯೆಯು) ರುದ್ರನು ಪುರುಷನು, ನಿನ್ನಲ್ಲಿ ಆ ರುದ್ರನ ವೀರ್ಯವು ಇಡಲ್ಪಟ್ಟುದಾದುದರಿಂದ ಬ್ರಹ್ಮನು ನಿನ್ನ ನಾಭಿಕಮಲದದೆಸೆಯಿಂದ ಹುಟ್ಟಿದನು., ಎಂದು ಶರಭೇಶ್ವರನಿಂದ ನರಹರಿಗೆ ಹೇಳಲ್ಪಟ್ಟಿತು. ಶಿವಾಷ್ಟೋತ್ತರಶತನಾಮಸ್ತೋತ್ರದಲ್ಲಿ—"ವಿಷ್ಣುವಲ್ಲಭನು,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ವೀರಭದ್ರಾಷ್ಟೋತ್ತರಶತನಾಮಸ್ತೋತ್ರದಲ್ಲಿ—"ವಿಷ್ಣುವೇ ಮಡದಿಯಾಗುಳ್ಳವನಿಗೋಸ್ಕರ ನಮಸ್ಕಾರವು,, ಎಂದು ನೃಸಿಹ್ಮನಿಂದುಕ್ತವಾಗಿದೆ. ಬೋಧಾಯನಮುನಿಯು—"ವೇದಗಳ ಸಮೂಹವು ಅಶ್ವಸಮೂಹವಾಗಿ ಮಾಡಲ್ಪಟ್ಟಿತು. ಮಡದಿಯಾಗಿರುವ ವಿಷ್ಣುವು ಬಾಣವಾಗಿ ಮಾಡಲ್ಪಟ್ಟನು,, ಎಂದು ಹೇಳಿದ್ದಾನೆ. ಇತ್ಯಾದ್ಯಂಶವು ಪ್ರಸಿದ್ಧವಾಗಿರ್ಪುದು.

ಎಂಬಿಲ್ಲಿಗೆ ಪುರುಷಶಬ್ದನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ
ನಾಲ್ಕನೆಯ ಸಂವಾದವು ಮುಗಿದುದು.



ಶ್ರೀಃ.

## ಶಿವಸ್ಯಅಮೃತಶಬ್ದವಾಚ್ಯತ್ವನಿರ್ಣಯಃ.

ಚೋ—ಭೋ ರೇಣುಕಗಣೇಶ! "ಅಚ್ಯುತಃ ಪುರುಷೋತ್ತಮಃ" ವಿಷ್ಣುಸಹಸ್ರನಾಮವಾಕ್ಯಾತ್, ಪುರುಷಶಬ್ದವಾಚ್ಯ ಆದಿಕೇಶವಏವ ಅಮೃ ವಾಚ್ಯಃ.

ರೇ—ಹೇ ಚೋಳ! ಆದಿಕೇಶವಸ್ಯ ಶಿವಪತ್ನೀತ್ವಂ ಶಿವಸ್ಯ ಪುರುಷತ್ವ ಸ್ತ್ರೀತ್ಯಸ್ಮಾಭಿಃ ಪೂರ್ವಮೇವ ನಿಗದಿತಂ, ಮುಖ್ಯವೃತ್ತ್ಯಾ ಶಿವಸ್ಯೈವ ಪುರು ವಾಚ್ಯತಾ, ಅಪಿತು ಆದಿಕೇಶವಸ್ಯ ಪುರುಷಶಬ್ದವಾಚ್ಯತಾಽಮೃತಶಬ್ದವಾಚ್ಯ ಪಚಾರಿಕೀತಿ ಜಾನೀಹಿ; ಪುರುಷಶಬ್ದಾಭಿಧೇಯಶ್ಶಿವ ಏವ ಅಮೃತಶಬ್ದವಾಚ್ಯ ಕಥನೇ ಖ ಬಹುಪ್ರಮಾಣಾನಿ ವರ್ತಂತೇ ಶೃಣು; ಜಾಬಾಲೋಪನಿಷದಿ,-" ನಂ ಬ್ರಹ್ಮಚಾರಿಣ ಊಚುಃ, ಕಿಂ ಜಪ್ಯೇ ನಾಮೃತತ್ವಂ ಬ್ರೂಹೀತಿ, ಸಹೋ ಯಾಜ್ಞವಲ್ಕ್ಯಃ, ಶತರುದ್ರೀಯೇಣೇತ್ಯೇತಾನಿ ಹವಾ ಅಮೃತಸ್ಯ ನಾಮಧೇಯಾ ವಂತಿ ತೈರ್ಹವಾ ಅಮೃತಾ ಭವಂತೀತಿ" ಕಠವಲ್ಲ್ಯುಪನಿಷದಿ,-"ತದೇವ ಶು ದ್ಬ್ರಹ್ಮ ತದೇವಾಮೃತಮುಚ್ಯತೇ" ಕೈವಲ್ಯೋಪನಿಷದಿ,-"ಶಿವಂ ಪ್ರಶಾಂ

---

## ಶಿವನಿಗೆ ಅಮೃತಶಬ್ದವಾಚ್ಯತ್ವನಿರ್ಣಯವು.

ಚೋ—ಎಲೈ ರೇಣುಕಗಣೇಶನೇ! ಪುರುಷಶಬ್ದವಾಚ್ಯನಾದ ವಿಷ್ಣುವು-ಅಮೃ ವಾಚ್ಯನಾಗಿರುವನು,, ಎಂದು ವಿಷ್ಣುಸಹಸ್ರನಾಮವಾಕ್ಯವು ಹೇಳುತ್ತಿರುವುದರಿಂದ ಶ ಬ್ದವಾಚ್ಯನಾದ ಆದಿಕೇಶವನೇ ಅಮೃತಶಬ್ದವಾಚ್ಯನಾಗಿರುವನು.

ರೇ: ಎಲೈ ಚೋಳನೇ! ಆದಿಕೇಶವನು ಶಿವನಿಗೆ ಪತ್ನಿಯೆಂಬಂಶವನ್ನೂ, ಪುರುಷಶಬ್ದವಾಚ್ಯನೆಂಬಂಶವನ್ನೂ ಮೊದಲೇ ಹೇಳಿದೆವು. ಪುರುಷಶಬ್ದವಾಚ್ಯತ್ವವು ಮು ಕ್ತಿಯಿಂದ ಶಿವನಿಗೇ ಇರುತ್ತದೆಯೆಂದೂ ಆದಿಕೇಶವನಿಗೆ ಪುರುಷಶಬ್ದವಾಚ್ಯತ್ವವು ಅ ಬ್ದವಾಚ್ಯತ್ವವೂ ಉಪಚಾರಾರ್ಥವೆಂದೂ ತಿಳಿಯುವವನಾಗು. ಪುರುಷಶಬ್ದಾಭಿಧೇ ಶಿವನೇ ಅಮೃತಶಬ್ದವಾಚ್ಯನೆಂದು ಹೇಳುವುದರಲ್ಲಿ ಅನೇಕ ಪ್ರಮಾಣಗಳಿರುವುದನ್ನು ಜಾಬಾಲೋಪನಿಷತ್ತಿನಲ್ಲಿ—"ಅಮೃತಶಬ್ದವಾಚ್ಯನಾದ ಮಹಾರುದ್ರನ ನಾಮಗಳನ್ನು ತಕ್ಕವರು ಅಮೃತಸ್ವರೂಪರೇ ಆಗುವರು" ಎಂದೂ, ಕಠವಲ್ಲಿಯಲ್ಲಿ—"ಸರ್ವಜೀವ ಯಕಮಲದಲ್ಲಿರುವ ತೇಜಸ್ಸೇ ಪರಬ್ರಹ್ಮವು. ಆ ಪರಬ್ರಹ್ಮವೇ ಅಮೃತಶಬ್ದವಾಚ್ಯ ದೂ, ಕೈವಲ್ಯೋಪನಿಷತ್ತಿನಲ್ಲಿ—"ರಾಗದ್ವೇಷರಹಿತನೂ, ಸಕಲ ವೇದಗಳಿಗೆ ಆಗಿರುವ ಶಿವನನ್ನು ಅಮೃತಶಬ್ದವಾಚ್ಯನನ್ನಾಗಿ ತಿಳಿಯಬೇಕು,, ಎಂದೂ, ಶ್ವೇತಾ

ತಂ ಬ್ರಹ್ಮಯೋನಿಂ'' ಶ್ವೇತಾಶ್ವತರೋಪನಿಷದಿ,—'' ತದ್ವೇದಗುಹ್ಯೋಪನಿಷತ್ಸುಗೂಢಂ ತದ್ಬ್ರಹ್ಮಾ ವೇದತೇ ಬ್ರಹ್ಮಯೋನಿಂ | ಯೇ ಪೂರ್ವಂ ದೇವಾ ಋಷಯಶ್ಚ ತದ್ವಿದುಸ್ತೇ ತನ್ಮಯಾ ಅಮೃತಾ ವೈ ಬಭೂವುಃ'' ಇತಿ. ಶಿವಸಂಕಲ್ಪೋಪನಿಷದಿ,-''ಯಜ್ಜ್ಯೋತಿರಂತರಮೃತಂ ಪ್ರಜಾಸು '' ಇತ್ಯಾದಿಪ್ರಸಿದ್ಧಂ.

ಇತಿ ಶಿವಸ್ಯ ಅಮೃತಶಬ್ದವಾಚ್ಯತ್ವ ನಿರ್ಣಯಶ್ಚತುರ್ಥೋಪದೇಶೇ ಪಂಚಮಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಜೋಳ ರೇಣುಕಸಂವಾದರೂಪಶಿವಾಧಿಕ್ಯಶಿಖಾಮಣೌ ವಿಷ್ಣುಪದ ವಿಗ್ರಹಾದಿಪಂಚಮಸಂವಾದವಿಚಾರಶ್ಚತು ರ್ಥೋಪದೇಶಃ.

---

ಪನಿಷತ್ತಿನಲ್ಲಿ—''ವೇದೋಪನಿಷತ್ತುಗಳಲ್ಲಿ ರಹಸ್ಯವೂ, ವೇದೋತ್ಪತ್ತಿಗೆ ಕಾರಣವೂ ಆಗಿರುವ ಆ ಪರಬ್ರಹ್ಮವಾದ ಶಿವತತ್ವಸ್ವರೂಪವನ್ನು ಬ್ರಹ್ಮನು ತಿಳಿಯುತ್ತಾನೆ. ಪೂರ್ವದಲ್ಲಿ ಯಾವ ದೇವತೆಗಳೂ, ಋಷಿಗಳೂ ಆ ಶಿವತತ್ವವನ್ನು ತಿಳಿದರೋ, ಅವರು—ಆ ಶಿವಸ್ವರೂಪರೇ ಆಗಿ, ಅಮೃತಸ್ವರೂಪರಾದರು,, ಎಂದೂ, ಶಿವಸಂಕಲ್ಪೋಪನಿಷತ್ತಿನಲ್ಲಿ—''ಸಮಸ್ತಜನರ ಅಂತರಂಗದಲ್ಲಿ ಯಾವ ಜ್ಯೋತಿರ್ಲಿಂಗವು ಇರುತ್ತದೆಯೋ ಆ ಲಿಂಗವೇ ಅಮೃತಶಬ್ದವಾಚ್ಯವು'' ಎಂದೂ ಉಕ್ತವಾಗಿದೆ. ಇತ್ಯಾದಿ ವಚನಜಾಲದಿಂದ ಶಿವನಿಗೆ ಅಮೃತಶಬ್ದವಾಚ್ಯತ್ವವು ಪ್ರಸಿದ್ಧವಾಗಿರುತ್ತದೆ

ಎಂಬಲ್ಲಿಗೆ ರುದ್ರನಿಗೆ ಅಮೃತಶಬ್ದವಾಚ್ಯತ್ವನಿರ್ಣಯವನ್ನು ಹೇಳುವ ನಾಲ್ಕನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡಟಿಪ್ಪಣಿಯಲ್ಲಿ ನಾಲ್ಕನೆಯ ಉಪದೇಶವು ಸಂಪೂರ್ಣವಾಯಿತು.

ಶ್ರೀ ರುದ್ರಾಯನಮಃ.

## ಪಂಚಮೋಪದೇಶಃ ಪ್ರಾರಭ್ಯತೇ.

### ಶಿವಸ್ಯಭವಮೃಡಹರನಾಮಧೇಯನಿರ್ಣಯಃ.

ಶ್ರೀ ರೇಣುಕಃ-‌ ‌" ಶ್ರೀಮನ್ವಿಜಯಚೋಳೇಂದ್ರ ಮಹೇಶಾಧಿಕ್ಯಮೂಲಕಂ| ಪ್ರಶ್ನಂ ವಿಧಾತುಮಜ್ಞಸ್ಯ ಬ್ರೂಮಸ್ತ್ವಂ ತೇ ಶೃಣು ಕ್ರಮಾತ್ " ಬ್ರಹ್ಮಾದೀನಾಂ ಸೃಷ್ಟ್ಯಾದಿಪಂಚಕರ್ಮಯುಕ್ತಸ್ಯ ಮಹೇಶ್ವರಸ್ಯೈವ ಭವಮೃಡಹರನಾಮಧೇಯಾನಿ ವರ್ತಂತೇ. "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ" ಇತಿ ಪೂರ್ವೋದಾಹೃತಾಥರ್ವಶಿಖಾಶ್ರುತಿವಚನೇನ ತು ಶಿವಏವ ಬ್ರಹ್ಮವಿಷ್ಣುರುದ್ರಾದೀನಾಂ ಸರ್ವೇಂದ್ರಿಯಾಣಾಂ ಸರ್ವಭೂತಾನಾಮಪಿ ಜನಕತಯಾ, ಸರ್ವಕಾರಣತ್ವೇನ ಸರ್ವೈಶ್ವರ್ಯಸಂಪನ್ನತ್ವೇನ ಸರ್ವೇಶ್ವರತ್ವೇನ ದಹರಾಕಾಶಮಧ್ಯೇ ಸರ್ವೈಶ್ಚಿಂತನೀಯತ್ವೇನ ಚ ಪ್ರಸಿದ್ಧತ್ವಾತ್, ಜಗತ್ಸೃಷ್ಟಿಸ್ಥಿತಿಸಂಹಾರಾದಿಪಂಚಕರ್ಮಾಧಿಕಾರತ್ವಂ ಸಿದ್ಧಂ. ಅತೋ ಭವಾದಿಶಬ್ದವಾಚ್ಯತ್ವಮಪಿ ಸಿದ್ಧಮೇವ. ಇತ್ಯಲಂವಿಸ್ತರೇಣ.

---

## ಐದನೆಯ ಉಪದೇಶ ಪ್ರಾರಂಭವು.

### ಶಿವನಿಗೆ ಭವಮೃಡಹರನಾಮಧೇಯನಿರ್ಣಯವು.

ಶ್ರೀ ರೇಣುಕನು- ಸಂಪದ್ಯುಕ್ತನೂ, ವಿಜಯಶಾಲಿಯೂ ಆದ ಎಲೈ ಚೋಳರಾಜನೇ! ಶಿವೋತ್ಕರ್ಷತೆಗೆ ಸಾಧಕವಾದ ಪ್ರಶ್ನೆಯನ್ನು ಮಾಡುವುದನ್ನರಿಯದ ನಿನಗೆ ಕ್ರಮಾನುಸಾರವಾಗಿ ಹೇಳುವೆವು ಕೇಳು; ಬ್ರಹ್ಮ ಮೊದಲಾದವರನ್ನು ಸೃಷ್ಟಿಸುವುದು, ರಕ್ಷಿಸುವುದು, ಸಂಹರಿಸುವುದು, ತಿರೋಧಾನಗೊಳಿಸುವುದು, ಅನುಗ್ರಹಿಸುವುದು, ಎಂಬ ಪಂಚಕೃತ್ಯಗಳಿಂದ ಕೂಡಿರುವ ಮಹೇಶ್ವರನಾದ ಶಿವನಿಗೇ ಭವ, ಮೃಡ, ಹರ ಎಂಬ ಹೆಸರುಗಳು ಇರುತ್ತವೆ. "ಬ್ರಹ್ಮವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಎಂದು ಮೊದಲಲ್ಲಿ ಹೇಳಲ್ಪಟ್ಟ ಅಥರ್ವಶಿಖಾ ಶ್ರುತಿವಚನದಿಂದ ಶಿವನೊಬ್ಬನೇ -ಬ್ರಹ್ಮ ವಿಷ್ಣು ರುದ್ರಾದಿಗಳಿಗೂ, ಸರ್ವೇಂದ್ರಿಯಗಳಿಗೂ, ಸರ್ವಪ್ರಾಣಿಗಳಿಗೂ ತಂದೆಯೂ, ಸರ್ವೈಶ್ವರ್ಯಸಂಪನ್ನನೂ, ಸರ್ವೇಶ್ವರನೂ, ಎಲ್ಲರಿಂದ ದಹರಾಕಾಶಮಧ್ಯದಲ್ಲಿ ಚಿಂತ್ಯನೂ, ಆಗಿರುವುದರಿಂದ ಆತನಿಗೆ ಸೃಷ್ಟಿ ಸ್ಥಿತಿ ಸಂಹಾರಾದಿ ಪಂಚಕೃತ್ಯಕರ್ತೃತ್ವವು ಸಿದ್ಧವಾಗಿರುತ್ತದೆ. ಈ ಕಾರಣದಿಂದ ಆತನಿಗೆ ಭವ, ಮೃಡ, ಹರ ಶಬ್ದಗಳಿಂದ ಹೇಳಿಸಿಕೊಳ್ಳುವತನವೂ ಸಿದ್ಧವೇ ಆಗಿದೆ. ಬಹಳ ಹೇಳುವುದರಿಂದ ಸಾಕು?

ಇತಿ ಶಿವಸ್ಯ ಭವಮೃಡಹರನಾಮಧೇಯನಿರ್ಣಯಃ ಪಂಚಮೋಪದೇಶೇ ಪ್ರಥಮಸ್ಸಂವಾದಃ.



ಶ್ರೀಃ.

## ಭಗವಚ್ಛಬ್ದವಾಚ್ಯತ್ವನಿರ್ಣಯಃ.

ರೇ—ಹೇ ಚೋಳ ! ಶಿವಸ್ಯ ಭಗವಚ್ಛಬ್ದವಾಚ್ಯತ್ವಂ ಶ್ರೂಯತಾಂ, ಅಥರ್ವಶಿರಸಿ,—"ಅಥ ಕಸ್ಮಾದುಚ್ಯತೇ ಭಗವಾನ್ ಯಸ್ಸರ್ವಾನ್ಭಾವಾನೀಕ್ಷ್ಯತ್ಯಾತ್ಮಜ್ಞಾನಂ ನಿರೀಕ್ಷಯತಿ ಯೋಗಂ ಗಮಯತಿ ಸ ಏವ ತಸ್ಮಾದುಚ್ಯತೇ ಭಗವಾನ್" ಇತಿ. ಅತ್ಯಾಶ್ರಮೋಪನಿಷದಿ,—"ಧರ್ಮಾವಹಂ ಪಾಪನುದಂ ಭಗೇಶಂ ಜ್ಞಾತ್ವಾತ್ಮಸ್ಥಮಮೃತಂ ವಿಶ್ವಧಾಮ" ಧನಂಜಯನಿಘಂಟೌ,—"ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಶ್ಶ್ರಿಯಃ॥ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಿತಃ" ಇತಿ. ಭಗಃ-ಸಮಗ್ರೈಶ್ವರ್ಯಾದಿಃ, ಅಸ್ಯಅಸ್ತೀತಿ ಭಗವಾನ್. ತದಸ್ಯಾಸ್ತೀತ್ಯರ್ಥೇ ಮತುಪ್. ಷಡ್ಗುಣೈಶ್ವರ್ಯಸಂಪನ್ನವಾನಿತ್ಯರ್ಥಃ. ಇತ್ಯಾದಿಪ್ರಸಿದ್ಧಂ.

ಎಂಬಲ್ಲಿಗೆ ಶಿವನಿಗೆ ಭವಮೃಡಹರ ನಾಮಧೇಯನಿರ್ಣಯವನ್ನು ಹೇಳುವ ಐದನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



## ಭಗವಚ್ಛಬ್ದವಾಚ್ಯತ್ವನಿರ್ಣಯವು.

ರೇ—ಎಲೈ ಚೋಳನೇ ! ಶಿವನಿಗೆ ಭಗವಚ್ಛಬ್ದವಾಚ್ಯತ್ವವನ್ನು ಕೇಳು; ಅಥರ್ವಶಿರಸ್ಸಿನಲ್ಲಿ—"ಯಾವ ಪರಮೇಶ್ವರನು—ಯಾವ ಕಾರಣದಿಂದ ಸಕಲ ಭಾವಗಳನ್ನು ನೋಡುತ್ತಿರುವನೋ, ಸ್ವಸ್ವರೂಪವನ್ನು ತಿಳಿದು ನೋಡುತ್ತಿರುವನೋ, ಸರ್ವಜೀವರಿಗೂ ತನ್ನ ಸಂಬಂಧವನ್ನು ಹೊಂದಿಸುತ್ತಿರುವನೋ ಆ ಕಾರಣದಿಂದ ಆತನೇ ಭಗವಾನ್ ಎಂದು ಹೇಳಲ್ಪಡುತ್ತಾನೆ,, ಎಂದೂ, ಅತ್ಯಾಶ್ರಮೋಪನಿಷತ್ತಿನಲ್ಲಿ—"ಪುಣ್ಯವನ್ನುಂಟುಮಾಡುವ, ಪಾಪವನ್ನು ನಾಶಮಾಡುವ, ಷಡ್ಗುಣೈಶ್ವರ್ಯಗಳಿಗೊಡೆಯನಾದ, ಸಕಲ ತೇಜೋರೂಪನಾದ, ಅಮೃತಸ್ವರೂಪನಾದ ಶಿವನನ್ನು ತನ್ನೊಳಗಿರತಕ್ಕವನನ್ನಾಗಿ ತಿಳಿದು,, ಎಂದೂ, ಧನಂಜಯನಿಘಂಟಿನಲ್ಲಿ—"ಸಂಪೂರ್ಣವಾದ ಐಶ್ವರ್ಯ, ಪರಾಕ್ರಮ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯಗಳಿಗೆ ಭಗ ಎಂಬ ಸಂಜ್ಞೆಯೆಂದು ಹೇಳಲ್ಪಟ್ಟಿದೆ,, ಎಂದೂ ಉಕ್ತವಾಗಿರುವುದರಿಂದ ಸಂಪೂರ್ಣವಾದ ಐಶ್ವರ್ಯಾದಿಗಳು ಈತನಿಗೇನೇ ಇರುವುದರಿಂದ 'ಭಗವಾನ್, ಎಂದು ಹೆಸರುಂಟಾಯಿತು. [ಭಗಃ ಅಸ್ಯಾಸ್ತಿ ಸಮಗ್ರವಾದ ಐಶ್ವರ್ಯ ಮೊದಲಾದುದು ಈತನಿಗೆ ಇದೆ ಎಂಬ ಅರ್ಥದಲ್ಲಿ 'ಮತುಪ್, ಪ್ರತ್ಯಯವು ಬಂದಿದೆ.] ಇವು ಮೊದಲಾದ ವಚನಗಳಿಂದ ಶಿವನಿಗೇನೆ ಭಗವಚ್ಛಬ್ದವಾಚ್ಯತೆಯು ಪ್ರಸಿದ್ಧವಾಗಿದೆ.

ಇತಿಶಿವಸ್ಯಭಗವಚ್ಛಬ್ದವಾಚ್ಯತ್ವನಿರ್ಣಯಃ ಪಂಚಮೋಪದೇಶೇ ದ್ವಿತೀಯಸ್ಸಂವಾದಃ

ಶ್ರೀಃ.

## ಶಿವಸ್ಯಸ್ವಭಾವವಿರುದ್ಧಸ್ವರೂಪನಿರ್ಣಯಃ.

ರೇ—ಹೇ ಚೋಳ ! ಶಿವಸ್ವಭಾವವಿರುದ್ಧಸ್ವರೂಪಸ್ಯ ಲಕ್ಷಣಂ ತಾವಚ್ಛ್ರೂಯತಾಂ. ಶ್ರೀರುದ್ರೇ,—“ನಮೋ ಜಘನ್ಯಾಯ ಚ ಬುಧ್ನಿಯಾಯ ಚ” ವೇದಪಾದಸ್ತವೇ,—“ನಮಶ್ಶಿವಾಯ ತ್ರಿಪುರಾಂತಕಾಯ ಜಗತ್ರಯೇಶಾಯ ದಿಗಂಬರಾಯ ‖ ನಮೋಽಸ್ತು ರಕ್ಷಾಯ ಹರಾಯ ಭೂಯೋ ನಮೋ ಜಘನ್ಯಾಯ ಚ ಬುಧ್ನಿಯಾಯ ಚ” ಶ್ರೀರುದ್ರೇ,—“ಭವಸ್ಯ ಹೇತ್ಯೈ ಜಗತಾಂ ಪತಯೇ ನಮೋ ನಮಃ” ವೇದಪಾದಸ್ತವೇ,—“ಕಾಮಾರಯೇ ಚ ಸೋಮಾಯ ಯೋಗಿನೇ ಶೂಲಪಾಣಯೇ ‖ ಅಸ್ಥಿಭೂಷಾಯ ಶುದ್ಧಾಯ ಜಗತಾಂ ಪತಯೇ ನಮಃ” ಇತ್ಯಾದ್ಯಲಂ ವಿಸ್ತರೇಣ.

---

ಎಂಬಲ್ಲಿಗೆ ಶಿವನಿಗೆ ಭಗವಚ್ಛಬ್ದವಾಚ್ಯತ್ವನಿರ್ಣಯವನ್ನು ಹೇಳುವ ಐದನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.

### ಶಿವನಸ್ವಭಾವಸಿದ್ಧವಿರುದ್ಧಸ್ವರೂಪದನಿರ್ಣಯವು.

ರೇ—ಎಲೈ ಚೋಳನೇ ! ಶಿವನಿಗೆ ಸ್ವಭಾವಸಿದ್ಧವಾದ ಸ್ವರೂಪದದೆಸೆಯಿಂದ ವಿರುದ್ಧವಾದ ಸ್ವರೂಪವನ್ನು ಕೇಳು; ಶ್ರೀರುದ್ರದಲ್ಲಿ—“ಕಾಲತತ್ವಕ್ಕೆ ಕಡೆಯಾಗಿರುವ, ಕಾಲತತ್ವದ ಬುಡವನ್ನು ಹೊಂದಿರುವ ರುದ್ರನಿಗೋಸ್ಕರ ನಮಸ್ಕಾರವು,, ಎಂದೂ, ಅದೇ ರೀತಿಯಾಗಿ ವೇದಪಾದಸ್ತವದಲ್ಲಿ— “ಮಂಗಳಸ್ವರೂಪನೂ, ತ್ರಿಪುರಸಂಹಾರಕನೂ, ಮೂರುಲೋಕಗಳಿಗೊಡೆಯನೂ, ದಿಗಂಬರನೂ ಆದ ನಿನಗೋಸ್ಕರ ನಮಸ್ಕಾರವು. ಸರ್ವಜಗದ್ರಕ್ಷಕನೂ, ಸರ್ವಸಂಹಾರಕನೂ ಆದ ನಿನಗೋಸ್ಕರ ನಮಸ್ಕಾರವು. ಕಡೆಯಲ್ಲಿರುತ್ತಿದ್ದವನೂ, ಬುಡದಲ್ಲಿರುತ್ತಿದ್ದವನೂ ಆಗಿರುವ ನಿನಗೋಸ್ಕರ ನಮಸ್ಕಾರವು. ಮತ್ತು ನಮಸ್ಕಾರವು,, ಎಂದುಕ್ತವಾಗಿದೆ. ಶ್ರೀರುದ್ರದಲ್ಲಿ —“ಭಕ್ತರ ಸಂಸಾರವೆಂಬ ಕಾಡನ್ನು ಸುಡುವುದರಲ್ಲಿ ಅಗ್ನಿಸ್ವರೂಪನೂ, ಕಲಾ, ತತ್ವ, ಭುವನಾಧ್ವರೂಪಗಳಾದ ಸಮಸ್ತಲೋಕಗಳಿಗೊಡೆಯನೂ, ಪುಲಸ್ತ್ಯಬ್ರಹ್ಮನಿಗೆ ಪತಿಯೂ ಆಗಿರುವ ಪ್ರಚಂಡನೆಂಬ ರುದ್ರನಿಗೋಸ್ಕರ ನಮಸ್ಕಾರವು ! ನಮಸ್ಕಾರವು!! ಎಂದು ಹೇಳಲ್ಪಟ್ಟಿದೆ. ವೇದಪಾದಸ್ತವದಲ್ಲಿ—“ಕಾಮವೈರಿಯೂ, ಪಾರ್ವತೀಸಹಿತನೂ, ತಪಸ್ವಿಯೂ, ತ್ರಿಶೂಲಧಾರಿಯೂ, ವಿಷ್ಣುಕಂಕಾಳಾಭರಣನೂ, ಅತಿಪರಿಶುದ್ಧನೂ, ಸರ್ವಲೋಕಾಧಿಪತಿಯೂ ಆಗಿರುವ ನಿನಗಾಗಿ ನಮಸ್ಕಾರವು,, ಎಂದು ಹೇಳಲ್ಪಟ್ಟಿದೆ. ವಿಸ್ತಾರದಿಂದ ಸಾಕು.

ಇತಿ ಶಿವಸ್ಯ ಸ್ವಭಾವವಿರುದ್ಧಸ್ವರೂಪನಿರ್ಣಯಃ ಪಂಚಮೋಪದೇಶೇ ತೃತೀಯಸ್ಸಂವಾದಃ.



ಶ್ರೀಃ

## ದೇವತಾಂತರಪ್ರತಿಷೇಧಮುಖೇನ ಶಿವಾಧಿಕ್ಯವಿಧಿಃ.

ರೇ—ಭೋಃ ಚೋಳ ! ಅನ್ಯದೇವತಾಪ್ರತಿಷೇಧಮುಖೇನ ಪ್ರತಿಪಾದಿತಶಿವಾಧಿಕ್ಯವಿಧಿಶ್ಶ್ರೂಯತಾಂ, ಶ್ವೇತಾಶ್ವತರೋಪನಿಷದಿ —“ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ” ಲೈಂಗೇ,—“ಕೋಟಿಕೋಟಿಶತಾನ್ಯೇವ ಚಾಂಡಾನಿ ಕಥಿತಾನಿ ತು ॥ ತತ್ರ ತತ್ರ ಚತುರ್ವಕ್ತ್ರಾ ಬ್ರಹ್ಮಾಣೋ ಹರಯೋ ಹರಾಃ ॥ ಅಂಡೇಷ್ವೇತೇಷು ಸರ್ವೇಷು ಭುವನಾನಿ ಚತುರ್ದಶ ॥ ಪ್ರತ್ಯಂಡಂ ದ್ವಿಜಶಾರ್ದೂಲಾಸ್ತೇಷಾಂ ಹೇತುರ್ಮಹೇಶ್ವರಃ ॥ ಧ್ಯೇಯಾನ್ಸರ್ವಾನ್ಪರಿತ್ಯಜ್ಯ ಸ ಏಕಃ ಪರಮೇಶ್ವರಃ ॥ ಯದಾ ಚರ್ಮವದಾಮ್ನಾಯಾತ್ತಂ ವಿನಾಽನ್ಯೋ ನ ಮುಕ್ತಿದಃ” ಪರಾಶರಪುರಾಣೇ,—“ವಿಹಾಯ ಸಾಂಬಮೀಶಾನಂ ಯಜಂತೇ ದೇವತಾಂತರಂ ॥ ತೇ ಮಹಾಘೋರಸಂಸಾರೇ

---

ಎಂಬಲ್ಲಿಗೆ ಶಿವನ ಸ್ವಭಾವವಿರುದ್ಧವಾದ ಸ್ವರೂಪನಿರ್ಣಯವನ್ನು ಹೇಳುವ ಐದನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



### ದೇವತಾಂತರಪ್ರತಿಷೇಧಮುಖದಿಂದ ಶಿವಾಧಿಕ್ಯವಿಧಿಯು.

ರೇ—ಎಲೈ ಚೋಳನೇ ! ಅನ್ಯದೇವತಾಪ್ರತಿಷೇಧಪೂರ್ವಕವಾಗಿ ಪ್ರತಿಪಾದಿಸುವ ಶಿವಾಧಿಕ್ಯವಿಧಿಯನ್ನು ಕೇಳು; ಶ್ವೇತಾಶ್ವತರೋಪನಿಷತ್ತಿನಲ್ಲಿ —“ಮಾನವರು ಶಿವಜ್ಞಾನದಿಂದಲೇ ಸಂಸಾರದುಃಖರಹಿತರಾಗುವರು” ಎಂದು ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ - “ಅನೇಕಸಂಖ್ಯಾಕಗಳಾದ ಅಂಡಗಳಲ್ಲಿ ಅನೇಕಮಂದಿ ಬ್ರಹ್ಮಂದಿರೂ, ಅನೇಕಮಂದಿ ವಿಷ್ಣುಗಳೂ, ಅನೇಕಮಂದಿ ರುದ್ರರೂ ಇರುವರು. ಈ ಅಂಡಗಳಲ್ಲಿ ಹದಿನಾಲ್ಕು ಲೋಕಗಳಿರುವುವು. ಎಲ್ಲಕ್ಕೂ ಮಹಾದೇವನು ಕಾರಣನಾಗಿರುವನು. ಈ ಕಾರಣದಿಂದ ಮುಮುಕ್ಷುಗಳಿಂದ ಬ್ರಹ್ಮವಿಷ್ಣ್ವಾದಿಗಳನ್ನು ಹೊರತು ಆ ಶಿವನೊಬ್ಬನೇ ಧ್ಯಾತವ್ಯನು. ಮುಕ್ತಿದಾಯಕನೀತನಲ್ಲದೆ ಬೇರೊಬ್ಬನಲ್ಲವು,” ಎಂದೂ, ಪಾರಾಶರಪುರಾಣದಲ್ಲಿ —“ಶಕ್ತಿವಿಶಿಷ್ಟನಾದ ಪರಮೇಶ್ವರನನ್ನು ಬಿಟ್ಟು, ವಿಷ್ಣ್ವಾದ್ಯನ್ಯದೇವತೆಗಳನ್ನು ಪೂಜಿಸತಕ್ಕವರು ಅತಿ ಭೀಕರವಾದ ಸಂಸಾರಸಮುದ್ರ

ಪತಂತಿಪರಿಮೋಹಿತಾಃ'' ಸೌರಸಂಹಿತಾಯಾಂ,-''ಶಿವಮೇಕಂ ಪರಿತ್ಯಜ್ಯ ಯೇಽನ್ಯಂ ದೇವಮುಪಾಸತೇ||ತೃಷಿತೋ ಜಾಹ್ನವೀತೀರೇ ಕೂಪಂ ಖನತಿದುರ್ಮತಿಃ'' ಇತ್ಯಾದಿ

ಇತ್ಯನ್ಯದೇವತಾಪ್ರತಿಷೇಧಮುಖೇನ ಪ್ರತಿಪಾದಿತಶಿವಾಧಿಕ್ಯನಿರ್ಣಯವಿಧೌ ಪಂಚಮೋಪದೇಶೇ ಚತುರ್ಥಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕಸಂವಾದರೂಪಶಿವಾಧಿಕ್ಯಶಿಖಾಮಣೌ ಶಿವಸ್ಯ ಭವಮೃಡಹರನಾಮಧೇಯಾದಿಚತುಸ್ಸಂವಾದವಿಚಾರಃ ಪಂಚಮೋಪದೇಶಃ.



ಶ್ರೀಸ್ಥಾಣವೇನಮಃ.

## ಷಷ್ಠೋಪದೇಶಃ ಪ್ರಾರಭ್ಯತೇ.



### ಪರಮಶಿವಸ್ಯಸಕಲನಿಷ್ಕಳಮೂರ್ತಿಸ್ವರೂಪನಿರ್ಣಯಃ.

ಶ್ರೀರೇಣುಕಃ—ಭೋ ಚೋಳ ! ಅಥ ನಿಗಮಾಗಮಾದಿಷು ಕ್ರಮೇಣ ಬ್ರಹ್ಮ, ಪರಶಿವ, ಪರಲಿಂಗನಾಮಧೇಯಸ್ಯ ಪರಮಸಚ್ಚಿದಾನಂದನಿತ್ಯಪರಿಪೂರ್ಣ

---

ದಲ್ಲಿ ಬೀಳುವರು'' ಎಂದೂ, ಸೌರಸಂಹಿತೆಯಲ್ಲಿ—''ಅದ್ವಿತೀಯನಾದ ಶಿವನನ್ನು ಸೇವಿಸ ಅನ್ಯದೈವವನ್ನು ಸೇವಿಸುವವನು—ನೀರನ್ನು ಕುಡಿಯಲಿಚ್ಛೆಯಿಂದ ಗಂಗಾತೀರದಲ್ಲಿ ಬಾವಿ ನ್ನು ತೋಡುವ ದುರ್ಬುದ್ಧಿಯುಳ್ಳವನಂತೆ,, ಎಂದೂ ಉಕ್ತವಾಗಿದೆ.

ಎಂಬಲ್ಲಿಗೆ ದೇವತಾಂತರಪ್ರತಿಷೇಧಮುಖದಿಂದ ಶಿವಾಧಿಕ್ಯನಿರ್ಣಯವಿಧಿಯನ್ನು ಹೇಳುವ ಐದನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಐದನೆಯ ಉಪದೇಶವು ಸಂಪೂರ್ಣವಾಯಿತು.



## ಆರನೆಯ ಉಪದೇಶ ಪ್ರಾರಂಭವು.

### ಪರಶಿವನ ಸಕಲ ನಿಷ್ಕಳಮೂರ್ತಿಯ ಸ್ವರೂಪನಿರ್ಣಯವು.

ರೇ—ಎಲೈ ಚೋಳನೇ ! ಪರಬ್ರಹ್ಮ, ಪರಶಿವ, ಪರಲಿಂಗ ಎಂಬ ಅಭಿಧಾನಗಳನ್ನು ಹೊಂದಿದ ಶ್ರೇಷ್ಠನಾದ ಸಚ್ಚಿದಾನಂದಾದ್ಯಾದಿ ಲಕ್ಷಣ ಲಕ್ಷಿತವಾದ ವಸ್ತುವಿನ ಸ್ವರೂಪ

ಸ್ತುನಸ್ಸ್ವರೂಪಂ ಶ್ರೂಯತಾಂ, ಬ್ರಹ್ಮೋಪನಿಷದಿ,— "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ | ಆನಂದಂ ಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನ" ತವಲಕಾರಬ್ರಹ್ಮೋಪನಿಷದಿ,— "ಯದ್ವಾಚಾ ನಭ್ಯುದಿತಂ ಯೇನ ವಾಗಭ್ಯುದ್ಯತೇ | ತದೇವ ಬ್ರಹ್ಮ ತ್ವಂ ವಿದ್ಧಿ" ಬೃಹದಾರಣ್ಯಕೋಪನಿಷದಿ,— "ಸಹೋವಾಚೈತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಂ" ವಾತುಲತಂತ್ರೇ,— "ಶಿವಂ ಪರಾತ್ಪರಂ ಸೂಕ್ಷ್ಮಂ ಸತ್ಯಂ ಸರ್ವಗಮವ್ಯಯಂ || ಅನಿಂದಿತಮನೌಪಮ್ಯಮಪ್ರಮಾಣಮನಾಮಯಂ" ಇತ್ಯಾದಿಪ್ರಸಿದ್ಧವಾಕ್ಯೈಃ ಕೇವಲನಿಷ್ಕಲವಸ್ತುಸ್ವರೂಪಂ ನಿಶ್ಚಿತವ್ಯಂ. ತತ್ತಾವದಾಸ್ತಾಂ.

ಹೇ ಚೋಳ ! ಅಥ ತದಪರಾವತಾರಮಹೇಶ್ವರಸ್ವರೂಪಂ ಶ್ರೂಯತಾಂ, ಸೂತಗೀತಾಯಾಂ,— "ಘೃತಕಾಠಿನ್ಯವನ್ಮೂರ್ತಿಸಚ್ಚಿದಾನಂದಲಕ್ಷಣಾ || ಶಿವಾದ್ಭೇದೇನ ನೈವಾಸ್ತಿ ಶಿವಏವ ಹಿ ಸಾ ಸದಾ" ತಸ್ಯ ಚಂದ್ರಶೇಖರತ್ವಾದಿ ಲೀಲಾವಿಗ್ರಹ

---

ವೇದಾಗಮಗಳಲ್ಲಿ ನಿರೂಪಿತವಾಗಿರುವುದನ್ನು ಕ್ರಮದಿಂದ ಕೇಳು; ಬ್ರಹ್ಮೋಪನಿಷತ್ತಿನಲ್ಲಿ— "ಮನಸ್ಸಿನೊಡನೆ ಕೂಡಿದ ವಾಕ್ಕುಗಳು ಯಾವುದನ್ನು ಹೇಳಲಸಮರ್ಥಗಳಾಗಿ ಹಿಂದಿರುಗುತ್ತವೋ, ಆ ಪರಬ್ರಹ್ಮದ ಅನುಭವದಿಂದುಂಟಾಗುವ ಆನಂದವನ್ನು ಹೊಂದಿದ ವಿದ್ವಾಂಸನು ಭವಬಂಧದದೆಸೆಯಿಂದ ಅಂಜುವುದಿಲ್ಲವು" ಎಂದೂ, ತವಲಕಾರಬ್ರಹ್ಮೋಪನಿಷತ್ತಿನಲ್ಲಿ— "ಯಾವುದು ವಾಕ್ಕಿನಿಂದ ಹುಟ್ಟುವುದಿಲ್ಲವೋ, ಯಾವುದರಿಂದ ವಾಕ್ಕು ಹುಟ್ಟುತ್ತದೋ, ಅದೇ ನಿಷ್ಕಲಬ್ರಹ್ಮವೆಂದು ನೀನು ತಿಳಿಯುವವನಾಗು" ಎಂದೂ ಉಕ್ತವಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ— "ಎಲೈ ಗಾರ್ಗಿಯೇ ! ನಾಶರಹಿತವಾದೀ ಪರಬ್ರಹ್ಮವನ್ನು—ಬ್ರಹ್ಮರ್ಷಿಗಳು ಸ್ಥೂಲವಲ್ಲದುದನ್ನಾಗಿಯೂ, ಸೂಕ್ಷ್ಮವಲ್ಲದುದನ್ನಾಗಿಯೂ, ಹ್ರಸ್ವವಲ್ಲದುದನ್ನಾಗಿಯೂ, ದೀರ್ಘವಲ್ಲದುದನ್ನಾಗಿಯೂ, ರಕ್ತವರ್ಣವಲ್ಲದುದನ್ನಾಗಿಯೂ, ಸ್ನೇಹವಲ್ಲದುದನ್ನಾಗಿಯೂ, ಛಾಯಾರಹಿತವಾದುದನ್ನಾಗಿಯೂ ಹೇಳುತ್ತಾರೆ" ಎಂದೂ, ವಾತುಲತಂತ್ರದಲ್ಲಿ— "ಶಿವತತ್ವವು ಪರರೆನಿಸಿದ ವಿಷ್ಣು ಬ್ರಹ್ಮಾದಿಗಳಿಗಿಂತ ಪರವೂ, ಪರಮಾಣುವಿಗಿಂತ ಸೂಕ್ಷ್ಮರೂಪವೂ, ಸತ್ಯಸ್ವರೂಪವೂ, ಸರ್ವಜಗದ್ವ್ಯಾಪಕವೂ, ನಾಶರಹಿತವೂ, ಅನಿಂದಿತವೂ, ಉಪಮಾರಹಿತವೂ, ಅಪ್ರಮಾಣವೂ, ಜನನ ಮರಣ ರೋಗರಹಿತವೂ ಆಗಿದೆ" ಎಂದೂ ಉಕ್ತವಾಗಿದೆ. ಇತ್ಯಾದಿ ಪ್ರಸಿದ್ಧವಚನಗಳಿಂದ ಕೇವಲ ನಿಷ್ಕಲವಸ್ತುವಿನ ಸ್ವರೂಪವನ್ನು ನಿಶ್ಚೈಸಬೇಕು. ಅದು ಹಾಗಿರಲಿ.

ಎಲೈ ಚೋಳನೇ ! ಆ ನಿಷ್ಕಲಪರಬ್ರಹ್ಮದ ಬೇರೆಒಂದವತಾರವೆನಿಸಿರುವ ಮಹೇಶ್ವರನ ಸ್ವರೂಪವನ್ನು ಕೇಳು; ಸೂತಗೀತೆಯಲ್ಲಿ— "ಘಟ್ಟಿಗೊಂಡ ತುಪ್ಪದಂತೆ ಸಚ್ಚಿದಾನಂದಗಳಿಂದ ಘಟ್ಟಿಯಾದ ಮೂರ್ತಿಯು ನಿಷ್ಕಲನಾದ ಶಿವನಿಂದ ಬೇರೆಯಾಗಿರುವುದಿಲ್ಲ. ಆ ಮೂರ್ತಿ

ಧಾರಿತ್ವಸ್ವರೂಪಂ ಜ್ಞಾಯತಾಂ, ವಾತುಲತಂತ್ರೇ,—" ಪ್ರಥಮಂ ಸೋಮಧಾ
ಪ್ತ್ಯಾದ್ವಿತೀಯಮುಮಯಾ ಸಹ|| ತೃತೀಯಂ ವೃಷಭಾರೂಢಂ ಚತುರ್ಥಂ ನೃತ್ಯ
ಪನಂ || ವೈವಾಹಂ ಪಂಚಮಂ ಪ್ರೋಕ್ತಂ ಷಷ್ಠಂ ಭಿಕ್ಷಾಟನಂ ತಥಾ|| ಕಾಮಾ
ಸಪ್ತಮಂ ವಿದ್ಯಾತ್ಕಾಲಾರಿಶ್ಚಾಷ್ಟಮೋ ಭವೇತ್ || ನವಮಂ ತ್ರಿಪುರಾರಿಸ್ಸ್ಯಾ
ಜ್ಜಲಂಧರವಧೋ ದಶ || ಏಕಾದಶಮುಜಾರಿಸ್ಸ್ಯಾದ್ದ್ವಾದಶಂ ವೀರಭದ್ರಕಃ || ತ್ರ
ಯೋದಶಂ ಹರಿಧ್ವಂಸಮರ್ದನಾರೀ ಚತುರ್ದಶಂ || ಕಿರಾತಸ್ಸ್ಯಾತ್ಪಂಚದಶಂ
ಕಾಳೀ ಷೋಡಶಂ ಭವೇತ್ || ಚಂಡೇಶಾನುಗ್ರಹಶ್ಚೈವ ತಥಾ ಸಪ್ತದಶಂ ಭ
ತ್ || ವಿಷಾಪಹರಣಂ ಚೈವಮಷ್ಟಾದಶಮಿತಿ ಸ್ಮೃತಂ || ಚಕ್ರದಾನಸ್ವರೂ
ತು ಏಕೋನವಿಂಶತಿಸ್ಸ್ಮೃತಂ ||ವಿಘ್ನಪ್ರಸಾದೋ ವಿಂಶಸ್ಸ್ಯಾದುಮಾಸ್ಕಂದ್ಯೈಕ
ಶತಿಃ || ದ್ವಾವಿಂಶಮೇಕಪಾದಸ್ಸ್ಯಾತ್ತ್ರಯೋವಿಂಶಂ ಸುಖಾವಹಃ || ದಕ್ಷಿಣಾ
ತಿರೂಪಂ ತು ಚತುರ್ವಿಂಶತ್ಪ್ರಕೀರ್ತಿತಂ ||ಏತೇ ಮಹೇಶರೂಪಾಸ್ಸ್ಯುರ್ಮೂರ್ತಿ
ದಾಃ ಪ್ರಕೀರ್ತಿತಾಃ"

ಇತಿ ಪರಮಶಿವಸ್ಯ ಸಕಲನಿಷ್ಕಳಮೂರ್ತಿಸ್ವರೂಪನಿರ್ಣಯಷ್ಷಷ್ಠೋ
ಪದೇಶೇ ಪ್ರಥಮಸ್ಸಂವಾದಃ.

---

ಯು ಯಾವಾಗಲೂ ಶಿವನೇ ಆಗಿರುವುದು,, ಎಂದು ಹೇಳಲ್ಪಟ್ಟಿದೆ. ಸಕಲ ಮೂರ್ತಿಯಾದ
ಪರಮೇಶ್ವರನ ಧರಿಸಿರುವ ಚಂದ್ರಶೇಖರತ್ವಾದಿ ಲೀಲಾವಿಗ್ರಹಗಳ ಸ್ವರೂಪವನ್ನು ಕೇಳು;
ವಾತುಲತಂತ್ರದಲ್ಲಿ—"೧ನೆಯದು ಚಂದ್ರಧರಲೀಲೆ, ೨ನೆಯದು ಉಮಾಸಹಿತಲೀಲೆ,
ಯದು ವೃಷಭಾರೂಢಲೀಲೆ, ೪ನೆಯದು ತಾಂಡವಲೀಲೆ. ೫ನೆಯದು ಗಿರಿಜಾವಿವಾಹಲೀ
೬ನೆಯದು ಭಿಕ್ಷಾಟನಲೀಲೆ, ೭ನೆಯದು ಕಾಮದಹನಲೀಲೆ, ೮ನೆಯದು ಕಾಲದಹನಲೀ
೯ನೆಯದು ತ್ರಿಪುರಸಂಹಾರಲೀಲೆ. ೧೦ನೆಯದು ಜಲಂಧರಹರಣಲೀಲೆ, ೧೧ನೆಯದು ಬ್ರಹ್ಮ
ಶ್ಛೇದನಲೀಲೆ, ೧೨ನೆಯದು ವೀರಭದ್ರೋತ್ಪತ್ತಿಲೀಲೆ, ೧೩ನೆಯದು ನರಸಿಂಹಸಂಹಾರಲೀ
೧೪ನೆಯದು ಅರ್ಧನಾರೀಶ್ವರಲೀಲೆ, ೧೫ನೆಯದು ಕಿರಾತಲೀಲೆ, ೧೬ನೆಯದು ಕಂಕಾಳ
ಲೀಲೆ, ೧೭ನೆಯದು ಚಂಡೇಶ್ವರಾನುಗ್ರಹಲೀಲೆ, ೧೮ನೆಯದು ವಿಷಧರಲೀಲೆ, ೧೯ನೆಯದು
ವಿಷ್ಣುಚಕ್ರಪ್ರದಾನಲೀಲೆ, ೨೦ನೆಯದು ಗಣೇಶಬೋಧಾಲೀಲೆ, ೨೧ನೆಯದು ಕುಮಾರೋ
ತ್ಪತ್ತಿಲೀಲೆ, ೨೨ನೆಯದು ಏಕಪಾದಲೀಲೆ ೨೩ನೆಯದು ಸುಖಾವಹಲೀಲೆ, ೨೪ನೆಯದು
ದಕ್ಷಿಣಾಮೂರ್ತಿಲೀಲೆ, ೨೫ನೆಯದು ಮಹಾಲಿಂಗೋದ್ಭವಲೀಲೆ, ಇವು ಮಹೇಶ್ವರನ ಲೀಲಾ
ವಿಗ್ರಹಭೇದಗಳೆಂದು ಹೇಳಲ್ಪಟ್ಟವು,, ಎಂದು ನಿರೂಪಿತವಾಗಿದೆ.

ಎಂಬಲ್ಲಿಗೆ ಪರಶಿವನ ಸಕಲ ನಿಷ್ಕಳಮೂರ್ತಿಸ್ವರೂಪನಿರ್ಣಯವಿಧಿಯನ್ನು ಹೇಳುವ
ಆರನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.

ಶ್ರೀಃ.

## ತ್ರಿಮೂರ್ತ್ಯುತ್ಪತ್ತಿಕಾರಣಮಹೇಶ್ವರಸ್ಯಸ್ವರೂಪವಿಧಿಃ

ರೇ-ಹೇ ಜೋಳ! ತ್ರಿಮೂರ್ತ್ಯುತ್ಪತ್ತಿಕಾರಣಸ್ಯ ಸಕಲಸ್ವರೂಪಸ್ಯ ಮಹೇಶ್ವರಸ್ಯಸ್ವರೂಪಂ ಶ್ರೂಯತಾಂ, ಶ್ವೇತಾಶ್ವತರೋಪನಿಷದಿ,—"ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ" ನಾರಾಯಣೋಪನಿಷದಿ,—"ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ | ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸಮಹೇಶ್ವರಃ" ಮಾಂಡೂಕ್ಯೋಪನಿಷದಿ,—"ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ" ಋಗ್ವೇದೇ,—"ತ್ರಿಯಂಬಕಂ ಯಜಾಮಹೇ" ಇತಿ. ಅಸ್ಯ ತ್ರಿಯಂಬಕಮಂತ್ರಸ್ಯಾರ್ಥಸ್ತು ಲಿಂಗಪುರಾಣೇ,—"ತ್ರಯಾಣಾಮಪಿ ಲೋಕಾನಾಂ ಗುಣಾನಾಮಪಿ ಯಃ ಪ್ರಭುಃ || ತ್ರಿವೇದಾನಾಂ ತ್ರಿದೇವಾನಾಂ ಬ್ರಹ್ಮಕ್ಷತ್ರವಿಶಾಮಪಿ || ತಥಾ ಸೋಮಸ್ಯ ಸೂರ್ಯಸ್ಯ ವಹ್ನೇರಗ್ನಿತ್ರಯಸ್ಯ ಚ || ಉಮಾಖ್ಯಂಬಾ ಮಹಾದೇವಸ್ತ್ರ್ಯಂಬಕೋತಸ್ತ್ರಿಯಂಬಕಃ || ತಸ್ಮಾತ್ಸರ್ವಂ ಪರಿತ್ಯಜ್ಯ ತ್ರಿಯಂಬಕಮುಮಾಪತಿಂ || ತ್ರಿಯಂಬಕೇನ ಮಂ

---

### ತ್ರಿಮೂರ್ತ್ಯುತ್ಪತ್ತಿಕಾರಣ ಮಹೇಶ್ವರಸ್ವರೂಪವಿಧಿಯು.

ರೇ—ಎಲೈ ಜೋಳನೇ ! ಬ್ರಹ್ಮ ವಿಷ್ಣು ರುದ್ರರ ಉತ್ಪತ್ತಿಗೆ ಕಾರಣನಾದ, ಸಕಲಮೂರ್ತಿಯಾದ ಮಹೇಶ್ವರನ ಸ್ವರೂಪವನ್ನು ಕೇಳು; ಶ್ವೇತಾಶ್ವತರೋಪನಿಷತ್ತಿನಲ್ಲಿ– "ಮಾಯೆಯನ್ನು ಪ್ರಕೃತಿಯನ್ನಾಗಿ ಮಾಯೆಯುಳ್ಳವನನ್ನು ಮಹೇಶ್ವರನನ್ನಾಗಿ ತಿಳಿಯಬೇಕು" ಎಂದೂ, ನಾರಾಯಣೋಪನಿಷತ್ತಿನಲ್ಲಿ– "ವೇದಗಳ ಮೊದಲು ಕಡೆಗಳಲ್ಲಿ ಹೇಳಲ್ಪಟ್ಟರುವುದೂ, ಪ್ರಕೃತಿತತ್ವದಲ್ಲಡಗಿದುದೂ ಆಗಿರುವ "ಓಮ್" ಎಂಬ ಸ್ವರಕ್ಕೆ ಪರನೆನಿಸಿರುವವನೇ ಮಹೇಶ್ವರನು" ಎಂದೂ, ಮಾಂಡೂಕ್ಯೋಪನಿಷತ್ತಿನಲ್ಲಿ—"ಸತ್ವ ರಜ ಸ್ತಮೋರೂಪವಾಗಿರುವ ಪ್ರಪಂಚಕ್ಕೆ ಮೋಕ್ಷವನ್ನು ಕೊಡತಕ್ಕವನೂ, ಎರಡಿಲ್ಲದಿರುವವನೂ ಆದ ಶಿವನನ್ನು ಆ ತ್ರಿಮೂರ್ತಿಗಳದೆಸೆಯಿಂದ ನಾಲ್ಕನೆಯವನನ್ನಾಗಿ ವೇದಪುರುಷರು ತಿಳಿದಿರುತ್ತಾರೆ" ಎಂದೂ, ಋಗ್ವೇದದಲ್ಲಿ– "ತ್ರಿಯಂಬಕನನ್ನು ಪೂಜಿಸುತ್ತೇವೆ" ಎಂದೂ ಉಕ್ತವಾಗಿದೆ. "ತ್ರಿಯಂಬಕಮ್" ಎಂಬೀ ಮಂತ್ರದ ಅರ್ಥವು ಲಿಂಗಪುರಾಣದಲ್ಲಿ—"ಮಹಾದೇವನು–ಮೂರುಲೋಕಗಳಿಗೂ, ಮೂರುವೇದಗಳಿಗೂ, ಮೂರುಮೂರ್ತಿಗಳಿಗೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳಿಗೂ, ಚಂದ್ರ ಸೂರ್ಯಾಗ್ನಿಗಳಿಗೂ, ತಾಯಿಯಾಗಿರುವ ಅಂಬಿಯೆನಿಸಿದ ಶಕ್ತಿಯಿಂದ ಕೂಡಿದವನಾಗಿರುವುದರಿಂದ ತ್ರಿಯಂಬಕನೆಂದೆನಿಸಿರುವನು. ಆ ಕಾರಣದದೆಸೆಯಿಂದ ಸಕಲ ದೇವತೆಗೆ

ತ್ರೇಣ ಪೂಜಯೇತ್ಸುಸಮಾಹಿತಃ'' ಇತ್ಯಾದಿ ಅಸ್ಮಿನ್ವಿಷಯೇ ಪೂರ್ವೋಕ್ತಂ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ'' ಇತಿ ವಾಕ್ಯಮಪಿ ಪ್ರಮಾಣಮಿತಿ ವಿಜ್ಞೇಯಂ. ಆದಿತ್ಯಪುರಾಣೇ,—"ಯಸ್ಮಾತ್ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಪೂರ್ವಕಂ || ಮಹಾಭೂತೇಂದ್ರಿಯೈಸ್ಸರ್ವೈಃ ಪ್ರಥಮಂ ಸಂಪ್ರಸೂಯತೇ || ಸರ್ವೈಶ್ವರ್ಯೇಣ ಸಂಪನ್ನೋ ನಾಮ್ನಾ ಸರ್ವೇಶ್ವರಸ್ಸ್ವಯಂ || ಸರ್ವೈರ್ಮುಮುಕ್ಷುಭಿರ್ಧ್ಯೇಯಶ್ಶಂಭುರಾಕಾಶಮಧ್ಯಗಃ'' ಇತ್ಯಾದಿಪ್ರಸಿದ್ಧಂ.

ಇತಿ ತ್ರಿಮೂರ್ತ್ಯುತ್ಪತ್ತಿಕಾರಣಮಹೇಶ್ವರಸ್ವರೂಪವಿಧಿಷ್ಷಷ್ಠೋಪದೇಶೇ ದ್ವಿತೀಯಸ್ಸಂವಾದಃ.

ಶ್ರೀಃ.

## ಮಹೇಶ್ವರಾಧಿಕ್ಯನಿರ್ಣಯಃ.

ರೇ---ಭೋಃ ಚೋಳ ! ತಸ್ಯ ಮಹೇಶ್ವರಸ್ಯ ಆಧಿಕ್ಯಂ ಶ್ರೂಯತಾಂ, ಶ್ವೇತಾಶ್ವತರೋಪನಿಷದಿ,—"ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ | ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ|ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯ

ಳನ್ನು ಬಿಟ್ಟು, ಪಾರ್ವತೀವಲ್ಲಭನಾದ ತ್ರಿಯಂಬಕನನ್ನು ತ್ರಿಯಂಬಕಮಂತ್ರದಿಂದ ಲೇಸಾಗಿ ಚಿತ್ತೈಕಾಗ್ರತೆಯುಳ್ಳವನಾಗಿ ಪೂಜಿಸಬೇಕು., ಎಂದೂ ಉಕ್ತವಾಗಿದೆ. ಈ ವಿಷಯದಲ್ಲಿ ಪೂರ್ವೋಕ್ತವಾದ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇಸಂಪ್ರಸೂಯಂತೇ,, ಎಂಬ ಶ್ರುತಿಯು ಪ್ರಮಾಣವೆಂದು ತಿಳಿಯಬೇಕು. "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ, ಎಂಬ ಮಂತ್ರದ ಅರ್ಥವು ಆದಿತ್ಯಪುರಾಣದಲ್ಲಿ "ಯಸ್ಮಾತ್ಸರ್ವಮಿದಂ,, ಇತ್ಯಾದಿ ವಚನಗಳಿಂದ ನಿರೂಪಿತವಾಗಿದೆ.

ಎಂಬಲ್ಲಿಗೆ ತ್ರಿಮೂರ್ತ್ಯುತ್ಪತ್ತಿಕಾರಣನಾದ ಮಹೇಶ್ವರನ ಸ್ವರೂಪವಿಧಿಯನ್ನು ಹೇಳುವ ಆರನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.

## ಮಹೇಶ್ವರಾಧಿಕ್ಯನಿರ್ಣಯವು.

ರೇ—ಎಲೈ ಚೋಳನೇ ! ಪೂರ್ವೋಕ್ತನಾದ ಆ ಮಹೇಶ್ವರನ ಆಧಿಕ್ಯವನ್ನು ಕೇಳು. ಶ್ವೇತಾಶ್ವತರೋಪನಿಷತ್ತಿನಲ್ಲಿ — "ಆ ಮಹೇಶ್ವರನನ್ನು ಇಂದ್ರಾದಿ ಲೋಕಪಾಲಕರೊಳಗೆ ಶ್ರೇಷ್ಠನನ್ನಾಗಿಯೂ, ದೇವತೆಗಳಿಗೆ ಪರಮದೇವತೆಯನ್ನಾಗಿಯೂ, ಪತಿಗಳೆನಿಸಿದವರಿಗೆ ಪರಮ

ತೇ'' ಶೈವೇವಾಯುವೀಯಸಂಹಿತಾಯಾಂ,—'' ತಮೀಶ್ವರಾಣಾಂ ಪರಮಂ ದೇವ ತಾನಾಂ ಚ ದೈವತಂ ||ಪತಿಂ ಪತೀನಾಂ ಪರಮಂ ವಿದಾಮ ಭುವನೇಶ್ವರಂ||ನ ತಸ್ಯ ವಿದ್ಯತೇ ಕಾರ್ಯಂ ಕರಣಂ ಚ ನ ವಿದ್ಯತೇ|| ನತತ್ಸಮಶ್ಚಾಪ್ಯಧಿಕೋ ದೃಶ್ಯತೇ ಕ್ವಚಿದ ಪ್ಯತ'' ಇತ್ಯಾದಿಭಿರ್ವಚನೈರ್ಮಹೇಶ್ವರಾಧಿಕ್ಯಂ ಪ್ರಸಿದ್ಧಂ. ವಿಸ್ತರೇಣಾಲಂ.

ಇತಿ ಮಹೇಶ್ವರಾಧಿಕ್ಯನಿರ್ಣಯಷ್ಷಷ್ಠೋಪದೇಶೇ ತೃತೀಯಸ್ಸಂವಾದಃ.



ಶ್ರೀಃ.

## ಮಹೇಶ್ವರಸ್ಯಪರಬ್ರಹ್ಮಾದಿಪರ್ಯಾಯನಾಮವಿಚಾರಃ.

ರೇ—ಹೇ ಚೋಳ ! ಮಹೇಶ್ವರಸ್ಯ ತಸ್ಯ ಪರಬ್ರಹ್ಮಾದಿಪರ್ಯಾಯನಾಮ ವಿಧಿಶ್ಶ್ರೂಯತಾಂ, ಅಥರ್ವಶಿರಸಿ,—''ತತ್ಪರಂ ಬ್ರಹ್ಮ ಸ ಏಕಸ್ಸ ಏಕೋ ರುದ್ರಸ್ಸ ಈ ಶಾನಸ್ಸಭಗವಾಂತ್ಸಮಹೇಶ್ವರಸ್ಸಮಹಾದೇವಃ'' ಇತಿ. ಲೈಂಗೇ,—'' ತತ್ಪರಂಬ್ರ ಹ್ಮ ಈಶಾನ ಏಕೋ ರುದ್ರಸ್ಸ ಏಕಕಃ || ಭಗವಾನ್ಮಹೇಶ್ವರಸ್ಸಾಕ್ಷಾನ್ಮಹಾದೇವೋ ನ ಸಂಶಯಃ'' ಇತ್ಯಾದಿ. ನಾರಾಯಣಪ್ರಣೀತಭವಾದಿಸರ್ವತತ್ವಾವಲಂಬನಾಂತಂ

---

ಪತಿಯನ್ನಾಗಿಯೂ, ಪರವಾದುದರತ್ತಿಂ ಪರನನ್ನಾಗಿಯೂ, ಸರ್ವಲೋಕಗಳಿಗೊಡೆಯನನ್ನಾಗಿಯೂ, ಸರ್ವರ ಸ್ತುತಿಗಳಿಗೆ ಪಾತ್ರನನ್ನಾಗಿಯೂ ತಿಳಿಯುತ್ತೇವೆ. ಆತನಿಗೆ ಕಾರ್ಯವೂ ಕರ ಣವೂ ಇಲ್ಲವು. ಮತ್ತು ಆತನೊಡನೆ ಸಮಾನನೂ, ಆತನತ್ತಿಂದ ಅಧಿಕನೂ ಇಲ್ಲವು., ಎಂ ದುಕ್ತವಾಗಿದೆ. ಈ ಶ್ರುತಿಯ ಅರ್ಥವು ವಾಯವೀಯಸಂಹಿತೆಯಲ್ಲಿ ಹೇಳಲ್ಪಟ್ಟಿದೆ. ಇವು ಮೊ ದಲಾದ ವಚನಗಳಿಂದ ಮಹೇಶ್ವರಾಧಿಕ್ಯವು ಪ್ರಸಿದ್ಧವಾಗಿದೆ. ವಿಸ್ತಾರದಿಂದ ಪ್ರಯೋಜನ ವಿಲ್ಲವು.

ಎಂಬಲ್ಲಿಗೆ ಮಹೇಶ್ವರಾಧಿಕ್ಯನಿರ್ಣಯವನ್ನು ಹೇಳುವ ಆರನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



### ಮಹೇಶ್ವರನಿಗಿರುವ ಪರಬ್ರಹ್ಮಾದಿ ಪರ್ಯಾಯನಾಮವಿಚಾರವು.

ರೇ—ಎಲೈ ಚೋಳನೇ ! ಆ ಮಹೇಶ್ವರನಿಗೆ ಪರಬ್ರಹ್ಮ ಮೊದಲಾದ ಬೇರೆಬೇರೆ ಹೆಸ ರುಗಳಿರುವುದನ್ನು ಕೇಳು; ಅಥರ್ವಶಿರಸ್ಸಿನಲ್ಲಿ—''ಷಡ್ಗುಣೈಶ್ವರ್ಯಸಂಪನ್ನನಾದ ಆ ಮಹೇಶ್ವ ರನು . ಪರಬ್ರಹ್ಮವೂ, ಈಶಾನನೂ, ರುದ್ರನೂ, ಮಹಾದೇವನೂ ಆಗಿರುವನು. ಸಂಶಯವಿಲ್ಲ ವು'' ಎಂದು ಹೇಳಲ್ಪಟ್ಟಿದೆ. ಈ ಹೆಸರುಗಳಿರುವ ಸಂಗತಿಯು ಲಿಂಗಪುರಾಣದಲ್ಲಿ ಹೇಳಲ್ಪಟ್ಟಿದೆ. 'ಭವ, ಎಂಬ ನಾಮವು ಮೊದಲಾಗಿ 'ಸರ್ವತತ್ವಾವಲಂಬನ, ಎಂಬ ನಾಮವು ಕಡೆಯಾಗುಳ್ಳ

ಮಹೇಶ್ವರಸ್ಯ ಸಹಸ್ರನಾಮಧೇಯಸ್ತೋತ್ರಂ ಜಗತಿ ಪ್ರಸಿದ್ಧಂ ತದುಕ್ತಂ ಶೈ ಗೇ,—“ಲಿಂಗಂ ಸ್ಥಾಪ್ಯ ಯಥಾ ನ್ಯಾಯಂ ಹಿಮವಚ್ಛಿಖರೇ ಶುಭೇ || ಹರಿನಾ ಮ್ನಾಂ ಸಹಸ್ರೇಣ ಭವಾದ್ಯೈರ್ಭವಮೀಶ್ವರಂ || ಪೂಜಯಾಮಾಸ ಚ ವಿಭುಂ ಪ್ರ ಣವಾದಿನಮೋಂತಕೈಃ || ಪ್ರತಿನಾಮ್ನಾ ಸಪದ್ಮೇನ ಪೂಜಯಾಮಾಸ ಶಂಕರಂ” ಇತ್ಯಾದಿ.

ಇತಿ ಮಹೇಶ್ವರಸ್ಯ ಪರಬ್ರಹ್ಮಾದಿಪರ್ಯಾಯನಾಮವಿಚಾರಪ್ರಶ್ನೋಪದೇಶೇ ಚತುರ್ಥಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕಸಂವಾ ರೂಪಶಿವಾಧಿಕ್ಯಶಿಖಾಮಣೌ ಪರಶಿವಮೂರ್ತಿದ್ವೈವಿಧ್ಯಾದಿಚ ತುರ್ಥಸ್ಸಂವಾದವಿಚಾರಪ್ರಶ್ನೋಪದೇಶಃ.

ಇತಿ ಪೂರ್ವಭಾಗಸ್ಸಮಾಪ್ತಃ.



ಶಿವಸಹಸ್ರನಾಮಸ್ತೋತ್ರವು ನಾರಾಯಣನಿಂದ ಹೇಳಲ್ಪಟ್ಟು, ಲೋಕಪ್ರಸಿದ್ಧವಾಗಿದೆ. ಈ ವಿಷಯವು ಲಿಂಗಪುರಾಣದಲ್ಲಿ —“ನಾರಾಯಣನು – ಹಿಮಾಚಲದ ಶಿಖರದಲ್ಲಿ ಶಿವಲಿಂಗವನ್ನು ವಿಧ್ಯುಕ್ತಕ್ರಮಾನುಸಾರವಾಗಿ ಪ್ರತಿಷ್ಠಿಸಿ, ಆ ಲಿಂಗಮೂರ್ತಿಯಲ್ಲಿ ನೆಲಸಿದ ಶ್ರೀ ಪರಶಿವನನ್ನು ಓಂಕಾರಾದಿಯಾಗಿ ನಮಶ್ಶಬ್ದವೇ ಕಡೆಯಾಗುಳ್ಳ – ಭವ, ಶಿವ, ಇತ್ಯಾದಿ ಸಹಸ್ರನಾಮಗಳನ್ನು ಚ್ಚರಿಸುತ್ತ ಸಹಸ್ರಕಮಲಗಳಿಂದ ಆರಾಧಿಸಿದನು,; ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಮಹೇಶ್ವರನಿಗಿರುವ ಪರಬ್ರಹ್ಮಾದಿಪರ್ಯಾಯನಾಮಗಳ ವಿಚಾರವನ್ನು ಹೇಳುವ ಆರನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಆರನೆಯ ಉಪದೇಶವು ಸಂಪೂರ್ಣವಾಯಿತು.

ಪೂರ್ವಭಾಗ ಸಮಾಪ್ತವು.

ಶ್ರೀ ಸಾಂಬಸದಾಶಿವಾರ್ಪಣಮಸ್ತು.



ಶ್ರೀಃ.
ಶ್ರೀಕಂಠಾಯಪರಮಾತ್ಮನೇನಮಃ.

# ಸಪ್ತಮೋಪದೇಶಃ ಪ್ರಾರಭ್ಯತೇ.

## ಅನ್ಯದೇವತಾಪರಿತ್ಯಾಗಮುಖೇನ ಮಹೇಶ್ವರಾಧಿಕ್ಯನಿರ್ಣಯಃ.

ರೇ—ಹೇ ಚೋಳ! ಶಿವೇತರದೇವತಾಪರಿತ್ಯಾಗಮುಖೇನ ಶಿವಾಧಿಕ್ಯವಿಧಿಃ ಪ್ರಥಮಂ ಶ್ರೂಯತಾಂ, ಅಥರ್ವಶಿಖಾಯಾಂ,—"ಶಿವ ಏಕೋ ಧ್ಯೇಯಃಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ"ಋಗ್ವೇದೀಯಭಸ್ಮಜಾಬಾಲೋಪನಿಷದಿ, ಆಥರ್ವಣವೇದೇ, ರುದ್ರಾಕ್ಷಜಾಬಾಲೋಪನಿಷದಿ ಚ ಶ್ರುತಿವಾಕ್ಯಾನಿ ಪ್ರಸಿದ್ಧಾನಿ. ಸ್ಕಾಂದೇ ಸನತ್ಕುಮಾರಸಂಹಿತಾಯಾಂ ವ್ಯಾಸವಿಷ್ಣುಸಂವಾದೇ,—ವಿಷ್ಣುಃ, "ಗಚ್ಛ ತ್ವಂ ಶರಣಂ ದೇವಂ ಸರ್ವಭಾವೇನ ಶಂಕರಂ || ಸಂತ್ಯಜ್ಯ ತೃಣವದ್ದೇವಾನ್ ಬ್ರಹ್ಮವಿಷ್ಣ್ವಾದಿಕಾಂಸ್ತಥಾ|| ಯೋ ಮಹಾದೇವಮನ್ಯೇನ ಹೀನದೇವೇನ ದುರ್ಮತಿಃ||ಸಕೃತ್ಸಾಧಾರಣಂ ಬ್ರೂಯಾತ್ಸೋಽಂತ್ಯಜೋ ನಾಂತ್ಯಜೋಽಂತ್ಯಜಃ || ಕರ್ತಾಹಂ ಸರ್ವಜಗತಾಂ

---

## ಏಳನೆಯ ಉಪದೇಶ ಪ್ರಾರಂಭವು.

ಅನ್ಯದೇವತಾಪರಿತ್ಯಾಗಪೂರ್ವಕವಾಗಿ ಶಿವಾಧಿಕ್ಯನಿರ್ಣಯವು.

ರೇ—ಎಲೈ ಚೋಳನೇ! ಅನ್ಯದೇವತಾಪರಿತ್ಯಾಗಪೂರ್ವಕವಾಗಿ ಶಿವಾಧಿಕ್ಯವಿಧಿಯನ್ನು ಮೊದಲು ಕೇಳು; ಅಥರ್ವಶಿಖೆಯಲ್ಲಿ—"ಶಿವನಿಂದ ಬೇರೆಯಾದ ವಿಷ್ಣುಬ್ರಹ್ಮಾದಿ ದೇವತೆಗಳನ್ನು ಬಿಟ್ಟು ಶಿವನೊಬ್ಬನನ್ನೇ ಚಿಂತಿಸಬೇಕೆಂದು ಹೇಳುವ ಈ ಅಥರ್ವಶಿಖೋಪನಿಷತ್ತನ್ನು ಮೊದಲಿಂದ ಕಡೆಯವರಿಗೆ ಅರ್ಥಸಹಿತವಾಗಿ ಪಠಿಸತಕ್ಕವನು ಭವರಹಿತನಾಗುವನು" ಎಂದು ಹೇಳಲ್ಪಟ್ಟಿದೆ. ಅದೇರೀತಿಯಿಂದ ಹೇಳುವ ಶ್ರುತಿವಾಕ್ಯಗಳು—ಋಗ್ವೇದಭಸ್ಮಜಾಬಾಲೋಪನಿಷತ್ತಿನಲ್ಲೂ, ಅಥರ್ವಣವೇದದಲ್ಲೂ, ರುದ್ರಾಕ್ಷಜಾಬಾಲೋಪನಿಷತ್ತಿನಲ್ಲೂ ಪ್ರಸಿದ್ಧವಾಗಿರುತ್ತವೆ. ಆ ಶ್ರುತ್ಯರ್ಥವು ಸನತ್ಕುಮಾರಸಂಹಿತೆಯಲ್ಲಿರುವ ವ್ಯಾಸವಿಷ್ಣುಸಂವಾದದಲ್ಲಿ— "ಎಲೈ ವ್ಯಾಸನೇ! ನೀನು ಬ್ರಹ್ಮವಿಷ್ಣ್ವಾದಿ ದೇವತೆಗಳನ್ನು ತೃಣೋಪಮಾನರನ್ನಾಗಿ ತಿಳಿದು ಬಿಟ್ಟು, ಸ್ವಯಂಪ್ರಕಾಶಮಾನನಾದ ಶಂಕರನನ್ನೇ ರಕ್ಷಕನನ್ನಾಗಿ ಹೊಂದು. ಯಾವದುರಾತ್ಮನು—ಮಹಾದೇವನನ್ನು ಅನ್ಯದೇವತೆಯೊಡನೆ ಸಮಾನನನ್ನಾಗಿ ಒಂದು ಬಾರಿಯಾದರೂ ಹೇಳುತ್ತಾನೋ, ಆತನು—ಅಂತ್ಯಜನು, ಜಾತಿತಃ ಅಂತ್ಯಜನು—ಅಂತ್ಯಜನಲ್ಲವು. ನಾನು—

ಮಮಕರ್ತಾ ಮಹೇಶ್ವರಃ॥ತಸ್ಯ ದೇವಾಧಿದೇವಸ್ಯ ಕರ್ತಾ ಕೋಪಿ ನ ವಿದ್ಯತೇ॥ ಅ
ತ್ರ ಮೇ ವಚನಂ ವ್ಯಾಸ ಶೃಣು ಮೂಢ ಯಥಾರ್ಥವತ್ ॥ ಯಚ್ಛ್ರುತ್ವಾ ಸರ್ವ
ಭೂತಾನಾಂ ಶಿವಏವ ಭವೇನ್ಮತಿಃ ॥ ಕಿಮತ್ರ ಬಹುನೋಕ್ತೇನ ಶಿವಂ ಧ್ಯಾಯೀ
ಚ್ಛಿವಂಕರಂ ॥ ಶಿವಾದನ್ಯತ್ಪರಿತ್ಯಜ್ಯ ದೈವತಂ ಭುಕ್ತಿಮುಕ್ತಯೇ॥ ಸರ್ವವೇದಶಿಖಾ
ಥರ್ವಶಿಖಾ ಪ್ರಾಹೈನಮೇವ ಹಿ" ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವ
ಖಂಡೇ ಬ್ರಹ್ಮಗೀತಾಯಾಂ,—ಬ್ರಹ್ಮಾ, "ವಿಷ್ಣುಭಕ್ತ್ಯಾ ಚ ಮದ್ಭಕ್ತ್ಯಾ
ನಾಸ್ತಿ ನಾಸ್ತಿ ಪರಾಗತಿಃ ॥ ಶಂಭು ಭಕ್ತ್ಯೈವ ಸರ್ವೇಷಾಂ ಸತ್ಯಮೇವ ಮಯೋ
ದಿತಂ ॥ ಅತಸ್ಸರ್ವಂ ಪರಿತ್ಯಜ್ಯ ಶಿವಾದನ್ಯತ್ತು ದೈವತಂ ॥ ತಮೇವ ಶರಣಂ ಗ
ಚ್ಛೇತ್ಸದ್ಯೋ ಮುಕ್ತಿಂ ಯದೀಚ್ಛತಿ ॥ ಅಯಮೇವ ಹಿ ವೇದಾರ್ಥೋ ನಾ ಪ
ರಮಾಸ್ತಿಕಾಃ ॥ ಅನ್ಯಥಾ ಚೇತ್ಸುರಾಸ್ಸತ್ಯಂ ಮೂರ್ಧಾ ಮೇಽತ್ರ ಪತಿಷ್ಯತಿ॥ವಿಶ್ವಾ
ಸಾರ್ಥಂ ಶಿವಂ ಸ್ಪೃಷ್ಟ್ವಾ ತ್ರಿರ್ವಶ್ಯಪಥಯಾಮ್ಯಹಂ॥ತಸ್ಮಾದ್ವೇದೋದಿತೋಽರ್ಥ

---

ಸಕಲ ಲೋಕಕ್ಕೆ ಕರ್ತನಾಗಿದ್ದರೂ, ನನಗೆ ಮಹೇಶ್ವರನು ಕರ್ತನಾಗಿರುತ್ತಾನೆ. ಸರ್ವದೇವಾ
ಧೀಶನಾದ ಆ ಪರಮೇಶ್ವರನಿಗೆ ಯಾವನೂ ಕರ್ತನಲ್ಲವು. ಎಲೈ ಮೂಢಾತ್ಮನಾದ ವ್ಯಾಸನೇ!
ಯಾವ ಮಾತನ್ನು ಕೇಳುವುದರಿಂದ ಸರ್ವಪ್ರಾಣಿಗಳಿಗೆ ಶಿವನೇ ಕರ್ತನೆಂಬ ಬುದ್ಧಿಯುಂಟಾಗು
ತ್ತದೋ, ಸತ್ಯವಾದ ಆ ನನ್ನ ಮಾತನ್ನು ಕೇಳು; ಈ ವಿಷಯದಲ್ಲಿ ಬಹಳ ಹೇಳುವುದು
ದೇನು ? ಶಿವನಿಂದನ್ಯರಾದ ದೇವತೆಗಳನ್ನು ಬಿಟ್ಟು, ಮಂಗಳಪ್ರದನಾದ ಶಿವನನ್ನು ಭೋಗ
ಮೋಕ್ಷಸಿದ್ಧಿಗಾಗಿ ಚಿಂತಿಸಬೇಕೆಂದೇ ಸಮಸ್ತ ವೇದಗಳಿಗೆ ಶಿಖಾರೂಪವಾದ ಅಥರ್ವಶಿಖೆಯು
ಹೇಳುತ್ತಿರುವುದು ಪ್ರಸಿದ್ಧವಾಗಿರ್ಪುದು,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ಬ್ರಹ್ಮಗೀತೆ
ಯಲ್ಲಿ—"ಎಲೈ ದೇವತೆಗಳಿರಾ ! ವಿಷ್ಣುವನ್ನು ಸೇವಿಸುವುದರಿಂದಲೂ, ನನ್ನನ್ನು ಸೇವಿಸುವು
ದರಿಂದಲೂ, ಮೋಕ್ಷವು ದೊರಕುವುದಿಲ್ಲ. ಶಿವನನ್ನು ತಪಃಕರ್ಮಾದಿಗಳಿಂದ ಸೇವಿಸುವುದರಿಂದ
ಲೇ ಸರ್ವರಿಗೂ ಮುಕ್ತಿಯುಂಟಾಗುವುದು. ಎಂದು ನನ್ನಿಂದ ಹೇಳಲ್ಪಟ್ಟಿರುವ ಈ ಮಾತು
ಸತ್ಯವಾದುದು. ಈ ಕಾರಣದಿಂದ ಈ ಜನ್ಮದಿಂದಲೇ ಮುಕ್ತಿಯನ್ನು ಹೊಂದಲಿಚ್ಛೈಸುವವನು
ವಿಷ್ಣ್ವಾದ್ಯನ್ಯದೇವತೆಗಳ ಗೋಜಿಗೆ ಹೋಗದೆ, ಆ ಪರಮೇಶ್ವರನನ್ನೇ ರಕ್ಷಕನನ್ನಾಗಿ ಹೊಂ
ದಬೇಕು. ಎಲೈ ಆಸ್ತಿಕರಾದ ದೇವತೆಗಳಿರಾ ! ಈಗ ನಾನು ಹೇಳಿದುದೇ ಅಥರ್ವಶಿಖೋಕ್ತ
ಸದರ್ಥವಲ್ಲದೆ, ಬೇರೆಯಿಲ್ಲವು. ಬೇರೆಯಿರುವುದಾದರೆ ನನ್ನ ತಲೆಯು ಸತ್ಯವಾಗಿ ಇಲ್ಲೇ ಬೀ
ಳುವುದು. ನನ್ನ ಮಾತಿನಲ್ಲಿ ನಿಮಗೆ ನಂಬುಗೆಯುಂಟಾಗುವುದಕ್ಕಾಗಿ ಶಿವಲಿಂಗವನ್ನು ಮುಟ್ಟಿ
ಮೂರಾವೃತ್ತಿ ಆಣೆಯನ್ನಿಡುತ್ತೇನೆ. ಆ ಕಾರಣದದೆಸೆಯಿಂದ ವೇದದ ಅರ್ಥವನ್ನೇ ನಾನು
ಹೇಳಿದೆನೆಂಬುದು ಸತ್ಯವು! ಸತ್ಯವು!! ನಿಮ್ಮಗಳಿಗೆ ನಂಬುಗೆಯುಂಟಾಗುವುದಕ್ಕಾಗಿ ಅಗ್ನಿ

ಸ್ಸತ್ಯಂ ಸತ್ಯಂ ಮಯೋದಿತಂ||ಗೃಹ್ಣಾಮಿ ಪರಶುಂ ತಪ್ತಂ ಸತ್ಯಮೇವ ನ ಸಂಶಯಃ|| ಅನ್ಯಥಾ ವೇದವಾಕ್ಯಾನಾಮರ್ಥ ಇತ್ಯಭಿಶಂಕಯಾ || ಅನಿಶ್ಚಿತಾರ್ಥಾಶ್ಚೇನ್ಮೂರ್ಧಾ ಯುಷ್ಮಾಕಂ ಚ ಪತಿಷ್ಯತಿ || ಸತ್ಯಮೇವ ಮಯಾ ಪ್ರೋಕ್ತಂ ಶಂಭೋಃ ಪಾದೌ ಸ್ಪೃಶಾಮ್ಯಹಂ||ಸದಾ ಸ ಏವ ಸಿದ್ಧಾಂತಃ ಪೂರ್ವಪಕ್ಷಾಸ್ತತಃಪರೇ'' ಇತ್ಯಾದಿ. ಪರಾಶರಪುರಾಣೇ,-ಪರಾಶರಃ, ''ಸರ್ವಮನ್ಯತ್ಪರಿತ್ಯಜ್ಯ ಶಿವಏವ ಶಿವಂಕರಃ||ಧ್ಯೇಯ ಇತ್ಯಾಹ ಪರಮಾ ಶ್ರುತಿರಾಥರ್ವಣೀ ಖಲು'' ಸೂತಸಂಹಿತಾಯಾಂ,-ವ್ಯಾಸಃ, '' ಅತೋ ಮುಮುಕ್ಷುಭಿಃ ಪ್ರಾಜ್ಞೈಃ ಶಿವಏವ ಶಿವಂಕರಃ || ಧ್ಯೇಯಸ್ಸರ್ವಂ ಪರಿತ್ಯಜ್ಯ ಶಿವಾದನ್ಯತ್ತು ದೈವತಂ||ಅಸ್ಮಿನ್ನರ್ಥೇ ಶ್ರುತಿಸ್ಸಾಧ್ವೀ ಸಮಾಪ್ತಾ ವೇದವಿತ್ತಮಾಃ'' ತತ್ರೈವಸೂತಃ,-'' ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ || ಪ್ರಸಾದಾದೇವ ಸರ್ವೇಷಾಂ ಸರ್ವಸಿದ್ಧಿರ್ಮಹೇಶಿತುಃ || ಅತೋಽಪಿ ಸ ಶಿವೋ ಧ್ಯೇಯಃ ಪ್ರಾಧಾನ್ಯೇನ ಶಿವಂಕರಃ || ಸರ್ವಮನ್ಯತ್ಪರಿತ್ಯಜ್ಯ ದೈವತಂ ಪರಮೇಶ್ವರಾತ್ || ಶಿಖಾ ಚಾಥರ್ವಣೀ ಸಾಧ್ವೀ ಸರ್ವವೇದೋತ್ತಮೋತ್ತಮಾ ||ಅಸ್ಮಿನ್ನರ್ಥೇ ಸಮಾಪ್ತಾ ಸಾ ಶ್ರುತಯಶ್ಚಾಪರಾ ಅಪಿ'' ಆದಿತ್ಯಪುರಾಣೇ,—ಆದಿತ್ಯಃ, '' ಮುಮುಕ್ಷುಭಿಸ್ಸದಾಧ್ಯೇಯಶ್ಶಿವಏಕೋ ನಿರಂಜನಃ || ಸರ್ವಮನ್ಯತ್ಪರಿತ್ಯಜ್ಯ ಧ್ಯಾಯನ್ನೇವಂ ವಿಮುಚ್ಯತೇ'' ತಥಾ ಮಾನವೀಯಪುರಾಣೇ,—ಮನುಃ, '' ಅತೋ ಮುಮುಕ್ಷುಭಿಸ್ಸೇವ್ಯಸ್ಸಾಂಬಸ್ಸರ್ವೇಶ್ವರಾಹ್ವಯಃ ||ಸರ್ವಮನ್ಯತ್ಪರಿತ್ಯಜ್ಯೇತ್ಯಾಹ ಚಾಥರ್ವಣೀಶ್ರುತಿಃ'' ಇತ್ಯಾದಿವಚನಾನ್ಯನೇಕಶಸ್ಸಂತಿ, ತಾನಿ ತು ವಿಸ್ತರಭಯಾನ್ನೇಹ ಲಿಖಿತಾನಿ.

(

ತಪ್ತವಾದ ಕೊಡಲಿಯನ್ನು ನಿಜವಾಗೂ ಸಂದೇಹವಿಲ್ಲದೆ ಹಿಡಿದುಕೊಳ್ಳುತ್ತೇನೆ. ನೀವು—ನಾನು ಹೇಳಿದುದರಲ್ಲಿ ಸಂಶಯಪಡುತ್ತ ವೇದವಚನಾರ್ಥವು ಬೇರೆಯಿರುತ್ತದೆಯೆಂದು ಸುಳ್ಳಾದ ಅರ್ಥವನ್ನು ನಿಶ್ಚೈಸತಕ್ಕವರಾದರೆ, ನಿಮ್ಮ ತಲೆಯು ನೆಲದಮೇಲೆ ಬೀಳುವುದು. ನಾನು ಹೇಳಿದುದು ಸತ್ಯವೆಂದು ಶಿವನ ಪಾದಗಳನ್ನು ಮುಟ್ಟಿ ಹೇಳುತ್ತೇನೆ. ನಾನು ಹೇಳಿದುದೇ ಯಾವಾಗಲೂ ಸಿದ್ಧಾಂತವಾದುದು. ಅದಕ್ಕಿಂತ ಬೇರೆಯಾದ ಅರ್ಥಗಳು ಪೂರ್ವಪಕ್ಷಗಳನ್ನು ಪಡೆಯತಕ್ಕವುಗಳು,, ಇದು ಮೊದಲಾದುದು ಬ್ರಹ್ಮನಿಂದ ಹೇಳಲ್ಪಟ್ಟದೆ. ಆ ರೀತಿಯಾಗಿ ಪಾರಾಶರಪುರಾಣದಲ್ಲಿ ಪರಾಶರಮುನಿಯಿಂದ ಹೇಳಲ್ಪಟ್ಟದೆ. ಸೂತಸಂಹಿತೆಯಲ್ಲಿ ವ್ಯಾಸಸೂತರ ವಚನಗಳೂ ಇರುತ್ತವೆ. ಆದಿತ್ಯಪುರಾಣದಲ್ಲಿ ಆದಿತ್ಯನ ವಚನವೂ, ಮಾನವೀಯಪುರಾಣದಲ್ಲಿ ಮನುವಾಕ್ಯವೂ ಇರುತ್ತದೆ ಇತ್ಯಾದಿ ವಚನಪ್ರಮಾಣಗಳು ಅನೇಕವಾಗಿರುತ್ತವೆ. ಅವುಗಳನ್ನಿಲ್ಲಿ ಗ್ರಂಥವಿಸ್ತರಭೀತಿಯಿಂದ ಬರೆಯಲಿಲ್ಲವು.

ಇತ್ಯನ್ಯದೇವತಾಪರಿತ್ಯಾಗವಿಧಿಮುಖೇನ ಮಹೇಶ್ವರಾಧಿಕ್ಯನಿರ್ಣಯ
ಸ್ಸಪ್ತಮೋಪದೇಶೇ ಪ್ರಥಮಸ್ಸಂವಾದಃ.



ಶ್ರೀಃ.

## ಮಹೇಶ್ವರಸ್ಯಸರ್ವದೇವತಾಜನಕತ್ವನಿರ್ಣಯಃ.

ರೇ—ಭೋ ಚೋಳ! ಮಹೇಶ್ವರಸ್ಯ ಸರ್ವದೇವತಾಜನಕತ್ವಂ ಶ್ರೂಯತಾಂ, ಋಗ್ವೇದೇ,—“ ಸೋಮಃ ಪವತೇರ್ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ” ಅಥರ್ವಶಿರಸಿ,—“ ದ್ಯಾವಾಭೂಮೀಜನಯನ್ದೇವ ಏಕಸ್ಸ ಏಕ್ಷತ ಲೋಕಾನ್ಸೃಜತ” ಇತಿ. ಆದಿತ್ಯಪುರಾಣೇ,—ದಧೀಚಿಮುನಿಃ, “ ಉಮಯಾ ಸಹಿತೋ ದೇವಸ್ಸೋಮ ಇತ್ಯುಚ್ಯತೇ ಬುಧೈಃ || ಸ ಏವ ಕಾರಣಂ ನಾನ್ಯೋ ವಿಷ್ಣೋರಪಿ ಚ ವೈ ಶ್ರುತಿಃ” ಇತಿ. ಸ್ಕಾಂದೇ ಕಾಶೀಖಂಡೇ,—“ ಮತೀನಾಂ ಚ ದಿವಃ ಪೃಥ್ವ್ಯಾಃ ವಹ್ನೇಸ್ಸೂರ್ಯಸ್ಯ ವಜ್ರಿಣಃ || ಸಾಕ್ಷಾದಪಿಚ ವಿಷ್ಣೋರ್ವೈ ಸೋಮೋ ಜನಯಿತೇಶ್ವರಃ” ಇತಿ. ಸ್ಕಾಂದೇ ಕಾಶೀಖಂಡೇ,—“ ದ್ಯಾವಾಪೃಥಿವ್ಯೋರಿಂದ್ರ

---

ಎಂಬಲ್ಲಿಗೆ ಅನ್ಯದೇವತಾಪರಿತ್ಯಾಗವಿಧಿಮುಖದಿಂದ ಮಹೇಶ್ವರಾಧಿಕ್ಯನಿರ್ಣಯವನ್ನು ಹೇಳುವ ಏಳನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



### ಮಹೇಶ್ವರನಿಗೆ ಸರ್ವದೇವತಾಜನಕತ್ವನಿರ್ಣಯವು.

ರೇ – ಎಲೈ ಚೋಳನೇ ! ಪರಶಿವನೇ ವಿಷ್ಣ್ವಾದಿಗಳಿಗೆ ತಂದೆಯೆಂಬಂಶವನ್ನು ಕೇಳು. ಋಗ್ವೇದದಲ್ಲಿ—“ ಉಮಾಸಹಾಯನಾದ ಶಿವನು ಧೀಮಂತರಿಗೆ ಜನಕನಾಗಿ, ಸ್ವರ್ಗಕ್ಕೆ ಜನಕನಾಗಿ, ಭೂತಳಕ್ಕೆ ಜನಕನಾಗಿ, ಅಗ್ನಿಗೆ ಜನಕನಾಗಿ, ಸೂರ್ಯನಿಗೆ ಜನಕನಾಗಿ, ಇಂದ್ರನಿಗೆ ಜನಕನಾಗಿ, ಮತ್ತು ನಾರಾಯಣನಿಗೆ ಜನಕನಾಗಿ ಪಾವನವನ್ನು ಮಾಡುತ್ತಾನೆ,, ಎಂದೂ ಅಥರ್ವಶಿರಸ್ಸಿನಲ್ಲಿ—“ ಅದ್ವಿತೀಯನಾದ ಪರಮೇಶ್ವರನೇ ಭೂಮ್ಯಾಕಾಶಗಳನ್ನೂ, ಸಕಲಲೋಕಗಳನ್ನೂ ನಿರ್ಮಿಸಿದನು,, ಎಂದೂ ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ —“ ಉಮಾಸಹಿತನಾದ ಪರಮೇಶ್ವರನು–ಸೋಮಶಬ್ದವಾಚ್ಯನೆಂದು ವಿದ್ವಾಂಸರಿಂದ ಹೇಳಲ್ಪಡುತ್ತಾನೆ. ಆತನೇ ವಿಷ್ಣುವಿಗೂ ಕಾರಣನಲ್ಲದೆ ಬೇರೊಬ್ಬನಲ್ಲವು ಎಂದು ಶ್ರುತಿಯು ಹೇಳುತ್ತದೆ,, ಎಂದೂ ಹೇ

ಗ್ನೋರ್ಯೇರ್ಧಿಯಾಂ ವಿಷ್ಣೋರ್ಯಮಸ್ಯ ಚ || ವರುಣಸ್ಯ ಶಶಾಂಕಸ್ಯ ಜನಿತಾ ಪರಮೇಶ್ವರಃ'' ಇತಿ.

ಇತಿ ಮಹೇಶ್ವರಸ್ಯ ಸರ್ವದೇವತಾಜನಕತ್ವ ನಿರ್ಣಯಸ್ಸಪ್ತಮೋಪದೇಶೇ ದ್ವಿತೀಯಸ್ಸಂವಾದಃ.



ಶ್ರೀಃ.

## ಸದೃಷ್ಟಾಂತತ್ರಿಮೂರ್ತಿಭೇದನಿರ್ಣಯಃ.

ಚೋ—ಭೋ ರೇಣುಕಗಣೇಶ! "ತ್ರಿಯಂಬಕಂ ಯಜಾಮಹೇ'' ಇತಿ ಋಗ್ವೇದವಾಕ್ಯಾತ್, "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ'' ಇತ್ಯಥರ್ವಶಿಖಾವಾಕ್ಯಾಚ್ಚ ಏಕಸ್ಯ ಸುತಾನಾಂ ಬ್ರಹ್ಮವಿಷ್ಣುರುದ್ರಾಣಾಂ ಪರಸ್ಪರಂ ಭೇದೋ ನಾಸ್ತಿ.

ರೇ—ಹೇ ಚೋಳ! ಮಹೇಶ್ವರಜ್ಯೇಷ್ಠಪುತ್ರಸ್ಯ ರುದ್ರಸ್ಯಾಧಿಕ್ಯಂ ತ್ರಿಲೋಕವಸ್ತುದೃಷ್ಟಾಂತಪುರಸ್ಸರಂ ಶ್ರೂಯತಾಂ, ಸ್ಕಾಂದೇ,—" ಮತ್ಸ್ಯಕಚ್ಛಪಪದ್ಮಾನಾಂ

---

ಲ್ಪಟ್ಟಿದೆ. ಈ ಅರ್ಥವು ಸ್ಕಾಂದಪುರಾಣದಲ್ಲಿರುವ ಕಾಶಿಕಾಖಂಡದಲ್ಲೂ, ಕಾಳಿಕಾಖಂಡದಲ್ಲೂ ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಮಹೇಶ್ವರನಿಗೆ ಸರ್ವದೇವತಾಜನಕತ್ವನಿರ್ಣಯವನ್ನು ಹೇಳುವ ಏಳನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



### ದೃಷ್ಟಾಂತಪೂರ್ವಕ ತ್ರಿಮೂರ್ತಿಭೇದನಿರ್ಣಯವು.

ಚೋ—ಎಲೈ ರೇಣುಕಗಣೇಶನೇ ! "ತ್ರಿಯಂಬಕಂ ಯಜಾಮಹೇ" ಎಂದು ಋಗ್ವೇದವಾಕ್ಯವಿರುವುದರಿಂದ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಎಂದು ಅಥರ್ವಶಿಖಾವಾಕ್ಯವಿರುವುದರಿಂದ ಆ ಪರಮೇಶ್ವರನಿಂದ ಹುಟ್ಟಿದವರೆಂದು ಪ್ರಸಿದ್ಧರಾಗಿರುವ ಬ್ರಹ್ಮವಿಷ್ಣುರುದ್ರರಿಗೆ ಪರಸ್ಪರ ಭೇದವು ಇರುವುದಿಲ್ಲವು.

ರೇ—ಎಲೈ ಚೋಳನೇ ! ಶಿವನ ಹಿರಿಯಮಗನಾದ ರುದ್ರನಿಗಿರುವ ಬ್ರಹ್ಮವಿಷ್ಣುಗಳಿಗಿಂತ ಶ್ರೇಷ್ಠತ್ವವನ್ನು ಮೂರುಲೋಕಗಳಲ್ಲಿರುವ ವಸ್ತುಗಳ ದೃಷ್ಟಾಂತದಿಂದ ಹೇಳುವೆವು ಕೇಳು; ಸ್ಕಾಂದಪುರಾಣದಲ್ಲಿ—"ಒಂದು ಸರೋವರದಲ್ಲಿ ಹುಟ್ಟಿದ ಮೀನು, ಆಮೆ, ತಾವ

ಸರಸ್ಯೇಕತ್ರ ಸಂಭವಃ || ಏಕಯೋನಿಪ್ರಸೂತಾನಾಂ ತೇಷಾಂ ಧರ್ಮಾಃ ಪೃಥಕ್ಪೃಥಕ್ || ಹಿರಣ್ಯಗರ್ಭಸ್ಸಾಂಡಸ್ಸ್ಯಾತ್ಸಾಲಗ್ರಾಮೋ ಮೃತಕ್ರಿಮಿಃ || ಶಿವನಾಭಸ್ಸ್ವಯಂ ಲಿಂಗಂ ತದ್ಭೇದೋ ಗಂಡಕಿಸ್ಥಿತಃ || ಆದ್ರಾರುದ್ರೋ ಮೃಗವ್ಯಾಧ ಇಷ್ವಾತ್ಮಾ ಹರಿಶ್ಶರಃ || ಅದ್ಯಾಪಿ ದಿವಿ ದೃಶ್ಯಂತೇ ಮೃಗಶೀರ್ಷಾ ವಿಧಿರ್ಮೃಗಃ" ಋಗ್ವೇದ ಬ್ರಾಹ್ಮಣೇ,—"ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯತ್" ಯಜುಸ್ಸಂಹಿತಾಯಾಂ,-"ಆರ್ದ್ರಯಾ ರುದ್ರಃ ಪ್ರಥಮಾನ ಏತಿ ಶ್ರೇಷ್ಠೋ ದೇವಾನಾಂ ಪತಿರಘ್ನಿಯಾನಾಂ ತ ಇಷುಂ ನಮಸ್ಕುರ್ವತಾಮಗ್ನಿಮನೀಕಂ ಸೋಮಂ ಶಲ್ಯಂ ವಿಷ್ಣುಂ ತೇಜನಂ" ಇತಿ. ಇತಿ ತ್ರಿಲೋಕೇಷು ತ್ರಿಮೂರ್ತಿಭೇದಃ ಪ್ರಸಿದ್ಧಃ ಕಿಂಚ "ಸದಾ ಪಿತೃಸಮೋ ಜ್ಯೇಷ್ಠೋ ಜ್ಯೇಷ್ಠಾ ಮಾತೃಸಮಾ ಭವೇತ್" ಇತಿ ಮನುಸ್ಮೃತಿವಾಕ್ಯಾತ್, ಶಿವಸ್ಯಾತ್ಮಜೇಷು ಜ್ಯೇಷ್ಠೇನ ರುದ್ರೇಣ ಕನಿಷ್ಠಯೋಃ

---

ರೆಗಳಿಗೆ ಏಕಯೋನಿಪ್ರಸೂತತ್ವವಿದ್ದರೂ, ಒಂದರ ಧರ್ಮವು ಮತ್ತೊಂದಕ್ಕೆ ಇಲ್ಲದೆ, ಬೇರೆಬೇರೆ ಧರ್ಮಗಳೇ ಇರುತ್ತವೆ. ಹಿರಣ್ಯಗರ್ಭವೆಂಬ ಶಿಲೆಯು ಮೊಟ್ಟೆಯಿಂದ ಕೂಡಿದೆ. ಸಾಲಗ್ರಾಮವೆಂಬ ಶಿಲೆಯು ಒಳಗೇ ಸತ್ತುಹೋದ ಕ್ರಿಮಿಯುಳ್ಳುದಾಗಿದೆ. ಶಿವನಾಭನೆಂಬ ಶಿಲೆಯು ತಾನಾಗಿಯೇ ಲಿಂಗಾಕಾರವನ್ನು ಹೊಂದಿದೆ. ಆ ಮೂರರ ಭೇದವು ಗಂಡಕಿಯೆಂಬ ಪರ್ವತದಲ್ಲಿ ತೋರುತ್ತಿದೆ. ಆದ್ರಾನಕ್ಷತ್ರರೂಪನಾದ ರುದ್ರನೇ "ಆರ್ದ್ರೇಲುಬ್ಧಕಉಚ್ಯತೇ" ಎಂಬ ನಿಘಂಟುವಾಕ್ಯಾನುಸಾರವಾಗಿ ಬ್ರಹ್ಮನೆಂಬ ಮೃಗವನ್ನು ಸಂಹರಿಸುವುದಕ್ಕಾಗಿ ಕಿರಾತನಾದನು. ಆಗ ಆ ಕಿರಾತನಿಗೆ ಇಲ್ವಲಾ ನಕ್ಷತ್ರರೂಪವನ್ನು ಧರಿಸಿದ ವಿಷ್ಣುವೆಂಬ ಸೂರ್ಯನೇ ಬಾಣವಾದನು. ಮೃಗಶೀರ್ಷನಕ್ಷತ್ರರೂಪನಾದ ಬ್ರಹ್ಮನೇ ಮೃಗವಾದನು. ಈಗಲೂ ಆಕಾಶದಲ್ಲಿ ಆದ್ರಾನಕ್ಷತ್ರರೂಪದಿಂದ ರುದ್ರನು, ಇಲ್ವಲಾನಕ್ಷತ್ರರೂಪದಿಂದ ವಿಷ್ಣುವು, ಮೃಗಶಿರನಕ್ಷತ್ರರೂಪದಿಂದ ಬ್ರಹ್ಮನು ಕಾಣಲ್ಪಡುತ್ತಾನೆ,, ಎಂದು ಹೇಳಲ್ಪಟ್ಟಿದೆ. ಋಗ್ವೇದಬ್ರಾಹ್ಮಣದಲ್ಲಿ—"ಬ್ರಹ್ಮನು ತನ್ನ ಮಗಳನ್ನು ಅನುಭವಿಸುವುದಕ್ಕಾಗಿ ಇದಿರಾಗಿ ಹೋದನು,, ಎಂದು ಯಜುಸ್ಸಂಹಿತೆಯಲ್ಲಿ—"ಪಶುಗಳಿಗೊಡೆಯನೂ, ವಿಷ್ಣ್ವಾದಿ ದೇವತೆಗಳೊಳಗೆ ಶ್ರೇಷ್ಠನೂ ಆಗಿರುವ ರುದ್ರನು–ಆದ್ರಾನಕ್ಷತ್ರರೂಪದಿಂದ ಪ್ರಸಿದ್ಧನಾಗಿರುತ್ತಾನೆ. ಅಗ್ನಿಯೆಂಬ ನೇತ್ರವನ್ನು ಅಂಬನ್ನಾಗಿಯೂ, ಚಂದ್ರನೆಂಬ ನೇತ್ರವನ್ನು ಅಂಬಿನ ಕೋಲನ್ನಾಗಿಯೂ, ವಿಷ್ಣುವೆಂಬ ಹನ್ನೆರಡನೆಯ ಸೂರ್ಯನನ್ನು ಅಂಬಿನ ಅಲಗನ್ನಾಗಿಯೂ ಮಾಡುವ ನಿನ್ನ ಸೃಷ್ಟಿಸ್ಥಿತಿಸಂಹಾರ ಕಾರಣಂಗಳಾಗಿರುವ ದೃಷ್ಟಿತ್ರಯರೂಪವಾದ ಅಂಬನ್ನು ಕುರಿತು ನಮಸ್ಕಾರವು,, ಎಂದೂ ಉಕ್ತವಾಗಿದೆ. ಈ ರೀತಿಯಾಗಿ ತ್ರಿಲೋಕಗಳಲ್ಲಿ ತ್ರಿಮೂರ್ತಿಗಳ ಭೇದವು ಪ್ರಸಿದ್ಧವಾಗಿದೆ. "ಹಿರಿಯಮಗನು ತಂದೆಗೆ ಸಮಾನನೆಂದೂ, ಹಿರಿಯಮಗಳು ತಾಯಿಗೆ ಸಮಾನಳೆಂದೂ,, ಮನುಸ್ಮೃತಿವಚನವಿರುವುದರಿಂದ ಶಿವನ ಮಕ್ಕಳಲ್ಲಿ ಹಿರಿಯವನಾದ ರುದ್ರನೊಡನೆ ಕ

ಷ್ಣುಬ್ರಹ್ಮಣೋಃ ಕಸ್ಮಿನ್ಕಾಲೇ, ಕುತ್ರಚಿದ್ದೇಶೇಽಪಿ ಸಮಾನತಾ ನಾಸ್ತ್ಯೇವ. ಸೂತಗೀತಾಯಾಂ,—ಸೂತಃ, "ಮಾಯಾಕಾರ್ಯಗುಣೈರ್ಯುಕ್ತಾ ಬ್ರಹ್ಮವಿಷ್ಣು ಮಹೇಶ್ವರಾಃ || ತೇಷು ರುದ್ರೋ ವರಿಷ್ಠಸ್ತು ತಸ್ಮಾನ್ಮಾಯಾಪತಿಶ್ಶಿವಃ || ಶಿವಾದ್ವರಿಷ್ಠೋ ನೈವಾಸ್ತಿ ಮಯಾ ಸತ್ಯಮುದೀರಿತಂ || ಕೇಚಿದದ್ವೈತಮಾಶ್ರಿತ್ಯ ಬೈಡಾಲವ್ರತಿಕಾ ನರಾಃ||ಸಾಮ್ಯಂ ರುದ್ರೇಣ ವಿಷ್ಣೋಶ್ಚ ಪ್ರವದಂತಿ ವಿಮೋಹಿತಾಃ" ಬ್ರಹ್ಮಗೀತಾಯಾಂ,—ದೇವಾನ್ಪ್ರತಿ ಬ್ರಹ್ಮವಾಕ್ಯಂ, "ಯೂಯಂ ಸರ್ವೇಽಪ್ಯಕಟಾಃ ಪ್ರಾಜ್ಞಾಸ್ಸರ್ವೇಷಾಮಪಿ ಹೇ ಸುರಾಃ|| ಯುಷ್ಮತ್ತೋಽಹಂ ಮಹಾಪ್ರಾಜ್ಞೋ ಮತ್ತಃ ಪ್ರಾಜ್ಞೋ ಜನಾರ್ದನಃ||ತಸ್ಮಾದಪಿ ಮಹಾಪ್ರಾಜ್ಞಶ್ಶ್ರೀರುದ್ರೋ ಗುರುಮೂರ್ತಿಮಾನ್ || ತತಃ ಪ್ರಾಜ್ಞತಮಸ್ಸಾಕ್ಷಾಚ್ಛಿವಸ್ಸಾಂಬಸ್ಸನಾತನಃ || ಸ ಏವ ಸಾಕ್ಷಾತ್ಸರ್ವಜ್ಞಸ್ತತೋಽನ್ಯೋ ನಾಸ್ತಿ ಕಶ್ಚನ" ಇತ್ಯಾದಿ.

ಇತಿ ತ್ರಿಲೋಕಪ್ರಸಿದ್ಧಸ್ಸದೃಷ್ಟಾಂತತ್ರಿಮೂರ್ತಿಭೇದನಿರ್ಣಯ
ಸ್ಸಪ್ತಮೋಪದೇಶೇ ತೃತೀಯಸ್ಸಂವಾದಃ.



ಯವರಾದ ವಿಷ್ಣು ಬ್ರಹ್ಮರಿಗೆ ಸಮಾನತೆಯು ಯಾವಕಾಲದಲ್ಲೂ, ಯಾವದೇಶದಲ್ಲೂ ಇಲ್ಲವೇ ಇಲ್ಲವು. ಸೂತಗೀತೆಯಲ್ಲಿ—"ಮಾಯಾಕಾರ್ಯಗಳಾದ ಗುಣಗಳಿಂದ ಕೂಡಿದ ಬ್ರಹ್ಮ ವಿಷ್ಣು ರುದ್ರರಲ್ಲಿ ರುದ್ರನು ಶ್ರೇಷ್ಠನು. ಆತನಿಗಿಂತ ಮಾಯಾಪತಿಯಾದ ಶಿವನು ಶ್ರೇಷ್ಠನು. ಶಿವನಿಗಿಂತ ಶ್ರೇಷ್ಠನಿಲ್ಲವೆಂದು ನನ್ನಿಂದುಸರಲ್ಪಟ್ಟ ಮಾತು ಸತ್ಯವಾದುದು. ಬೆಕ್ಕು ವ್ರತವನ್ನು ತಾಳಿದಂತೆ ಅದ್ವೈತವ್ರತವನ್ನು ತಾಳಿದ ಕೆಲವರು ಭ್ರಾಂತರಾಗಿ ರುದ್ರನೊಡನೆ ವಿಷ್ಣುವಿಗೆ ಸಾದೃಶ್ಯವನ್ನು ಹೇಳುತ್ತಾರೆ. ಅವರು ಹೇಳತಕ್ಕುದು ನಿಜವಲ್ಲ" ಎಂದು ಸೂತಮುನಿಯಿಂದ ನಿರೂಪಿತವಾಗಿದೆ. ಬ್ರಹ್ಮಗೀತೆಯಲ್ಲಿ—"ಎಲೈ ದೇವತೆಗಳಿರಾ! ನೀವು ಎಲ್ಲ ಜೀವರಿಗಿಂತ ಬುದ್ಧಿಶಾಲಿಗಳು, ನಿಮಗಿಂತ ನಾನು, ನನಗಿಂತ ವಿಷ್ಣುವು, ವಿಷ್ಣುವಿಗಿಂತ ರುದ್ರನು, ರುದ್ರನಿಗಿಂತ ಶಕ್ತಿವಿಶಿಷ್ಟನೂ ಸನಾತನನೂ ಆಗಿರುವ ಶಿವನು ಬುದ್ಧಿಶಾಲಿಯು. ಆದ್ದರಿಂದ ಆ ಶಿವನೊಬ್ಬನೇ ಸರ್ವಜ್ಞನಲ್ಲದೆ ಬೇರೆ ಯಾರೂ ಸರ್ವಜ್ಞರಲ್ಲವು" ಎಂದು ಬ್ರಹ್ಮನಿಂದ ದೇವತೆಗಳಿಗೆ ಹೇಳಲ್ಪಟ್ಟದೆ. ಇತ್ಯಾದಿ ವಚನಗಳಿಂದ ತ್ರಿಮೂರ್ತಿಗಳ ಭೇದವನ್ನು ಅರಿಯಬೇಕು.

ಎಂಬಲ್ಲಿಗೆ ತ್ರಿಲೋಕಪ್ರಸಿದ್ಧವಾದ ದೃಷ್ಟಾಂತಪೂರ್ವಕ ತ್ರಿಮೂರ್ತಿಭೇದನಿರ್ಣಯವನ್ನು
ಹೇಳುವ ಏಳನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



ಶ್ರೀಃ.

## ತ್ರಿಮೂರ್ತಿಸ್ವರೂಪಭೇದಃ.

ರೇ——ಪುನರಪಿ ವಿಶೇಷೇಣ ಮಹೇಶ್ವರಸಂಜಾತತ್ರಿಮೂರ್ತಿಭೇದಸ್ಸ್ವ
ಕ್ಷ್ಯಾಯತಾಂ, ಸ್ಕಾಂದೇ ಸೂತಸಂಹಿತಾಯಾಂ ಜ್ಞಾನಯೋಗಖಂಡೇ,——"ಮ
ಯಾ ಮಾಹೇಶ್ವರೀ ಶಕ್ತಿಸ್ಸತ್ತ್ವಾದಿಗುಣಭೇದತಃ || ಜೀವಮಾಕ್ರಮ್ಯ ಸಂಸಾ
ರೇ ಭ್ರಾಮಯತ್ಯನಿಶಂ ದ್ವಿಜಾಃ || ಸತ್ತ್ವಾತ್ಸುಖಂ ಚ ಜ್ಞಾನಂ ಚ ವೈರಾಗ್ಯಂ ಶು
ಕ್ಲ್ಯಮೇವ ಚ || ದುಃಖಪ್ರವೃತ್ತಿರಾಗೌ ಚ ಲೌಹಿತ್ಯಂ ರಜಸೋ ಭವೇತ್ || ಮೋ
ಹೋ ಭ್ರಾಂತಿಸ್ತಥಾಽಽಲಸ್ಯಂ ಕಾರ್ಷ್ಣ್ಯಂ ಚ ತಮಸೋ ಭವೇತ್" ಸೂತಗೀತಾ
ಯಾಂ,——"ಅಸ್ತಿ ರುದ್ರಸ್ಯ ವಿಪ್ರೇಂದ್ರಾ ಅಂತಸ್ಸತ್ತ್ವಂ ಬಹಿಸ್ತಮಃ || ವಿಷ್ಣೋ
ರಂತಸ್ತಮಸ್ಸತ್ತ್ವಂ ಬಹಿರಸ್ತಿ ರಜೋಗುಣಃ || ಅಂತರ್ಬಹಿಶ್ಚ ವಿಪ್ರೇಂದ್ರಾ ಅಸ್ತಿ ರ
ಪ್ರಜಾಪತೇಃ" ಮಾನವಪುರಾಣೇ,——"ಸತ್ತ್ವಂ ಹಿ ಪ್ರಥಮಂ ಜಾತಂ ತತಃ
ಜಾತಸ್ತಮೋಗುಣಃ || ರಜೋಗುಣಸ್ತತೋಜಾತಸ್ತಸ್ಮಾದ್ರುದ್ರಸ್ತಯೋರ್ವರಃ ||
ಗುಣಾಭಿಮಾನಿದೇವಾನಾಂ ರುದ್ರಾದೀನಾಂ ತು ವಿಗ್ರಹಾಃ || ಲೀಲಾರೂಪಾ

---

### ತ್ರಿಮೂರ್ತಿಸ್ವರೂಪಭೇದವು.

ರೇ——ಎಲೈ ಚೋಳನೇ ! ಶಿವನಿಂದ ಹುಟ್ಟಿದ ತ್ರಿಮೂರ್ತಿಗಳಿಗಿರುವ ಭೇದವನ್ನು ತಿ
ತ್ತೂ ವಿಶೇಷವಾಗಿ ಚೆನ್ನಾಗಿ ಕೇಳು; ಸೂತಸಂಹಿತೆಯಲ್ಲಿರುವ ಜ್ಞಾನಯೋಗಖಂಡದಲ್ಲಿ—
"ಎಲೈ ದ್ವಿಜರೇ ! ಶಿವನ ಶಕ್ತಿಯಾದ ಮಾಯೆಯು ಸತ್ವ ರಜ ಸ್ತಮೋಗುಣಗಳಿಂದ ಜೀವ
ನ್ನಾಕ್ರಮಿಸಿ, ಅವನನ್ನು ಯಾವಾಗಲೂ ಜನನ ಮರಣಗಳನ್ನನುಭವಿಸುವಂತೆ ಮಾಡುತ್ತದೆ.
ಜೀವಂಗೆ ಶುಭ್ರವರ್ಣವಾದ ಸತ್ವಗುಣದಿಂದ ಸುಖ, ಜ್ಞಾನ, ವೈರಾಗ್ಯಗಳೂ, ರಕ್ತವರ್ಣವಾ
ರುವ ರಜೋಗುಣದಿಂದ ದುಃಖದಲ್ಲಿ ಪ್ರವೃತ್ತಿಯೂ, ವಿಷಯಗಳಲ್ಲಿ ಪ್ರೀತಿಯೂ, ಕೃಷ್ಣವರ್ಣ
ವಿಶಿಷ್ಟವಾಗಿರುವ ತಮೋಗುಣದಿಂದ ಅಜ್ಞಾನ ಭ್ರಾಂತಿ ಆಲಸ್ಯಗಳೂ ಉಂಟಾಗುತ್ತವೆ,, ಎಂದೂ
ಸೂತಗೀತೆಯಲ್ಲಿ——ಎಲೈ ಬ್ರಾಹ್ಮಣಶ್ರೇಷ್ಠರೇ ! ರುದ್ರನಿಗೆ ಅಂತರಂಗದಲ್ಲಿ ಸತ್ವಗುಣವೂ
ಬಾಹ್ಯದಲ್ಲಿ ತಮೋಗುಣವೂ, ವಿಷ್ಣುವಿಗೆ ಒಳಗೆ ತಮೋಗುಣವೂ, ಹೊರಗೆ ಸತ್ವಗುಣವೂ
ಬ್ರಹ್ಮನಿಗೆ ಒಳಗೂ ಹೊರಗೂ ರಜೋಗುಣವು ಇರುತ್ತದೆ,, ಎಂದೂ, ಮಾನವಪುರಾಣದಲ್ಲಿ—
"ಸತ್ವಗುಣವು ಮೊದಲು ಹುಟ್ಟಿತು. ಅನಂತರದಲ್ಲಿ ತಮೋಗುಣವು ಹುಟ್ಟಿತು. ತದನಂತರ
ದಲ್ಲಿ ರಜೋಗುಣವು ಹುಟ್ಟಿತು. ಆಕಾರಣದದೆಸೆಯಿಂದ ತಮೋಗುಣವೇ ಪ್ರಧಾನವಾಗುಳ್ಳ
ವಿಷ್ಣುವಿಗಿಂತಲೂ, ರಜೋಗುಣವೇ ಪ್ರಧಾನವಾಗುಳ್ಳ ಬ್ರಹ್ಮನಿಗಿಂತಲೂ, ಸತ್ವಗುಣವೇ ಪ್ರ
ಧಾನವಾಗುಳ್ಳ ರುದ್ರನು ಶ್ರೇಷ್ಠನಾಗಿರುವನು. ಕ್ರಮದಿಂದ ಸತ್ವಾದಿಗುಣಗಳಲ್ಲಿ ಅಭಿಮಾ

ಜಾಯಂತೇ ಗುಣಾನಾಂ ವಾಸನಾಬಲಾತ್" ಸೂತಸಂಹಿತಾಯಾಂ ಶಿವಮಾಹಾತ್ಮ್ಯಖಂಡೇ,—"ಬ್ರಹ್ಮಣೋಮೂರ್ತಯೋಽನಂತಾ ಜಾಯಂತೇ ಗುಣಭೇದತಃ ॥ ತಥಾ ವಿಷ್ಣೋಸ್ತಥೇಶಸ್ಯ ಗುಣಭೇದೇನ ಸುವ್ರತಾಃ ॥ ಕಾಶ್ಚಿತ್ಸತ್ತ್ವಗುಣೋದ್ರೇಕಾ ವಿಶಿಷ್ಟಾ ಮೂರ್ತಯೋ ದ್ವಿಜಾಃ ॥ ಕಾಶ್ಚಿತ್ತಮೋಗುಣೋದ್ರೇಕಾ ನಿಷಿದ್ಧಾ ವೇದವಿತ್ತಮಾಃ ॥ ಕಾಶ್ಚಿದ್ರಜೋಗುಣೋದ್ರೇಕಾ ಮಧ್ಯಮಾ ಮೂರ್ತಯಸ್ಸದಾ ॥ರುದ್ರಮೂರ್ತಿಷು ಸರ್ವಾಸು ಶಿವೋಽತೀವ ಪ್ರಕಾಶತೇ ॥ ಅನ್ಯಾಸು ತಾರತಮ್ಯೇನ ಶಿವಸ್ಸಾಕ್ಷಾತ್ಪ್ರಕಾಶತೇ ॥ ರುದ್ರಸ್ಯ ಮೂರ್ತಿಮಾರಾಧ್ಯಪ್ರಸಾದಾತ್ಕ್ರಮವರ್ಜಿತಾಃ ॥ ಅಯತ್ನೇನೈವ ಜಾನಂತಿ ಶಿವಂ ಸರ್ವತ್ರ ಸಂಸ್ಥಿತಂ" ಇತ್ಯಾದಿ.

ಇತಿ ತ್ರಿಮೂರ್ತಿಸ್ವರೂಪಭೇದಸ್ಸಪ್ತಮೋಪದೇಶೇ ಚತುರ್ಥಸ್ಸಂವಾದಃ.



ಶ್ರೀಃ.

## ಸಶಕ್ತಿತ್ರಿಲೋಕತ್ರಿಮೂರ್ತಿಭೇದನಿರ್ಣಯಃ.

ಜೋ—ಭೋ ರೇಣುಕಗಣೇಶ! "ಇಂದಿರಾರಮಣಸೋದರೀಮಹಂ ॥

---

ವನ್ನು ಹೊಂದಿರುವ ರುದ್ರ ವಿಷ್ಣು ಬ್ರಹ್ಮರ ಶರೀರಗಳಾದರೋ ಗುಣಗಳ ವಾಸನಾಬಲದಿಂದ ಅನೇಕರೂಪಗಳಾಗಿರುತ್ತವೆ,, ಎಂದೂ, ಸೂತಸಂಹಿತೆಯಲ್ಲಿರುವ ಶಿವಮಾಹಾತ್ಮ್ಯಖಂಡದಲ್ಲಿ- "ಎಲೈ ಋಷಿಗಳೇ! ಗುಣಭೇದದಿಂದ ಬ್ರಹ್ಮನಿಗೆ ಅನೇಕ ಶರೀರಗಳುಂಟಾಗಿರುವಂತೆ, ಗುಣಭೇದದಿಂದ ವಿಷ್ಣುರುದ್ರರಿಗೂ ಅನೇಕ ಶರೀರಗಳು ಉಂಟಾಗಿರುತ್ತವೆ. ಕೆಲವು ಶರೀರಗಳು ಸತ್ವಗುಣಾಧಿಕ್ಯವುಳ್ಳವುಗಳೂ, ಕೆಲವು ಶರೀರಗಳು ತಮೋಗುಣಾಧಿಕ್ಯವಿಶಿಷ್ಟಗಳೂ, ಕೆಲವು ಶರೀರಗಳು ರಜೋಗುಣಾಧಿಕ್ಯವಿಶಿಷ್ಟಗಳೂ ಆಗಿರುವವು. ಶಿವನು–ರುದ್ರನ ಸಕಲ ಶರೀರಗಳಲ್ಲೂ ಹೆಚ್ಚಾಗಿಯೂ, ವಿಷ್ಣುಬ್ರಹ್ಮರ ಶರೀರಗಳಲ್ಲಿ ತಾರತಮ್ಯಾನುಸಾರವಾಗಿಯೂ ಪ್ರಕಾಶಿಸುತ್ತಿರುವನು. ವಿಷ್ಣುಬ್ರಹ್ಮರ ಮೂರ್ತಿಗಳನ್ನು ಪೂಜಿಸಿ ರುದ್ರಮೂರ್ತಿಯನ್ನು ಪೂಜಿಸಬೇಕೆಂಬ ಕ್ರಮವನ್ನು ಬಿಟ್ಟು, ರುದ್ರಮೂರ್ತಿಯನ್ನು ಪೂಜಿಸಿದವರು—ಆತನ ಅನುಗ್ರಹದದೆಸೆಯಿಂದ ಜಗದ್ವ್ಯಾಪಕನಾದ ಶಿವನನ್ನು ಯಾವಪ್ರಯತ್ನವೂ ಇಲ್ಲದೆ ಸುಖದಿಂದ ತಿಳಿಯುವರು,, ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ತ್ರಿಮೂರ್ತಿಗಳ ಸ್ವರೂಪಭೇದವನ್ನು ತಿಳಿಯಬೇಕು. ಎಂಬಲ್ಲಿಗೆ ಮಹೇಶ್ವರನದೆಸೆಯಿಂದುತ್ಪನ್ನರೂ ಗುಣತ್ರಯಸಹಿತರೂ ಆದ ತ್ರಿಮೂರ್ತಿಭೇದವಿಧಿಯನ್ನು ಹೇಳುವ ಏಳನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



### ಸಶಕ್ತಿತ್ರಿಲೋಕತ್ರಿಮೂರ್ತಿಭೇದನಿರ್ಣಯವು.

ಜೋ—ಎಲೈ ರೇಣುಕಗಣೇಶನೇ! ಲಕ್ಷ್ಮೀರಮಣನಾದ ವಿಷ್ಣುವಿನ ಒಡಹುಟ್ಟಿದವ

ಭಾವಯಾಮಿ ಪರದೇವತಾಂ ಹೃದಿ" ಇತಿ ಶಂಕರಾಚಾರ್ಯವಾಕ್ಯಾತ್, ರುದ್ರೋ ನಾರಾಯಣಸ್ಯ ದೇವರಏವ.

ರೇ—ಹೇ ಚೋಳ! ತ್ವತ್ಕೃತಶಂಕಾಪರಿಹಾರಶ್ಶ್ರೂಯತಾಂ, ಸ್ಕಾಂದೇ ಸನತ್ಕುಮಾರಸಂಹಿತಾಯಾಂ,— "ಮಹೇಶ್ವರೇಣ ಸಾ ಮಾಯಾ ಕ್ಷೋಭಿತಾ ಸುಷುವೇ ಪುರಾ || ಸಿತಾಸಿತಸುವರ್ಣಾಭಮಂಡರೂಪಂ ಗುಣತ್ರಯಂ || ಸಂಜಾತೇ ಶುಭ್ರವರ್ಣಾಂಗೇ ಸಾತ್ವಿಕೇ ರುದ್ರಶಾರದೇ || ತಾಮಸೇ ಕೃಷ್ಣಕಾಳ್ಯೌ ಚ ಕೃಷ್ಣವರ್ಣೇ ತತಸ್ತಥಾ || ಹಿರಣ್ಯಗರ್ಭಲಕ್ಷ್ಮ್ಯೌ ಚ ಸ್ವರ್ಣಾಂಗೇ ರಾಜಸೇ ತತಃ || ರುದ್ರಃ ಕಾಳೀಪತಿಃ ಕೃಷ್ಣಃ ಶ್ರೀಪತಿರ್ವಾಕ್ಪತಿರ್ವಿಧಿಃ" ಇತಿ. ಹೇ ಚೋಳ! ತ್ರಿಮೂರ್ತಿಸ್ವರೂಪಂ ಪ್ರಾಗೇವೋಕ್ತಂ, ಸಂಪ್ರತಿ ತಚ್ಛಕ್ತಿತ್ರಯಸ್ವರೂಪಂ ಶ್ರೂಯತಾಂ, ತತ್ರ ರುದ್ರಸೋದರೀಶಾರದಾಸ್ವರೂಪಂ. "ಶುಭ್ರಸ್ವಚ್ಛವಿಲೇಪನಮಾಲ್ಯವಸನಾಂ ಶೀತಾಂಶುಖಂಡೋಜ್ವಲಾಂ ವ್ಯಾಖ್ಯಾಮಕ್ಷಗುಣಂ ಸುಧಾಢ್ಯಕಲಶಂ ಪುಸ್ತಂ ಚ ಹಸ್ತಾಂಬುಜೈಃ || ಬಿಭ್ರಾಣಾಂ ಕಮಲಾಸನಾಂ ಕುಚನತಾಂ ವಾಗ್ದೇ

---

ಳಾದ ಪರದೇವತಾಸ್ವರೂಪಿಣಿಯಾದ ಪಾರ್ವತಿಯನ್ನು ಮನಸ್ಸಿನಲ್ಲಿ ಚಿಂತಿಸುತ್ತೇನೆ,, ಎಂದು ಶಂಕರಾಚಾರ್ಯರು ಹೇಳಿರುವುದರಿಂದ ಶಿವನು ವಿಷ್ಣುವಿಗೆ ಭಾವಮೈದುನನಾಗಬೇಕು.

ರೇ —ಎಲೈ ಚೋಳನೇ! ನಿನ್ನ ಪ್ರಶ್ನೆಗುತ್ತರವಂ ಹೇಳುವೆವು ಕೇಳು; ಸನತ್ಕುಮಾರ ಸಂಹಿತೆಯಲ್ಲಿ "ಪೂರ್ವದಲ್ಲಿ ಶಿವನಿಂದ ಚಲನೆಗೊಳಿಸಲ್ಪಟ್ಟ ಆ ಮಾಯೆಯು ಬಿಳುಪಾದ ಸತ್ವ ಗುಣಾತ್ಮಕವಾದ ಅಂಡವನ್ನೂ, ಕಪ್ಪಾದ ತಮೋಗುಣಾತ್ಮಕವಾದ ಅಂಡವನ್ನೂ, ಕೆಂಪಾದ ರಜೋಗುಣಾತ್ಮಕವಾದ ಅಂಡವನ್ನೂ ಹೆತ್ತಳು. ಸಾತ್ವಿಕಾಂಡದಲ್ಲಿ ರುದ್ರ ಶಾರದೆಯರೂ ತಾಮಸಾಂಡದಲ್ಲಿ ಕೃಷ್ಣಕಾಳಿಯರು, ರಾಜಸಾಂಡದಲ್ಲಿ ಬ್ರಹ್ಮ ಲಕ್ಷ್ಮಿಯರು ಹುಟ್ಟಿದರು. ಶಿವಾಜ್ಞೆಯಿಂದ ರುದ್ರನು ಕಾಳೀದೇವಿಗೆ ಗಂಡನಾದನು. ವಿಷ್ಣುವು ಲಕ್ಷ್ಮೀದೇವಿಗೆ ಗಂಡನಾದನು. ಬ್ರಹ್ಮನು ಶಾರದಾದೇವಿಗೆ ಗಂಡನಾದನು,, ಎಂದು ಹೇಳಲ್ಪಟ್ಟಿದೆ. ಎಲೈ ಚೋಳನೇ! ತ್ರಿಮೂರ್ತಿಗಳ ಲಕ್ಷಣವು ನಮ್ಮಿಂದ ಮೊದಲೇ ಹೇಳಲ್ಪಟ್ಟಿತು. ಈಗ ಆ ತ್ರಿಮೂರ್ತಿಗಳ ಶಕ್ತಿತ್ರಯದ ಲಕ್ಷಣವನ್ನು ಕೇಳು; ಆ ಶಕ್ತಿತ್ರಯದಲ್ಲಿ ಮೊದಲು ರುದ್ರನೊಡಹುಟ್ಟಿದ ಶಾರದೆಯ ಲಕ್ಷಣವನ್ನು ಕೇಳು; "ಅತಿಶಯವಾಗಿ ಶುಭ್ರವೂ ನಿರ್ಮಲವೂ ಆದ ಲೇಪನದ್ರವ್ಯ, ಪುಷ್ಪ ಮಾಲಿಕಾ ವಸ್ತ್ರಗಳನ್ನು ಧರಿಸಿದವಳೂ, ಚಂದ್ರಖಂಡದಂತೆ ಪ್ರಕಾಶಮಾನಳೂ, ಕೈಗಳಿಂದ ವ್ಯಾಖ್ಯಾನಮುದ್ರೆಯನ್ನೂ ಜಪಮಾಲಿಕೆಯನ್ನೂ ಅಮೃತದಿಂ ತುಂಬಿದ ಕಲಶವನ್ನೂ ಪುಸ್ತಕವನ್ನೂ ಹಿಡಿದುಕೊಂಡವಳೂ, ಕಮಲಪೀಠಾಸನಗಳೂ, ಕುಚಭಾರದಿಂದ ಬಗ್ಗಿದವಳೂ, ಮುಗುಳ್ನಗೆಯುಳ್ಳವಳೂ, ವಾಗ್ವೈಭವವನ್ನುಂಟುಮಾಡುವವಳೂ, ಜ್ಞಾನಚಕ್ಷುಸ್ಸುಳ್ಳವಳೂ, ಸೌಭಾಗ್ಯ ಸಂಪತ್ತನ್ನುಂಟುಮಾಡುವವಳೂ, ಆದ ಶಾರದಾದೇವಿಯನ್ನು ನಮಿಸುತ್ತೇನೆ,, ಎಂದು ಕೆ

ವತಾಂ ಸಸ್ಮಿತಾಂ ವಂದೇ ವಾಗ್ವಿಭವಪ್ರದಾಂ ತ್ರಿನಯನಾಂ ಸೌಭಾಗ್ಯಸಂಪತ್ಕ
ರೀಂ'' ಇತಿ. ಅಥ ಕೃಷ್ಣಸೋದರ್ಯಾಃ ಕಾಳ್ಯಾಸ್ಸ್ವರೂಪಂ ಶ್ರೂಯತಾಂ, ಲೈಂ
ಗೇ,—ವಿಷ್ಣುಂಪ್ರತಿ ರುದ್ರವಾಕ್ಯಂ, "ಭಗಿನೀಂ ತವ ಕಲ್ಯಾಣೀಂ ವಿಷ್ಣೋ ಹೈಮ
ವತೀಮುಮಾಂ ‖ ನಿಯೋಗಾದ್ಬ್ರಹ್ಮಣಃ ಕಾಳೀಂ ಪ್ರದಾಸ್ಯಸಿ ಮಮೈವ ತಾಂ ‖
ಮತ್ಸಂಬಂಧೀ ಚ ದಾರಾಸ್ತ್ವಂ ಸರ್ವೈಃ ಪೂಜ್ಯೋ ಭವಿಷ್ಯಸಿ'' ತತ್ರೈವ ವಿಷ್ಣುಂ
ಪ್ರತಿ ಬ್ರಹ್ಮವಾಕ್ಯಂ, "ಭವಾನಗ್ರೇ ಸಮುತ್ಪನ್ನೋ ಭವಾನ್ಯಾ ಸಹ ಕೇಶವ ‖
ವಾಮಾಂಗಾದಸ್ಯ ರುದ್ರಸ್ಯ ದಕ್ಷಿಣಾಂಗಾದಹಂ ತಥಾ ‖ ರುದ್ರೋಽಯಂ ಜಗ
ತಾಂ ಕರ್ತಾ ತವಾಪಿ ಚ ಮಮಾಪಿ ಚ ‖ ತಥಾಪಿ ತಸ್ಮೈ ದಾತವ್ಯಾ ವಚನಾಚ್ಚ
ಗಿರೇರ್ಮಮ ‖ ತತಶ್ಚೋತ್ಥಾಯ ಭಗವಾನ್ಪದ್ಮನಾಭಃ ಪ್ರಣಮ್ಯ ತಂ ‖ ಪಾದೌ
ಪ್ರಕ್ಷಾಳ್ಯ ರುದ್ರಸ್ಯ ಕರಾಭ್ಯಾಂ ಕಮಲೇಕ್ಷಣಃ ‖ ಅಭ್ಯುಕ್ಷ್ಯ ಚಾತ್ಮನೋ ಮೂ
ರ್ಧ್ನಿ ಬ್ರಹ್ಮಣಶ್ಚ ಗಿರೇಸ್ತಥಾ ‖ ತ್ವದೀಯೈವಾ ತ್ವದೀಯೈವಾ ಗಿರಿಜಾ ಹ್ಯನುಜಾ
ಮಮ ‖ ಇತ್ಯುಕ್ತ್ವಾ ಸೋದಕಂ ದತ್ವಾ ದೇವೀಂ ದೇವೇಶ್ವರಾಯ ತಾಂ ‖ ಸ್ವಾ
ತ್ಮಾನಮಪಿ ದೇವಾಯ ಸೋದಕಂ ಪ್ರದದೌ ಹರಿಃ'' ಇತ್ಯಾದಿಪ್ರಸಿದ್ಧಂ. ಇತಿ
ಸ್ಥಿತೇ, ಶ್ರೀಮನ್ನಿಖಿಲಬೃಂದಾರಕಬೃಂದವಂದಿತಪದಾಂಬುಜಸ್ಸಕಲಭುವನಾಧಿಪೋ
ಮಹಾದೇವಃ ದಕ್ಷಸ್ಯ ಜಾಮಾತಾ ಕೃಷ್ಣಸ್ಯ ದೇವರ ಇತಿ ಲೋಕವಾರ್ತಾ ಮಾ

ಲ್ಪಟ್ಟದೆ. (ಇದರಿಂದ ಬ್ರಹ್ಮನ ಪತ್ನಿಯಾದ ಸರಸ್ವತಿಯ ಲಕ್ಷಣವು ಹೇಳಲ್ಪಟ್ಟಿತು.) ಕೃಷ್ಣನ
ಒಡಹುಟ್ಟಿದವಳಾದ ಕಾಳಿಯ ಸ್ವರೂಪವನ್ನು ಕೇಳು; ಲಿಂಗಪುರಾಣದಲ್ಲಿ-"ಎಲೈ ವಿಷ್ಣುವೇ !
ಮಂಗಳಕರಳಾದ ನಿನ್ನ ತಂಗಿಯಾದ ಆ ಕಾಳಿಯನ್ನೂ ಹಿಮವಂತನ ಮಗಳಾದ ಉಮೆಯ
ನ್ನೂ ಬ್ರಹ್ಮನ ಅಪ್ಪಣೆಯ ಮೇರೆ ನನಗೆ ಕೊಡುವೆ. ಮತ್ತಂ ನೀನು— ನನಗೆ ಪತ್ನಿಯಾ
ಗಿ ಎಲ್ಲರಿಂದಲೂ ಪೂಜಿಸಿಕೊಳ್ಳುವೆ,, ಎಂದು ಶಿವನಿಂದ ವಿಷ್ಣುವಿಗೆ ಹೇಳಲ್ಪಟ್ಟದೆ. ಮತ್ತಮಾ
ಪುರಾಣದಲ್ಲಿಯೇ – "ಎಲೈ ವಿಷ್ಣುವೇ ! ಈ ಶಿವನ ವಾಮಾಂಗದದೆಸೆಯಿಂದ ಮೊದಲು ನೀನು
ಗಿರಿಜೆಯೊಡನೆ ಹುಟ್ಟದೆ. ಅದೇ ರೀತಿಯಾಗಿ ನಾನು ಈ ಶಿವನ ದಕ್ಷಿಣಾಂಗದದೆಸೆಯಿಂದ ಹು
ಟ್ಟಿದೆನು. ನನಗೂ ನಿನಗೂ ಮತ್ತು ಸಕಲ ಲೋಕಗಳಿಗೂ ಈ ಶಿವನು ಕರ್ತನಾಗಿರುತ್ತಾನೆ.
ಆದರೂ ನನ್ನ ಮಾತನ್ನೂ ಸರಸ್ವತಿಯಮಾತನ್ನೂ ಕೇಳಿ ಆ ಶಿವನಿಗೆ ಗಿರಿಜೆಯನ್ನು ಕೊಟ್ಟು
ವಿವಾಹವನ್ನು ಮಾಡಬೇಕು. ಎಂದು ಬ್ರಹ್ಮನು ಹೇಳಲು; ಬಳಿಕ ವಿಷ್ಣುವು ಮೇಲಕ್ಕೆದ್ದು ಆ
ರುದ್ರನಿಗೆ ನಮಸ್ಕಾರಮಾಡಿ, ಆತನ ಪಾದಗಳನ್ನು ಪ್ರಕ್ಷಾಳಿಸಿ, ಆ ಪಾದೋದಕವನ್ನು ತನ್ನ
ತಲೆಯ ಮೇಲೆ ಪ್ರೋಕ್ಷಿಸಿ "ಈ ನನ್ನ ತಂಗಿಯಾದ ಗಿರಿಜೆಯು ನಿನ್ನ ಪತ್ನಿಯು. ನಿನ್ನ ಪತ್ನಿ
ಯು,, ಎಂದು ಧಾರಾಜಲವ ಧಾರೆಯ ನೆರೆದುಕೊಟ್ಟು ಬಳಿಕ ಆ ರುದ್ರನಿಗೆ ತನ್ನನ್ನೂ ಧಾರೆಯೆ
ರೆದು ಕೊಟ್ಟನು,, ಎಂದುಬ್ರಹ್ಮನಿಂದುಕ್ತವಾಗಿದೆ. ಈ ವಿಷಯದಲ್ಲಿ –"ಋಟ್ಯಾಂಗೀವಿಷ್ಣುವಲ್ಲ

ತ್ರಂ. "ವಾಸುದೇವಃ ಪರಾಪ್ರಕೃತಿಃ"—"ವಿಷ್ಣುರ್ಯೋನಿಂ ಕಲ್ಪಯತು" ಇ
ಪೂರ್ವೋಕ್ತಶ್ರುತಿವಾಕ್ಯಾತ್, ನಾರಾಯಣೀರುದ್ರಸ್ಯ ಸ್ವಯಮೇವ ಸ್ಪರ್ಶದಾಸ್ಯ
ಮಂತವ್ಯಾ. ತತ್ತಾವದಾಸ್ತಾಂ. ಅಥ ಹಿರಣ್ಯಗರ್ಭಸೋದರೀಸ್ವರೂಪಂ ಶ್ರೂ
ತಾಂ, ಸ್ಕಾಂದೇ,—ಲಕ್ಷ್ಮೀಂಪ್ರತಿ ದೂರ್ವಾಸಮುನಿವಾಕ್ಯಂ, "ಲಕ್ಷ್ಮಿ ಕ್ಷಮ
ವಚನೀಯಮಿದಂ ದುರುಕ್ತಂ ಮಂದೀಭವಂತಿ ಪುರುಷಾಸ್ತವ ಸಂಗಮೇನ || ನೋ
ಚೇತ್ಕಥಂ ಕಥಯ ಪನ್ನಗಭೋಗಮಧ್ಯೇ ನಾರಾಯಣಸ್ಸ್ವಪಿತಿ ಪಂಕಜಪತ್ರನೇತ್ರ"
ಇತ್ಯಾದಿಭಿಸ್ತ್ರಿಮೂರ್ತೀನಾಂ ಶಕ್ತಿತ್ರಯಸ್ವರೂಪಂ ವಿಜ್ಞೇಯಂ. ಹೇ ಚೋಳ!
ತತ್ತ್ರಿಮೂರ್ತಿಲೋಕಾನಾಂ ನ್ಯೂನಾಧಿಕತ್ವಮಪಿ ಶ್ರೂಯತಾಂ, ಸ್ಕಾಂದೇಕಾಶಿ
ಖಂಡೇ,—"ಪಾದಗಮ್ಯಂ ಹಿ ಯತ್ಕಿಂಚಿದ್ವಸ್ತ್ವಸ್ತಿ ಧರಣೀತಲೇ || ತದ್ಭೂ
ಕಮಿತಿ ಖ್ಯಾತಂ ಸಾದ್ರಿದ್ವೀಪಾಬ್ಧಿಕಾನನಂ || ಭೂಲೋಕಾಚ್ಚ ಭುವರ್ಲೋಕ
ಬುದ್ಧಿಮದ್ಭಿರುದಾಹೃತಃ || ಆದಿತ್ಯಾದಾಧ್ರುವಂ ವಿಪ್ರಾಸ್ಸ್ವರ್ಲೋಕ ಇತಿ ಗೀ
ತೇ || ಮಹರ್ಲೋಕಃ ಕ್ಷಿತೇರೂರ್ಧ್ವಮೇಕಕೋಟಿಪ್ರಮಾಣತಃ || ಕೋಟಿದ್ವಯೇ

ಥ..,"ನಮೋ ವಿಷ್ಣುಕಳತ್ರಾಯ,, ಇತ್ಯಾದಿ ಪೂರ್ವೋಕ್ತವಚನಗಳೂ ಪ್ರಸಿದ್ಧವಾಗಿರುತ್ತ
ಹೀಗಿದ್ದರೂ ಷಡ್ಗುಣೈಶ್ವರ್ಯಸಂಪನ್ನನೂ, ಸಕಲದೇವತೆಗಳಿಂದ ನಮಿಸಲ್ಪಟ್ಟ ಪಾದಕಮಲಗಳು
ಳ್ಳವನೂ, ಸಕಲ ಲೋಕಗಳಿಗೊಡೆಯನೂ, ಆಗಿರುವ ಮಹಾದೇವನು—ದಕ್ಷನಿಗೆ ಅಳಿಯನು,
ಷ್ಣುವಿಗೆ ಭಾವಮೈದುನನು ಎಂಬುದು ಲೋಕವಾರ್ತೆಯಲ್ಲದೆ ನಿಜವಲ್ಲವು. "ವಾಸುದೇವಃ ಪ
ರಾಪ್ರಕೃತಿಃ,-"ವಿಷ್ಣುರ್ಯೋನಿಂಕಲ್ಪಯತು,, ಎಂಬ ಪೂರ್ವೋಕ್ತಶ್ರುತಿವಚನಗಳಿಂದ ನಾರಾ
ಯಣಿಯು ತನ್ನಿಚ್ಛೆಯಿಂದಲೇ ಶಿವನಿಗೆ ಸ್ಪರ್ಶದಾಸಿಯಾದಳೆಂದು ತಿಳಿಯಬೇಕು. ಅದಂತಿರ
ಬ್ರಹ್ಮನ ಸಹೋದರಿಯಾದ ಲಕ್ಷ್ಮಿಯ ಸ್ವರೂಪವನ್ನು ಕೇಳು; ಸ್ಕಾಂದಪುರಾಣದಲ್ಲಿ—"ಎ
ಲಕ್ಷ್ಮಿಯೇ! ನನ್ನ ಮಾತು ನಿನಗೆ ಬಹಳ ವಿರೋಧವಾಗಿ ತೋರಿಬಂದರೂ ಕ್ಷಮಿಸು, ನಿನ್ನ
ಸೇರಿದವರು ಅವಿವೇಕಿಗಳಾಗುತ್ತಾರೆ. ಅವಿವೇಕಿಗಳಾಗುವುದಿಲ್ಲವೆಂದರೆ, ವಿಷ್ಣುವು ಆದಿಶೇಷನ
ಡೆಗಳ ಮಧ್ಯದಲ್ಲಿ ಏತಕ್ಕಾಗಿ ಮಲಗಿರುತ್ತಾನೆ ಹೇಳು?,, ಎಂದು ದೂರ್ವಾಸಮುನಿಯಿಂದ ಹೇ
ಳಲ್ಪಟ್ಟಿದೆ. ಇತ್ಯಾದಿವಚನಗಳಿಂದ ತ್ರಿಮೂರ್ತಿಗಳ ಶಕ್ತಿಯರ ಸ್ವರೂಪವನ್ನು ತಿಳಿಯಬೇಕು.
ಎಲೈ ಚೋಳನೇ! ಆ ತ್ರಿಮೂರ್ತಿಗಳು ವಾಸಿಸುವ ಲೋಕಗಳ ತಾರತಮ್ಯವನ್ನು ಕೇಳು; ಕಾ
ಶಿಖಂಡದಲ್ಲಿ "ಪರ್ವತಗಳಿಂದಲೂ, ದ್ವೀಪಗಳಿಂದಲೂ, ಸಮುದ್ರಗಳಿಂದಲೂ, ಅರಣ್ಯ
ಗಳಿಂದಲೂ ಕಾಲ್ನಡಿಗೆಯಿಂದ ಹೋದಲುಯೋಗ್ಯವೂ ಆಗಿರುವ ಲೋಕವೇ ಭೂಲೋಕವೆಂದು
ಬುದ್ಧಿಶಾಲಿಗಳು ಹೇಳುತ್ತಾರೆ. ಈ ಭೂಲೋಕದ ಮೇಲಿರುವ ಲೋಕವು ಭುವರ್ಲೋಕವೆಂ
ಅದರ ಮೇಲಿರುವ ಲೋಕವು ಸುವರ್ಲೋಕವೆಂದೂ ಹೇಳಲ್ಪಡುತ್ತದೆ. ಭೂಲೋಕದ ಮೇಲ್ಗ
ಡೆ—ಒಂದು ಕೋಟಿಯೋಜನದೆತ್ತರದಲ್ಲಿ ಮಹರ್ಲೋಕವು, ಎರಡು ಕೋಟಿಯೋಜನದ

ಸಂಖ್ಯಾತೋ ಜನೋ ಭೂಲೋಕತೋ ಜನ್ಯೈಃ | ಚತುಷ್ಕೋಟಿಪ್ರಮಾಣೇನ ತಪೋಲೋಕೋಽಸ್ತಿ ಭೂತಲಾತ್ || ಉಪರಿಷ್ಟಾತ್ತ್ರಿಕ್ಷ್ಯತೇರಷ್ಟೌ ಕೋಟಯಸ್ಸತ್ಯಮೀರಿತಂ || ತಸ್ಮಾದುಪರಿ ವೈಕುಂಠೋ ಯೋಜನಾನಾಂ ಪ್ರಮಾಣತಃ || ಭೂಲೋಕಾತ್ಪರಿಸಂಖ್ಯಾತಃ ಕೋಟಿಷೋಡಶಸಮ್ಮಿತಂ || ಯತ್ರಾಸ್ತೇ ಶ್ರೀಪತಿಸ್ಸಾಕ್ಷಾತ್ಸರ್ವೇಷಾಮಭಯಪ್ರದಃ || ತತಸ್ತು ಷೋಡಶಗುಣಃ ಕೈಲಾಸೋಽಸ್ತಿ ಶಿವಾಲಯಃ || ಪಾರ್ವತೀಸಹಿತಶ್ಶಂಭುರ್ಗಜಾಸ್ಯಸ್ಕಂದನಂದಿಭಿಃ'' ಇತ್ಯಾದಿ. ಶಿವಧರ್ಮೋತ್ತರೇ,— ''ಬ್ರಹ್ಮಣಃ ಪರಮಂ ಸ್ಥಾನಂ ಪದ್ಮರಾಗಸಮಪ್ರಭಂ || ಬ್ರಹ್ಮಲೋಕಾತ್ಪರಂ ಜ್ಞೇಯಂ ವಿಷ್ಣುಸ್ಥಾನಂ ಸನಾತನಂ || ಇಂದ್ರನೀಲಪ್ರತೀಕಾಶಂ ಮಹಾಭೋಗೈರಲಂಕೃತಂ || ವಿಷ್ಣುಲೋಕಾತ್ಪರಂ ಸ್ಥಾನಂ ಕುಮಾರಸ್ಯ ಮಹಾತ್ಮನಃ || ಸ್ವಚ್ಛಮೌಕ್ತಿಕಸಂಕಾಶಂ ವರಭೋಗಸಮನ್ವಿತಂ|| ಸ್ಕಂದಸ್ಥಾನಾತ್ಪರಂ ಸ್ಥಾನಮುಮಾದೇವ್ಯಾಃ ಪ್ರಕೀರ್ತಿತಂ || ತಪ್ತಚಾಮೀಕರಪ್ರಖ್ಯಮಶೇಷಗುಣಸಂಯುತಂ || ಉಮಾಸ್ಥಾನಾಚ್ಚ ಪರತಸ್ಸ್ಥಾನಮಾದ್ಯಮುಮಾಪತೇಃ || ಶಶಭೃತ್ಕೋಟಿಸಂಕಾಶಂ ಸರ್ವಕಾಮಸಮನ್ವಿತಂ || ಅಪ್ರಮೇಯಗುಣಂ ಶುದ್ಧಮನೌಪಮ್ಯಂ ಸನಾತನಂ'' ಇತ್ಯಾದಿಪ್ರಸಿದ್ಧಂ.

---

ದಲ್ಲಿ ಜನಲೋಕವು, ನಾಲ್ಕು ಕೋಟಿಯೋಜನದೆತ್ತರದಲ್ಲಿ ತಪೋಲೋಕವು, ಎಂಟುಕೋಟಿಯೋಜನದೆತ್ತರದಲ್ಲಿ ಸತ್ಯಲೋಕವು, ಹದಿನಾರುಕೋಟಿಯೋಜನದೆತ್ತರದಲ್ಲಿ ವೈಕುಂಠಲೋಕವು ಇರುತ್ತದೆ. ಆ ವೈಕುಂಠದಲ್ಲಿ ಸಕಲಲೋಕದವರನ್ನೂ ರಕ್ಷಿಸತಕ್ಕ ವಿಷ್ಣುವು ವಾಸಿಸುತ್ತಾನೆ. ವೈಕುಂಠದ ಮೇಲ್ಗಡೆ ಹದಿನಾರುಕೋಟಿಯೋಜನದೆತ್ತರದಲ್ಲಿ ಕೈಲಾಸವು ಇರುತ್ತದೆ. ಅಲ್ಲಿ ಶಿವನು ಪಾರ್ವತೀದೇವಿಯಿಂದಲೂ, ವಿಘ್ನೇಶ್ವರ ಷಣ್ಮುಖ ನಂದಿ ಮೊದಲಾದವರಿಂದಲೂ ಸಹಿತನಾಗಿ ಇರುತ್ತಾನೆ. ಇತ್ಯಾದಿ ವಚನಗಳಿಂದ ತ್ರಿಮೂರ್ತಿಗಳಿಗಾಶ್ರಯವಾದ ಸತ್ಯಲೋಕ, ವೈಕುಂಠಲೋಕ, ಕೈಲಾಸಗಳ ತಾರತಮ್ಯವನ್ನು ತಿಳಿಯಬೇಕು. ಶಿವಧರ್ಮೋತ್ತರದಲ್ಲಿ—''ಪದ್ಮರಾಗರತ್ನದಂತೆ ಹೊಳಪುಳ್ಳ ಬ್ರಹ್ಮಲೋಕಕ್ಕಿಂತ ಶ್ರೇಷ್ಠವಾದ ವೈಕುಂಠವು ಇಂದ್ರನೀಲರತ್ನದೋಪಾದಿಯಲ್ಲಿ ವಿರಾಜಮಾನವಾಗಿ ನಾನಾಬಗೆಯಾದ ಸುಖಗಳಿಗಾವಾಸಸ್ಥಾನವಾಗಿದೆ. ವೈಕುಂಠಕ್ಕಿಂತ ಪರವಾದ ಮಹಾತ್ಮನಾದ ಷಣ್ಮುಖನ ಸ್ಥಾನವು ಮುತ್ತಿನಂತೆ ಪ್ರಕಾಶಮಾನವಾಗಿ ಶ್ರೇಷ್ಠವಾದ ಸುಖಗಳಿಂದ ಒಪ್ಪುತ್ತಿದೆ. ಷಣ್ಮುಖನ ಸ್ಥಾನಕ್ಕಿಂತ ಪರವಾದ ಪಾರ್ವತೀದೇವಿಯ ಸ್ಥಾನವು ಅಗ್ನಿಸಂತಪ್ತವಾದ ಭಂಗಾರದ ಹೊಳಪಿನಂತೆ ಹೊಳಪುಳ್ಳುದಾಗಿ, ಸಮಸ್ತಗುಣಗಳಿಂದ ಕೂಡಿರುತ್ತದೆ. ಪಾರ್ವತಿಯ ಸ್ಥಾನಕ್ಕಿಂತ ಪರವಾದ ಶಿವಸ್ಥಾನವು ಅನೇಕಚಂದ್ರರ ಕಾಂತಿಯಂತೆ ಕಾಂತಿಯುಳ್ಳುದೂ, ಸಮಸ್ತವಾದ ಇಷ್ಟಾರ್ಥಗಳಿಂದಕೂಡಿದುದೂ, ವರ್ಣಿಸಲಶಕ್ಯವಾದ ಗುಣಗಳುಳ್ಳುದೂ, ಶುದ್ಧವೂ ಹೋಲಿಕೆಯಿಲ್ಲದುದೂ, ಸನಾತನವೂ ಆಗಿರುತ್ತದೆ'' ಎಂದು ಹೇಳಲ್ಪಟ್ಟಿದೆ. ಇತ್ಯಾದಿವಚನಗಳು ಪ್ರಸಿದ್ಧವಾಗಿರ್ಪುವು.

ಇತಿ ಸಶಕ್ತಿತ್ರಿಲೋಕತ್ರಿಮೂರ್ತಿಭೇದನಿರ್ಣಯಸ್ಸಪ್ತಮೋಪದೇಶೇ ಪಂಚಮಸ್ಸಂವಾದಃ.

ಶ್ರೀಃ.

## ತ್ರಿಮೂರ್ತಿಷುರುದ್ರಾಧಿಕ್ಯಂ.

ರೇ—ಹೇ ಚೋಳ! ತ್ರಿಮೂರ್ತಿಷು ರುದ್ರಾಧಿಕ್ಯಂ ಶ್ರೂಯತಾಂ, ಶ್ವೇತಾಶ್ವತರೋಪನಿಷದಿ,—"ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ"—"ನ ತತ್ಸಮಶ್ಚಾಪ್ಯಧಿಕಶ್ಚ ದೃಶ್ಯತೇ" ಇತಿ. ಶಿವಧರ್ಮೋತ್ತರೇ,—"ಯಸ್ಯ ಲಿಂಗಂ ಚಾಗ್ನಿಮೀಳೇ ಋಗ್ವೇದೇ ಪ್ರಥಮಂ ಸ್ತುತಂ || ಪೂಜಿತಂ ಬ್ರಹ್ಮವಿಷ್ಣುಭ್ಯಾಂ ತಸ್ಯ ಕೋ ವಾಽಧಿಕಸ್ಸಮಃ || ಆದ್ಯಂತಂ ಯಸ್ಯ ಲಿಂಗಸ್ಯ ದ್ರಷ್ಟುಕಾಮೌ ಸುರೋತ್ತಮೌ | ಜಾತೌ ವರಾಹಗೃಧ್ರಾಢ್ಯ ತಸ್ಯ ಕೋ ವಾಽಧಿಕಸ್ಸಮಃ || ಶಿವಏಕೋ ಧ್ಯೇಯ ಇತಿ ಯಮಾಹಾಥರ್ವಣೀಶಿಖಾ|| ಯಂ ದಧ್ಯತುರ್ವಿಧಿವಿಧೂ ತಸ್ಯ ಕೋ ವಾಽಧಿಕಸ್ಸಮಃ || ಯಸ್ಯ ಹಸ್ತೇ ಬ್ರಹ್ಮಶಿರೋ ಯಸ್ಯಶೂಲೇ ಹರೇಶ್ಶವಃ || ಯಂ ಭರ್ಗ

---

ಎಂಬಲ್ಲಿಗೆ ಸಶಕ್ತಿತ್ರಿಲೋಕತ್ರಿಮೂರ್ತಿಗಳಭೇದನಿರ್ಣಯವನ್ನು ಹೇಳುವ ಏಳನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.

### ತ್ರಿಮೂರ್ತಿಗಳಲ್ಲಿರುದ್ರಾಧಿಕ್ಯವು.

ರೇ — ಎಲೈ ಚೋಳನೇ! ಪೂರ್ವೋದಿತರಾದ ತ್ರಿಮೂರ್ತಿಗಳಲ್ಲಿ ರುದ್ರನಿಗಿರುವ ಆಧಿಕ್ಯವನ್ನು ಕೇಳು; ಶ್ವೇತಾಶ್ವತರೋಪನಿಷತ್ತಿನಲ್ಲಿ—"ಒಬ್ಬರುದ್ರನೇ ಅದ್ವಿತೀಯನಾಗಿದ್ದನು"— "ಆ ರುದ್ರನಿಗೆ ಸಮಾನನೂ, ಅಧಿಕನೂ ಕಾಣಲ್ಪಡುವುದಿಲ್ಲ,, ಎಂದು ಹೇಳಲ್ಪಟ್ಟಿದೆ ಶಿವಧರ್ಮೋತ್ತರದಲ್ಲಿ—"ಯಾವ ರುದ್ರನ ಶರೀರವಾದ ಲಿಂಗವು ಋಗ್ವೇದದಲ್ಲಿರುವ "ಅಗ್ನಿಮೀಳೇ ಪುರೋಹಿತಂ ,, ಎಂಬ ಮಂತ್ರದಿಂದ ಆದಿಯಲ್ಲಿ ಸ್ತುತಿಸಲ್ಪಟ್ಟನೋ, ಬ್ರಹ್ಮವಿಷ್ಣುಗಳಿಂದ ಪೂಜಿಸಲ್ಪಟ್ಟನೋ, ಆತನಿಗೆ ಸಮಾನನೂ ಅಧಿಕನೂ ಯಾವನೂ ಇಲ್ಲವು. ವಿಷ್ಣು ಬ್ರಹ್ಮರು ಯಾವ ಮಹಾಲಿಂಗದ ಆದ್ಯಂತಗಳನ್ನು ನೋಡಲಿಚ್ಛೆಯಿಂದ ಹಂದಿಹಂಸಗಳಾದರೋ, ಆತನಿಗೆ ಸಮಾನನೂ ಅಧಿಕನೂ ಇಲ್ಲವು. ಅಥರ್ವಶಿಖೋಪನಿಷತ್ತು ಶಿವನೊಬ್ಬನೇ ಧ್ಯಾನಾರ್ಹನೆಂದು ಯಾವನನ್ನು ಹೇಳಿತೋ, ಯಾವಲಿಂಗವನ್ನು ಬ್ರಹ್ಮ ವಿಷ್ಣುಗಳು ಮನಸ್ಸಿನಲ್ಲಿ ಧರಿಸಿದರೋ ಆತನಿಗೆ ಸಮಾನನೂ ಅಧಿಕನೂ ಇಲ್ಲವು. ಯಾವನ ಕೈಯಲ್ಲಿ ಬ್ರಹ್ಮನ ತಲೆಯು, ತ್ರಿಶೂಲದಲ್ಲಿ ವಿಷ್ಣುವಿನ ಶವವು ಇರುತ್ತದೋ, ಯಾವನನ್ನು ಗಾಯತ್ರೀ ಮಂತ್ರವು ಭರ್ಗನನ್ನಾಗಿ ಹೇಳುತ್ತದೋ ಆತನಿಗೆ ಸಮಾನನೂ ಅಧಿಕನೂ ಇಲ್ಲವು. ಯಾವನ ರಥಕ್ಕೆ—ವೇದಗಳು ಕುದು

ಮೂಹ ಗಾಯತ್ರೀ ತಸ್ಯ ಕೋ ವ್ಯಾಧಿಕಸ್ಸಮಃ ॥ ವೇದಾವಾಹಾ ಯದ್ರಥಸ್ಯ ಧಾತಾ ಸೂತಶ್ಚ ಯೋ ಹರಿಃ ॥ ಯಸ್ಯ ಹಸ್ತೇ ಪುರಂಪೋಸ್ತಸ್ಯ ಕೋ ವ್ಯಾಧಿಕಸ್ಸ ಮಃ ॥ ಯಸ್ಯ ಶ್ರೀಶಬರೇಶಸ್ಯ ವೇದಾಶ್ವಾತ್ವನಃ ಪದಂ ವಿದುಃ ॥ ಸ್ವೇದಜಾತಾ ಬ್ರಹ್ಮವಿಷ್ಣೂ ತಸ್ಯ ಕೋ ವ್ಯಾಧಿಕಸ್ಸಮಃ ॥ ಹಿತ್ವಾ ವಿಧಿವಿಧೂ ಯಸ್ಮೈ ವೇಶ್ಯಾ ಭರತಶಿಕ್ಷಿತಾಃ ॥ ನಮಶ್ಚಕ್ರುಸ್ಸಾಂಜಲಿನ್ಯಸ್ತಸ್ಯ ಕೋ ವ್ಯಾಧಿಕಸ್ಸಮಃ ॥ ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ॥ ತದಾ ಶಿವಮವಿಜ್ಞಾಯ ದುಃಖ ಸ್ಯಾಂತೋ ಭವಿಷ್ಯತಿ ॥ ದೇವಾಧಿದೇವ ಭವತಾ ಸಮತಾಮುದೀರ್ಯ ಹಂಸೋಽಭವ ತ್ಕಮಲಭೂರ್ಮುರಭಿದ್ವರಾಹಃ ॥ ಏತದ್ಧಿ ತಥ್ಯಮೃಷಯಃ ಖಲು ವಾಚಿಕಸ್ಯ ಪಾಪ ಸ್ಯ ಪಕ್ಷಿಮೃಗತಾಂ ಫಲಮಾಮನಂತಿ" ಸೂತಗೀತಾಯಾಂ,—ಸೂತಃ, "ದೇಹಾ ಕಾರಸ್ಯ ಚೈಕತ್ವೇ ಸತ್ಯಪಿ ದ್ವಿಜಪುಂಗವಾಃ ॥ ಶಿರಸಾ ಪಾದಯೋಸ್ಸಾಮ್ಯಂ ಸರ್ವ ಥಾ ನೈವ ವಿದ್ಯತೇ॥ ಯಥಾಽಽಸ್ಯಾಪಾನಯೋಸ್ಸಾಮ್ಯಂ ಛಿದ್ರತ್ವೇಪಿ ನ ವಿದ್ಯತೇ॥ ದೇವತ್ವೇ ವಿಧಿವಿಷ್ಣ್ವೋಸ್ತು ರುದ್ರಸಾಮ್ಯಂ ನ ವಿದ್ಯತೇ" ಬ್ರಹ್ಮಗೀತಾಯಾಂ,-

ರೆಗಳಾದವೋ. ಬ್ರಹ್ಮನು ಸಾರಥಿಯಾದನೋ, ಯಾವನ ಕೈಯಲ್ಲಿ ವಿಷ್ಣುವು ಬಾಣವಾದನೋ, ತ್ರಿಪುರವೈರಿಯಾದ ಆ ಶಿವನಿಗೆ ಸಮಾನನೂ ಅಧಿಕನೂ ಇಲ್ಲವು. ಶಬರವೇಷಧಾರಿಯಾದ ಯಾವ ಶಿವನಿಗೆ ವೇದಗಳು ಬೇಟೆ ನಾಯಿಗಳಾದವೋ, ಯಾವನ ಬೆವರಿನಿಂದ ವಿಷ್ಣು ಬ್ರಹ್ಮರು ಹುಟ್ಟಿ ದರೋ, ಭರತಾಚಾರ್ಯನಿಂದಭ್ಯಾಸವನ್ನು ಮಾಡಿದ ವೇಶ್ಯೆಯರು ವಿಷ್ಣು ಬ್ರಹ್ಮರನ್ನು ನಮಿಸಡಿ ಯಾವನಿಗೆ ಕೈಗಳನ್ನು ಮುಗಿದು ನಮಸ್ಕಾರ ಮಾಡಿದರೋ, ಆ ರುದ್ರನಿಗೆ ಸಮಾನನೂ ಅಧಿ ಕನೂ ಇಲ್ಲವು. ಯಾವ ಮಾನವರು ಶಿವನನ್ನು ತಿಳಿಯದೆ ಯಾವಾಗ ಮಹದಾಕಾಶವನ್ನು ಚರ್ಮ ದಂತೆ ಸುತ್ತಿಕೊಳ್ಳುವರೋ, ಆಗ ಅವರು ಶಿವಜ್ಞಾನಿಗಳಾಗಿ ಮುಕ್ತರಾಗುವರು. ದೇವಾಧಿ ದೇವನಾದ ಎಲೈ ಶಿವನೇ ! ಬ್ರಹ್ಮನು ತಾನು ನಿನಗೆ ಸಮಾನನೆಂದು ಹೇಳಿದುದರಿಂದ ಹಂಸ ಪಕ್ಷಿಯಾದನು. ವಿಷ್ಣುವು ಹಾಗೆಯೇ ಹೇಳಿದುದರಿಂದ ಹಂದಿಯಾದನು. ಎಲೈ ಮುನಿಗಳೇ! ಈ ಮಾತು ಸತ್ಯವಾದದ್ದು. ಆ ಬ್ರಹ್ಮನಾರಾಯಣರು—ವಾಕ್ಕಿನಿಂದ ಮಾಡಿದ ಪಾಪಕ್ಕೆ ಪಕ್ಷಿ ಮೃಗಗಳ ರೂಪವನ್ನು ಹೊಂದಿದುದನ್ನೇ ಫಲವನ್ನಾಗಿ ಪ್ರಾಜ್ಞರು ತಿಳಿಯುತ್ತಾರೆ,, ಎಂದೂ, ಸೂತಗೀತೆಯಲ್ಲಿ—"ಎಲೈ ಬ್ರಾಹ್ಮಣಶ್ರೇಷ್ಠರೇ ! ದೇಹದ ಆಕಾರವು ಏಕಪ್ರಕಾರವಾಗಿದ್ದರೂ ತಲೆಯೊಡನೆ ಕಾಲುಗಳಿಗೆ ಸಾದೃಶ್ಯವು ಸರ್ವಪ್ರಕಾರದಿಂದಲೂ ಇಲ್ಲದಿರುವಂತೆಯೂ, ಮುಖ ಗುದಗಳಿಗೆ ರಂಧ್ರವು ಸಮಾನವಾಗಿದ್ದರೂ ಮುಖದೊಡನೆ ಗುದವು ಸಮಾನವಾಗದಿರುವಂತೆಯೂ ಬ್ರಹ್ಮ ವಿಷ್ಣು ರುದ್ರರಿಗೆ ದೇವತ್ವವಿದ್ದಾಗ್ಯೂ ರುದ್ರನೊಡನೆ ಬ್ರಹ್ಮವಿಷ್ಣುಗಳು ಸಮಾನರಲ್ಲವು,, ಎಂದೂ ಹೇಳಲ್ಪಟ್ಟಿದೆ. ಬ್ರಹ್ಮಗೀತೆಯಲ್ಲಿ—"ಕೆಲವರು ಮಾಯೆಯಿಂದ ಅಜ್ಞಾನಿಗಳಾಗಿ, ವಿಷ್ಣು ಶಿವಸಮಾನನೆಂದೂ, ಕೆಲವರು ನನ್ನನ್ನು ಶಿವಸಮಾನನೆಂದೂ ಹೇಳುವರು. ಇದರಿಂದ

ಬ್ರಹ್ಮಾ, “ಮಾಯಾಬಲೇನೈವ ಹರಿಂ ಶಿವೇನ ಸಮಾನಮಾಹುಃ ಪುರುಷಾಧಮಾ
ಶ್ಚ || ಮೋಹೇನ ಕೇಚಿನ್ಮಮ ಸಾಮ್ಯಮಾಹುರ್ಮಾಯಾ ಚ ಶೈವೀ ಖಲು ದು
ರೈವ || ಖದ್ಯೋತೋ ಯದಿ ಚಂಡಭಾನುಸದೃಶಸ್ಸಾವ್ಯೋ ಹರಿಶ್ಶಂಭುನಾ
ಕಾಷ್ಠೋ ಯದಿ ಚಂದನೇನ ಸದೃಶಸ್ಸಾವ್ಯೋಽಹಮೀಶೇನ ತು || ಅಜ್ಞಾನಂ
ವೇದನೇನ ಸದೃಶಂ ಶಕ್ರಸ್ಸಮಶ್ಶೂಲಿನಾ ಕಿಂ ವಕ್ಷ್ಯೇ ಸುರಪುಂಗವಾ ಅಹಮ
ಮೋಹಸ್ಯ ದುಶ್ಚೇಷ್ಟಿತಂ” ಸೂತಗೀತಾಯಾಂ,—ಸೂತಃ, “ಶಿವಸ್ಯಾಜ್ಞಾ
ದ್ವಿಷ್ಣುರ್ಜಾಯತೇ ಮ್ರಿಯತೇಽಪಿ ಚ || ಬ್ರಹ್ಮಾ ಸರ್ವಜಗತ್ಕರ್ತಾ ವಿಷ್ಣುರ್ಲೋ
ಸ್ಯ ಪಾಲಕಃ || ತತ್ರೈವ, “ಹೀನಂ ವಾ ಸದೃಶಂ ವಾ ತು ಹರಿಣಾ ಬ್ರಹ್ಮ
ಹರಂ || ಯೇ ಪಶ್ಯಂತಿ ಸದಾ ತೇ ತು ಪಚ್ಯಂತೇ ನರಕಾರ್ಣವೇ || ಹರಿಬ್ರಹ್ಮಾ
ದೇವೇಭ್ಯಶ್ಶ್ರೇಷ್ಠಂ ಪಶ್ಯಂತಿ ಯೇ ಹರಂ || ತೇ ಮಹಾಘೋರಸಂಸಾರಾನ್ಮು
ತೇ ನಾತ್ರ ಸಂಶಯಃ” ಇತ್ಯಾದಿಪ್ರಸಿದ್ಧಂ.

ಇತಿ ತ್ರಿಮೂರ್ತಿಷು ರುದ್ರಾಧಿಕ್ಯನಿರ್ಣಯವಿಧಿಸ್ಸಪ್ತಮೋಪದೇಶೇ ಷಷ್ಠಸ್ಸಂವಾದ



ಶಿವನೊಡನೆ ನಿತ್ಯಸಮವೇತವಾಗಿರುವ ಮಾಯಾಖ್ಯಶಕ್ತಿಯ ಸಾಮರ್ಥ್ಯವು ಅಪ್ರತಿಹತವಾ
ದೆಂದು ಗೊತ್ತಾಗುತ್ತದೆ. ಎಲೈ ದೇವತೆಗಳೇ ! ಮಿಂಚಿನ ಹುಳವು ಪ್ರಚಂಡಕಿರಣಗಳುಳ್ಳ
ರ್ಯನಿಗೆ ಸಮಾನವಾದರೆ ವಿಷ್ಣುವು ರುದ್ರನಿಗೆ ಸಮಾನನಾಗಬಹುದು. ಕಟ್ಟಿಗೆಯು ಶ್ರೀಗಂ
ಮರಕ್ಕೆ ಸಮಾನವಾದರೆ ನಾನು ರುದ್ರನಿಗೆ ಸಮಾನನಾಗಬಹುದು, ಅಜ್ಞಾನವು ಜ್ಞಾ
ಸಮಾನವಾದರೆ ಇಂದ್ರನು ಶಿವನಿಗೆ ಸಮಾನನಾಗಬಹುದು. ಎಲೈ ದೇವಶ್ರೇಷ್ಠರೇ ! ಅ
ನದ ಕೆಟ್ಟ ಚೇಷ್ಟೆಯನ್ನು ನಾನು ಏನೆಂದು ಹೇಳಲಿ, ಇದು ಆಶ್ಚರ್ಯವು” ಎಂದು ಬ್ರ
ದುಕ್ತವಾಗಿದೆ. ಸೂತಗೀತೆಯಲ್ಲಿ “ಶಿವನ ಆಜ್ಞೆಯಿಂದಲೇ ವಿಷ್ಣುವು ಹುಟ್ಟು ಸಾವುಗಳ
ಭವಿಸುತ್ತಾನೆ, ಬ್ರಹ್ಮನು ಸರ್ವಜಗತ್ಕರ್ತನು, ವಿಷ್ಣುವು ಸರ್ವಜಗತ್ಪಾಲಕನು. ಆಗಿರು
ಎಂದೂ, ಆ ಗೀತೆಯಲ್ಲಿಯೇ —“ರುದ್ರನನ್ನು ಬ್ರಹ್ಮ ವಿಷ್ಣುಗಳೊಡನೆ ಹೀನನನ್ನಾಗಾ
ಸಮಾನನನ್ನಾಗಾದರೂ ತಿಳಿಯತಕ್ಕವರು ನರಕವೆಂಬ ಸಮುದ್ರದಲ್ಲಿ ಯಾವಾಗಲೂ ಬೀ
ಲ್ಪಡುವರು. ಶಿವನನ್ನು ವಿಷ್ಣುಬ್ರಹ್ಮಾದಿ ದೇವತೆಗಳಿಗಿಂತ ಶ್ರೇಷ್ಠನನ್ನಾಗಿ ತಿಳಿಯತಕ್ಕ
ಅತಿಭಯಂಕರವಾದ ಸಂಸಾರದಿಂದ ಬಿಡಲ್ಪಡುವರು. ಈ ವಿಷಯದಲ್ಲಿ ಸಂಶಯವಿಲ್ಲ
ಎಂದು ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ರುದ್ರಾಧಿಕ್ಯವು ಪ್ರಸಿದ್ಧವಾಗಿರುತ್ತದೆ.

ಎಂಬಿಲ್ಲಿಗೆ ತ್ರಿಮೂರ್ತಿಗಳಲ್ಲಿ ರುದ್ರಾಧಿಕ್ಯನಿರ್ಣಯವಿಧಿಯನ್ನು ಹೇಳುವ ಏಳನೆಯ
ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ಶ್ರೀಃ.

## ದ್ವಿಮೂರ್ತಿಮಧ್ಯೇನಾರಾಯಣಾದ್ರುದ್ರಾಧಿಕ್ಯನಿರ್ಣಯಃ.

ಜೋ—“ ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ || ಶಿವಸ್ಯ ಹೃದಯಂ ವಿಷ್ಣುರ್ವಿಷ್ಣೋಶ್ಚ ಹೃದಯಂ ಶಿವಃ ”—“ ಯಥಾ ಶಿವಮಯೋ ವಿಷ್ಣುಸ್ತಥಾ ವಿಷ್ಣುಮಯಶ್ಶಿವಃ ” ಇತಿ ಶ್ರುತಿಸ್ಮೃತಿವಾಕ್ಯಾತ್, ಸ್ವಾಮಿನ್ ಶ್ರೀರೇಣುಕಗಣೇಶ ! ಕಥಂ ಹರಿಹರಯೋರ್ಭೇದಃ ?

ರೇ—ಭೋ ಜೋಳ ! ತ್ವದುಕ್ತಖಿಲಶ್ರುತಿಸ್ಮೃತಿವಾಕ್ಯಯೋರರ್ಥಶ್ಶ್ರೂಯತಾಂ, ಬೋಧಾಯನಮುನಿನಾ,—“ ಪಾದೇ ವಿಷ್ಣುವಿಲೋಚನಂ ಕಟಿತಟೇ ನೃಸಿಹ್ಮಾಜಿನಂ ಹಾರೇ ಕೂರ್ಮಶಿರಃ ಕರೇ ತು ವಿಲಸತ್ಕಂಕಾಳನಾಮಾಯುಧಂ || ಶೂಲಾಗ್ರೇ ಶವಕೇಶವೋ ಹರಿಶಿರೋ ಮಾಲಾ ತು ಮೌಳೌ ಸದಾ ತಸ್ಮಾದ್ವಿಷ್ಣುಮಯಶ್ಶಿವಸ್ಸ ತು ಪರಂ ವ್ಯಕ್ತಂ ಪುರಾಣೋದಿತಂ ” ಅಯಂ “ ಶಿವಾಯ ವಿಷ್ಣುರೂಪಾಯೇತಿ ” ಮಂತ್ರಸ್ಯಾರ್ಥಃ. ತೇನೈವ,—“ ಫಾಲೇ ಭೂತಿವಿಲೇಪನಂ ಕರತಲೇ ಲಿಂಗಂ ಹೃದೀಶಸ್ಮೃತಿಂ ರುದ್ರಾಕ್ಷಾವಲಯಂ ಗಳೇ ಶಿರಸಿ ವೈ ಬಿಭ್ರಜ್ಜಟಾಮಂಡ

---

ದ್ವಿಮೂರ್ತಿಗಳ ಮಧ್ಯದಲ್ಲಿ ವಿಷ್ಣುವಿಗಿಂತ ರುದ್ರಾಧಿಕ್ಯನಿರ್ಣಯವು.

ಜೋ—“ವಿಷ್ಣುವು ಶಿವನ ಹೃದಯವಾಗಿರುವನು. ಶಿವನು ವಿಷ್ಣುವಿನ ಹೃದಯವಾಗಿರುವನು. ಈ ಕಾರಣದಿಂದ ವಿಷ್ಣುರೂಪನಾದ ಶಿವನಿಗೋಸ್ಕರ ನಮಸ್ಕಾರವು. ಶಿವರೂಪನಾದ ವಿಷ್ಣುವಿಗೋಸ್ಕರ ನಮಸ್ಕಾರವು. ವಿಷ್ಣುವು ಶಿವಮಯನಾಗಿರುವಂತೆ ಶಿವನು ವಿಷ್ಣುಮಯನಾಗಿರುವನು„ ಎಂದು ಶ್ರುತಿ ಸ್ಮೃತಿ ವಾಕ್ಯಗಳು ಹೇಳುತ್ತಿರುವುದರಿಂದ, ಸ್ವಾಮಿಯಾದ ರೇಣುಕಗಣೇಶನೇ ! ಹರಿಹರರಿಗೆ ಭೇದವನ್ನು ಹೇಳುವುದು ಹೇಗೆ?

ರೇ—ಎಲೈ ಜೋಳನೇ ! ನಿನ್ನಿಂದ ಹೇಳಲ್ಪಟ್ಟ ಖಿಲಶ್ರುತಿಸ್ಮೃತಿವಾಕ್ಯಗಳಿಗೆ ಅರ್ಥವನ್ನು ಕೇಳು; ಬೋಧಾಯನಮುನಿಯಿಂದ—“ಯಾವನ ಪಾದದಲ್ಲಿ ವಿಷ್ಣುವಿನ ನೇತ್ರವು, ಯಾವನ ಹಾರದಲ್ಲಿ ಕೂರ್ಮಾವತಾರಿಯಾದ ವಿಷ್ಣುವಿನ ತಲೆಯು, ಯಾವನ ಕೈಯಲ್ಲಿ ಪ್ರಕಾಶಮಾನವಾದ ಕಂಕಾಳವೆಂಬ ಆಯುಧವು, ಯಾವನ ಸೊಂಟದಲ್ಲಿ ನರಸಿಹ್ಮನ ಚರ್ಮವು. ಯಾವನ ಶೂಲದ ತುದಿಯಲ್ಲಿ ಶವವಾದ ವಿಷ್ಣುವಿನ ಶರೀರವು, ಯಾವನ ಮಸ್ತಕದಲ್ಲಿ ವಿಷ್ಣುವಿನ ತಲೆಗಳ ಮಾಲೆಯು ಯಾವಾಗಲೂ ಇರುತ್ತದೆಯೋ, ಆ ಕಾರಣದಿಂದ ಆ ಶಿವನು ವಿಷ್ಣುಮಯನು ಎಂದು ಪುರಾಣಗಳಲ್ಲಿ ಹೇಳಲ್ಪಟ್ಟಿರುವುದು ಅತಿಸ್ಪಷ್ಟವಾಗಿದೆ„ ಎಂದು ಹೇಳಲ್ಪಟ್ಟದೆ. ಈ ಬೋಧಾಯನವಾಕ್ಯವು “ಶಿವಾಯ ವಿಷ್ಣುರೂಪಾಯ„ ಎಂಬುದರ ಅರ್ಥವು. ಆ ಬೋಧಾಯನ ವಾಕ್ಯದಲ್ಲಿಯೇ—“ಹಣೆಯಲ್ಲಿ ಶಿವಮಂತ್ರಸಂಸ್ಕೃತವಾದ ಭಸ್ಮವನ್ನು, ಕರಪೀಠದಲ್ಲಿ ಶಿವಲಿಂಗವನ್ನು, ಮನಸ್ಸಿನಲ್ಲಿ ಶಿವಧ್ಯಾನವನ್ನು, ಕೊರಳಲ್ಲಿ ರುದ್ರಾಕ್ಷಮಾಲಿಕೆಯನ್ನು,

ನಂ || ಜಿಹ್ವಾಗ್ರೇ ಶಿವಮಂತ್ರಮಿತ್ಥಮನಿಶಂ ರಾತ್ರೌ ದಿವಾಕೀರ್ತನಂ ಕುರ್ವಣ ಶೈವಮುನಿರ್ಹರಿಸ್ಸ್ವಯಮಿತಿ ವ್ಯಕ್ತಂ ಪುರಾಣೋದಿತಂ'' ಇತಿ. ಅಯಂ "ಶಿವರೂಪಾಯ ವಿಷ್ಣವೇ'' ಇತ್ಯಸ್ಯಾರ್ಥಃ. ಭೋ ಚೋಳ! ಇತ್ಥಂ ಬಹಿಸ್ಸ್ವರೂಪೇ ಹರಿಹರಯೋರ್ಭೇದಃ, ತಯೋರಂತಸ್ಸ್ವರೂಪೇ ಭೇದಶ್ಶ್ರೂಯತಾಂ, ಪುರಾ ಹರಿಶ್ಚಂದ್ರಮಹಾರಾಜಸಭಾಯಾಂ ಶಿವಶರ್ಮವಿಷ್ಣುಶರ್ಮನಾಮಾನೌ ಹರಹರಿಭಕ್ತೌ "ಮದ್ದೇವೋಽಯಮಧಿಕಃ'' "ಮದ್ದೇವೋಽಯಮಧಿಕಃ'' ಇತಿ ಪರಸ್ಪರಂ ವಿವದಮಾನೌ, ನ್ಯಾಯಂ ಸರ್ವಶಾಸ್ತ್ರವಿದ್ಭ್ಯೋ ವಿದ್ವದ್ಭ್ಯಶ್ಶ್ರವತುಃ, ತೇ ನ್ಯಾಯಶ್ಲೋಕಾಃ ಕ್ರಮೇಣ ಶ್ರೂಯಾ ಸಮ್ಯಕ್ಛ್ರೂಯತಾಂ, ಶಿವಧರ್ಮೇ,—"ತೃಣಗ್ರಾಹೀಂದ್ರನೀಲಸ್ಯ ವಜ್ರಸ್ಯಾಕ್ಷಯಸಂಪದಃ || ಯಥಾ ಭೇದಸ್ತಥಾ ಕೃಷ್ಣಸೋಮಶೇಖರಯೋರ್ಭವೇತ್ ||೧|| ಅಧೋಮುಖಕೃಪೀಟಸ್ಯ ಸೋರ್ಧ್ವಜ್ವಾಲಾಯುಜೋ ಯಥಾ || ಭೇದಃ ಕೃಪೀಟಯೋನೇಸ್ಸ್ಯಾತ್ತಥಾ ಪದ್ಮಾಕ್ಷಭರ್ಗಯೋಃ ||೨|| ಊರ್ಧ್ವರಂಧ್ರಭಗಸ್ಯೈವ ತಿರ್ಯಗ್ರಂಧ್ರಮುಖಸ್ಯ ಚ|| ಯಥಾಭೇದಃ ಕೇಶವಾಗ್ನಿರೇತಸೋಸ್ತು ತಥಾ ಭವೇತ್||೩|| ಸುರಾಯಾಃ ಪೂತಿಗಂಧಾಯಾಸ್ಸುಗಂಧಸ್ಯಾಮೃತಸ್ಯ ಚ || ಯಥಾ ಭೇದಸ್ತಥಾ ನಾರಾಯಣೇಶಂಕರಯೋರ್ಭವೇತ್ ||೪|| ಪೂಗಸ್ಯ ಚೈಕನೇತ್ರಸ್ಯ ತ್ರಿನೇತ್ರಸ್ಯ ಯ

---

ಮಸ್ತಕದಲ್ಲಿ ಜಟಾಪಟಲವನ್ನು, ಜಿಹ್ವಾಗ್ರದಲ್ಲಿ ಯಾವಾಗಲೂ ಶಿವಮಂತ್ರಜಪವನ್ನು, ಹಗಲುರಾತ್ರಿಗಳಲ್ಲಿ ಶಿವನಾಮಕೀರ್ತನವನ್ನು ಮಾಡುತ್ತಿರುವ ಹರಿಯು ತಾನು ಶಿವಸ್ವರೂಪನಾಗಿರುತ್ತಾನೆಂದು ಸ್ಪಷ್ಟವಾಗಿ ಪುರಾಣೋಕ್ತವಾಗಿದೆ,, ಎಂದು ಹೇಳಲ್ಪಟ್ಟಿದೆ. ಇದು "ಶಿವರೂಪಾಯ ವಿಷ್ಣವೇ,, ಎಂಬುದರ ಅರ್ಥವು. ಎಲೈ ಚೋಳನೇ ! ಈ ರೀತಿಯಾಗಿ ಹರಿಹರರ ಬಹಿಸ್ಸ್ವರೂಪದಲ್ಲಿ ಭೇದವಿರುವುದು. ಇನ್ನು ಹರಿಹರರ ಅಂತಸ್ಸ್ವರೂಪದಲ್ಲಿರುವ ಭೇದವನ್ನು ಕೇಳು; ಪೂರ್ವದಲ್ಲಿ ಹರಿಶ್ಚಂದ್ರಮಹಾರಾಜನ ಸಭೆಯಲ್ಲಿ ಶಿವಶರ್ಮನೆಂಬ ಶಿವಭಕ್ತನೂ, ವಿಷ್ಣುಶರ್ಮನೆಂಬ ವಿಷ್ಣುಭಕ್ತನೂ ಇಬ್ಬರೂ ನನ್ನ ದೇವನಧಿಕನು, ನನ್ನ ದೇವನಧಿಕನೆಂದು ಒಬ್ಬರಿಗೊಬ್ಬರು ಜಗಳವಾಡುತ್ತ ಸಕಲ ಶಾಸ್ತ್ರಗಳನ್ನು ತಿಳಿದ ವಿದ್ವಾಂಸರದೆಸೆಯಿಂದ ನ್ಯಾಯವನ್ನು ಕೇಳಿದರು. ಆ ನ್ಯಾಯಶ್ಲೋಕಗಳನ್ನು ಕ್ರಮವಾಗಿ ಕೇಳು; ಶಿವಧರ್ಮದಲ್ಲಿ—"ತೃಣವ [illegible] ಕೆಯನ್ನು ಹೊಂದುವ ಇಂದ್ರನೀಲಕ್ಕೂ, ಅಧಿಕಸಂಪತ್ತನ್ನು ಕೊಡುವ ವಜ್ರಕ್ಕೂ ಭೇದವಿರುವಂತೆ, ಕೃಷ್ಣನಿಗೂ ಚಂದ್ರಶೇಖರನಿಗೂ ಭೇದವಿರುವುದು. ಅಧೋಮುಖಕೃಪೀಟನಿಗೂ ಊರ್ಧ್ವಮುಖವಾಗಿ ಪ್ರಸರಿಸುವ ಜ್ವಾಲೆಗಳುಳ್ಳ ಅಗ್ನಿಗೂ ಭೇದವಿರುವಂತೆ ಹರಿಹರರಿಗೆ ಭೇದವಿರುವುದು. ಊರ್ಧ್ವರಂಧ್ರಭಗನಿಗೂ ತಿರ್ಯಗ್ರಂಧ್ರಮುಖವುಳ್ಳವನಿಗೂ ಭೇದವಿರುವಂತೆ ಕೇಶವನಿಗೂ ಅಗ್ನಿರೇತಸ್ಕನಾದ ಶಿವನಿಗೂ ಭೇದವಿರುವುದು. ದುರ್ಗಂಧಪೂರಿತವಾದ ಮದ್ಯಕ್ಕೂ ಸುಗಂಧಪೂರಿತವಾದ ಅಮೃತಕ್ಕೂ ಭೇದವಿರುವಂತೆ ನಾರಾಯಣನಿಗೂ ಶಂಕರನಿಗೂ ಭೇದವಿರುವ

ಥಾ ಭವೇತ್ ‖ ಭೇದಸ್ತು ನಾಳಿಕೇರಸ್ಯ ತಥಾ ಕಂಜಾಕ್ಷತ್ರ್ಯಕ್ಷಯೋಃ ‖೫‖ ಶ್ರೀ ತುಲಸ್ಯಸಿಲತಯೋಸ್ಸುಸ್ಪರ್ಶಾಸ್ಪರ್ಶಯೋರ್ಭಿದಾ ‖ ಯಥಾ ಭೇದಸ್ತಥಾ ಪೀತಾಂ ಬರಸರ್ಪವಿಭೂಷಯೋಃ‖೬‖ ಯಥಾ ಚಕ್ರಕರಸ್ಯಸ್ಯಾದ್ಭೇದಶ್ಚಂದ್ರಕರಸ್ಯ ಚ‖ ತಥಾ ಭೇದಶ್ಚಕ್ರಪಾಣಿಚಂದ್ರಶೇಖರಯೋರ್ಭವೇತ್ ‖೭‖ ಪಾಷಾಣಜನ್ಮನಃ ಕೃಷ್ಣಾಯ ಸಶ್ಶ್ರೀಕನಕಸ್ಯ ಚ ‖ ಯಥಾಭೇದಸ್ತಥಾ ಕೃಷ್ಣಹಿರಣ್ಯವಪುಷೋರ್ಭವೇತ್‖೮‖ ಇತಿ. ಭೋ ಚೋಳ ! ಶ್ರುತಿಪುರಾಣವಾಕ್ಯಾನ್ಯಪಿ ಕ್ರಮೇಣ ಶ್ರೂಯತಾಂ, ನಾರಾಯಣೋಪನಿಷದಿ,—" ವಿಶ್ವಂ ನಾರಾಯಣಂ ಹರಿಂ "—" ವಿಶ್ವಾಧಿಕೋ ರುದ್ರೋ ಮಹರ್ಷಿಃ " ಇತಿ, ಋಗ್ವೇದೇ,—" ಯಜ್ಞೋ ವೈ ವಿಷ್ಣುಃ "—"ಗಾಥಪತಿಂ ಮೇಧಪತಿಂ ರುದ್ರಂ " ಯಜುರ್ವೇದೇ,—"ವಿಷ್ಣುರ್ಯಜ್ಞಃ"—"ಆವೋ ರಾಜಾನಮಧ್ವರಸ್ಯ ರುದ್ರಂ" ಯಜುಸ್ಸಂಹಿತಾಯಾಶ್ಶಾಖಾಂತರೇ,—" ವಾಸುದೇವಃ ಪರಾಪ್ರಕೃತಿಃ " ಬೃಹದಾರಣ್ಯಕೇ,—"ವಿಷ್ಣುರ್ಯೋನಿಂ ಕಲ್ಪಯತು" ಅಥರ್ವಶಿರಸಿ,—"ಯೋ ಯೋನಿಂ ಯೋನಿಮಧಿತಿಷ್ಠತ್ಯೇಕಃ" ಇತಿ. ಸ್ಕಾಂದೇ ಶರಭಾಧ್ಯಾ

---

ದು ಒಂದುಕಣ್ಣುಳ್ಳ ಅಡಿಕೆಗೂ ಮೂರುಕಣ್ಣುಗಳುಳ್ಳ ತೆಂಗಿನಕಾಯಿಗೂ ಭೇದವಿರುವಂತೆ ಕಮಲಾಕ್ಷನಾದ ವಿಷ್ಣುವಿಗೂ ಸೂರ್ಯಚಂದ್ರಾಗ್ನಿಲೋಚನನಾದ ಶಿವನಿಗೂ ಭೇದವಿರುವುದು. ಸುಲಭವಾಗಿ ಮುಟ್ಟುವುದಕ್ಕೆ ಯೋಗ್ಯವಾದ ತುಲಸಿಗೂ ಸುಲಭವಾಗಿ ಮುಟ್ಟುವುದಕ್ಕಾಗದ ಕತ್ತಿಗೂ ಭೇದವಿರುವಂತೆ ಪೀತಾಂಬರಧಾರಿಯಾಗಿರುವ ವಿಷ್ಣುವಿಗೂ ಸರ್ಪಾಭರಣನಾಗಿರುವ ಶಿವನಿಗೂ ಭೇದವಿರುವುದು. ಹಸ್ತದಲ್ಲಿ ಚಕ್ರಾಯುಧವನ್ನು ಹಿಡಿದವನಿಗೂ ಹಸ್ತದಲ್ಲಿ ಚಂದ್ರನನ್ನು ಹಿಡಿದವನಿಗೂ ಭೇದವಿರುವಂತೆ ಚಕ್ರಪಾಣಿಯಾದ ವಿಷ್ಣುವಿಗೂ ಚಂದ್ರಶೇಖರನಾದ ಶಿವನಿಗೂ ಭೇದವಿರುವುದು. ಕಬ್ಬಿಣಕ್ಕೂ ಚಿನ್ನಕ್ಕೂ ಭೇದವಿರುವಂತೆ ಕಪ್ಪಾದ ದೇಹವುಳ್ಳ ವಿಷ್ಣುವಿಗೂ ಸುವರ್ಣದಂತೆ ಪ್ರಕಾಶಮಾನವಾದ ದೇಹವುಳ್ಳ ಶಿವನಿಗೂ ಭೇದವಿರುವುದು,, ಎಂದು ಹೇಳಲ್ಪಟ್ಟಿದೆ. ಎಲೈ ಚೋಳನೇ! ಶ್ರುತಿಪುರಾಣವಾಕ್ಯಗಳನ್ನು ಕೂಡ ಕ್ರಮದಿಂದ ಕೇಳು; ನಾರಾಯಣೋಪನಿಷತ್ತಿನಲ್ಲಿ—"ವಿಶ್ವರೂಪನಾದ ನಾರಾಯಣಶಬ್ದವಾಚ್ಯನಾದ ಹರಿಯನ್ನು,, "ರುದ್ರಶಬ್ದವಾಚ್ಯನಾದ ಶಿವನು ಮಹರ್ಷಿಯಾಗಿರುವುದರಿಂದ ವಿಶ್ವಾಧಿಕನು,, ಎಂದೂ, ಋಗ್ವೇದದಲ್ಲಿ—"ವಿಷ್ಣುವೇ ಯಜ್ಞಸ್ವರೂಪನು,, "ಗಾಥಪತಿಯೂ ಮೇಧಪತಿಯೂ ಆದ ರುದ್ರನನ್ನು,, ಯಜುರ್ವೇದದಲ್ಲಿ—"ವಿಷ್ಣುವು ಯಜ್ಞಸ್ವರೂಪನು,, —"ಯಜ್ಞಗಳಿಗೆ ರಾಜನಾದ ರುದ್ರನನ್ನು,, ಯಜುಸ್ಸಂಹಿತೆಯ ಭಿನ್ನಶಾಖೆಯಲ್ಲಿ—"ವಾಸುದೇವನೇ ಪರೆಯೆನಿಸುವ ಪ್ರಕೃತಿಯು,, ಎಂದೂ, ಬೃಹದಾರಣ್ಯಕದಲ್ಲಿ—"ವಿಷ್ಣುವು ಜಗದುತ್ಪತ್ತಿಗೆ ಕಾರಣವನ್ನು ಕಲ್ಪಿಸಲಿ ಎಂದೂ, ಅಥರ್ವಶಿರಸ್ಸಿನಲ್ಲಿ ಅದೇ ಅರ್ಥವು ಹೇಳಲ್ಪಟ್ಟಿದೆ. ಸ್ಕಾಂದದಲ್ಲಿರುವ ಶರಭಾಧ್ಯಾ

ಯೇ,—ನರಹರಿಂಪ್ರತಿ ಶರಭರುದ್ರವಾಕ್ಯಂ, "ಪ್ರಕೃತಿಸ್ತ್ವಂ ಪುಮಾನ್ರುದ್ರಸ್ತ್ವಯಿ ತದ್ವೀರ್ಯಮಾಹಿತಂ || ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ" ಇತಿ. ಆದಿತ್ಯಪುರಾಣೇ,—ನಾರಾಯಣಂಪ್ರತಿ ಶಿವವಾಕ್ಯಂ, "ಪ್ರಕೃತಿಸ್ತ್ವಂ ಸುರಶ್ರೇಷ್ಠ ಪುರುಷೋಽಹಂ ನ ಸಂಶಯಃ || ತ್ವಮೇವ ಮಾಯಾ ವಿಶ್ವಸ್ಯ ಮಾಯ್ಯಹಂ ಪರಮಾರ್ಥತಃ" ಇತ್ಯಾದಿಭಿರ್ಹರಿಹರಯೋರ್ಭೇದೋ ನಿಶ್ಚಿತವ್ಯಃ.

ಇತಿ ದ್ವಿಮೂರ್ತಿಮಧ್ಯೇ ನಾರಾಯಣಾದ್ರುದ್ರಾಧಿಕ್ಯನಿರ್ಣಯವಿಧಿಸ್ಸಪ್ತಮೋಪದೇಶೇ ಸಪ್ತಮಸ್ಸಂವಾದಃ.

ಶ್ರೀಃ

## ರುದ್ರಸ್ಯೈಕತ್ವಸಂಖ್ಯಾನಿರ್ಣಯಃ.

ಚೋ—"ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿಭೂಮ್ಯಾಂ" ಇತಿ ಯಜುಶ್ಶ್ರುತೇಃ, "ರುದ್ರಾಶ್ಚ ಗಣದೇವತಾಃ" ಇತ್ಯಮರೋಕ್ತೇಶ್ಚ, ಹೇ ರೇಣುಕಗಣೇಶ! ರುದ್ರೈಕತ್ವಂ ವಕ್ತುಂ ನ ಶಕ್ಯತೇ.

---

ಯದಲ್ಲಿ—"ನೀನು ಪ್ರಕೃತಿಯೆನಿಸಿರುತ್ತೀಯೆ. ರುದ್ರನು ಪುರುಷನೆನಿಸಿರುತ್ತಾನೆ. ಆ ಕಾರಣದಿಂದ ಆವನ ವೀರ್ಯವು ನಿನ್ನಲ್ಲಿ ಬಿಡಲ್ಪಟ್ಟಿತು. ಈ ಕಾರಣದಿಂದ ನಿನ್ನ ನಾಭಿಕಮಲದಡೆಸೆಯಿಂದ ಐದುಮುಖಗಳುಳ್ಳ ಬ್ರಹ್ಮನು ಹುಟ್ಟಿದನು" ಎಂದು ಶರಭೇಶ್ವರನಿಂದ ನರಹರಿಯನ್ನು ಕುರಿತು ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ—"ಎಲೈ ದೇವತೆಗಳಲ್ಲಿ ಶ್ರೇಷ್ಠನಾದ ವಿಷ್ಣುವೇ! ನೀನೇ ನನ್ನ ಪ್ರಕೃತಿಯು, ನಾನೇ ನಿನ್ನ ಪುರುಷನು, ಈ ವಿಷಯದಲ್ಲಿ ಸಂದೇಹವಿಲ್ಲವು. ವಿಶ್ವರೂಪನಾದ ನನಗೆ ನಿಜವಾಗಿಯೂ ನೀನೇ ಮಾಯೆ, ನಾನೇ ಮಾಯೆಯುಳ್ಳವನು" ಎಂದು ಶರಭೇಶ್ವರನಾದ ಶಿವನಿಂದ ನರಹರಿಯಾದ ವಿಷ್ಣುವನ್ನು ಕುರಿತು ನಿರೂಪಿತವಾಗಿದೆ. ಇತ್ಯಾದಿ ಪ್ರಮಾಣವಚನಗಳಿರುವುದರಿಂದ ಹರಿಹರರಿಗಿರತಕ್ಕ ಭೇದವನ್ನು ನಿಶ್ಚೈಸತಕ್ಕದ್ದು.

ಎಂಬಲ್ಲಿಗೆ ದ್ವಿಮೂರ್ತಿಮಧ್ಯದಲ್ಲಿ ನಾರಾಯಣನಿಗಿಂತಲೂ ರುದ್ರಾಧಿಕ್ಯನಿರ್ಣಯವಿಧಿಯನ್ನು ಹೇಳುವ ಏಳನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.

### ರುದ್ರನಿಗೆ ಏಕತ್ವಸಂಖ್ಯಾನಿರ್ಣಯವು.

ಚೋ—ಎಲೈ ರೇಣುಕಗಣೇಶ್ವರನೇ. "ರುದ್ರರು ಅನೇಕರಿರುವರು" ಎಂದು ಹೇಳುತ್ತ ಯಜುರ್ವೇದಶ್ರುತಿಯೂ, ಅಮರವಾಕ್ಯವೂ ಇರುವುದರಿಂದ ರುದ್ರನೊಬ್ಬನೇ ಎಂದು ಹೇಳುವದಕ್ಕಾಗುವುದಿಲ್ಲವು.

ರೇ—ಹೇ ಚೋಳ ! ಸತ್ಸ್ವಪಿ ರುದ್ರಬಾಹುಳ್ಯೇ ಅಸಂಖ್ಯಾಕಾನಾಂ ರುದ್ರಾಣಾಮಧೀಶ್ವರೋ ಆದಿರುದ್ರಸ್ತ್ವೇಕ ಏವೇತಿ ಸರ್ವಶ್ರುತಿಷು ಪ್ರಸಿದ್ಧಃ, ತದೇವ ಶ್ರೂಯತಾಂ, ಅಥರ್ವಶಿರಸಿ,—“ ದೇವಾ ಹ ವೈ ಸ್ವರ್ಗಂ ಲೋಕಮಗಮಂಸ್ತೇ ದೇವಾ ರುದ್ರಮಪೃಚ್ಛನ್ | ಕೋ ಭವಾನಿತಿ ಸೋಽಬ್ರವೀತ್ ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ ಸೋಽಂತರಾದಂತರಂ ಪ್ರಾವಿಶತ್ ” ಲೈಂಗೇ,—“ ದೇವಾ ಹ್ಯಪೃಚ್ಛಂಸ್ತಂ ದೇವಂ ಕೋ ಭವಾನಿತಿ ಶಂಕರಂ || ಅಬ್ರವೀದ್ಭಗವಾನ್ರುದ್ರೋ ಹ್ಯಹಮೇಕಃ ಪುರಾತನಃ || ಆಸಂ ಪ್ರಥಮಮೇವಾಹಂ ವರ್ತಾಮಿ ಚ ಸುರೋತ್ತಮಾಃ || ಭವಿಷ್ಯಾಮಿ ಚ ಲೋಕೇಽಸ್ಮಿನ್ಮತ್ತೋ ನಾನ್ಯಃ ಕುತಶ್ಚನ || ವ್ಯತಿರಿಕ್ತಂ ನ ಮತ್ತೋಽಸ್ತಿ ನಾನ್ಯತ್ಕಿಂಚಿತ್ಸುರೋತ್ತಮಾಃ ” ಇತ್ಯಾದಿ. ಸ್ಕಾಂದೇ ಶಿವಮಾಹಾತ್ಮ್ಯಖಂಡೇ,—“ ಅದೃಷ್ಟಪೂರ್ವಂ ತಂ ದೃಷ್ಟ್ವಾ ದೇವಾ ವಿಷ್ಣುಪುರೋಗಮಾಃ || ಪ್ರಣಿಪತ್ಯ ಮಹಾದೇವಮಪೃಚ್ಛನ್ಕೋ ಭವಾನಿತಿ || ಸೋಽಬ್ರವೀದ್ಭಗವಾನ್ರುದ್ರಃ ಪಶೂನಾಂ ಪತಿರೀಶ್ವರಃ || ಸಂವರ್ತಾಮಿ ಭವಿಷ್ಯಾಮಿ ನ ಮತ್ತೋನ್ಯೋಽಸ್ತಿ ಕಶ್ಚನ || ಮನ್ಮಾಯಾಶಕ್ತಿಸಂ

---

ರೇ — ಎಲೈ ಚೋಳನೇ ! ಅನೇಕಮಂದಿ ರುದ್ರರಿರುತ್ತಾರೆಯಾದಾಗ್ಯೂ ಅಸಂಖ್ಯಾಕರಾದ ರುದ್ರರಿಗೆ ಒಡೆಯನಾದ ಆದಿರುದ್ರನು ಒಬ್ಬನೇ ಎಂದು ಸಮಸ್ತ ಶ್ರುತಿಗಳಲ್ಲಿ ಪ್ರಸಿದ್ಧವಾಗಿರುವುದನ್ನು ಕೇಳು; ಅಥರ್ವಶಿರಸ್ಸಿನಲ್ಲಿ—“ಕೈಲಾಸಕ್ಕೆ ಹೋಗಿ ಆದಿರುದ್ರನನ್ನು ನೀನು ಯಾವನೆಂದು ಕೇಳಿದ ದೇವತೆಗಳನ್ನು ಕುರಿತು, ಆದಿರುದ್ರನು—ಅದ್ವಿತೀಯನಾದ ನಾನು—ಜಗತ್ತು ಹುಟ್ಟುವುದಕ್ಕಿಂತ ಮೊದಲೂ ಇದ್ದೆನು, ಈಗಲೂ ಇರುತ್ತೇನೆ, ಮುಂದೆಯೂ ಇರುವೆನು, ನನಗಿಂತ ಬೇರೆಯಾದವನೊಬ್ಬನೂ ಇಲ್ಲವು. ಎಂದು ನಿರೂಪಿಸಿ ಮರೆಯಾದನು;, ಎಂದುಕ್ತವಾಗಿದೆ. ಲಿಂಗಪುರಾಣದಲ್ಲಿ—“ದೇವತೆಗಳು; ಶಿವನನ್ನು ನೀನಾವನೆಂದು ಕೇಳಿದರು. ಭಗವಂತನಾದ ರುದ್ರನು ಎಲೈ ದೇವೋತ್ತಮರೇ ! ಅನಾದಿಯೂ, ಅದ್ವಿತೀಯನೂ ಆಗಿರುವ ನಾನು ಮೊದಲೂ ಇದ್ದೆ, ಈಗಲೂ ಇದ್ದೇನೆ, ಮುಂದೆಯೂ ಇರುತ್ತೇನೆ, ನನಗಿಂತ ಬೇರೊಬ್ಬ ಅಧಿಕನು ಈಲೋಕದಲ್ಲೂ ಬೇರೆಲೋಕದಲ್ಲೂ ಇಲ್ಲವು. ನನಗಿಂತ ವ್ಯತಿರಿಕ್ತವಾದುದ್ಯಾವುದೂ ಸ್ವಲ್ಪವಾದರೂ ಇಲ್ಲವು.” ಇದು ಮೊದಲಾದುದು ಹೇಳಲ್ಪಟ್ಟಿದೆ. ಸ್ಕಾಂದದಲ್ಲಿ ಶಿವಮಾಹಾತ್ಮ್ಯಖಂಡದಲ್ಲಿ—“ವಿಷ್ಣು ಮೊದಲಾದ ದೇವತೆಗಳು—ಪೂರ್ವದಲ್ಲಿ ತಮ್ಮಿಂದ ನೋಡಲ್ಪಡದವನಾದ ಆ ಮಹಾದೇವನನ್ನು ನಮಿಸಿ, ನೀನು ಯಾವನು ಎಂದು ಪ್ರಶ್ನೆಮಾಡಿದರು. ಷಡ್ಗುಣೈಶ್ವರ್ಯಸಂಪನ್ನನೂ, ಪಶುಪತಿಯೂ, ಈಶ್ವರನೂ ಆದ ಆ ರುದ್ರನು—ಈಗಲೂ ಇರುತ್ತೇನೆ, ಮುಂದೆಯೂ ಇರುವೆನು, ನನ್ನ ದೆಸೆಯಿಂದ ಬೇರೆಯಾದ ಶ್ರೇಷ್ಠನಾವನೂ ಇಲ್ಲವು. ಸ್ಥಾವರ ಜಂಗಮಾತ್ಮಕವಾದ ಸಕಲ ಪ್ರಪಂಚವು ನನ್ನ ಮಾಯಾಶಕ್ತಿಯಿಂದ ವ್ಯಾಪ್ತವಾಗಿದೆ. ಎಂದು ಹೇಳಿ,

ಕ್ಲೃಪ್ತಂ ಜಗತ್ಸರ್ವಂ ಚರಾಚರಂ || ಇತ್ಯುಕ್ತ್ವಾ ಭಗವಾನ್ರುದ್ರಸ್ಸಂಪೂರ್ಣರೂಪಮಾವಿಶತ್ '' ಆದಿತ್ಯಪುರಾಣೇ,—" ಆತ್ಮಭೂತಾನ್ಮಹಾದೇವಾಲ್ಲೀಲಾವಿಗ್ರಹರೂಪಿಣಃ || ಆದಿಸರ್ಗೇ ಸಮುದ್ಭೂತಾ ಬ್ರಹ್ಮವಿಷ್ಣ್ವಾದಯಸ್ಸುರಾಃ|| ಪೃಷ್ಟೋ ಬ್ರಹ್ಮಾದಿಭಿರ್ದೇವೈಃ ಕಸ್ತ್ವಂ ದೇವ ಇತಿ ಪ್ರಭುಃ || ಅಬ್ರವೀದಹಮೇವೈಕೋ ನಾನ್ಯಃ ಕಶ್ಚಿದಿತಿ ಶ್ರುತಿಃ '' ಇತ್ಯಾದಿವಚನಜಾಲಂ ಸುಪ್ರಸಿದ್ಧಂ.

ಇತಿ ರುದ್ರಸ್ಯೈಕತ್ವ ಸಂಖ್ಯಾನಿರ್ಣಯಸ್ಸಪ್ತಮೋಪದೇಶೇ ಅಷ್ಟಮಸ್ಸಂವಾದಃ.



ಶ್ರೀಃ.

## ರುದ್ರಸ್ಯವಿಶ್ವಾಧಿಕತ್ವ ನಿರ್ಣಯವಿಧಿಃ.

ರೇ—ಭೋ ಚೋಳ! ತಸ್ಯ ರುದ್ರಸ್ಯ ಸರ್ವಶ್ರುತಿಪ್ರಸಿದ್ಧವಿಶ್ವಾಧಿಕತ್ವಂ ಶ್ರೂಯತಾಂ, ಶ್ವೇತಾಶ್ವತರೋಪನಿಷದಿ,—" ವಿಶ್ವಾಧಿಕೋ ರುದ್ರೋ ಮಹರ್ಷಿಃ | ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು '' ಇತಿ. ಮಾನವಪುರಾಣೇ,—" ರುದ್ರಂ ವಿಶ್ವಾಧಿಕಂ ಸಾಕ್ಷಾನ್ಮ

---

ತನ್ನ ಸಂಪೂರ್ಣರೂಪವನ್ನು ಹೊಂದಿದನು,, ಎಂದು ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ—"ಸಕಲ ಜೀವರಿಗೆ ಚೈತನ್ಯರೂಪನೂ, ಚಂದ್ರಶೇಖರತ್ವಾದಿ ಲೀಲಾಮೂರ್ತಿಗಳನ್ನು ಧರಿಸಿದವನೂ ಆದ ಮಹಾದೇವನದೆಸೆಯಿಂದ ಪ್ರಥಮಸೃಷ್ಟಿಕಾಲದಲ್ಲಿ ಬ್ರಹ್ಮವಿಷ್ಣ್ವಾದಿ ದೇವತೆಗಳು ಹುಟ್ಟಿದರು. ಬ್ರಹ್ಮಾದಿದೇವತೆಗಳಿಂದ "ನೀನು ಯಾವನು,, ಎಂದು ಕೇಳಲ್ಪಟ್ಟ ಪ್ರಭುವಾದ ಶಿವನು—ನಾನೊಬ್ಬನೇ ನನಗಿಂತ ಅನ್ಯವಾದುದು ಯಾವುದೂ ಇಲ್ಲ, ಹೀಗೆಂದು ಶ್ರುತಿಯು ಸಾರುತ್ತಿದೆ ಎಂದು ಹೇಳಿದನು,, ಎಂದು ಹೇಳಲ್ಪಟ್ಟಿದೆ. ಇತ್ಯಾದಿವಚನಜಾಲವು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ರುದ್ರನಿಗೆ ಏಕತ್ವಸಂಖ್ಯಾನಿರ್ಣಯವನ್ನು ಹೇಳುವ ಏಳನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.



### ರುದ್ರನಿಗೆ ವಿಶ್ವಾಧಿಕತ್ವನಿರ್ಣಯವಿಧಿಯು.

ರೇ—ಎಲೈ ಚೋಳನೇ! ಆ ಆದಿರುದ್ರನಿಗೆ ಸಕಲ ಶ್ರುತಿಗಳಲ್ಲಿ ಪ್ರಸಿದ್ಧವಾಗಿರುವ ವಿಶ್ವಾಧಿಕತ್ವವನ್ನು ಕೇಳು; ಶ್ವೇತಾಶ್ವತರೋಪನಿಷತ್ತಿನಲ್ಲಿ—"ಮಹರ್ಷಿಯೆಂದೆನಿಸಿರುವುದರಿಂದ ವಿಶ್ವಾಧಿಕನಾದ ರುದ್ರನು—ಜಗತ್ತು ಹುಟ್ಟುವುದಕ್ಕಿಂತ ಮೊದಲೇ ಬ್ರಹ್ಮನನ್ನು ಸೃಷ್ಟಿಸಿದನೋ, ಆ ರುದ್ರನು ನಮ್ಮನ್ನು ಮಂಗಳಕರವಾದ ಬುದ್ಧಿಯೊಡನೆ ಕೂಡಿಸಲಿ,, ಎಂದೂ, ಮಾನವಪುರಾಣದಲ್ಲಿ—"ಮಹರ್ಷಿಯಾಗಿರುವನಾದ್ದರಿಂದ ರುದ್ರನನ್ನು ವಿಶ್ವಾಧಿಕನನ್ನಾಗಿಯೂ

ಹರ್ಷಿಂ ಶ್ರುತಿರಾಹ ತಂ || ಹಿರಣ್ಯಗರ್ಭಸಂಜ್ಞಸ್ಯ ದೇವಸ್ಯ ಜನಕಂ ತಥಾ ||ಬ್ರಹ್ಮ ವಿಷ್ಣ್ವಾದಯೋ ದೇವಾಃ ಪೂಜಯಾಮಾಸುರಾದರಾತ್ '' ಸ್ಕಾಂದೇ ಸೂತಸಂಹಿತಾಯಾಂ ಜ್ಞಾನಯೋಗಖಂಡೇ,—,, ಬ್ರಹ್ಮವಿಷ್ಣ್ವಾದಿದೇವಾನಾಂ ವಿಶ್ವಾಧಿಕ್ಯಂ ವದಂತಿ ಯೇ || ಅಧೋಮುಖೋರ್ಧ್ವಪಾದಾಸ್ತೇ ಯಾಸ್ಯಂತಿ ನರಕಾರ್ಣವಂ '' ಇತಿ. ಅಸ್ಮಿನ್ವಿಷಯೇ ಬಹುಷು ಪ್ರಮಾಣೇಷು ಸತ್ಸ್ವಪಿ ತಾನಿ ಗ್ರಂಥವಿಸ್ತರಭಯಾನ್ನೋಕ್ತಾನಿ.

ಇತಿ ರುದ್ರಸ್ಯವಿಶ್ವಾಧಿಕತ್ವನಿರ್ಣಯವಿಧಿಸ್ಸಪ್ತಮೋಪದೇಶೇ ನವಮಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಘೋಳರೇಣುಕಸಂವಾದ ರೂಪಶಿವಾಧಿಕ್ಯಶಿಖಾಮಣೌ ಶಿವೇತರದೇವತಾಪರಿತ್ಯಾಗಾದಿ ನವಸಂವಾದವಿಚಾರಸ್ಸಪ್ತಮೋಪದೇಶಃ.



ಹಿರಣ್ಯಗರ್ಭನೆಂದು ಸಂಜ್ಞೆಯುಳ್ಳ ಬ್ರಹ್ಮನಿಗೆ ತಂದೆಯನ್ನಾಗಿಯೂ ಶ್ರುತಿಯು ಹೇಳುತ್ತದೆ. ಬ್ರಹ್ಮವಿಷ್ಣ್ವಾದಿದೇವತೆಗಳು ಅವನನ್ನು ಭಕ್ತಿಯಿಂದ ಪೂಜಿಸಿದರು,, ಎಂದೂ, ಸೂತಸಂಹಿತೆಯಲ್ಲಿರುವ ಜ್ಞಾನಯೋಗಖಂಡದಲ್ಲಿ—,,ಯಾರು ಬ್ರಹ್ಮವಿಷ್ಣ್ವಾದಿದೇವತೆಗಳಿಗೆ ವಿಶ್ವಾಧಿಕತ್ವವನ್ನು ಹೇಳುತ್ತಾರೋ, ಅವರು ಮೋರೆಯನ್ನು ಕೆಳಗೆಮಾಡಿ ಕಾಲ್ಗಳನ್ನು ಮೇಲೆಮಾಡಿಕೊಂಡು ನರಕವನ್ನು ಹೊಂದುವರು,, ಎಂದೂ ಉಕ್ತವಾಗಿದೆ. ಈ ವಿಷಯದಲ್ಲಿ ಬಹು ಪ್ರಮಾಣಗಳಿರುತ್ತಿದ್ದರೂ ಅವು ಇಲ್ಲಿ ಗ್ರಂಥವಿಸ್ತಾರಭೀತಿಯಿಂದ ಹೇಳಲ್ಪಡಲಿಲ್ಲವು.

ಎಂಬಲ್ಲಿಗೆ ರುದ್ರನಿಗೆ ವಿಶ್ವಾಧಿಕತ್ವನಿರ್ಣಯವಿಧಿಯನ್ನು ಹೇಳುವ ಏಳನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಏಳನೆಯ ಉಪದೇಶವು ಸಂಪೂರ್ಣವಾಯಿತು.



ಶ್ರೀವ್ಯೋಮಕೇಶಾಯನಮಃ.

## ಅಷ್ಟಮೋಪದೇಶಃಪ್ರಾರಭ್ಯತೇ.



### ರುದ್ರಸ್ಯಬ್ರಾಹ್ಮಣ್ಯನಿರ್ಣಯವಿಧಿಃ.

ರೇ—ಹೇ ಘೋಳ ! ರುದ್ರಸ್ಯ ವರ್ಣೋತ್ತಮತ್ವಂ ಶ್ರೂಯತಾಂ, ಸಾಮವೇದೇ,—"ತ್ವಂ ದೇವೇಷು ಬ್ರಾಹ್ಮಣೋಽಸ್ಯಹಂ ಮನುಷ್ಯೇಷು ಬ್ರಾಹ್ಮಣಂ ಬ್ರಾಹ್ಮಣೋ ವೈ ಬ್ರಾಹ್ಮಣಮುಪಧಾವತ್ಯುಪಧಾವಾಮಿ'' ಇತಿ ಪ್ರಪದಮಂತ್ರಃ. ಪರಾಶರಪುರಾಣೇ,—ಪರಾಶರಃ, "ಸಂಕರಾಸ್ಸರ್ವದೇವಾಸ್ತು ವೃಷಲಸ್ತು ಪುರಂದರಃ ‖ ಪಿತಾಮಹಸ್ತು ವೈಶ್ಯಸ್ಸ್ಯಾತ್ಕ್ಷತ್ರಿಯಃ ಪರಮೋ ಹರಿಃ ‖ ಬ್ರಾಹ್ಮಣೋ ಭಗವಾನ್ರುದ್ರಸ್ಸರ್ವೇಷಾಮುತ್ತಮೋತ್ತಮಃ ‖ ಬ್ರಹ್ಮಭಾವೋ ಹಿ ರುದ್ರಸ್ಯ ಬ್ರಾಹ್ಮಣ್ಯಂ ನೈವ ಹೇತುಜಂ ‖ ಬ್ರಾಹ್ಮಣೋ ವೈ ಸದಾ ಲೋಕೇ ಬ್ರಾಹ್ಮಣಂ ಚೋಪಧಾವತಿ ‖ ಮಹಾಬ್ರಾಹ್ಮಣಮೀಶಾನಮುಪಧಾವೇನ್ನ ಚೇತರಂ'' ಇತಿ. ಮಾನ

---

## ಎಂಟನೆಯ ಉಪದೇಶ ಪ್ರಾರಂಭವು.

### ರುದ್ರನಿಗೆ ಬ್ರಾಹ್ಮಣ್ಯನಿರ್ಣಯವಿಧಿಯು.

ರೇಣುಕ—ಎಲೈ ಘೋಳನೇ ! ಆದಿರುದ್ರನಿಗಿರುವ ವರ್ಣೋತ್ತಮತ್ವವನ್ನು ಕೇಳು;—ಸಾಮವೇದಪ್ರಪದಮಂತ್ರದಲ್ಲಿ—"ಎಲೈ ರುದ್ರನೇ ! ನೀನು ದೇವತೆಗಳಲ್ಲಿ ಬ್ರಾಹ್ಮಣನೆನಿಸಿರುತ್ತೀಯೆ. ನಾನು ಮನುಷ್ಯರಲ್ಲಿ ಬ್ರಾಹ್ಮಣನೆನಿಸಿರುತ್ತೇನೆ. ಬ್ರಾಹ್ಮಣನು ಬ್ರಾಹ್ಮಣನನ್ನೇ ಸೇವಿಸುವನಾದುದರಿಂದ ಬ್ರಾಹ್ಮಣನೆನಿಸಿರುವ ನಾನು ನಿನ್ನನ್ನೇ ಸೇವಿಸುತ್ತೇನೆ. ಎಂದೂ, ಪರಾಶರಪುರಾಣದಲ್ಲಿ—"ಸಕಲ ದೇವತೆಗಳು ಸಂಕರಜಾತೀಯರಾಗಿರುವರು. ಇಂದ್ರನು ಶೂದ್ರನಾಗಿರುವನು. ಬ್ರಹ್ಮನು ವೈಶ್ಯನಾಗಿರುವನು. ವಿಷ್ಣುವು ಕ್ಷತ್ರಿಯನಾಗಿರುವನು. ಷಡ್ಗುಣೈಶ್ವರ್ಯಸಂಪನ್ನನಾಗಿರುವ ರುದ್ರನು ಬ್ರಾಹ್ಮಣನಾಗಿರುವುದರಿಂದ ಸಮಸ್ತ ದೇವತೆಗಳ ಮಧ್ಯದಲ್ಲಿ ಉತ್ತಮೋತ್ತಮನೆಂದೆನಿಸಿರುವನು. ರುದ್ರನಿಗೆ ಪರಬ್ರಹ್ಮತ್ವವು ಪ್ರಸಿದ್ಧವೇ ಆಗಿರುವುದರಿಂದ, ಆತನಿಗಿರುವ ಬ್ರಾಹ್ಮಣ್ಯವು ಬೇರೆ ಕಾರಣಗಳಿಂದುಂಟಾದುದೇ ಅಲ್ಲವು. ಅಂದರೆ ಸ್ವಭಾವಸಿದ್ಧವಾದುದು. ಲೋಕದಲ್ಲಿ ಬ್ರಾಹ್ಮಣನು ಬ್ರಾಹ್ಮಣನನ್ನೇ ಯಾವಾಗಲೂ ಸೇವಿಸುತ್ತಾನೆ. ಆದುದರಿಂದ ಮಹಾಬ್ರಾಹ್ಮಣನೂ, ಸಕಲ ವಿದ್ಯಾಧಿಪತಿಯೂ ಆಗಿರುವ ಆದಿರುದ್ರನಾದ ಶಿವನನ್ನೇ ಸೇವಿಸಬೇಕಲ್ಲದೆ, ತದಿತರದೇವತೆಗಳನ್ನು ಸೇವಿಸಲಾಗದು,, ಎಂದೂ, ಮಾನವಪುರಾ

ವಪುರಾಣೇ,—"ರುದ್ರ ಏವ ಸದಾ ಸಾಕ್ಷಾದ್ಬ್ರಾಹ್ಮಣೋ ಬ್ರಹ್ಮಭಾವತಃ || ಪ್ರಜಾನಾಂ ಪಾಲಕೋ ರಾಜಾ ವಿಷ್ಣುಸ್ಸರ್ವಸ್ಯ ಪಾಲಕಃ || ತೇನ ರಾಜಾ ಹರಿಸ್ತಸ್ಯ ಬ್ರಾಹ್ಮಣ್ಯಂ ತ್ವೌಪಚಾರಿಕಂ || ಜಗದ್ವಿಸ್ತರಣೇನೈವ ಕಾರ್ಯೇಣ ಭಗವಾನಜಃ ||ಕೇವಲಂ ವೈಶ್ಯ ಏವ ಸ್ಯಾನ್ನ ರಾಜಾ ನ ದ್ವಿಜೋತ್ತಮಃ|| ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ರುದ್ರೋ ವಿಷ್ಣುಃ ಪಿತಾಮಹಃ || ತತ್ಸೇವಾತತ್ಪರಶ್ಶೂದ್ರ ಇಂದ್ರಸ್ಸುಪ್ರಥಿತಃ ಖಲು || ಸಂಕರಪ್ರಭವಾನಾಂ ತು ದೇವತಾಃ ಕ್ಷುದ್ರದೇವತಾಃ || ಶೂದ್ರಾಣಾಂ ದೇವರಾಜೇಂದ್ರೋ ವೈಶ್ಯಾನಾಂ ಭಗವಾನಜಃ || ಕ್ಷತ್ರಿಯಾಣಾಂ ಹರಿಸ್ಸಾಕ್ಷಾದ್ಬ್ರಾಹ್ಮಣಾನಾಂ ಮಹೇಶ್ವರಃ"

ಇತಿ ಶ್ರೀರುದ್ರಸ್ಯ ಬ್ರಾಹ್ಮಣ್ಯನಿರ್ಣಯವಿಧಿರಷ್ಟಮೋಪದೇಶೇ ಪ್ರಥಮಸ್ಸಂವಾದಃ.



ಶ್ರೀಃ.

## ಆದಿರುದ್ರಾದ್ಬ್ರಹ್ಮವಿಷ್ಣ್ವೋರುತ್ಪತ್ತಿವಿಧಿಃ.

ರೇ—ಹೇ ಜೋಳ! ಆದಿರುದ್ರಾದ್ವಿಷ್ಣುಬ್ರಹ್ಮಣೋರುತ್ಪತ್ತಿಶ್ಶ್ರೂಯತಾಂ,

---

ಇದಲ್ಲಿ—"ಆದಿರುದ್ರನೇ ಯಾವಾಗಲೂ ಪರಬ್ರಹ್ಮವೆಂದೆನಿಸಿದವನಾಗಿ ಬ್ರಾಹ್ಮಣನಾಗಿರುವನು, ಪ್ರಜೆಗಳನ್ನು ಪಾಲಿಸತಕ್ಕವನೇ ರಾಜನೆನಿಸುವನು. ವಿಷ್ಣುವು ಚರಾಚರಾತ್ಮಕವಾದ ಸಕಲ ಪ್ರಾಣಿಗಳನ್ನು ಪಾಲಿಸುತ್ತಿರುವುದರಿಂದ ರಾಜನೆನಿಸಿರುವನು. ಆ ವಿಷ್ಣುವಿಗೆ ಬ್ರಾಹ್ಮಣ್ಯವು ಔಪಚಾರಿಕವಲ್ಲದೆ ಸ್ವಭಾವಸಿದ್ಧವಲ್ಲವು. ಬ್ರಹ್ಮನಾದರೋ ಜಗತ್ತನ್ನು ವಿಸ್ತಾರಗೊಳಿಸುವ ಕಾರ್ಯದಿಂದ ವೈಶ್ಯನೇ ಆಗಿರುವನಲ್ಲದೆ ರಾಜನೂ ಬ್ರಾಹ್ಮಣನೂ ಅಲ್ಲವು. ಆಕಾರಣದಿಂದ ಆದಿರುದ್ರನು ಬ್ರಾಹ್ಮಣನೆಂದೂ, ವಿಷ್ಣುವು ಕ್ಷತ್ರಿಯನೆಂದೂ, ಬ್ರಹ್ಮನು ವೈಶ್ಯನೆಂದೂ ಆ ಮೂವರ ಸೇವೆಯಲ್ಲಾಸಕ್ತನಾಗಿರುವ ಇಂದ್ರನು ಶೂದ್ರನೆಂದೂ ಪ್ರಸಿದ್ಧವೇ ಆಗಿರುತ್ತದೆ. ಸಂಕರಜಾತೀಯರಿಗೆ ಕ್ಷುದ್ರದೇವತೆಗಳು ದೇವತೆಗಳಾಗಿರುವರು. ಶೂದ್ರರಿಗೆ ಇಂದ್ರನು, ವೈಶ್ಯರಿಗೆ ಬ್ರಹ್ಮನು, ಕ್ಷತ್ರಿಯರಿಗೆ ವಿಷ್ಣುವು, ಬ್ರಾಹ್ಮಣರಿಗೆ ಮಹೇಶ್ವರನಾದ ಆದಿರುದ್ರನು ದೇವತೆಯಾಗಿರುವನು,, ಎಂದೂ ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಆದಿರುದ್ರನಿಗೆ ಬ್ರಾಹ್ಮಣ್ಯನಿರ್ಣಯವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



### ಆದಿರುದ್ರನದೆಸೆಯಿಂದ ಬ್ರಹ್ಮವಿಷ್ಣುಗಳುತ್ಪತ್ತಿವಿಧಿಯು.

ರೇ—ಎಲೈ ಜೋಳನೇ! ಆದಿರುದ್ರನಿಂದ ಬ್ರಹ್ಮವಿಷ್ಣುಗಳ ಉತ್ಪತ್ತಿಯನ್ನು ಕೇಳು;

ಶಿವಸಂಕಲ್ಪೋಪನಿಷದಿ,—"ಅಂಡಂ ಹಿರಣ್ಮಯಂ ಮಧ್ಯೇ ಸಮುದ್ರಂ ರುದ್ರವೀ ರ್ಯಾತ್ಪ್ರಥಮಂ ಬಭೂವ || ಅಂಡಾದ್ವಿಷ್ಣುರ್ಬ್ರಹ್ಮಾ ಜಾತವೇದಾಶ್ಚ ತನ್ಮೇ ಮನಶ್ಶಿವ ಸಂಕಲ್ಪಮಸ್ತು" ಲೈಂಗೇ,—"ಪರಾತ್ಪರತರಂ ಪ್ರಾಹುಃ ಪರಾತ್ಪರತರಂ ಧ್ರುವಂ || ಬ್ರಹ್ಮಣೋ ಜನಕಂ ವಿಷ್ಣೋರ್ವಹ್ನೇರ್ವಾಯೋಸ್ಸದಾಶಿವಂ" ಸ್ಕಾಂದೇ ವಿಷ್ಣುಸ ನತ್ಕುಮಾರಸಂವಾದೇ,-ವಿಷ್ಣುವಾಕ್ಯಂ, "ಜಾತೋಽಹಮಸ್ಯ ವಾಮಾಂಗೇ ಬ್ರಹ್ಮಾ ರುದ್ರಸ್ಯ ದಕ್ಷಿಣೇ||ಮುಖಾಚ್ಚ ವೇದಾಶ್ಚತ್ವಾರಸ್ಸಾಂಗೋಪಾಂಗಾಶ್ಚ ಕೃತ್ಸ್ನಶಃ" ಇತಿ. ಆದಿತ್ಯಪುರಾಣೇ,-ದಕ್ಷಂಪ್ರತಿ ಬ್ರಹ್ಮವಾಕ್ಯಂ, "ಯಸ್ಯ ವಾಮಾಂಗಜೋ ವಿ ಷ್ಣುರ್ದಕ್ಷಿಣಾಂಗಭವೋಽಹ್ಯಹಂ||ಯಸ್ಯಾಜ್ಞಯಾಽಖಿಲಂ ವಿಶ್ವಂ ಸೂರ್ಯೋ ಭ್ರಮ ತಿ ಸರ್ವದಾ ||ಯಸ್ಯ ಪಾದರಜಸ್ಪರ್ಶಾದ್ಬ್ರಹ್ಮತ್ವಂ ಪ್ರಾಪ್ತವಾನಹಂ || ಶಾರ್ಙ್ಗ ಣಾಪಿ ಸದಾ ಮೂರ್ಧ್ನಾ ಧಾರ್ಯತೇ ಕಶ್ಶಿವಃಪರಃ" ಲೈಂಗೇ,—ನಾರಾಯಣಂ ಪ್ರತಿ-ಬ್ರಹ್ಮವಾಕ್ಯಂ, "ಭವಾನಗ್ರೇ ಸಮುತ್ಪನ್ನೋ ಭವಾನ್ಯಾ ಸಹ ಕೇಶವ || ವಾಮಾಂಗಾದಸ್ಯ ರುದ್ರಸ್ಯ ದಕ್ಷಿಣಾಂಗಾದಹಂ ತಥಾ || ಶಿವೋಽಯಂ ಜಗತಾಂ ಧಾತಾ ತವಾಪಿ ಚ ಮಮಾಪಿ ಚ" ಸ್ಕಾಂದೇ ಕಾಳಿಕಾಖಂಡೇ,—ರುದ್ರವಾಕ್ಯಂ,

ಶಿವಸಂಕಲ್ಪೋಪನಿಷತ್ತಿನಲ್ಲಿ—"ಆದಿಯಲ್ಲಿ ಶಿವನ ರೇತಸ್ಸಿನಿಂದ ಸಮುದ್ರಮಧ್ಯದಲ್ಲಿ ಅಂಡವು ಹುಟ್ಟಿತು. ಅದರಿಂದ ವಿಷ್ಣುವೂ, ಬ್ರಹ್ಮನೂ, ಅಗ್ನಿಯೂ ಹುಟ್ಟಿದನು. ಆದ್ದರಿಂದ ನನ್ನ ಮನ ಸ್ಸು ಶಿವಸಂಕಲ್ಪವುಳ್ಳುದಾಗಲಿ,, ಎಂದೂ, ಲಿಂಗಪುರಾಣದಲ್ಲಿ—"ಬ್ರಹ್ಮನಿಗೂ, ವಿಷ್ಣುವಿಗೂ, ಅಗ್ನಿಗೂ, ವಾಯುವಿಗೂ ತಂದೆಯಾದ ಶಿವನನ್ನು ಪರವಾದುದಕ್ಕಿಂತ ಪರನನ್ನಾಗಿಯೂ, ಶಾಶ್ವ ತನನ್ನಾಗಿಯೂ ಹೇಳುತ್ತಾರೆ,, ಎಂದೂ ಹೇಳಲ್ಪಟ್ಟಿದೆ. ಸ್ಕಾಂದದಲ್ಲಿ—"ಆದಿರುದ್ರನ ವಾ ಮಾಂಗದಲ್ಲಿ ನಾನು ಹುಟ್ಟಿದೆನು. ದಕ್ಷಿಣಾಂಗದಲ್ಲಿ ಬ್ರಹ್ಮನು ಜನಿಸಿದನು. ಮುಖದಿಂದ ಅಂಗೋಪಾಂಗಗಳಿಂದ ಕೂಡಿದ ನಾಲ್ಕುವೇದಗಳು ಹುಟ್ಟಿದವು,, ಎಂದು ವಿಷ್ಣುವಿನಿಂದ ಸನ ತ್ಕುಮಾರನಿಗೆ ನಿರೂಪಿತವಾಗಿದೆ. ಆದಿತ್ಯಪುರಾಣದಲ್ಲಿ—"ಯಾವನ-ವಾಮಾಂಗದಲ್ಲಿ ವಿಷ್ಣು ಹುಟ್ಟಿದನೋ, ದಕ್ಷಿಣಾಂಗದಲ್ಲಿ ನಾನು ಹುಟ್ಟಿದೆನೋ, ಯಾವನ ಆಜ್ಞೆಯಿಂದ ಸೂರ್ಯನು ಯಾವಾಗಲೂ ಸಮಸ್ತ ಜಗತ್ತಿನಲ್ಲಿ ತಿರುಗುತ್ತಿರುವನೋ, ನಾನು ಯಾವನ ಪಾದರಜಸ್ಪರ್ಶ ದಿಂದ ಬ್ರಹ್ಮತ್ವವನ್ನು ಹೊಂದಿದೆನೋ, ವಿಷ್ಣುವಿನಿಂದ ತನ್ನ ತಲೆಯಲ್ಲಿ ಯಾವ ಶಿವನು ಯಾ ವಾಗಲೂ ಧರಿಸಲ್ಪಟ್ಟರುತ್ತಾನೆಯೋ,, ಎಂದು ಬ್ರಹ್ಮನಿಂದ ದಕ್ಷನನ್ನು ಕುರಿತು ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ—ಎಲೈ ವಿಷ್ಣುವೇ ! ಈ ರುದ್ರನ ವಾಮಾಂಗದದೆಸೆಯಿಂದ ನೀನು ಭವಾ ನೀಸಹಿತನಾಗಿ ಮೊದಲು ಹುಟ್ಟಿದೆ. ನಾನು ದಕ್ಷಿಣಾಂಗದದೆಸೆಯಿಂದ ಹುಟ್ಟಿದೆನು. ಭವಶಬ್ದ ದಿಂದ ಹೇಳಲ್ಪಡುವ ಈ ರುದ್ರನು ಎಲ್ಲಾ ಲೋಕಗಳನ್ನೂ ನಿನ್ನನ್ನೂ ನನ್ನನ್ನೂ ಸಂರಕ್ಷಿಸತ ಕ್ಕವನಾಗಿದ್ದಾನೆ,, ಎಂದು ಬ್ರಹ್ಮನಿಂದ ವಿಷ್ಣುವಿಗೆ ಹೇಳಲ್ಪಟ್ಟಿದೆ. ಸ್ಕಾಂದದಲ್ಲಿ—"ನನ್ನ-ವಾ

“ದಕ್ಷಿಣಾಂಗಭವೋ ಬ್ರಹ್ಮಾ ವಾಮತೋ ಮೇ ಜನಾರ್ದನಃ ||ಮದಂಗಸ್ವೇದಸಂಭೂತೌ ಬ್ರಹ್ಮನಾರಾಯಣಾವಿಮೌ” ಮಾನವಪುರಾಣೇ-ಮನುಃ, “ಕಾರ್ಯಕೋಟಿನಿವಿಷ್ಟೌ ಹಿ ಬ್ರಹ್ಮನಾರಾಯಣೌ ಬುಧಾಃ || ರುದ್ರಃ ಕಾರಣಕೋಟಿಸ್ಥೋ ಸ್ವನಪೇಕ್ಷಸ್ತ್ರಿಮೂರ್ತಿಷು||ಅಂಶೀಭೂತೌ ವಿಲೀಯೇತೇ ಖಲು ರುದ್ರೇ ಸ್ವಕಾರಣೇ” ಇತ್ಯಾದಿ ಪ್ರಸಿದ್ಧಂ.

ಇತಿ ರುದ್ರಾದೇವ ವಿಷ್ಣುಬ್ರಹ್ಮಣೋರುತ್ಪತ್ತಿವಿಧಿರಷ್ಟಮೋಪದೇಶೇ ದ್ವಿತೀಯಸ್ಸಂವಾದಃ.



ಶ್ರೀಃ.

## ನಾರಾಯಣಲಲಾಟೇ ರುದ್ರಪ್ರಸನ್ನತಾವಿಧಿಃ.

ಚೋ— ಭೋ ರೇಣುಕಗಣೇಶ! “ಏಕೋ ವೈ ನಾರಾಯಣ ಆಸೀತ್ ತಸ್ಯ ಧ್ಯಾನಾರೂಢಸ್ಯ ಲಲಾಟಾತ್ತ್ರ್ಯಕ್ಷಶ್ಶೂಲಪಾಣಿಃ ಪುರುಷೋಽಜಾಯತ”— “ನಾರಾಯಣಾದ್ರುದ್ರೋಽಜಾಯತ” ಇತಿ ಲಘುನಾರಾಯಣೋಪನಿಷದ್ವಾಕ್ಯಾ

---

ಮಾಂಗದಿಂದ ವಿಷ್ಣುವು, ದಕ್ಷಿಣಾಂಗದಿಂದ ಬ್ರಹ್ಮನು ಜನಿಸಿದನು. ಈ ಬ್ರಹ್ಮನಾರಾಯಣರು ನನ್ನ ಶರೀರದಿಂದ ಹೊರಟ ಬೆವರಿನಿಂದ ಹುಟ್ಟಿದರು,, ಎಂದು ರುದ್ರನಿಂದುಕ್ತವಾಗಿದೆ. ಮಾನವಪುರಾಣದಲ್ಲಿ —“ಎಲೈ ವಿದ್ವಾಂಸರೇ! ಬ್ರಹ್ಮನಾರಾಯಣರು ಕಾರ್ಯರೂಪರೆಂದು ಪ್ರಸಿದ್ಧರಾಗಿದ್ದಾರೆ. ತ್ರಿಮೂರ್ತಿಗಳಲ್ಲಿ ಸಾಪೇಕ್ಷಕನಲ್ಲದಿರುವ ರುದ್ರನು ಕಾರಣನಾದವನೆಂದು ಪ್ರಸಿದ್ಧನಾಗಿದ್ದಾನೆ. ರುದ್ರಾಂಶಜಾತರಾದ ಬ್ರಹ್ಮನಾರಾಯಣರು ತಮಗೆ ಕಾರಣನಾದ ರುದ್ರನಲ್ಲಿ ಲೈಸುವರಷ್ಟೆ?,, ಎಂದು ಮನುವಿನಿಂದುಸುರಲ್ಪಟ್ಟಿದೆ. ಇತ್ಯಾದಿ ವಚನಗಳು ಪ್ರಸಿದ್ಧವಾಗಿರುತ್ತವೆ.

ಎಂಬಲ್ಲಿಗೆ ರುದ್ರನದೆಸೆಯಿಂದಲೇ ಬ್ರಹ್ಮವಿಷ್ಣುಗಳ ಉತ್ಪತ್ತಿವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು



ನಾರಾಯಣನ ಲಲಾಟದಲ್ಲಿ ರುದ್ರಪ್ರಸನ್ನತಾವಿಧಿಯು.

ಚೋ—ಎಲೈ ರೇಣುಕಗಣೇಶನೇ! ಜಗತ್ತುಂಟಾಗುವುದಕ್ಕೆ ಮೊದಲು ನಾರಾಯಣನೊಬ್ಬನೇ ಇದ್ದನು. ಧ್ಯಾನನಿರತನಾದ ಆ ಆದಿನಾರಾಯಣನ ಭ್ರೂಮಧ್ಯದದೆಸೆಯಿಂದ ಮುಕ್ಕಣ್ಣನೂ, ತ್ರಿಶೂಲಪಾಣಿಯೂ ಆದ ಪುರುಷಶಬ್ದವಾಚ್ಯನಾದ ರುದ್ರನು ಹುಟ್ಟಿದನು;,—“ನಾರಾಯಣನದೆಸೆಯಿಂದ ರುದ್ರನು ಜನಿಸಿದನು,, ಎಂದು ಲಘುನಾರಾಯಣೋಪನಿಷದ್ವಾಕ್ಯವು

ತ್, ‟ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ'' ಇತಿ ಗೀತಾಯಾಂ ಶ್ರೀಕೃಷ್ಣವಾಕ್ಯಾಚ್ಚ ನಾರಾಯಣಾದ್ರುದ್ರೋತ್ಪತ್ತಿಃ ಪ್ರಸಿದ್ಧಾ.

ರೇ—ಹೇ ಚೋಳ! ತಚ್ಛ್ರುತ್ಯರ್ಥನಿರ್ಣಯಸ್ತು ಪುರಾಣವಾಕ್ಯೈಃ ಶ್ರೂಯತಾಂ, ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—‟ಆಕಟೇರ್ಬ್ರಹ್ಮಣೋ ರೂಪಮಾಕಂಠಾದ್ವಿಷ್ಣುರೂಪಕಂ || ಆಮೂರ್ಧ್ನೋ ರುದ್ರರೂಪಂ ಸ್ಯಾತ್ತತೋ ದೇಹಾಸ್ತ್ರಿದೇವತಾಃ||ನಾರಾಯಣಸ್ಥಿತೋ ರುದ್ರೋ ಧ್ಯಾನಾದ್ಬಹಿರದೃಶ್ಯತ||ರುದ್ರೋ ನಾರಾಯಣಾಜ್ಜಾತ ಇತ್ಯಾಹ ಶ್ರುತಿರಾದರಾತ್'' ಹೇ ಚೋಳ! ‟ಯಂ ಯದಾ ಯಥೋಪಾಸತೇ ತದೇವ ಭವತಿ | ಯದ್ಭಾವಂ ತದ್ಭವತಿ'' ಇತಿ ಬೃಹದಾರಣ್ಯಕೋಪನಿಷದ್ವಾಕ್ಯಾತ್ '' ಯೇನ ಯೇನ ಹಿ ರೂಪೇಣ ಸಾಧಕಸ್ಸಂಸ್ಮರೇದ್ಯದಾ || ತದಾ ತನ್ಮಯತಾಂ ಯಾತಿ'' ಇತ್ಯಾದಿಕಾರಣತಂತ್ರವಾಕ್ಯಾತ್, ಧ್ಯಾನಾರೂಢಾದಿನಾರಾಯಣಸ್ಯ ಲಲಾಟಮಧ್ಯಸ್ಥಾಜ್ಞಾಚಕ್ರೇ ರುದ್ರಸ್ಯ ಪ್ರಾದುರ್ಭಾವೋ ವಿಜ್ಞೇಯಃ. ಭೋ ಚೋಳ! ಕಿಂಬಹುನಾ, ಸರ್ವದೇಹಿನಾಮಾಜ್ಞಾಚಕ್ರಂ ರುದ್ರ

---

ಹೇಳುತ್ತಿರುವುದರಿಂದಲೂ, ‟ನಾನು ಸಕಲ ಜಗದುತ್ಪತ್ತಿಗೆ ಕಾರಣನು, ನನ್ನದೆಸೆಯಿಂದ ಚರಾಚರಾತ್ಮಕವಾದ ಜಗತ್ತು ತೋರುತ್ತದೆ,, ಎಂದು ಗೀತೆಯಲ್ಲಿ ಶ್ರೀಕೃಷ್ಣನ ವಾಕ್ಯವಿರುವುದರದೆಸೆಯಿಂದಲೂ ನಾರಾಯಣನದೆಸೆಯಿಂದ ರುದ್ರನು ಹುಟ್ಟಿದುದು ಪ್ರಸಿದ್ಧವಾಗಿದೆ.

ರೇ—ಎಲೈ ಚೋಳನೇ! ಆ ಶ್ರುತಿಯ ನಿಜವಾದರ್ಥವನ್ನು ಪುರಾಣವಚನಗಳಿಂದ ಕೇಳು; ಸ್ಕಾಂದದಲ್ಲಿ—‟ಸಮಸ್ತಜೀವರ ಶರೀರಗಳು—ಪಾದವೊದಲ್ಗೊಂಡು ನಡುವಿನವರೆಗೆ ಬ್ರಹ್ಮಸ್ವರೂಪವುಳ್ಳವುಗಳೂ, ನಡುವಿನಿಂದ ಕತ್ತಿನವರೆಗೆ ವಿಷ್ಣುಸ್ವರೂಪವುಳ್ಳವುಗಳೂ, ಕಂಠದಿಂದ ತಲೆಯವರೆಗೆ ರುದ್ರಸ್ವರೂಪವುಳ್ಳವುಗಳೂ ಆಗಿರುವುದರಿಂದ ತ್ರಿಮೂರ್ತಿಸ್ವರೂಪಗಳಾಗಿರುತ್ತವೆ. ನಾರಾಯಣನಲ್ಲಿರುವ ರುದ್ರನು ಧ್ಯಾನದದೆಸೆಯಿಂದ ಹೊರಗೆ ಕಾಣಲ್ಪಟ್ಟನು. ಆದ್ದರಿಂದ ಶ್ರುತಿಯು ರುದ್ರನ ಉತ್ಪತ್ತಿಯು ನಾರಾಯಣನದೆಸೆಯಿಂದುಂಟಾಯಿತೆಂದು ಶ್ರುತಿಯಿಂದ ಹೇಳಿತು,, ಎಂದಭಿಹಿತವಾಗಿದೆ. ಎಲೈ ಚೋಳನೇ! ಯಾರು ಯಾವಕಾಲದಲ್ಲಿ ಯಾವುದನ್ನು ಹ್ಯಾಗೆ ಉಪಾಸಿಸುತ್ತಾರೋ, ಅವರು ತತ್ಸ್ವರೂಪರೇ ಆಗುವರು. ಯಾವಭಾವವೋ ಅದೇ ಆಗುತ್ತದೆ,, ಎಂದು ಬೃಹದಾರಣ್ಯಕಶ್ರುತಿಯಿರುವುದರಿಂದಲೂ, ‟ಸಾಧಕನು ಯಾವಾಗ ಯಾವಯಾವ ರೂಪದಿಂದ ಸ್ಮರಿಸುವನೋ, ಆಗ ಆಯಾಸ್ವರೂಪವನ್ನು ಹೊಂದುವನು,, ಇತ್ಯಾದಿಕಾರಣತಂತ್ರವಚನವಿರುವುದರಿಂದಲೂ, ಧ್ಯಾನಿಸುತ್ತಿದ್ದ ಆದಿನಾರಾಯಣನ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ ರುದ್ರನು ಮೂಡಿದನೆಂದು ತಿಳಿಯಬೇಕು. ಎಲೈ ಚೋಳನೇ! ಬಹುಮಾತಿನಿಂದೇನು? ಸಕಲ ಜೀವರ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವು ರುದ್ರಸ್ಥಾನವೆಂಬು

ಸ್ಥಾನಂ, ತದುಕ್ತಂ ಜಾಬಾಲೋಪನಿಷದಿ,—"ಭ್ರುವೋರ್ಘ್ರಾಣಸ್ಯ ಚ ಯಸ್ಸಂಧಿಸ್ಸ ಏಷ ದ್ಯೌರ್ಲೋಕಸ್ಯ ಪರಸ್ಯ ಚ ಸಂಧಿಃ" ವಾತುಲತಂತ್ರೇ,—"ಜನಾರ್ದನೋ ವಿಶುದ್ಧಾತ್ಮಾ ಭ್ರೂಮಧ್ಯೇ ತಾರಕಂ ಶಿವಂ || ಧ್ಯಾನೇನ ಪೂಜಯತ್ಯೇವ ತಸ್ಮಾತ್ತತ್ರೈವ ಸಂಸ್ಮರೇತ್" ಸೂತಸಂಹಿತಾಯಾಂ,—"ವಾರಾಣಸೀ ಮಹಾಪ್ರಾಜ್ಞಾ ಭ್ರುವೋರ್ಘ್ರಾಣಸ್ಯ ಮಧ್ಯಮೇ || ಭ್ರುವೋರ್ಘ್ರಾಣಸ್ಯ ಯಾ ಸಂಧಿರಿತಿ ಜಾಬಾಲಿಕೀಶ್ರುತಿಃ" ಮಾನವಪುರಾಣೇ,—"ಭ್ರುವೋರ್ಘ್ರಾಣಸ್ಯ ಯಾ ಸಂಧಿಸ್ತತ್ರ ವಾರಾಣಸೀ ಸ್ಥಿತಾ || ತತ್ರಾವಿಮುಕ್ತಕಂ ಕ್ಷೇತ್ರಂ ತಸ್ಮಿನ್ರುದ್ರಸ್ಸದಾ ಸ್ಥಿತಃ || ಲಿಂಗಂ ಜ್ಯೋತಿಸ್ಸ್ವರೂಪೇಣ ಸಾಕ್ಷಾದ್ವಿಶ್ವೇಶ್ವರಾಭಿಧಂ" ಶಾಂಕರಸಂಹಿತಾಯಾಂ, —"ಭ್ರೂಘ್ರಾಣಮಧ್ಯೇತ್ವವಿಮುಕ್ತದೇಶೇ ವಿಶ್ವೇಶ್ವರಾಖ್ಯಂ ಪರಮಾತ್ಮಲಿಂಗಂ || ಧ್ಯಾನಾಮೃತಾಸಕ್ತಧಿಯೋ ಮಹಾಂತೋ ಧ್ಯಾತ್ವಾ ಪರಾಂ ಮುಕ್ತಿಮವಾಪುರನ್ಯೇ" ಇತ್ಯಾದ್ಯನೇಕವಚನಪ್ರಾಮಾಣ್ಯಾತ್ ನಾರಾಯಣಸ್ಯ ಲಲಾಟಮಧ್ಯೇ ರುದ್ರಪ್ರಸನ್ನತಾ ವಿಜ್ಞೇಯಾ. ಅಥವಾ "ನಾರಾಯಣಾದ್ರುದ್ರೋಜಾಯತ" ಇತ್ಯೇವ ನಿಶ್ಚಿತಶ್ಚೇತ್ ರುದ್ರಸ್ಯ ನಾರಾಯಣಸ್ವರೂಪತ್ವಂ ನಾಸ್ತ್ಯೇವ,

---

ಶವು ಜಾಬಾಲೋಪನಿಷತ್ತಿನಲ್ಲಿ—"ಸರ್ವದೇಹಿಗಳ ಹುಬ್ಬುಗಳ ಮತ್ತು ನಾಸಿಕದ ಸಂಧಿಯೇ ಕೈಲಾಸವು,, ಎಂದು ನಿರೂಪಿತವಾಗಿದೆ. ವಾತುಲತಂತ್ರದಲ್ಲಿ—"ಲಿಂಗಧಾರಣದಿಂದ ಪರಿಶುದ್ಧನಾದ ವಿಷ್ಣುವು ತನ್ನ ಭ್ರೂಮಧ್ಯದಲ್ಲಿ ಭವಸಾಗರದದೆಸೆಯಿಂದ ದಾಂಟಿಸುವ ಶಿವನನ್ನು ಧ್ಯಾನಯಜ್ಞದಿಂದಾರಾಧಿಸುತ್ತಾನೆ. ಆ ಕಾರಣದದೆಸೆಯಿಂದಲೇ ಆ ಆಜ್ಞಾಚಕ್ರಮಧ್ಯದಲ್ಲೇ ಶಿವನನ್ನು ಚಿಂತಿಸಬೇಕು,, ಎಂದೂ, ಸೂತಸಂಹಿತೆಯಲ್ಲಿ —"ಎಲೈ ಮಹಾಬುದ್ಧಿಶಾಲಿಗಳೇ! ಹುಬ್ಬುಗಳ ಮತ್ತು ಮೂಗಿನ ಮಧ್ಯದಲ್ಲಿ ಕಾಶೀಕ್ಷೇತ್ರವಿರುತ್ತದೆಯಾದ್ದರಿಂದಲೇ "ಭ್ರುವೋರ್ಘ್ರಾಣಸ್ಯಯಾ ಸಂಧಿಃ,, ಎಂದು ಜಾಬಾಲಶ್ರುತಿಯು ಹೇಳಿರುತ್ತದೆ,, ಎಂದೂ ಉಕ್ತವಾಗಿದೆ. ಮಾನವಪುರಾಣದಲ್ಲಿ— "ಭ್ರೂಘ್ರಾಣಗಳ ಸಂಧಿಯಲ್ಲಿರುವ ಕಾಶಿಯಲ್ಲಿರುವ ಅವಿಮುಕ್ತಕವೆಂಬ ಕ್ಷೇತ್ರದಲ್ಲಿ ರುದ್ರನು ವಿಶ್ವೇಶ್ವರಲಿಂಗವೆಂದು ಹೆಸರುಳ್ಳ ಜ್ಯೋತಿರ್ಲಿಂಗದಲ್ಲಿ ಯಾವಾಗಲೂ ವಾಸಿಸುತ್ತಿರುವನು,, ಎಂದೂ, ಶಾಂಕರಸಂಹಿತೆಯಲ್ಲಿ— "ಭ್ರೂನಾಸಿಕೆಗಳ ಮಧ್ಯದಲ್ಲಿರುವ ಅವಿಮುಕ್ತಕ್ಷೇತ್ರದಲ್ಲಿ ವಿಶ್ವೇಶ್ವರಾಖ್ಯವಾದ ಪರಮಾತ್ಮಲಿಂಗವಿರುತ್ತದೆ. ಕೆಲವು ಪೂಜ್ಯರು ಧ್ಯಾನಾಮೃತಪಾನಾಸಕ್ತರಾಗಿ, ಆ ಜ್ಯೋತಿರ್ಲಿಂಗಧ್ಯಾನದಿಂದ ಸಾಯುಜ್ಯವನ್ನು ಹೊಂದುವರು,, ಎಂದೂ ಪ್ರೋಕ್ತವಾಗಿದೆ. ಇತ್ಯಾದ್ಯನೇಕವಚನಪ್ರಮಾಣಗಳಿರುವುದರಿಂದ ನಾರಾಯಣನ ಭ್ರೂಮಧ್ಯದಲ್ಲಿ ರುದ್ರನ ಪ್ರಸನ್ನತೆಯುಂಟಾಯಿತೆಂದು ತಿಳಿಯತಕ್ಕದ್ದು. ಅಥವಾ ನಾರಾಯಣನದೆಸೆಯಿಂದ ರುದ್ರನು ಹುಟ್ಟಿದನೆಂದೇ ನಿಶ್ಚೈಸುವುದಾದರೆ, ರುದ್ರನಿಗೆ ನಾರಾಯಣಸ್ವರೂಪತ್ವವೇ ಇಲ್ಲವು. ಆ ವಿಷಯವು ಆದಿತ್ಯಪುರಾಣದಲ್ಲಿರುವ ಮಾನವೀಯಸಂಹಿತೆ

ತದುಕ್ತಮಾದಿತ್ಯಪುರಾಣೇ ಮಾನವೀಯಸಂಹಿತಾಯಾಂ,—"ಪ್ರಜಾಸ್ಸೃಜೇತಿ ವಿಜ್ಞಪ್ತಶ್ಚಂದ್ರಮೌಳಿರ್ವಿರಿಂಚಿನಾ ‖ ಸಸರ್ಜ ಮನಸಾ ರುದ್ರಾನಾತ್ಮತುಲ್ಯಾನ್ಮಹೇಶ್ವರಃ ‖ ನೀಲಕಂಠಾಂಸ್ತ್ರಿನೇತ್ರಾಂಶ್ಚ ಧೃತಚಂದ್ರಾರ್ಧಶೇಖರಾನ್ ‖ ವೃಷಧ್ವಜಾನ್ವೀತರಾಗಾನ್ ಜರಾಮರಣವರ್ಜಿತಾನ್ ‖ ಸರ್ವಜ್ಞಾನ್ ಶತಕೋಟೀಂಸ್ತಾನ್ಸರ್ವಾನನುಗ್ರಹತತ್ಪರಾನ್ ‖ದೃಷ್ಟ್ವಾ ತಾನ್ ವಿವಿಧಾನ್ ರುದ್ರಾನ್ವಿರಿಂಚಿಃ ಪ್ರಾಹ ಶಂಕರಂ" ಇತ್ಯಾದಿವಾಕ್ಯೈಃ ರುದ್ರಾಣಾಂ ಮಹೇಶ್ವರಾದುತ್ಪತ್ತಿರ್ವಿಜ್ಞೇಯಾ. ಹೇ ಚೋಳ! ಇದಮನಾಲೋಚ್ಯ "ರುದ್ರೋ ನಾರಾಯಣಾದಜಾಯತ" ಇತಿ ಪುನರ್ವದಸಿ ಚೇತ್ತರ್ಹಿ "ನಿರ್ಭಿದ್ಯ ಹೃದಯಂ-ವಿಷ್ಣೋಸ್ಸಾರ್ಧಂ ಪ್ರಮಥಪುಂಗವೈಃ ‖ ವಿವೇಶ ಶೂಲೇನಾದಾಯ ತತ್ಕಳೇಬರಮೀಶ್ವರಃ" ಇತ್ಯಾದಿಕೂರ್ಮಪುರಾಣವಚಸಾಂ "ಅವಶ್ಯಂ ಪಿತುರಾಚಾರಾನ್ಸತ್ಪುತ್ರಸ್ತ್ವನುವರ್ತತೇ" ಇತಿ ಮನುಸ್ಮೃತಿವಚಸೋಽಪಿ ವಿರೋಧಪ್ರಸಂಗಾದ್ಧ್ಯಾನಾರೂಢಸ್ಯಾದಿನಾರಾಯಣಸ್ಯಾಜ್ಞಾಚಕ್ರೇ ರುದ್ರಸ್ಯ ಪ್ರಸನ್ನತಾ ವಿಜ್ಞೇಯೇತ್ಯಲಂ ವಿಸ್ತರೇಣ.

---

ಯಲ್ಲಿ—"ಪ್ರಜೆಗಳನ್ನು ಸೃಷ್ಟಿಸಿ ನನಗೆ ಸೃಷ್ಟಿಮಾಡುವ ಬಗೆಯನ್ನು ತೋರಿಸೆಂದು ಬ್ರಹ್ಮನಿಂದ ವಿಜ್ಞಾಪಿಸಲ್ಪಟ್ಟವನಾದ ಚಂದ್ರಶೇಖರನಾದ ಮಹೇಶ್ವರನು—ತನಗೆ ಸಮಾನರಾದ ಅನೇಕರುದ್ರರನ್ನು ತನ್ನ ಇಚ್ಛಾಶಕ್ತಿಬಲದಿಂದ ಸೃಷ್ಟಿಸಿ ತೋರಿಸಿ, ಈಗ ನೀನು ಪ್ರಜೆಗಳನ್ನು ಸೃಷ್ಟಿಸೆಂದು ಬ್ರಹ್ಮನಿಗೆ ಆಜ್ಞೆಯನ್ನಿತ್ತನು. ಬ್ರಹ್ಮನು—ವಿಷದಿಂದ ಕಪ್ಪಾದ ಕೊರಳುಳ್ಳವರೂ, ಮೂರುಕಣ್ಣುಗಳುಳ್ಳವರೂ, ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿದವರೂ, ವೃಷಭವೇ ಧ್ವಜವಾಗುಳ್ಳವರೂ, ವೈರಾಗ್ಯವುಳ್ಳವರೂ, ಸರ್ವಜ್ಞರೂ, ಮುಪ್ಪು ಸಾವುಗಳಿಲ್ಲದವರೂ, ಸಮಸ್ತರನ್ನನುಗ್ರಹಿಸುವುದರಲ್ಲಾಸಕ್ತಿಯುಳ್ಳವರೂ, ನಾನಾಪ್ರಕಾರವುಳ್ಳವರೂ, ಶತಕೋಟಿಸಂಖ್ಯೆಯುಳ್ಳವರೂ ಆದ ಆ ಸಮಸ್ತರುದ್ರರನ್ನು ನೋಡಿ ಶಿವನನ್ನು ಕುರಿತು ಹೇಳಿದನು,, ಇತ್ಯಾದಿಯಾಗಿ ಹೇಳಲ್ಪಟ್ಟಿರುವ ವಾಕ್ಯಗಳಿಂದ ಮಹೇಶ್ವರನದೆಸೆಯಿಂದ ರುದ್ರರು ಹುಟ್ಟಿದರೆಂದು ತಿಳಿಯತಕ್ಕದ್ದು. ಎಲೈ ಚೋಳನೇ ! ಇದನ್ನಾಲೋಚಿಸದೆ, "ನಾರಾಯಣನಿಂದ ರುದ್ರನು ಹುಟ್ಟಿದನು,, ಎಂದು ಪುನಃ ಹೇಳುತ್ತೀಯಾದರೆ ? ಶಿವನು ವಿಷ್ಣುವಿನ ಎದೆಯನ್ನು ಸೀಳಿ ಅವನ ಕಳೇಬರವನ್ನು ತ್ರಿಶೂಲದಿಂದ ಚುಚ್ಚಿ ತೆಗೆದುಕೊಂಡು ಪ್ರಮಥಶ್ರೇಷ್ಠರೊಡನೆ ಕೈಲಾಸವನ್ನು ಪ್ರವೇಶಿಸಿದನು,, ಇತ್ಯಾದಿಯಾಗಿ ನಿರೂಪಿಸುವ ಕೂರ್ಮಪುರಾಣವಾಕ್ಯಗಳಿಗೂ, "ಸುಪುತ್ರನು ತನ್ನ ತಂದೆಯ ನಡವಳಿಕೆಗಳನ್ನು ಅವಶ್ಯವಾಗನುಸರಿಸುತ್ತಾನೆ,, ಎಂದು ಹೇಳುವ ಮನುಸ್ಮೃತಿವಾಕ್ಯಕ್ಕೂ ವಿರೋಧಪ್ರಸಕ್ತಿಯುಂಟಾಗುವುದರಿಂದ ಧ್ಯಾನನಿರತನಾಗಿದ್ದ ಆದಿನಾರಾಯಣನ ಆಜ್ಞಾಚಕ್ರದಲ್ಲಿ ರುದ್ರನು ಮೂಡಿ ಆ ನಾರಾಯಣನನ್ನನುಗ್ರಹಿಸಿದನೆಂದು ತಿಳಿಯಬೇಕು. ಬಹಳ ಹೇಳುವುದರಿಂದ ಸಾಕು.

ಇತ್ಯಾದಿನಾರಾಯಣಸ್ಯ ಲಲಾಟೇ ರುದ್ರಪ್ರಸನ್ನತಾವಿಧಿರಷ್ಟಮೋಪದೇಶೇ
ತೃತೀಯಸ್ಸಂವಾದಃ.

ಶ್ರೀಃ.

## ಬ್ರಹ್ಮಲಲಾಟೇರುದ್ರಸ್ಯಪ್ರಸನ್ನತಾವಿಧಿಃ.

ಚೋ—"ಲಲಾಟಾದ್ರುದ್ರೋಽಜಾಯತ" ಇತಿ ಜಾಬಾಲಶ್ರುತೇಃ, ಪ್ರಾಣಾತ್ಮಕಸ್ಸಮುದ್ಭೂತೋ ಲಲಾಟಾದ್ಬ್ರಹ್ಮಣೋ ಹರಃ" ಇತ್ಯಾದಿತ್ಯಪುರಾಣವಚನಾಚ್ಚ, ಸ್ವಾಮಿನ್ ಶ್ರೀರೇಣುಕಗಣೇಂದ್ರ ! ಆದಿಬ್ರಹ್ಮಣೋ ಲಲಾಟಾದ್ರುದ್ರೋತ್ಪತ್ತಿಃ ಶ್ರೂಯತೇ ಕಿಮುತ್ತರಂ ?

ರೇ—ಹೇ ಚೋಳಮಂದಬುದ್ಧೇ ! ಪ್ರಾಗೇವಾಸ್ಮಾಭಿರುತ್ತರಂ ದತ್ತಂ ಪುನರಪಿ ಶ್ರೂಯತಾಂ, ಸ್ಕಾಂದೇ ಕಾಳಿಕಾಖಂಡೇ ಶರಭಾಧ್ಯಾಯೇ,--ನರಹರಿಂಪ್ರತಿ ಶರಭರುದ್ರವಾಕ್ಯಂ, "ಸೃಷ್ಟ್ಯರ್ಥಂ ಜಗತಃ ಪೂರ್ವಂ ಶಂಕರಂ ನೀಲಲೋಹಿತಂ||ಲಲಾಟೇ ಚಿಂತಯನ್ಬ್ರಹ್ಮಾ ತಪಸ್ಯುಗ್ರೇ ವ್ಯವಸ್ಥಿತಃ|| ತಲ್ಲಲಾಟಾದಭೂದ್ರುದ್ರಸ್ಸ

ಎಂಬಲ್ಲಿಗೆ ಆದಿನಾರಾಯಣನ ಲಲಾಟದಲ್ಲಿ ರುದ್ರಪ್ರಸನ್ನತಾವಿಧಿಯನ್ನು ಹೇಳುವ
ಎಂಟನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.

### ಬ್ರಹ್ಮನ ಲಲಾಟದಲ್ಲಿ ರುದ್ರಪ್ರಸನ್ನತಾವಿಧಿಯು.

ಚೋ—"ಬ್ರಹ್ಮನ ಲಲಾಟದಿಂದ ರುದ್ರನು ಹುಟ್ಟಿದನು,, ಎಂದು ಹೇಳುವ ಜಾಬಾಲಶ್ರುತಿವಾಕ್ಯವಿರುವುದರಿಂದಲೂ, "ಬ್ರಹ್ಮನ ಲಲಾಟದದಿಂದ ಪ್ರಾಣಲಿಂಗಸ್ವರೂಪನಾದ ರುದ್ರನು ಹುಟ್ಟಿದನು,, ಎಂದು ಹೇಳುವ ಆದಿತ್ಯಪುರಾಣವಚನವಿರುವುದರಿಂದಲೂ, ಎಲೈ ಸ್ವಾಮಿಯಾದ ಶ್ರೀ ರೇಣುಕಗಣೇಂದ್ರನೇ ! ಬ್ರಹ್ಮನ ಲಲಾಟದದೆಸೆಯಿಂದ ರುದ್ರನ ಉತ್ಪತ್ತಿಯು ಕೇಳಲ್ಪಡುತ್ತದೆ. ಆದಕ್ಕೇನು ಉತ್ತರವನ್ನು ಹೇಳುತ್ತೀಯೆ ?

ರೇ—ಎಲೈ ಮೂಢಮತಿಯಾದ ಚೋಳನೇ ! ಈ ಪ್ರಶ್ನೆಗೆ ಉತ್ತರವನ್ನು ಮೊದಲೇ ಹೇಳಿದೆವಾದರೂ, ಪುನಃ ಹೇಳುತ್ತೇವೆ ಕೇಳು; ಸ್ಕಾಂದದಲ್ಲಿ—"ಪೂರ್ವದಲ್ಲಿ ಜಗತ್ತನ್ನು ಸೃಷ್ಟಿಸುವುದಕ್ಕಾಗಿ ನೀಲಕಂಠನಾದ ಶಂಕರನನ್ನು ಭ್ರೂಮಧ್ಯದಲ್ಲಿ ಧ್ಯಾನಿಸುತ್ತ ಉಗ್ರತಪಸ್ಸನ್ನು ಮಾಡಿದ ಆದಿಬ್ರಹ್ಮನ ಲಲಾಟದದೆಸೆಯಿಂದ ರುದ್ರನು ಪ್ರಸನ್ನನಾದನು. ಅದು ನಿಂದೆಯಲ್ಲ,,

ಷ್ಟ್ಯರ್ಥಂ ತನ್ನದೂಷಣಂ'' ಕಾಳಿಕಾಖಂಡೇ,—'' ಪ್ರಾದುರಾಸೀದ್ವಿರೂಪಾಕ್ಷೋ ಧ್ಯಾಯತೋ ಬ್ರಹ್ಮಣೋಽಲಿಕಾತ್ || ಉಮಾ ದಾಕ್ಷಾಯಣೀ ನಾಮ್ನಾ ತಥಾ ದಕ್ಷಪ್ರಜಾಪತೇಃ'' ಇತಿ. ಆದಿತ್ಯಪುರಾಣೇ.-ಬ್ರಹ್ಮವಾಕ್ಯಂ, '' ನಮಸ್ತ್ರಿಮೂರ್ತಯೇ ತುಭ್ಯಂ ಬ್ರಹ್ಮಣೋ ಜನಕಾಯ ಮೇ || ಬ್ರಹ್ಮವಿದ್ಯಾಧಿಪತಯೇ ಬ್ರಹ್ಮವಿದ್ಯಾಪ್ರದಾಯಿನೇ'' ತತ್ರ,-ದಕ್ಷಂ ಪ್ರತಿ ಬ್ರಹ್ಮವಾಕ್ಯಂ, '' ಸಾ ಚ ಶಕ್ತಿಃ ಪರಾ ಗೌರೀ ಸ್ವೇಚ್ಛಾ ವಿಗ್ರಹಧಾರಿಣೀ || ತವ ಪುತ್ರೀಂ ತು ದುರ್ಬುದ್ಧೇ ಮನ್ಯಸೇ ತಮಸಾವೃತಃ || ಕಸ್ತಾಂ ಜಾನಾತಿ ವಿಶ್ವೇಶೀಂ ವಿಶ್ವೇಶ್ವರಾರ್ಧಶರೀರಿಣೀಂ || ಅಹಂ ನಾದ್ಯಾಪಿ ಜಾನಾಮಿ ಚಕ್ರೀ ಶಕ್ರಶ್ಚ ಕಾ ಕಥಾ || ಸ್ವೇಚ್ಛಾವಿಗ್ರಹರೂಪಿಣ್ಯಾ ಗೌರ್ಯಾ ಸಹ ಪಿನಾಕಭೃತ್ || ಭ್ರಾಮಯತ್ಯಖಿಲಂ ವಿಶ್ವಮಿತಿ ಸತ್ಯಂ ನ ಸಂಶಯಃ'' ಇತ್ಯಾದಿವಾಕ್ಯೈರ್ಬ್ರಹ್ಮಲಲಾಟೇ ರುದ್ರಪ್ರಸನ್ನತಾ ವಿಜ್ಞೇಯಾ ವಿಸ್ತರೇಣಾಲಂ.

ಇತಿ ಬ್ರಹ್ಮಲಲಾಟೇ ರುದ್ರಪ್ರಸನ್ನತಾವಿಧಿರಷ್ಟಮೋಪದೇಶೇ ಚತುರ್ಥಸ್ಸಂವಾದಃ.

---

ಎಂದು ಶರಭರುದ್ರನಿಂದ ನೃಸಿಹ್ಮನಿಗೆ ಹೇಳಲ್ಪಟ್ಟಿದೆ. ಕಾಳಿಕಾಖಂಡದಲ್ಲಿ—''ಲೋಕಸೃಷ್ಟಿಗಾಗಿ ಧ್ಯಾನನಿರತನಾದ ಆದಿಬ್ರಹ್ಮನ ಹಣೆಯಿಂದ ರುದ್ರನು ಆವಿರ್ಭವಿಸಿ ಪ್ರಸನ್ನನಾದನು. ಆ ಪ್ರಕಾರವಾಗಿಯೇ ಉಮಾದೇವಿಯು ದಾಕ್ಷಾಯಣಿಯೆಂಬ ಹೆಸರಿನಿಂದ ದಕ್ಷಬ್ರಹ್ಮನಿಗೆ ಮಗಳಾಗಿ ದಕ್ಷನನ್ನನುಗ್ರಹಿಸಿದಳು,, ಎಂದು ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ—''ತ್ರಿಮೂರ್ತಿಸ್ವರೂಪನೂ, ಬ್ರಹ್ಮನೆನಿಸಿದ ನನಗೆ ತಂದೆಯೂ, ಬ್ರಹ್ಮವಿದ್ಯೆಗಧಿಪತಿಯೂ ಬ್ರಹ್ಮವಿದ್ಯೆಯನ್ನು ಕೊಡತಕ್ಕವನೂ ಆದನಿನಗೋಸ್ಕರ ನಮಸ್ಕಾರವು,, ಎಂದು ಶಿವನನ್ನು ಕುರಿತು ಬ್ರಹ್ಮನಿಂದ ಹೇಳಲ್ಪಟ್ಟಿದೆ. ಆ ಪುರಾಣದಲ್ಲೇ—''ಸ್ವೇಚ್ಛಾನುಸಾರವಾಗಿ ಅನೇಕ ಲೀಲಾಶರೀರಗಳನ್ನು ಹೊಂದುವವಳಾದಗೌರೀದೇವಿಯು ಶಿವನ ಪರಾಖ್ಯವಾದ ಶಕ್ತಿಯಾಗಿರುತ್ತಾಳೆ. ಎಲೈ ದುರ್ಮತಿಯಾದ ದಕ್ಷನೇ ! ನೀನು ಅಜ್ಞಾನದಿಂದ ಆ ಶಿವಶಕ್ತಿಯನ್ನು ನಿನ್ನ ಮಗಳನ್ನಾಗಿ ತಿಳಿಯುತ್ತೀಯೆ. ಪರಮೇಶ್ವರನ ಅರ್ಧಶರೀರಿಣಿಯಾದ ಆ ಜಗನ್ಮಾತೆಯನ್ನು ಯಾವನೂ ತಿಳಿಯಲಾರನು. ನಾನೂ ನಾರಾಯಣನೂ, ಇಂದ್ರನೂ, ಈವರೆಗೂ ಆಕೆಯ ಸ್ವರೂಪವನ್ನರಿಯದವರಾಗಿರುತ್ತೇವೆ, ಪರಮೇಶ್ವರನು ಸ್ವೇಚ್ಛಾಶರೀರಧಾರಿಣಿಯಾದ ಗೌರೀದೇವಿಯೊಡನೆ ಕೂಡಿದವನಾಗಿ, ಸಮಸ್ತ ಪ್ರಪಂಚವನ್ನು ಸಂಸಾರಚಕ್ರದಲ್ಲಿ ತಿರುಗಿಸುತ್ತಿದ್ದಾನೆ. ಇದು ಸತ್ಯವು. ಸಂಶಯವಿಲ್ಲ,, ಎಂದು ದಕ್ಷನಿಗೆ ಬ್ರಹ್ಮನಿಂದ ನಿರೂಪಿತವಾಗಿದೆ. ಇತ್ಯಾದಿ ವಚನಗಳಿಂದ ಬ್ರಹ್ಮಲಲಾಟದಲ್ಲಿ ರುದ್ರಪ್ರಸನ್ನತೆಯನ್ನು ತಿಳಿಯಬೇಕು. ವಿಸ್ತಾರದಿಂದ ಸಾಕು.

ಎಂಬಿಲ್ಲಿಗೆ ಬ್ರಹ್ಮನ ಲಲಾಟದಲ್ಲಿ ರುದ್ರಪ್ರಸನ್ನತ್ವವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



ಶ್ರೀಃ.

## ಅನಸೂಯಾಂಜಲಿಪುಷ್ಪೇ ರುದ್ರಪ್ರಸನ್ನತಾವಿಧಿಃ.

ರೇ—ಭೋ ಜೋಳ ! ಮಹಾಪತಿವ್ರತಾಯಾ ಅತ್ರಿಮುನಿಪತ್ನ್ಯಾಃ ಅನಸೂಯಾದೇವ್ಯಾಃ ಕರಾಂಜಲಿಪುಷ್ಪೇ ರುದ್ರಪ್ರಸನ್ನತಾ ಶ್ರೂಯತಾಂ, ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—"ಬ್ರಹ್ಮಾ ಚ ಭಗವಾನ್ವಿಷ್ಣುರ್ಜಜ್ಞಾತೇ ತತ್ಸುತೌ ಪುರಾ|| ದೂರ್ವಾಸನಾಮಾ ಪುತ್ರೋಽಭೂತ್ತಸ್ಯಾಃ ಪುಷ್ಪಾಂಜಲೇಶ್ಶಿವಃ" ಇತಿ. ಕಾಶಿಕಾಖಂಡೇ,-ಅನಸೂಯಾವಚನಂ, "ದಧುಶ್ಚ ಮಮ ಪುತ್ರತ್ವಂ ಬ್ರಹ್ಮವಿಷ್ಣುಮಹೇಶ್ವರಾಃ || ರುದ್ರೋ ಬ್ರಹ್ಮಾ ತತೋ ವಿಷ್ಣುರ್ದತ್ತಾತ್ರೇಯೋ ವ್ಯಜಾಯತ || ಅಂತರಾಂಜಲಿಪುಷ್ಪೇಷು ಪ್ರವಿಶ್ಯಾಂಶಃ ಪಿನಾಕಿನಃ || ಗರ್ಭವಾಸೋತಿದುರ್ವಾಸಸ್ಸರ್ವಾವಾಸೇಷ್ವಿತೀರಯನ್ || ದೂರ್ವಾಸನಾಮಪುತ್ರೋಽಭೂದ್ಧೂತಸಂಸಾರಬಂಧನಃ"

ಇತ್ಯನಸೂಯಾಂಜಲಿಪುಷ್ಪೇ ರುದ್ರಪ್ರಸನ್ನತಾವಿಧಿರಷ್ಟಮೋಪದೇಶೇ ಪಂಚಮಸ್ಸಂವಾದಃ.



---

### ಅನಸೂಯಾಂಜಲಿಪುಷ್ಪದಲ್ಲಿ ರುದ್ರಪ್ರಸನ್ನತಾವಿಧಿಯು.

ರೇ—ಎಲೈ ಜೋಳನೇ ! ಮಹಾಪತಿವ್ರತೆಯಾದ ಅತ್ರಿಮುನಿಪತ್ನಿಯಾದ ಅನಸೂಯಾದೇವಿಯ ಕರಾಂಜಲಿಯಲ್ಲಿದ್ದ ಪುಷ್ಪದಲ್ಲಿ ರುದ್ರನು ಪ್ರಸನ್ನನಾದ ಸಂಗತಿಯನ್ನು ಕೇಳು; ಸ್ಕಾಂದದಲ್ಲಿಯ ಸನತ್ಕುಮಾರಸಂಹಿತೆಯಲ್ಲಿ—"ಪೂರ್ವದಲ್ಲಿ ಆ ಅನಸೂಯಾದೇವಿಗೆ ಬ್ರಹ್ಮವಿಷ್ಣುಗಳು ಮಕ್ಕಳಾಗಿ ಜನಿಸಿದರು. ರುದ್ರನು ಆಕೆಯ ಪುಷ್ಪಾಂಜಲಿಯದೆಸೆಯಿಂದ ದೂರ್ವಾಸನೆಂಬ ಹೆಸರನ್ನು ಹೊಂದಿ ಪುತ್ರನಾಗಿ ಜನಿಸಿದನು" ಎಂದು ಹೇಳಲ್ಪಟ್ಟಿದೆ. ಕಾಶಿಕಾಖಂಡದಲ್ಲಿ — "ಬ್ರಹ್ಮವಿಷ್ಣುರುದ್ರರುಸೇರಿ ದತ್ತಾತ್ರೇಯನೆಂಬ ಹೆಸರುಳ್ಳವರಾಗಿ ನನ್ನ ಮಕ್ಕಳಾದರು. ರುದ್ರನ ಒಂದಂಶವು ನನ್ನ ಪುಷ್ಪಾಂಜಲಿಯಲ್ಲಿ ಪ್ರವೇಶಿಸಿ ಸಕಲ ವಿಧವಾದ ವಾಸಸ್ಥಾನಗಳಲ್ಲಿ ಗರ್ಭವಾಸವು ಬಹಳ ಕೆಟ್ಟುದಾದ ವಾಸವುಳ್ಳದ್ದೆಂಬಂಶವನ್ನು ಸಕಲ ಜೀವರಿಗೆ ತಿಳಿಸುವವನಾಗಿ ಸಂಸಾರಬಂಧರಹಿತನಾದ ದೂರ್ವಾಸನೆಂಬ ಹೆಸರುಳ್ಳ ಪುತ್ರನಾಗಿ ಜನಿಸಿತು" ಎಂದು ಅನಸೂಯೆಯಿಂದುಕ್ತವಾಗಿದೆ.

ಎಂಬಲ್ಲಿಗೆ ಅನಸೂಯಾಂಜಲಿಪುಷ್ಪದಲ್ಲಿ ರುದ್ರಪ್ರಸನ್ನತಾವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.



ಶ್ರೀಃ.

## ಮಹಾಬ್ರಾಹ್ಮಣರುದ್ರಪಿಂಡಪ್ರದಾನಾತ್ಸರ್ವ ಬ್ರಾಹ್ಮಣೋತ್ಪತ್ತಿವಿಧಿಃ.

ರೇ-ಭೋ ಜೋಳ ! ಮಹಾಬ್ರಾಹ್ಮಣರುದ್ರಪಿಂಡಪ್ರದಾನಾತ್ಸರ್ವಬ್ರಾಹ್ಮಣ ಸೃಷ್ಟಿಸ್ತ್ರಯೀಪ್ರಸಿದ್ಧೇತಿ ಶ್ರೂಯತಾಂ, ಋಗ್ವೇದೇ,—“ ಪಿಂಡಾನಾಂ ಮಧ್ಯಮಂ ಪತ್ನೀಂ ಪ್ರಾಶಯೇತ್ ” ಯಜುರ್ವೇದೇ,—“ ಮಧ್ಯಮಂ ಪಿಂಡಂ ಪತ್ನ್ಯೈ ಪ್ರಯಚ್ಛೇತ್ ” ಸಾಮವೇದೇ ಛಾಂದೋಗ್ಯೋಪನಿಷದಿ,—“ ಬ್ರಹ್ಮವಾದಿನೋ ವದಂತಿ ಯದ್ವಸೂನಾಂ ಪ್ರಾತಸ್ಸವನಂ ರುದ್ರಾಣಾಂ ಮಾಧ್ಯಂ ದಿನಂ ಸವನಮಾದಿತ್ಯಾನಾಂ ವಿಶ್ವೇಷಾಂ ಚ ದೇವಾನಾಂ ತೃತೀಯಂ ಸವನಂ ” ಇತಿ. ಲೈಂಗೇ,—“ ವಸುರುದ್ರಾರ್ಕರೂಪೇಷು ಮಧ್ಯಪಿಂಡಸ್ತು ಪುತ್ರದಃ॥ವೇದೋಕ್ತಂ ರುದ್ರನಿರ್ಮಾಲ್ಯಂ ಕಿಂ ಪುನರ್ಬಹುಭಾಷಿತೈಃ ” ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—“ ಪಿಂಡಾನಾಂ ಮಧ್ಯಮಮೃಚಿಪುನಃ ಪ್ರಾಶಯೇತ್ಪ್ರಾಹ ಪತ್ನೀಂ ತತ್ಪಿಂಡಂ ಮಧ್ಯಮಮಪಿ ಯಜುಃ ಪ್ರಾಹ ಪತ್ನ್ಯೈತು ಪ್ರಯಚ್ಛೇತ್॥ಸಾಮಃ ಪ್ರಾತಸ್ಸವನಮಿತಿ ಯಾ

---

ಮಹಾಬ್ರಾಹ್ಮಣರುದ್ರಪಿಂಡಪ್ರದಾನದಿಂದ ಸರ್ವಬ್ರಾಹ್ಮಣೋತ್ಪತ್ತಿವಿಧಿಯು.

ರೇ-ಎಲೈ ಜೋಳನೇ ! ಮಹಾಬ್ರಾಹ್ಮಣನಾದ ರುದ್ರನ ಸಂಬಂಧವಾದ ಪಿಂಡವನ್ನು ಸೇವಿಸುವುದರಿಂದ ಸಕಲ ಬ್ರಾಹ್ಮಣರ ಉತ್ಪತ್ತಿಯುಂಟಾಗುವುದೆಂದು ಮೂರುವೇದಗಳಲ್ಲಿ ಪ್ರಸಿದ್ಧವಾಗಿರುವುದನ್ನು ಕೇಳು; ಋಗ್ವೇದದಲ್ಲಿ—“ಬ್ರಾಹ್ಮಣನು-ಶ್ರಾದ್ಧಕಾಲದಲ್ಲಿ ವಸು, ರುದ್ರ, ಅರ್ಕ ಎಂಬ ಮೂರು ಪಿಂಡಗಳಲ್ಲಿ ಮಧ್ಯವರ್ತಿಯಾದ ರುದ್ರಸಂಜ್ಞಕವಾದ ಪಿಂಡವನ್ನು ಮಡದಿಗೆ ಕೊಟ್ಟು ಉಣಿಸಬೇಕು,, ಎಂದೂ, ಯಜುರ್ವೇದದಲ್ಲಿ—“ಮಧ್ಯಮವಾದ ಪಿಂಡವನ್ನು ತನ್ನ ಪತ್ನಿಗಾಗಿ ಕೊಡಬೇಕು,, ಎಂದೂ, ಸಾಮವೇದದಲ್ಲಿರುವ ಛಾಂದೋಗ್ಯೋಪನಿಷತ್ತಿನಲ್ಲಿ—“ಪ್ರಾತಸ್ಸವನವು ಅಷ್ಟವಸುಗಳ ಸಂಬಂಧವಾದುದು. ಮಾಧ್ಯಂದಿನಸವನವು ರುದ್ರರ ಸಂಬಂಧವಾದುದು. ತೃತೀಯಸವನವು ವಿಶ್ವೇದೇವತೆಗಳ ಸಂಬಂಧವಾದುದು,, ಎಂದು ಬ್ರಹ್ಮವಾದಿಗಳು ಹೇಳುತ್ತಾರೆ,, ಎಂದೂ ಪ್ರೋಕ್ತವಾಗಿದೆ. ಲಿಂಗಪುರಾಣದಲ್ಲಿ—“ವಸು, ರುದ್ರ, ಅರ್ಕ ಎಂಬ ಪಿಂಡಗಳಲ್ಲಿ ಮಧ್ಯಮವಾದ ರುದ್ರಪಿಂಡವು ಸಂತಾನಪ್ರದವಾದುದು. ಆದ್ದರಿಂದ ವೇದೋಕ್ತವಾದ ರುದ್ರನಿರ್ಮಾಲ್ಯಮಹತ್ವವಿಚಾರವನ್ನು ಬಹಳವಾಗಿ ಹೇಳುವುದರಿಂದೇನು ?,, ಎಂದೂ, ಸ್ಕಾಂದದಲ್ಲಿರುವ ಸನತ್ಕುಮಾರಸಂಹಿತೆಯಲ್ಲಿ—“ಶ್ರಾದ್ಧದಲ್ಲಿ ಬ್ರಾಹ್ಮಣನು ಪಿಂಡಗಳೊಳಗೆ ಮಧ್ಯಮಪಿಂಡವನ್ನು ತನ್ನ ಭಾರ್ಯೆಗೆ ಕೊಟ್ಟು ಭೋಜನಮಾಡಿಸಬೇಕೆಂದು ಋಗ್ವೇದಮಂತ್ರವೂ, ಯಜುರ್ವೇದಮಂತ್ರವೂ, ಮಾಧ್ಯಂದಿನಸವನವು ರುದ್ರಸಂಬಂಧಿಯಾದುದೆಂದು

ಯದ್ವಸೂನಾಂ ತ್ರಯೀ ಸಾ ಯೇಷಾಂ ಮುಖ್ಯಾ ಶಿವಸಮಯಿನಸ್ತೇsನ್ಯದೇವೇನ ಭಕ್ತಾಃ || ರುದ್ರಪಿಂಡೋದ್ಭವೋ ವಿಪ್ರಶ್ಶಿವಂ ಸರ್ವೇಶ್ವರಂ ಗುರುಂ || ಮೋಹೇನೈವ ನ ಜಾನಾತಿ'' ಕೂರ್ಮೇ ಶಿವಗೀತಾಯಾಂ,—ಶಿವಃ, ಮಾಮೇವಂ ಯೋ ವಿಜಾನಾತಿ ಜಗತಃ ಪಿತರಂ ವಿಭುಂ || ಸ ಧೀರಸ್ಸರ್ವಲೋಕೇಷು ನಮೋsತಹಮಧಿಗಚ್ಛತಿ'' ಇತ್ಯಾದಿಬಹುಪ್ರಸಿದ್ಧಂ.

ಇತಿ ಮಹಾಬ್ರಾಹ್ಮಣರುದ್ರಪಿಂಡಪ್ರದಾನಾತ್ಸರ್ವಬ್ರಾಹ್ಮಣೋತ್ಪತ್ತಿವಿಧಿ ರಷ್ಟಮೋಪದೇಶೇ ಷಷ್ಠಸ್ಸಂವಾದಃ.



ಶ್ರೀಃ.

## ಸರ್ವಬ್ರಾಹ್ಮಣೈರ್ಮಹಾಬ್ರಾಹ್ಮಣರುದ್ರಸ್ಯಪೂಜಾವಿಧಿಃ.

ರೇ—ಹೇ ಚೋಳ ! ಸರ್ವಬ್ರಾಹ್ಮಣೈಃ ಕರ್ತವ್ಯಾ ಮಹಾಬ್ರಾಹ್ಮಣರುದ್ರ ಪೂಜಾವಿಧಿಃ ಶ್ರೂಯತಾಂ, ಋಗ್ವೇದೇ,—"ತ್ರ್ಯಂಬಕಂ ಯಜಾಮಹೇ'' ಯಜುರ್ವೇದೇ,—"ನಮಸ್ತೇsಸ್ತೋವರಾಯ ಚ ರುದ್ರಾಯ ಚ'' ಸಾಮವೇದೇ,—" ಚಂದ್ರ

---

ಸಾಮವೇದಮಂತ್ರವೂ ಹೇಳುತ್ತಿರುವುದರಿಂದ ಆ ವೇದತ್ರಯವು ಯಾರಿಗೆ ಮುಖ್ಯವಾದದ್ದೋ, ಶಿವಾಚಾರಸಂಪನ್ನರೇ ಆದ ಅವರು ಶಿವೇತರ ದೇವತೆಗಳಲ್ಲಿ ಭಕ್ತಿಯುಳ್ಳವರಲ್ಲವು. ಬ್ರಾಹ್ಮಣನು ರುದ್ರಪಿಂಡಸಂಜಾತನಾಗಿದ್ದರೂ, ಸರ್ವೇಶ್ವರನಾದ ಶಿವನನ್ನು ಸಕಲ ಜಗತ್ತಿಗೆ ಗುರುವನ್ನಾಗಿ ಅಜ್ಞಾನದಿಂದ ತಿಳಿಯದವನಾಗಿರುತ್ತಾನೆ,, ಎಂದೂ ಹೇಳಲ್ಪಟ್ಟಿದೆ. ಕೂರ್ಮಪುರಾಣದಲ್ಲಿರುವ ಶಿವಗೀತೆಯಲ್ಲಿ —"ವ್ಯಾಪಕನಾಗಿರುವ ನನ್ನನ್ನು ಲೋಕಕ್ಕೆ ತಂದೆಯನ್ನಾಗಿ ತಿಳಿದವನು ಸರ್ವಲೋಕಗಳಲ್ಲೂ ಧೈರ್ಯಶಾಲಿಯಾಗಿ ಜ್ಞಾನಿಯಾಗುವನು,, ಎಂದು ಶಿವನಿಂದ ನಿರೂಪಿತವಾಗಿದೆ. ಇತ್ಯಾದಿ ವಚನಗಳು ಪ್ರಸಿದ್ಧವಾಗಿರುತ್ತವೆ.

ಎಂಬಲ್ಲಿಗೆ ಮಹಾಬ್ರಾಹ್ಮಣನಾದ ರುದ್ರನ ಪಿಂಡಪ್ರದಾನದಿಂದ ಸಮಸ್ತ ಬ್ರಾಹ್ಮಣರ ಉತ್ಪತ್ತಿವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



### ಸರ್ವಬ್ರಾಹ್ಮಣರಿಂದ ಮಹಾಬ್ರಾಹ್ಮಣನಾದ ರುದ್ರನ ಪೂಜಾವಿಧಿಯು.

ರೇ—ಎಲೈ ಚೋಳನೇ ! ಸರ್ವಬ್ರಾಹ್ಮಣಕರ್ತವ್ಯವಾದ ಮಹಾಬ್ರಾಹ್ಮಣನಾದ ಆದಿರುದ್ರನ ಪೂಜಾವಿಧಿಯನ್ನು ವಿಧಿವಚನಮುಖದಿಂದ ಕೇಳು; ಋಗ್ವೇದದಲ್ಲಿ—"ತ್ರ್ಯಂಬಕನಾದ ಪರಮೇಶ್ವರನನ್ನು ಪೂಜಿಸುತ್ತೇವೆ'' ಎಂದೂ, ಯಜುರ್ವೇದದಲ್ಲಿ —"ಉಮೆಯೆಂಬ ಶಕ್ತಿಯಿಂದ

ಲಲಾಟಾಯ ಕೃತ್ತಿವಾಸಸೇ ನಮೋ ನಮಃ '' ಅಥರ್ವಶಿರಸಿ,—'' ತೇ ದೇವಾ ರು ದ್ರಂ ಧ್ಯಾಯಂತಿ | ತತೋ ದೇವಾ ಊರ್ಧ್ವಬಾಹವಸ್ತುನ್ವಂತಿ'' ಇತಿ ಚತುರ್ವೇದ ಪ್ರತಿಪಾದಿತವಿಧಿಮುಖೇನ ರುದ್ರಸ್ಯ ಪೂಜಾ ನಮಸ್ಕಾರಸ್ತುತಯಃ ಸರ್ವಬ್ರಾಹ್ಮಣೈ ರವಶ್ಯಂ ಕರಣೀಯಾಃ. ನಿಷೇಧಮುಖೇನ ವಿಷ್ಣುಪೂಜಾದಿಷು ನಿರತಸ್ಯ ಬ್ರಾಹ್ಮಣಸ್ಯ ವೇದಪ್ರಸಿದ್ಧದೋಷಃ ಶ್ರೂಯತಾಂ, ಯಜುರ್ವೇದೇ,—''ಯೋ ವೈ ಸ್ವಾಂ ದೇವತಾ ಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ ಪ್ರಾಪ್ನೋತಿ ಪಾಪೀ ಯಾನ್ಭವತಿ'' ಕಥಾsಽಹ ನೈರುಕ್ತಃ,—''ಅಸ್ಯಾರ್ಥಃ ಕಥ್ಯತೇ ವಿಪ್ರೋ ಯಸ್ತು ಸ್ವಾಂ ದೇವತಾಂ ಶಿವಂ || ಅತ್ಯತಿಕ್ರಮ್ಯ್ಯಯಜತೇ ಪೂಜಯತ್ಯನ್ಯದೇವತಾಂ || ಸ ಹಿ ಪ್ರ ಚ್ಯವತೇ ಸ್ವೀಯದೇವತಾಯೈ ನರಾಧಮಃ || ಭೂತ್ವಾಽಪರಾಧೀನಪರಾಂ ಪ್ರಾಪ್ನೋ ತಿ ಗತಿಮುತ್ತಮಾಂ || ನ ಗಚ್ಛತ್ಯಥ ಪಾಪೀಯಾನತಿಪಾಪೀ ಭವೇದ್ಧ್ರುವಂ'' ಇತಿ. ವೀರತಂತ್ರೇ ಸಹಸ್ರಕೋಟಿಸಂಹಿತಾಯಾಂ,—ಶಿವಃ, ''ಬ್ರಾಹ್ಮಣಾನಾಂ ತು ಸರ್ವೇ ಷಾಂ ಶಿವೋಽಹಮಧಿದೈವತಂ || ವಿಷ್ಣೋರಾರಾಧನಾದ್ದೇವಿ ಬ್ರಹ್ಮತ್ವಂ ನೈವ ವಿ

---

ಕೊಡಿದವನಿಗೋಸ್ಕರ ನಮಸ್ಕಾರವಾಗಲಿ, ರುದ್ರನಿಗೋಸ್ಕರ ನಮಸ್ಕಾರವಾಗಲಿ,, ಎಂದೂ, ಸಾಮವೇದದಲ್ಲಿ—''ಚಂದ್ರಶೇಖರನೂ, ಗಜಚರ್ಮಾಂಬರಧಾರಿಯೂ ಆದ ರುದ್ರನಿಗೋಸ್ಕರ ನಮಸ್ಕಾರವು ನಮಸ್ಕಾರವು,, ಎಂದೂ, ಅಥರ್ವಶಿರಸ್ಸಿನಲ್ಲಿ—''ಆ ದೇವತೆಗಳು ರುದ್ರನನ್ನು ಧ್ಯಾನಿಸುತ್ತಿರುವರು ಆ ಕಾರಣದಿಂದ ಆ ದೇವತೆಗಳು ಮೇಲಕ್ಕೆತ್ತಲ್ಪಟ್ಟ ತೋಳುಗಳುಳ್ಳವ ರಾಗಿ ಸ್ತುತಿಸುತ್ತಿರುವರು,. ಎಂದೂ ಹೇಳಲ್ಪಟ್ಟಿದೆ. ಈರೀತಿಯಾಗಿ ನಾಲ್ಕುವೇದಗಳಲ್ಲಿರುವ ವಿಧಿವಚನಗಳಿಂದ ಪ್ರತಿಪಾದಿತವಾಗಿರುವ ರುದ್ರಪೂಜಾ ಪ್ರಣಾಮ ಸ್ತವಗಳು ಸಕಲ ಬ್ರಾಹ್ಮಣ ರಿಂದಲೂ ಅವಶ್ಯಕರಣೀಯವಾಗಿರುತ್ತವೆ. ವಿಷ್ಣುಪೂಜಾದಿಗಳಲ್ಲಾಸಕ್ತನಾಗಿರುವ ಬ್ರಾಹ್ಮಣ ನಿಗೆ ಶ್ರುತಿಪ್ರಸಿದ್ಧವಾದ ನಿಷೇಧವಚನಮುಖದಿಂದ ದೋಷವಿಚಾರವನ್ನು ಕೇಳು; ಯಜುರ್ವೇದ ದಲ್ಲಿ—''ತನ್ನ ಕುಲದೈವವಾದ ಶಿವನನ್ನು ಪೂಜಿಸಲೊಲ್ಲದೆ, ತದಿತರದೈವಗಳನ್ನು ಪೂಜಿಸುವ ಬ್ರಾಹ್ಮಣನು ಸರ್ವೋತ್ಕೃಷ್ಟವಾದ ತನ್ನ ಕುಲದೇವತೆಗಾಗಿ ಅಪರಾಧವನ್ನು ಮಾಡಿದವನಾಗಿರು ವುದರಿಂದ ಸದ್ಗತಿಯನ್ನು ಹೊಂದನು. ಅತಿಶಯಪಾಪಿಯಾಗುತ್ತಾನೆ,, ಎಂದು ಉಕ್ತವಾಗಿದೆ ಅದೇ ರೀತಿಯಾಗಿ ನಿರುಕ್ತಿಕಾರನು—''ಯಾವ ಬ್ರಾಹ್ಮಣನು—ತನ್ನ ಕುಲದೇವತೆಯಾದ ಶಿವನ ನ್ನು ಬಿಟ್ಟು ಅನ್ಯದೇವತೆಯನ್ನು ಪೂಜಿಸುತ್ತಾನೋ ಆ ಮನುಷ್ಯಾಧಮನು ತನ್ನ ದೇವತೆಗಾಗಿ ಅಪರಾಧಿಯಾದುದರಿಂದ ಮುಕ್ತಿಯನ್ನು ಹೊಂದುವುದಿಲ್ಲವು. ಅತಿಪಾಪಿಯಾಗುವನು,, ಎಂ ದು ಹೇಳಿದನು. ವೀರತಂತ್ರದಲ್ಲಿರುವ ಸಹಸ್ರಕೋಟಿಸಂಹಿತೆಯಲ್ಲಿ—''ಎಲೈ ದೇವಿಯೇ! ಶಿವಶಬ್ದವಾಚ್ಯನಾಗಿರುವ ನಾನೇ ಸಮಸ್ತ ಬ್ರಾಹ್ಮಣರಿಗೆ ಅಧಿದೇವತೆಯಾಗಿರುವೆನು. ವಿಷ್ಣು ಪೂಜಕನಿಗೆ ಬ್ರಾಹ್ಮಣ್ಯವಿರುವುದಿಲ್ಲವು. ದೇವತೆಗಳಿಗೊಡೆಯನಾಗಿರುವ ನನ್ನನ್ನು ಪೂಜಿಸಲೊ

ದ್ಯತೇ || ವಿಸೃಜ್ಯ ಮಾಂ ತು ದೇವೇಶಂ ವಿಷ್ಣುಮಾರಾಧಯನ್ದ್ವಿಜಃ || ಪಾಯಸಾನ್ನಂ ವಿಸೃಜ್ಯಾಥ ಶುನೋಚ್ಛಿಷ್ಟಂ ಚ ಭಕ್ಷಯೇತ್ '' ಇತ್ಯಾದಿಪ್ರಸಿದ್ಧಂ.

ಇತಿ ಸರ್ವಬ್ರಾಹ್ಮಣೈರ್ವಿಧಿನಿಷೇಧಪ್ರತಿಪಾದಿತಮಹಾಬ್ರಾಹ್ಮಣರುದ್ರಪೂಜಾವಿಧಿರಷ್ಟಮೋಪದೇಶೇ ಸಪ್ತಮಸ್ಸಂವಾದಃ.

ಶ್ರೀಃ.

## ಮಹಾಬ್ರಾಹ್ಮಣರುದ್ರಪೂಜಾನಮಸ್ಕಾರಸ್ತೋತ್ರತತ್ಪರಸ್ಯಲಕ್ಷಣಂ.

ರೇ—ಭೋ ಚೋಳ! ಮಹಾಬ್ರಾಹ್ಮಣರುದ್ರಸ್ಯ ಪೂಜಾಪ್ರಣಾಮಸ್ತವಾಸಕ್ತಬ್ರಾಹ್ಮಣಸ್ಯ ಲಕ್ಷಣಂ ಶ್ರೂಯತಾಂ, ಆದಿತ್ಯಪುರಾಣೇ,—ರವಿಃ, ‹‹ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಶ್ಶೂದ್ರೋ ವಾಪ್ಯಂತ್ಯಜಾತಿಜಃ || ಶಿವಭಕ್ತಸ್ಸದಾ ಪೂಜ್ಯಸ್ಸ ಸರ್ವಬ್ರಾಹ್ಮಣೋತ್ತಮಃ '' ತದುಕ್ತಂ ವಜ್ರಸೂಚಿಪರಮಹಂಸಾಚಾರ್ಯೇಣ,— ‹‹ ವಜ್ರಸೂಚಿಂ ಪ್ರವಕ್ಷ್ಯಾಮಿ ಶಸ್ತ್ರಮಜ್ಞಾನಭೇದನೇ || ದೂಷಣಂ ಜ್ಞಾನಹೀನಾನಾಂ ಭೂಷಣಂ ಜ್ಞಾನಚಕ್ಷುಷಾಂ || ದೇಹೇ ಬ್ರಾಹ್ಮಣ್ಯಶಂಕಾ ಚೇದತೀತಾನಾಗ

---

ಲ್ಲದೆ, ವಿಷ್ಣುವನ್ನು ಪೂಜಿಸುವ ಬ್ರಾಹ್ಮಣನು ಪರಮಾನ್ನವನುಣದೆ, ನಾಯಿಯೆಂಜಲನ್ನು ತಿಂದವನಂತಾಗುವನು. ಇತ್ಯಾದಿ ವಚನಗಳು ಪ್ರಸಿದ್ಧವಾಗಿವೆ.

ಎಂಬಲ್ಲಿಗೆ ಸಮಸ್ತ ಬ್ರಾಹ್ಮಣರಿಂದ ವಿಧಿನಿಷೇಧಮುಖದಿಂದ ಪ್ರತಿಪಾದಿಸಲ್ಪಟ್ಟ ಮಹಾಬ್ರಾಹ್ಮಣರುದ್ರಪೂಜಾವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.



ರುದ್ರಪೂಜಾನಮಸ್ಕಾರಸ್ತೋತ್ರದಲ್ಲಿ ತತ್ಪರನಾದ ಬ್ರಾಹ್ಮಣನ ಲಕ್ಷಣವು.

ರೇ - ಎಲೈ ಚೋಳನೇ! ಮಹಾಬ್ರಾಹ್ಮಣನಾದ ರುದ್ರನನ್ನು ಪೂಜಿಸುವುದರಲ್ಲೂ, ನಮಿಸುವುದರಲ್ಲೂ, ಸ್ತುತಿಸುವುದರಲ್ಲೂ ಆಸಕ್ತನಾದ ಬ್ರಾಹ್ಮಣನ ಲಕ್ಷಣವನ್ನು ಕೇಳುವವನಾಗು; ಆದಿತ್ಯಪುರಾಣದಲ್ಲಿ— ‹‹ಶಿವಭಕ್ತನು - ಬ್ರಾಹ್ಮಣನಾದರೂ, ಕ್ಷತ್ರಿಯನಾದರೂ, ವೈಶ್ಯನಾದರೂ, ಶೂದ್ರನಾದರೂ, ಅಂತ್ಯಜನಾದರೂ ಯಾವಾಗಲೂ ಪೂಜ್ಯನು. ಆತನೇ ಸಮಸ್ತಬ್ರಾಹ್ಮಣರಲ್ಲೂ ಉತ್ತಮನು,, ಎಂದು ಸೂರ್ಯನಿಂದ ಹೇಳಲ್ಪಟ್ಟಿದೆ. ಅದೇ ವಿಷಯವು ವಜ್ರಸೂಚಿಪರಮಹಂಸಾಚಾರ್ಯನಿಂದ—‹‹ಅಜ್ಞಾನವನ್ನು ಸೀಳುವುದರಲ್ಲಿ ಆಯುಧವೂ, ಅಜ್ಞಾನಿಗಳನ್ನು ದೂಷಿಸುವುದೂ, ಜ್ಞಾನಿಗಳಿಗೆ ಒಡವೆಯೂ ಆಗಿರುವ ವಜ್ರಸೂಚಿಯನ್ನು ಹೇಳುವೆನು,

ಶಾಸ್ಥಿತಾ || ತಾತಾನಾಂ ಶವಃ ಪುತ್ರೈರ್ನದಹ್ಯಾಸ್ತತ್ತತೋ ನ ಹಿ || ಜೀವೇ ಬ್ರಾಹ್ಮಣ್ಯಶಂಕಾ ಚೇತ್ಸ ಸರ್ವಪ್ರಾಣಿಸಂಸ್ಥಿತಃ || ಹಂಸರೂಪೇಣ ಚರತಿ ಬಹಿರಂತರ ತೋ ನ ಹಿ || ಜಾತೌ ಬ್ರಾಹ್ಮಣ್ಯಶಂಕಾ ಚೇನ್ನ ಭೂಮೌ ಘಟತೇ ಹಿ ಸಾ || ರುಶ್ಯಶೃಂಗವಶಿಷ್ಠಾಗಸ್ತ್ಯಾದೀನಾಂ ಜಾತಿರತ್ರ ಕಾ||ವರ್ಣೇ ಬ್ರಾಹ್ಮಣ್ಯಶಂಕಾ ಚೇನ್ಮುಖಬಾಹೂರುಪಾದಜಾಃ || ಶ್ವೇತಾದಯಸ್ಸಮಾವರ್ಣಾ ಏಕತ್ರ ಸತತಂ ನ ಹಿ|| ಧರ್ಮೇ ಬ್ರಾಹ್ಮಣ್ಯಶಂಕಾ ಚೇನ್ನಿದ್ರಾಹಾರರತಾದಯಃ || ಸರ್ವೇಷಾಮಪಿ ತೇ ಧರ್ಮಾಸ್ಸಮಾನಾಸ್ತು ತತೋ ನ ಹಿ || ಕರ್ಮಬ್ರಾಹ್ಮಣ್ಯಶಂಕಾ ಚೇತ್ಕರ್ಮೋಪನಯನಾದಿಕಂ || ಸಮಾನಂ ಕ್ಷತ್ರಿಯಾದೀನಾಂ ತದ್ಬ್ರಾಹ್ಮಣ್ಯಮತೋ ನ ಹಿ || ಪಾಂಡಿತ್ಯೇ ಬ್ರಾಹ್ಮಣ್ಯಮಿತಿ ಶಂಕಾ ಚೇತ್ಕ್ಷತ್ರಿಯಾದಿಷು || ಸರ್ವಶಾಸ್ತ್ರಾಭ್ಯಾಸಜನ್ಯಪಾಂಡಿತ್ಯಂ ಚಾಸ್ತಿ ತನ್ನ ಹಿ || ಧಾರ್ಮಿಕತ್ವೇ ಚ ಬ್ರಾಹ್ಮಣ್ಯಮಿತಿ ಶಂಕಾ ಧವೇದ್ಯದಿ || ಯಾಗಾದಿಸದ್ಧರ್ಮಪರಾಃ ಕ್ಷತ್ರಿಯಾದ್ಯಾಸ್ತತೋ ನ ಹಿ || ತ್ವಂ ದೇವೇಷು ಬ್ರಾಹ್ಮಣೋಽಸೀತ್ಯಾದಿಸಾಮಶ್ರುತೇಶ್ಶಿವಃ || ದೇವೇಷ್ವೇಕೋ ಬ್ರಾಹ್ಮಣ

ಬ್ರಾಹ್ಮಣ್ಯವು ದೇಹದಲ್ಲಿ ಉಂಟೆಂದು ಶಂಕೆಯುಂಟಾದರೆ, ಮೃತರಾದ ತಂದೆಗಳ ದೇಹಗಳನ್ನು ಸುಡುವ ಮಕ್ಕಳಿಗೆ ಬ್ರಹ್ಮಹತ್ಯದೋಷವುಂಟಾಗುವುದರಿಂದ ದೇಹದಲ್ಲಿಲ್ಲವು. ಜೀವನಲ್ಲಿ (ಪ್ರಾಣವಾಯುವಿನಲ್ಲಿ) ಉಂಟೆಂದು ಶಂಕಿಸಿದರೆ, ಆ ಜೀವನು ಸಮಸ್ತ ಪ್ರಾಣಿಗಳ ಮೂಗಿನಲ್ಲಿ ಒಳಹೊರಗೆ ಹಂಸರೂಪದಿಂದ ಸಂಚರಿಸುವನಾದುದರಿಂದ ಅದರಲ್ಲಿಲ್ಲವು ಜಾತಿಯಲ್ಲುಂಟೆಂದು ಶಂಕಿಸಿದರೆ ಅದು ಲೋಕದಲ್ಲಿ ಸಂಭವಿಸುವುದಿಲ್ಲವು. ಏಕೆಂದರೆ–ರುಷ್ಯಶೃಂಗ, ವಸಿಷ್ಠ, ಅಗಸ್ತ್ಯ ಮೊದಲಾದ ಮುನಿಗಳ ಜಾತಿಯಾವುದು? ಆದ್ದರಿಂದ ಜಾತಿಯಲ್ಲಿ ಇಲ್ಲವು. ವರ್ಣದಲ್ಲುಂಟೆಂದು ಶಂಕಿಸುವುದಾದರೆ, ಮುಖ, ಬಾಹು, ತೊಡೆ ಪಾದಗಳಲ್ಲಿ ಶ್ವೇತಾದಿವರ್ಣಗಳು ಯಾವಾಗಲೂ ಒಂದರಲ್ಲೇ ಇರುವುದಿಲ್ಲವಾದುದರಿಂದ ವರ್ಣದಲ್ಲಿಲ್ಲವು. ಧರ್ಮದಲ್ಲುಂಟೆಂದು ಶಂಕೆಯುಂಟಾದರೆ ಆಹಾರ, ನಿದ್ರೆ, ಭಯ, ಮೈಥುನ ಮೊದಲಾದ ಧರ್ಮಗಳು ಸರ್ವರಿಗೂ ಸಮಾನವಾಗಿರುವುದರಿಂದ ಧರ್ಮದಲ್ಲಿಲ್ಲವು. ಕರ್ಮದಲ್ಲುಂಟೆಂದು ಶಂಕಿಸಿದರೆ ಉಪನಯನ ಮೊದಲಾದ ಕರ್ಮವು ಕ್ಷತ್ರಿಯರಿಗೂ, ವೈಶ್ಯರಿಗೂ ಸಮಾನವಾಗಿರುವುದರಿಂದ ಕರ್ಮಗಳಲ್ಲಿಲ್ಲವು. ಪಾಂಡಿತ್ಯದಲ್ಲುಂಟೆಂದು ಶಂಕಿಸುವುದಾದರೆ ಕ್ಷತ್ರಿಯ ಮೊದಲಾದವರೂ ಸಕಲ ಶಾಸ್ತ್ರಗಳನ್ನೋದಿ ಪಂಡಿತರಾಗುವುದರಿಂದ ಪಾಂಡಿತ್ಯದಲ್ಲಿಲ್ಲವು ಧಾರ್ಮಿಕರಲ್ಲಿ ಉಂಟೆಂದು ಶಂಕೆಯುಂಟಾದರೆ ಯಾಗಾದಿ ಧರ್ಮಗಳಲ್ಲಾಸಕ್ತರಾದ ಕ್ಷತ್ರಿಯಾದಿಗಳೂ ಬ್ರಾಹ್ಮಣರೆನಿಸಿಕೊಳ್ಳುವರಾಗಬೇಕಾಗುವುದು. ಆದ್ದರಿಂದ ಧಾರ್ಮಿಕತ್ವದಲ್ಲಿಲ್ಲವು. "ತ್ವಂ ದೇವೇಷು ಬ್ರಾಹ್ಮಣೋಽಸ್ಯಹಂ" ಎಂಬುದು ಮೊದಲಾದ ಸಾಮಶ್ರುತಿಯಿರುವುದರದೆಸೆಯಿಂದ ಶಿವನೊಬ್ಬನೇ ದೇವತೆಗಳಲ್ಲಿ ಬ್ರಾಹ್ಮಣನೆಂದು ಆ ಶಿವನ ಭಕ್ತನೇ ಮನುಷ್ಯರಲ್ಲಿ ಬ್ರಾಹ್ಮಣನೆಂದು ಹೇಳಲ್ಪಟ್ಟಿದೆ. ಎಲೈ ದೊರ

ಸ್ಸ್ಯೈತದ್ಭಕ್ತೋ ನೃಷು ಬ್ರಾಹ್ಮಣಃ'' ಹೇ ಚೋಳ! ಮಹಾಬ್ರಾಹ್ಮಣರುದ್ರಭಕ್ತಸ್ಯ ಬ್ರಾಹ್ಮಣಸ್ಯ ಬ್ರಾಹ್ಮಣಶಬ್ದವಿಗ್ರಹಃ ಶ್ರೂಯತಾಂ, ಬ್ರಹ್ಮನ್ ಶಬ್ದವಾಚ್ಯಂ ರುದ್ರಂ, ಆಸಮಂತಾತ್, ಚರತಿ ಗಚ್ಛತಿ ಜಾನಾತೀತಿ, ಬ್ರಾಹ್ಮಣಃ, '' ತತ್ಪರಂ ಬ್ರಹ್ಮ ಸ ಏಕಸ್ಸ ಏಕೋ ರುದ್ರಃ'' ಇತ್ಯಥರ್ವಶಿರೋವಾಕ್ಯಾತ್, '' ಆಜ್'ಷದರ್ಥೇಽಭಿವ್ಯಾಪ್ತೌ '' ಇತ್ಯಮರವಾಕ್ಯಾತ್, ಚರ × ಗತಿಭಕ್ಷಣಯೋಃ, ಇತಿ ಧಾತೋಃ, '' ಸರ್ವೇ ಗತ್ಯರ್ಥಾ ಧಾತವೋ ಜ್ಞಾನಾರ್ಥಕಾಃ '' ಇತಿ ಭಾಷ್ಯೋಕ್ತೇಶ್ಚ ಬ್ರಾಹ್ಮಣಶಬ್ದವಿಗ್ರಹಃ ಪ್ರಸಿದ್ಧಃ. '' ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ || ವೇದಾಭ್ಯಾಸೇನ ವಿಪ್ರಸ್ಸ್ಯಾದ್ಬ್ರಹ್ಮವಿದ್ಬ್ರಾಹ್ಮಣೋ ಭವೇತ್'' ಇತಿ ಕಾರಣತಂತ್ರಸ್ಥವಿಧಿವಚನೇನ, '' ಅಯಜ್ಞಸೂತ್ರಗಾಯತ್ರೀ ಮಾತಾ ಪ್ರಥಮಶೂದ್ರಿಣೀ || ತತಶ್ಶೂಸುಶ್ಚ ತಥಾ ಶೂದ್ರೋ ಬ್ರಹ್ಮಾ ಚರತಿ ಬ್ರಾಹ್ಮಣಃ'' ಇತಿ ಸ್ಕಾಂದಪುರಾಣೋಕ್ತವಿಧಿವಚನೇನ ಚ ಬ್ರಾಹ್ಮಣಲಕ್ಷಣಂ ಪ್ರತಿಪಾದಿತಂ, ಭೋ ಚೋ

---

ಳನೇ! ಮಹಾಬ್ರಾಹ್ಮಣ ರುದ್ರಭಕ್ತನಾದ ಬ್ರಾಹ್ಮಣನಿಗೆ ಇರುವ ಬ್ರಾಹ್ಮಣಶಬ್ದದ ವಿಗ್ರಹವನ್ನು ಕೇಳು; (ಬ್ರಹ್ಮ, ಆ, ಚರತೀತಿಬ್ರಾಹ್ಮಣಃ) ಬ್ರಹ್ಮನ್ ಶಬ್ದದಿಂದ ವಾಚ್ಯನಾದ ರುದ್ರನನ್ನು ಎಲ್ಲಾ ಕಡೆಯಲ್ಲೂ ತಿಳಿಯುತ್ತಾನೆಯಾದ್ದರಿಂದ ಶಿವಭಕ್ತನು ಬ್ರಾಹ್ಮಣನೆಂದೆನಿಸಿಕೊಂಡನು. ,,ಆ ರುದ್ರನೇ ಪರಬ್ರಹ್ಮವು, ಆ ರುದ್ರನು ಒಬ್ಬನೇ ಆಗಿರುತ್ತಾನೆ,, ಎಂದು ಅಥರ್ವಶಿರೋವಾಕ್ಯವಿರುವುದರಿಂದ ಬ್ರಹ್ಮನ್ ಶಬ್ದಕ್ಕೆ ರುದ್ರನೆಂದರ್ಥವು. ,,ಆಜ್ ಎಂಬ ಅವ್ಯಯವು ಸ್ವಲ್ಪವೆಂಬರ್ಥದಲ್ಲೂ, ಎಲ್ಲಾ ಕಡೆಯೆಂಬರ್ಥದಲ್ಲೂ ಇರುತ್ತದೆ,, ಎಂದು ಅಮರವಾಕ್ಯವಿರುವುದರಿಂದ ಆಜ್ ಎಂಬ ಪದಕ್ಕೆ ಎಲ್ಲಾ ಕಡೆಯಲ್ಲೂ ಎಂದರ್ಥವು. ಚರಧಾತುವು ಗತ್ಯರ್ಥದಲ್ಲೂ ಭಕ್ಷಣಾರ್ಥದಲ್ಲೂ ಇರುವುದರಿಂದ ,,ಗತ್ಯರ್ಥಕಗಳಾದ ಧಾತುಗಳೆಲ್ಲವೂ ಜ್ಞಾನಾರ್ಥಕಗಳೂ ಆಗುತ್ತವೆ,, ಎಂದು ಭಾಷ್ಯೋಕ್ತಿಯಿರುವುದರಿಂದ ಬ್ರಾಹ್ಮಣಶಬ್ದವಿಗ್ರಹವು ಪ್ರಸಿದ್ಧವಾಗಿದೆ. ಜೀವನು ಜನ್ಮದಿಂದ ಶೂದ್ರನಾಗಿದ್ದು ಉಪನಯನಸಂಸ್ಕಾರಬಲದಿಂದ ದ್ವಿಜತ್ವವನ್ನು ಹೊಂದಿ, ತನ್ನ ಶಾಖೆಯಾದ ವೇದವನ್ನು ಅಭ್ಯಾಸಮಾಡುವುದರಿಂದ ವಿಪ್ರತ್ವವನ್ನು ಹೊಂದಿ ಬಳಿಕ ಬ್ರಹ್ಮಜ್ಞಾನದಿಂದ ಬ್ರಾಹ್ಮಣನಾಗುವನು,, ಎಂದು ಹೇಳುವ ಕಾರಣತಂತ್ರದಲ್ಲಿರುವ ವಿಧಿವಾಕ್ಯದಿಂದ, ,,ಯಜ್ಞಸೂತ್ರಧಾರಣವೂ ಗಾಯತ್ರೀಮಂತ್ರಜಪವೂ ಇಲ್ಲದ ತಾಯಿಯು ಮೊದಲಿಂದ ಶೂದ್ರಿಯೇ ಆಗಿರುವಳು. ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೂ ಶೂದ್ರರಾಗುವುದರಿಂದ ಜನ್ಮಾದಿಗಳಿಂದ ಬ್ರಾಹ್ಮಣ್ಯವುಂಟಾಗದು. ಬ್ರಹ್ಮಜ್ಞಾನದಿಂದಲೇ ಬ್ರಾಹ್ಮಣ್ಯವುಂಟಾಗುವುದು,, ಎಂದು ಹೇಳುವ ಸ್ಕಾಂದಪುರಾಣೋಕ್ತವಿಧಿವಚನದಿಂದ ಬ್ರಾಹ್ಮಣಲಕ್ಷಣವು ಹೇಳಲ್ಪಟ್ಟಿತು. ಎಲೈ ಚೋಳನೇ! ನಿಷೇಧವಾಕ್ಯಮುಖದಿಂದ ಬ್ರಾಹ್ಮಣಲಕ್ಷಣವನ್ನು

೪। ನಿಷೇಧಮುಖೇನ ಬ್ರಾಹ್ಮಣಲಕ್ಷಣಂ ಶ್ರೂಯತಾಂ, ಸ್ಕಾಂದೇ ಸನತ್ಕುಮಾರ ಸಂಹಿತಾಯಾಂ,—" ವೇದವೇದಾಂತವಿದ್ವಿಪ್ರಃ ಪರಬ್ರಹ್ಮ ನ ವಿಂದತಿ || ವೇದ ಭಾರಭರಾಕ್ರಾಂತಸ್ಸ ವೈ ಬ್ರಾಹ್ಮಣಗರ್ದಭಃ'' ಇತಿ. ಆದಿತ್ಯಪುರಾಣೇ,—ರವಿಃ, " ಅಕ್ಷರಂ ಪರಮಂ ಬ್ರಹ್ಮ ಶೈವಂ ಜ್ಯೋತಿರನಾಮಯಂ || ಯಸ್ತಂ ನ ವೇದ ಕಿಂ ವೇದೈರ್ಬ್ರಾಹ್ಮಣಸ್ಯ ಭವಿಷ್ಯತಿ ||ಸ ಚ ವೇದ್ಯಸ್ಸ್ವಯಂ ನಿತ್ಯ ರುದ್ರ ಏಕೋ ನಿರಂ ಜನಃ || ತಸ್ಮಿನ್ ಜ್ಞಾತೇಽಖಿಲಂ ಜ್ಞಾತಮಿತ್ಯಾಹುರ್ವೇದವಾದಿನಃ || ಅಹಂ ಬ್ರಹ್ಮಾ ಚ ವಿಷ್ಣುಶ್ಚ ಶಕ್ರಶ್ಚಾನ್ಯೇ ದಿವೌಕಸಃ || ಅದ್ಯಾಪ್ಯುಪಾಯೈರ್ವಿವಿಧೈಶ್ಶಂಭೋರ್ದ ರ್ಶನಕಾಂಕ್ಷಿಣಃ'' ಇತ್ಯಾದಿಪ್ರಸಿದ್ಧಂ.

ಇತಿ ವಿಧಿನಿಷೇಧಮುಖಪ್ರತಿಪಾದಿತಬ್ರಾಹ್ಮಣಲಕ್ಷಣವಿಧಿರಷ್ಟಮೋ ಪದೇಶೇ ಅಷ್ಟಮಸ್ಸಂವಾದಃ.



---

ಕೇಳು; ಸ್ಕಾಂದದಲ್ಲಿರುವ ಸನತ್ಕುಮಾರಸಂಹಿತೆಯಲ್ಲಿ —"ವೇದವೇದಾಂತಗಳನ್ನರಿತ ವಿಪ್ರನು-ಪರಬ್ರಹ್ಮಸ್ವರೂಪವನ್ನರಿಯದಿದ್ದರೆ ವೇದವೆಂಬ ಹೊರೆಯನ್ನು ಹೊತ್ತಿರುವ ಬ್ರಾಹ್ಮಣನೆಂಬ ಕತ್ತೆಯು,, ಎಂದು ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ —"ಭವರೋಗವಿಲ್ಲದುದೂ, ನಾಶರ ಹಿತವೂ, ತೇಜೋರೂಪವೂ ಆಗಿರುವ ಶಿವಾಖ್ಯವಾದ ಪರಬ್ರಹ್ಮವನ್ನು ತಿಳಿಯದ ಬ್ರಾಹ್ಮಣನಿಗೆ ವೇದಗಳಿಂದ ಫಲವುಂಟಾಗುವುದಿಲ್ಲವು. ಮಾಯಾರಹಿತನೂ, ನಿತ್ಯನೂ ಆಗಿರುವ ಆ ರುದ್ರನೊ ಬ್ಬನೇ ಬ್ರಾಹ್ಮಣನಿಂದ ತಿಳಿಯುವುದಕ್ಕೆ ಯೋಗ್ಯನು. ಆ ಪರಬ್ರಹ್ಮವು ತಿಳಿಯಲ್ಪಟ್ಟರೆ ಸರ್ವವೂ ತಿಳಿಯಲ್ಪಡುವುದು. ಎಂದು ವೇದಪ್ರಾಮಾಣ್ಯವನ್ನು ಹೇಳತಕ್ಕವರು ಹೇಳುತ್ತಾರೆ. ಆ ರುದ್ರ ದರ್ಶನವನ್ನು ನಾನೀಗಲೂ ಅನೇಕೋಪಾಯಗಳಿಂದ ಅಪೇಕ್ಷಿಸುತ್ತೇನೆ. ಬ್ರಹ್ಮವಿಷ್ಣ್ವಾದಿ ದೇವತೆಗಳೂ ಅಪೇಕ್ಷಿಸುತ್ತಾರೆ,, ಎಂದು ಸೂರ್ಯನಿಂದ ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ಬ್ರಾಹ್ಮಣಲಕ್ಷಣವು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ವಿಧಿನಿಷೇಧಮುಖಗಳಿಂದ ಪ್ರತಿಪಾದಿಸಲ್ಪಟ್ಟ ಬ್ರಾಹ್ಮಣಲಕ್ಷಣವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.



ಶ್ರೀಃ.

## ರುದ್ರೇಣಸಹವಿಷ್ಣ್ವಾದೀನಾಂಸಮಾಹ್ವಾನಸ್ತುತಿ-ನಮಸ್ಕಾರಾಣಾಂನಿರಾಕೃತಿಃ.

ರೇ—ಭೋ ಜೋಳ ! ಮಹಾಬ್ರಾಹ್ಮಣೇನ ರುದ್ರೇಣ ಸಹ ಹರಿವಿರಿಂಚ್ಯಾದಿ ದೇವಾನಾಂ ಸಮಾಹ್ವಾನಸ್ತುತಿನಮಸ್ಕಾರನಿರಾಕೃತಿಃ ಶ್ರೂಯತಾಂ, ಋಗ್ವೇದೇ,— "ಮಾತ್ವಾರುದ್ರಚುಕ್ರುಧಾಮಾನಮೋಭಿರ್ಮಾದುಷ್ಟುತೀ ವೃಷಭಮಾಸಹೂತೀ" ಇತಿ. ತಸ್ಯಾರ್ಥ ಏವೋಕ್ತಃ ನೈರುಕ್ತೇನ, "ಕಿಂಚ ಸಾಮ್ಯನಮಸ್ಕಾರೈರ್ನಿತರಾಂ ದೇವಗಾಮಿಭಿಃ || ದುಷ್ಟುತ್ಯಾ ಸದೃಶಸ್ತುತ್ಯಾ ಸಮಾನಾಹ್ವಾನಕರ್ಮಣಾ || ನ ವಯಂ ಚುಕ್ರುಧಾಮ ತ್ವಾಂ ಸರ್ವಲೋಕಮಹೇಶ್ವರಂ" ಇತಿ.

ಜೋ—ಹೇ ರೇಣುಕಗಣೇಂದ್ರ! ರುದ್ರೇಣ ಸಹ ಬ್ರಹ್ಮಾದೀನಾಂ ಸಮಾನಾಹ್ವಾನಂ ಶ್ರುತಿ ಪ್ರಸಿದ್ಧ ಮೇವೇತಿ ಚೇತ್, ಯಜುರ್ವೇದೇ ನಾರಾಯಣೋಪನಿಷದಿ,— "ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ | ತಸ್ಯ ಮಧ್ಯೇ ವಹ್ನಿಶಿಖಾ|ಅಣೀಯೋರ್ಧ್ವಾವ್ಯವಸ್ಥಿತಾ|ತಸ್ಯಾಃಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ| ಸ ಬ್ರಹ್ಮಾ ಸ ಶಿವಸ್ಸಹರಿಸ್ಸೇಂದ್ರಸ್ಸೋಽಕ್ಷರಃ ಪರಮಸ್ಸ್ವರಾಟ್" ಇತಿ.

---

### ರುದ್ರನೊಡನೆ ವಿಷ್ಣ್ವಾದಿಸಮಾಹ್ವಾನಸ್ತುತಿ ನಮಸ್ಕಾರಗಳ ನಿರಾಕರಣವು.

ರೇ— ಎಲೈ ಜೋಳನೇ ! ಮಹಾಬ್ರಾಹ್ಮಣನಾದ ರುದ್ರನೊಡನೆ ವಿಷ್ಣುಬ್ರಹ್ಮಾದಿಗಳು ಆವಾಹನೆ ಸ್ತೋತ್ರ ನಮಸ್ಕಾರಗಳನ್ನು ಮಾಡಿಸಿಕೊಳ್ಳುವುದಕ್ಕೆ ಅರ್ಹರಲ್ಲವೆಂಬಂಶವನ್ನು ಕೇಳು; ಋಗ್ವೇದದಲ್ಲಿ—"ಎಲೈ ರುದ್ರನೇ ! ನಿನ್ನನ್ನು ವಿಷ್ಣ್ವಾದಿದೇವತೆಗಳೊಡನೆ ಸ್ತೋತ್ರ ನಮಸ್ಕಾರಾಹ್ವಾನಗಳಿಂದ ಸಮಾನನನ್ನಾಗಿ ಹೇಳಿ, ನಿನಗೆ ಕೋಪವನ್ನುಂಟುಮಾಡುವುದಿಲ್ಲವು" ಎಂದು ನಿರೂಪಿಸಲ್ಪಟ್ಟಿದೆ. ಅದೇ ರೀತಿಯಾಗಿ ನಿರುಕ್ತಿಕಾರನಿಂದ ಹೇಳಲ್ಪಟ್ಟಿರುತ್ತದೆ.

ಜೋ—ಎಲೈ ರೇಣುಕಗಣೇಶನೇ ! ರುದ್ರನೊಡನೆ ಬ್ರಹ್ಮಾದಿಗಳಿಗೆ ಆಹ್ವಾನವು ಶ್ರುತಿ ಪ್ರಸಿದ್ಧವಾಗಿದೆ. ಅದು ಹ್ಯಾಗೆಂದರೆ—ಯಜುರ್ವೇದದಲ್ಲಿರುವ ನಾರಾಯಣೋಪನಿಷತ್ತಿನಲ್ಲಿ— "ಹೃದಯವು ಕಮಲದ ಮೊಗ್ಗಿನಂತಿರುವುದು, ಅದು ಅಧೋಮುಖವಾಗಿರುವುದು, ಆ ಹೃದಯದ ಮಧ್ಯದಲ್ಲಿ ಅಗ್ನಿ ಶಿಖೆಯು ಮೇಲಕ್ಕೆ ಪ್ರಜ್ವಲಿಸುತ್ತಿರುವುದು. ಆ ಅಗ್ನಿ ಶಿಖೆಯ ಮಧ್ಯದಲ್ಲಿ ಪರಮಾತ್ಮನು ವಾಸಿಸುತ್ತಿರುವನು, ಆ ಪರಮಾತ್ಮನೇ ,ಬ್ರಹ್ಮನೂ, ಶಿವನೂ, ಹರಿಯೂ, ಇಂದ್ರನೂ, ಅಗ್ನಿಯೂ ಆಗಿರುತ್ತಾನೆ" ಎಂದು ರುದ್ರನೊಡನೆ ಬ್ರಹ್ಮಾದಿಗಳಿಗೆ ಸಾದೃಶ್ಯವು ನಿರೂಪಿಸಲ್ಪಟ್ಟಿದೆ.

ರೇ—ಹೇ ಚೋಳ! ತ್ವದುಕ್ತಶ್ರುತೇರರ್ಥಶ್ಶ್ರೂಯತಾಂ, ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—"ನಾರಾಯಣಸ್ಯ ಹೃತ್ಪದ್ಮಂ ತತ್ರ ವಹ್ನಿಶಿಖಾ ಪರಾ ‖ ತಸ್ಯಾಶ್ಶಿಖಾಯಾ ಮಧ್ಯೇ ತು ಪರಮಾತ್ಮಾ ವ್ಯವಸ್ಥಿತಃ‖ ಸ ಬ್ರಹ್ಮಾ ಬೃಹ್ಮಕತ್ವಾಚ್ಚ ಸ ಶಿವೋ ಮಂಗಳಾಶ್ರಯಾತ್ ‖ ಸ ಹರಿರ್ದೋಷಸಂಹಾರಾತ್ಸೇಂದ್ರೋ ವಿಶ್ವೇಶ್ವರತ್ವತಃ ‖ ಸೋಽಗ್ನಿಶ್ಚೈತನ್ಯರೂಪತ್ವಾತ್ಸೋಽಕ್ಷರೋ ನಿತ್ಯಭಾವತಃ ‖ ರಾಜತೇ ಪರಮೇ ಸ್ವಸ್ಮಿನ್ ಸ ಪ್ರೋಕ್ತಃ ಪರಮಸ್ಸ್ವರಾಟ್" ಇತಿ. ಪುರಾಣವಾಕ್ಯೈಶ್ಶ್ರುತ್ಯರ್ಥೋ ವಿಜ್ಞೇಯಃ. ವಿಸ್ತರೇಣಾಲಂ.

ಚೋ—ಹೇ ಗಣೇಂದ್ರ! "ಕಾಚಂ ಮಣಿಂ ಮೌಕ್ತಿಕಮೇಕಸೂತ್ರೇ ಸೇವ್ಯಂತಿ ಮೂಢಾ ಇತಿ ತನ್ನಚಿತ್ರಂ ‖ ಸ ಸರ್ವವಿತ್ಪಾಣಿನಿರೇಕಸೂತ್ರೇ ಶ್ವಾನಂ ಯುವಾನಂ ಮಘವಾನಮಾಹ" ಇತ್ಯಾದಿಯುಕ್ತಿಯುಕ್ತವಾಕ್ಯಾತ್, ರುದ್ರೇಣ ಸಹ ಹರಿವಿರಿಂಚ್ಯಾದೀನಾಂ ಸಮಾನಾಹ್ವಾನೇ ಕೋ ದೋಷಃ?

ರೇ—ಅಯೇ ವಿಜಯೇಂದ್ರಚೋಳ! ಯುಕ್ತಿಯುಕ್ತಕವಿವಾಕ್ಯದೃಷ್ಟಾಂತಂ

---

ರೇ — ಎಲೈ ಚೋಳನೇ! ನೀನು ಹೇಳಿದ ಶ್ರುತಿಗೆ ಅರ್ಥವನ್ನು ಕೇಳು; ಸ್ಕಾಂದದಲ್ಲಿರುವ ಸನತ್ಕುಮಾರಸಂಹಿತೆಯಲ್ಲಿ—"ನಾರಾಯಣನ ಹೃದಯಕಮಲ ಮಧ್ಯದಲ್ಲಿರುವ ವಹ್ನಿಶಿಖೆಯ ಮಧ್ಯದಲ್ಲಿ ಪರಮಾತ್ಮನು ವಾಸಮಾಡುತ್ತಾನೆ. ಆ ಪರಮಾತ್ಮನೇ ವೃದ್ಧಿಹೊಂದುವ ಸ್ವಭಾವವುಳ್ಳವನಾಗಿರುವುದರಿಂದ ಬ್ರಹ್ಮವೆಂದೂ, ಸಕಲ ಮಂಗಳಗಳಿಗಾವಾಸಭೂಮಿಯಾಗಿರುವುದರಿಂದ ಶಿವನೆಂದೂ, ಪಾಪನಾಶಕನಾಗಿರುವುದರಿಂದ ಹರಿಯೆಂದೂ, ವಿಶ್ವೇಶ್ವರನಾಗಿರುವುದರಿಂದ ಇಂದ್ರನೆಂದೂ, ಸರ್ವಚೈತನ್ಯನಾಗಿರುವುದರಿಂದ ಅಗ್ನಿಯೆಂದೂ, ನಿತ್ಯನಾಗಿರುವುದರಿಂದ ಅಕ್ಷರನೆಂದೂ, ತನ್ನಲ್ಲಿ ತಾನೇ ಪ್ರಕಾಶಮಾನನಾಗಿರುವುದರಿಂದ ಪರಮಸ್ವರಾಟ್ ಎಂದೂ ಉಕ್ತನಾಗಿರುವನು,, ಎಂದು ಹೇಳಲ್ಪಟ್ಟಿದೆ. ಈ ರೀತಿಯಾಗಿ ಶ್ರುತ್ಯರ್ಥವನ್ನು ಪುರಾಣವಚನಗಳಿಂದ ತಿಳಿಯಬೇಕು. ವಿಸ್ತಾರದಿಂದ ಸಾಕು.

ಚೋ — ಎಲೈ ಗಣೇಂದ್ರನೇ! ಮೂರ್ಖರು—ಗಾಜಿನ ಮಣಿಯನ್ನೂ ಮುತ್ತನ್ನೂ ಒಂದೇ ದಾರದಲ್ಲಿ ಸೇರಿಸುತ್ತಾರೆಂಬುದು ಆಶ್ಚರ್ಯವಲ್ಲವು. ಏತಕ್ಕೆಂದರೆ—ಸರ್ವಜ್ಞನಾದ ಆಪಾಣಿನಿ ಮುನಿಯು ಒಂದೇ ಸೂತ್ರದಲ್ಲಿ "ಶ್ವಯುವಮಘೋನಾಮತದ್ಧಿತೇ,, ಎಂದು ಶ್ವನ್‌ಶಬ್ದವನ್ನೂ, ಯುವನ್‌ಶಬ್ದವನ್ನೂ, ಮಘವನ್‌ಶಬ್ದವನ್ನೂ ಹೇಳಿದನು. ಇದು ಮೊದಲಾದ ಯುಕ್ತಿಯುಕ್ತವಚನಗಳಿರುವುದರಿಂದ ರುದ್ರನನ್ನು ವಿಷ್ಣುಬ್ರಹ್ಮಾದಿಗಳೊಡನೆ ಸಮಾನವಾಗಿ ಆಹ್ವಾನಮಾಡುವುದರಲ್ಲಿ ದೋಷವೇನಿದೆ ಹೇಳು?

ರೇ — ಎಲೈ ವಿಜಯೇಂದ್ರಚೋಳನೇ! ಯುಕ್ತಿಯಿಂದ ಕೂಡಿದ ಕವಿವಾಕ್ಯದೃಷ್ಟಾಂತವು ಹ್ಯಾಗಾದರೂ ಇರಲಿ. ಶ್ರುತಿವಾಕ್ಯದಿಂದ ಹೇಳಲ್ಪಟ್ಟಿರುವುದನ್ನು ಅತಿಕ್ರಮಿಸಲಾಗದು.

ಯಥಾ ವಾ ಭವತು, ಶ್ರುತಿವಾಕ್ಯಚೋದ್ಯಂ ನೋಲ್ಲಂಘನೀಯಂ. ರುದ್ರೇಣ ವಿಷ್ಣು ಬ್ರಹ್ಮಾದೀನಾಂ ಸಮಾನತಾ ನಾಸ್ತ್ಯೇವೇತಿ ಮಂತವ್ಯಂ. ತತ್ತಾವದಾಸ್ತಾಂ, ಭೋ ಚೋಳ! ಮಹಾಬ್ರಾಹ್ಮಣ ರುದ್ರ ಏಕಏವ ಸರ್ವಮತದರ್ಶನವಾದಿಭಿರ್ವಿರಚಿ ತನಮಸ್ಕಾರಾಶ್ರಯ ಇತಿ ಶ್ರುತಿವಾಕ್ಯಂ ಶ್ರೂಯತಾಂ, ಯಜುರ್ವೇದಾರಣ್ಯೇ,— "ಯಸ್ಮೈ ನಮಸ್ತಚ್ಛಿರೋ ಧರ್ಮೋ ಮೂರ್ಧಾಬ್ರಹ್ಮೋತ್ತರಾಹನುರ್ಯಜ್ಞೋಽಧ ರೋ ವಿಷ್ಣುರ್ಹೃದಯಂ ಸಂವತ್ಸರಃ ಪ್ರಜನನಮಶ್ವಿನೌ ಪೂರ್ವಪಾದಾವತ್ರಿರ್ಮಧ್ಯಂ ಮಿತ್ರಾವರುಣಾವಪರಪಾದಾವಗ್ನಿಃ ಪುಚ್ಛಸ್ಯ ಪ್ರಥಮಂ ಕಾಂಡಂ ತತ ಇಂದ್ರಸ್ತತಃ ಪ್ರಜಾಪತಿರಭಯಂ ಚತುರ್ಥಂ ಸ ವಾ ಏಷ ದಿವ್ಯಶಾಕ್ವರಶ್ಶಿಂಶುಮಾರಃ" ಇತಿ. ಭರ ತಶಾಸ್ತ್ರೇ,— "ವಜ್ರಿಣ್ಯಾ ಮುದ್ರಯಾ ಶಕ್ರಂ ಪದ್ಮಿನ್ಯಾ ದರ್ಶಯೇದ್ವಿಧಿಂ ॥ ಶಂ ಖಿನ್ಯಾ ಕೇಶವಂ ರುದ್ರಂ ಶಿರಸ್ಯಂಜಲಿಮುದ್ರಯಾ" ವೇದಪಾದಸ್ತವೇ,— "ಸರ್ವಂ ಕಾರ್ಯಂ ಯುವಾಭ್ಯಾಂ ಹಿ ಸುಕೃತಂ ಸುಹೃದೌ ಮಮ ॥ ಅಂಜಲಿಂ ಕುರುತಂ ಹ ಸ್ತೌ ರುದ್ರಾಯ ಗಿರಿಧನ್ವನೇ" ಇತ್ಯಾದಿಪ್ರಸಿದ್ಧಂ.

---

ರುದ್ರನೊಡನೆ ವಿಷ್ಣುಬ್ರಹ್ಮಾದಿಗಳಿಗೆ ಸಮಾನತೆಯಿಲ್ಲವೆಂದು ತಿಳಿಯತಕ್ಕದ್ದು. ಅದಂತಿರಲಿ. ಎಲೈ ಚೋಳನೇ ! ಮಹಾಬ್ರಾಹ್ಮಣನಾದ ರುದ್ರನೊಬ್ಬನೇ ಸಕಲ ಮತದವರಿಂದಲೂ, ಸಕಲ ದರ್ಶನದವರಿಂದಲೂ ಮಾಡಲ್ಪಡುವ ನಮಸ್ಕಾರಗಳಿಗೆ ಆಶ್ರಯನೆಂದು ಹೇಳುವ ಶ್ರುತಿವಾಕ್ಯವ ನ್ನು ಚೆನ್ನಾಗಿ ಕೇಳು; ಯಜುರ್ವೇದಾರಣ್ಯದಲ್ಲಿ—"ಯಾವನಿಗೋಸ್ಕರ ನಮಸ್ಕಾರವೋ, ಆತನ ಶಿರಸ್ಸು ಧರ್ಮಸ್ವರೂಪವಾದದ್ದು. ನೆತ್ತಿಯು ಬ್ರಹ್ಮಸ್ವರೂಪವಾದದ್ದು. ಮೇಲಣತುಟಿಯು ಯ ಜ್ಞಸ್ವರೂಪವಾದದ್ದು. ಕೆಳಗಣತುಟಿಯು ವಿಷ್ಣುಸ್ವರೂಪವಾದದ್ದು. ಹೃದಯವು ಸಂವತ್ಸರಸ್ವ ರೂಪವಾದದ್ದು. ಲಿಂಗವು ಅಶ್ವಿನೀದೇವತಾಸ್ವರೂಪವಾದದ್ದು. ಮುಂಗಾಲುಗಳು ಅತ್ರಿಮುನಿ ಸ್ವರೂಪವಾದದ್ದು. ಮಧ್ಯವು ಮಿತ್ರಾವರುಣಸ್ವರೂಪವಾದದ್ದು. ಹಿಂಗಾಲುಗಳು ಅಗ್ನಿಸ್ವರೂಪ ವಾದವುಗಳು. ಬಾಲದ ಮೊದಲಗಣ್ಣು ದೇವೇಂದ್ರನು. ಅನಂತರ ಪ್ರಜಾಪತಿಯು ವಿರಕ್ತಿಯು ನಾಲ್ಕನೆಯಗಣ್ಣು ಅಂತಹ ಈ ವೃಷಭೇಶ್ವರನು ಶಿಂಶುಮಾರನೆಂದು" ಹೇಳಲ್ಪಟ್ಟಿದೆ. ಭರತಶಾ ಸ್ತ್ರದಲ್ಲಿ—"ನರ್ತನಸಮಯದಲ್ಲಿ ಇಂದ್ರನನ್ನು ವಜ್ರಮುದ್ರೆಯಿಂದ, ಬ್ರಹ್ಮನನ್ನು ಪದ್ಮಿನೀ ಮುದ್ರೆಯಿಂದ, ವಿಷ್ಣುವನ್ನು ಶಂಖಿನೀಮುದ್ರೆಯಿಂದ, ರುದ್ರನನ್ನು ಅಂಜಲಿಮುದ್ರೆಯಿಂದ ನಮಸ್ಕಾರವನ್ನಭಿನಯಿಸಿ ತೋರಿಸಬೇಕು" ಎಂದು ಭರತನಿಂದ ಊರ್ವಶಿ, ರಂಭೆ ಮೊದಲಾದ ವೇಶ್ಯೆಯರಿಗೆ ನಿರೂಪಿಸಲ್ಪಟ್ಟಿದೆ. ವೇದಪಾದಸ್ತವದಲ್ಲಿ—"ನನಗೆ ಮಿತ್ರರಾದ ಎಲೈ ಹಸ್ತಗಳೇ! ನಿಮ್ಮಿಬ್ಬರಿಂದ ಸಮಸ್ತ ಪುಣ್ಯಕರ್ಮವು ಮಾಡುವುದಕ್ಕೆ ಶಕ್ಯವಾಗಿರುವುದರಿಂದ ಮೇರುಪರ್ವತವೇ ಬಿಲ್ಲಾಗುಳ್ಳ ರುದ್ರನಿಗೋಸ್ಕರ ಅಂಜಲಿಯನ್ನು ಮಾಡಿರಿ" ಎಂದು ಜೈಮಿನಿಯಿಂದ ಹೇಳಲ್ಪ ಟ್ಟಿದೆ. ಇತ್ಯಾದಿ ವಚನಗಳು ಈ ವಿಷಯದಲ್ಲಿ ಪ್ರಸಿದ್ಧವಾಗಿರುತ್ತವೆ.

ಇತಿ ಮಹಾಬ್ರಾಹ್ಮಣೇನ ರುದ್ರೇಣ ಸಹ ಕ್ಷತ್ರಿಯವೈಶ್ಯಶೂದ್ರಾಣಾಂ ಹರಿವಿರಿಂಚಿ ಸುರೇಶಾನಾಂ ಸಮಾನಾಹ್ವಾನಸ್ತುತಿನಮಸ್ಕಾರನಿರಸನವಿಧಿ ರಷ್ಟಮೋಪದೇಶೇ ನವಮಸ್ಸಂವಾದಃ.

ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವರ್ಯವಿರಚಿತೇ ಘೋಳರೇಣುಕಸಂವಾದರೂಪಶಿವಾಧಿಕ್ಯಶಿಖಾಮಣೌ ರುದ್ರಸ್ಯ ಬ್ರಾಹ್ಮಣ್ಯಾದಿವಿಚಾರಪ್ರತಿಪಾದಕನವಮಸ್ಸಂವಾದವಿಚಾರೋಽಷ್ಟಮೋಪದೇಶಃ.

ಶ್ರೀ ಭವಹರಾಯನಮಃ.

## ನವಮೋಪದೇಶಃ ಪ್ರಾರಭ್ಯತೇ.



### ನಾರಾಯಣಸ್ಯ ಭೃಗುಮುನಿಶಾಪವಿಧಿಃ.

ಚೋ—" ಪರೋಪಕಾರಂ ಕೈವಲ್ಯಂ ತೂಲಯಿತ್ವಾ ಸ್ವಯಂ ಹರಿಃ ॥ ಅಂಗೀಕರೋತಿ ಭಗವಾನವತಾರಾನ್ ದಶ ಕ್ರಮಾತ್ " ಇತಿ ಮಹಾಭಾರತವಾಕ್ಯಾ

---

ಎಂಬಲ್ಲಿಗೆ ಮಹಾಬ್ರಾಹ್ಮಣನಾದ ರುದ್ರನೊಡನೆ ಕ್ಷತ್ರಿಯವೈಶ್ಯಶೂದ್ರರಾದ ವಿಷ್ಣುಬ್ರಹ್ಮೇಂದ್ರರಿಗೆ ಸಾಮ್ಯಸ್ತುತಿನಮಸ್ಕಾರ ನಿರಸನವಿಧಿಯನ್ನು ಹೇಳುವ ಎಂಟನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಎಂಟನೆಯ ಉಪದೇಶವು ಸಂಪೂರ್ಣವಾಯಿತು.



## ಒಂಭತ್ತನೆಯ ಉಪದೇಶ ಪ್ರಾರಂಭವು.

### ನಾರಾಯಣನಿಗೆ ಭೃಗುಮುನಿಶಾಪವಿಧಿಯು.

ಚೋ — "ವಿಷ್ಣುವು ತಾನು—ಪರೋಪಕಾರವನ್ನು ಮೋಕ್ಷವನ್ನು ಈ ಎರಡನ್ನು ತೂಕಮಾಡಿ ಮೋಕ್ಷಕ್ಕಿಂತ ಪರೋಪಕಾರವೇ ಶ್ರೇಷ್ಠವೆಂದು ದಶಾವತಾರಗಳನ್ನು ಗ್ರಹಿಸಿರುತ್ತಾನೆ" ಎಂದು ಹೇಳುವ ಮಹಾಭಾರತವಾಕ್ಯವಿರುವುದರಿಂದಲೂ, "ದಾಶಾರ್ಹೋದಶರೂಪಧೃಕ್"

ತ್, "ದಾಶಾರ್ಹೋ ದಶರೂಪಭೃತ್" ಇತ್ಯಮರವಾಕ್ಯಾಚ್ಚ ಪರೋಪಕಾರರೂಪಾಸ್ಸ್ವೇಚ್ಛಾಸಂಭವಾ ನಾರಾಯಣದಶಾವತಾರಾ ನ ನಿಂದ್ಯಾ ಏವ.

ರೇ—ಹೇ ಚೋಳ! ತಥಾ ನ ಹಿ, ಆದಿನಾರಾಯಣಸ್ಯ ದಶಾವತಾರಪ್ರಾಪ್ತಿಃ ಭೃಗುಮುನಿಶಾಪಾದಾಗತೇತಿ ಶ್ರೂಯತಾಂ, ರಾಮಾಯಣೇ,—ವಿಶ್ವಾಮಿತ್ರಃ, "ವಿಷ್ಣುನಾಪಿ ಪುರಾ ರಾಮ ಭೃಗುಪತ್ನೀ ದೃಢವ್ರತಾ || ಅನಿಂದ್ರಲೋಕಮಿಚ್ಛಂತೀ ಕಾವ್ಯಮಾತಾ ನಿಷೂದಿತಾ" ಬ್ರಹ್ಮಾಣ್ಡಪುರಾಣೇ,—"ಭೃಗೋರಪಿ ಚ ಶಾಪೇನ ವಿಷ್ಣುಃ ಪರಮವೀರ್ಯವಾನ್ || ಅವತಾರಾನ್ ದಶ ಪ್ರಾಪ್ತೋ ದುಃಖಿತಾಂಶ್ಚ ನಿರಾಕೃತಾನ್" ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—ವಿಷ್ಣುಂ ಪ್ರತಿ ಭೃಗುಮುನಿವಾಕ್ಯಂ, "ನ ವೇದ್ಮಿ ತ್ರ್ಯಂಬಕಾದನ್ಯಂ ದೇವಂ ಚಾಪಿ ಮಹೇಶ್ವರಾತ್ || ತೇನ ಸತ್ಯೇನ ಗೋವಿಂದ ನರಕಾನ್ದಶ ಯಾಸ್ಯಸಿ || ಮತ್ಸ್ಯಕಚ್ಛಪರೂಪಸ್ತ್ವಂ ಮಾಂಸಾಸೃಕ್ಪ್ರಿಯಭುಗ್ಭವ || ತಥಾ ಸೂಕರರೂಪೇಣ ಜಗದ್ವಿಷ್ಠಾಕ್ಷಯಂ ಕು

---

ಎಂದು ಅಮರವಾಕ್ಯವಿರುವುದರಿಂದಲೂ ನಾರಾಯಣನು ಪರೋಪಕಾರವೇ ಪ್ರಯೋಜನವಾಗುಳ್ಳ ಹತ್ತು ಅವತಾರಗಳನ್ನು ತನ್ನಿಚ್ಛೆಯಿಂದ ಹೊಂದಿದನಾದ್ದರಿಂದ ಆ ಅವತಾರಗಳು ನಿಂದೆಗೆ ಯೋಗ್ಯಗಳಲ್ಲವು.

ರೇ ಎಲೈ ಚೋಳನೇ! ಆ ಸಂಗತಿಯು ನೀನು ಹೇಳಿದ ಪ್ರಕಾರವಾಗಲ್ಲವು. ವಿಷ್ಣುವು-ಭೃಗುಮುನಿಶಾಪದಿಂದ ದಶಾವತಾರಗಳನ್ನು ಹೊಂದಿದನೆಂಬುದನ್ನು ಕೇಳು; ರಾಮಾಯಣದಲ್ಲಿ—"ಎಲೈ ಶ್ರೀರಾಮನೇ! ಪೂರ್ವದಲ್ಲಿ ಆದಿನಾರಾಯಣನು—ಮಹಾಮಹಾ ಪಾತಿವ್ರತ್ಯದಿಂದ ಸ್ವರ್ಗಸುಖವನ್ನೂ ಬಯಸದವಳಾಗಿದ್ದ ಭೃಗುಮುನಿಯ ಮಡದಿಯನ್ನು ಕೊಂದನು" ಎಂದು ವಿಶ್ವಾಮಿತ್ರನಿಂದ ಹೇಳಲ್ಪಟ್ಟಿದೆ. ಬ್ರಹ್ಮಾಂಡಪುರಾಣದಲ್ಲಿ—"ಮಹಾಪರಾಕ್ರಮಶಾಲಿಯಾದ ಆದಿನಾರಾಯಣನು ದುಃಖವಿಶಿಷ್ಟಗಳೂ, ತಿರಸ್ಕಾರಾರ್ಹಗಳೂ ಆದ ಮೀನು, ಆಮೆ, ಹಂದಿ ಮೊದಲಾದ ಹತ್ತು ಅವತಾರಗಳನ್ನು ಭೃಗುಮುನಿಶಾಪದಿಂದ ಹೊಂದಿದನು" ಎಂದು ಹೇಳಲ್ಪಟ್ಟಿದೆ. ಸ್ಕಾಂದದಲ್ಲಿರುವ ಸನತ್ಕುಮಾರಸಂಹಿತೆಯಲ್ಲಿ—"ಎಲೈ ಆದಿನಾರಾಯಣನೇ! ತ್ರಿಯಂಬಕನಾದ ಮಹೇಶ್ವರನಿಂದ ಬೇರೆಯಾದ ದೇವತೆಯನ್ನು ನಾನು ಶ್ರೇಷ್ಠವನ್ನಾಗಿ ಭಾವಿಸತಕ್ಕವನಲ್ಲ. ಆ ನಿಜವು ನನ್ನಲ್ಲಿರುವುದರಿಂದ ಎಲೈ ನಾರಾಯಣನೇ! ನೀನು ನರಕಾನುಭವಕ್ಕೆ ಸಮಾನಗಳಾದ ದಶಾವತಾರಗಳನ್ನು ಅನುಭವಿಸುವೆ. ಮೀನು ಆಮೆಗಳ ಸ್ವರೂಪವನ್ನು ಹೊಂದಿ ಮಾಂಸಾದಿಗಳನ್ನು ಭುಂಜಿಸುವವನಾಗು. ಹಂದಿಯಾಗಿ ಲೋಕದ ಅಮೇಧ್ಯವನ್ನು ಭುಂಜಿಸುವವನಾಗು. ಮತ್ತೂ ಎಲೈ ಹರಿಯೇ! ನೃಸಿಹ್ಮಾದಿಗಳ ಶರೀರಗಳನ್ನು ಬಹುಕಾಲದವರಿಗೂ ಹೊಂದುವನಾಗು" ಎಂದು ಆದಿನಾರಾಯಣನನ್ನು ಕುರಿತು ಭೃಗುಮುನಿಯಿಂದ ನಿರೂಪಿಸಲ್ಪ

ರು || ನರಸಿಂಹಾದಿಭಿರ್ದೇಹೈರ್ಯುಕ್ತೋ ಭವ ಚಿರಂ ಹರೇ '' ಇತ್ಯಾದಿಪ್ರಸಿದ್ಧಂ.

ಇತಿ ಆದಿನಾರಾಯಣಸ್ಯ ಭೃಗುಮುನಿಶಾಪವಿಧಿರ್ನವಮೋಪದೇಶೇ ಪ್ರಥಮಸ್ಸಂವಾದಃ.



ಶ್ರೀಃ.

## ಹರಿವಿರಿಂಚ್ಯೋರನ್ಯೋನ್ಯಶಾಪವಿಧಿಃ.

ರೇ—ಭೋ ಚೋಳ! ಹರಿವಿರಿಂಚ್ಯೋರನ್ಯೋನ್ಯಶಾಪವಿಧಿಃ ಶ್ರೂಯತಾಂ, ಪಾರಾಶರಪುರಾಣೇ,-ಶುಕಮುನಿಂಪ್ರತಿ ಪರಾಶರವಾಕ್ಯಂ, " ರುದ್ರಾಧಿಕ್ಯಮವಿಜ್ಞಾಯ ಬ್ರಹ್ಮನಾರಾಯಣೌ ಪುರಾ || ಅಹಂ ಪ್ರಭುರಹಂ ಚೇತಿ ಭ್ರಮಾದಕುರುತಾಂ ರಣಂ || ಮಹಾಕ್ರೋಧಸಮಾಯುಕ್ತೋ ಬ್ರಹ್ಮಾ ಸರ್ವಜಗತ್ಪತಿಃ|| ಶಶಾಪ ವಿಷ್ಣುಂ ಗರ್ಭಸ್ಥೋ ಭವೇತ್ಯತಿವಿಮೋಹಿತಃ || ತ್ವದ್ಭಕ್ತಾ ಬ್ರಾಹ್ಮಣಾಸ್ಸರ್ವೇ ತ್ರಿಪುಂಡ್ರೇ ಭಸ್ಮಕುಂಠನೇ || ಭವೇಯುರ್ವಿಮುಖಾ ನಿತ್ಯಂ ವೇದಸಿದ್ಧೇ ವಿಮುಕ್ತಿದೇ || ತ್ರಿಶೂಲೇ ಚತುರಶ್ರೇ ವಾ ವೇಣುಪತ್ರೋಪಮೇಽಥವಾ || ಪುಂಡ್ರಾಂತರೇ ಚ ತೇ ನಿತ್ಯಂ

---

ಟ್ಟಿದೆ. ಇತ್ಯಾದಿ ವಚನಪ್ರಮಾಣಗಳಿರುವುದರಿಂದ ಆದಿನಾರಾಯಣನಿಗೆ ಭೃಗುಮುನಿಯ ಶಾಪವು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಆದಿನಾರಾಯಣನಿಗೆ ಭೃಗುಮುನಿಶಾಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



### ವಿಷ್ಣುಬ್ರಹ್ಮರುಗಳ ಅನ್ಯೋನ್ಯಶಾಪವಿಧಿಯು.

ರೇ—ಎಲೈ ಚೋಳನೇ! ವಿಷ್ಣುವಿನಿಂದ ಬ್ರಹ್ಮನಿಗೂ, ಬ್ರಹ್ಮನಿಂದ ವಿಷ್ಣುವಿಗೂ ಉಂಟಾದ ಶಾಪವಿಚಾರವನ್ನು ಕೇಳು; ಪಾರಾಶರಪುರಾಣದಲ್ಲಿ – "ಪೂರ್ವದಲ್ಲಿ ಬ್ರಹ್ಮವಿಷ್ಣುಗಳು ಜಗದಾದಿಯಾದ ರುದ್ರನನ್ನು ಉತ್ಕೃಷ್ಟನನ್ನಾಗಿ ಭಾವಿಸದೆ, "ನಾನು ಜಗತ್ಪತಿಯು ನಾನು ಜಗತ್ಪತಿಯು,, ಎಂದು ಭ್ರಮೆಪಡುತ್ತ, ಪರಸ್ಪರವಾಗಿ ಕಾದಾಡಿದರು. ಆಗ ಬ್ರಹ್ಮನು ಕುಪಿತನಾಗಿ ಎಲೈ ವಿಷ್ಣುವೇ! ನೀನು ಗರ್ಭವಾಸಿಯಾಗು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವರಾದರೂ ನಿನ್ನ ಭಕ್ತರಾದವರೆಲ್ಲರೂ ವೇದೋಕ್ತವೂ, ಮೋಕ್ಷಪ್ರದವೂ ಆದ ಭಸ್ಮದಿಂದ ತ್ರಿಪುಂಡ್ರಧಾರಣವನ್ನು ಮಾಡಿಕೊಳ್ಳುವುದರಲ್ಲೂ, ಉದ್ಧೂಳನಮಾಡಿಕೊಳ್ಳುವುದರಲ್ಲೂ ಅಸಕ್ತರಾಗಲಿ ತ್ರಿಶೂಲಮುದ್ರೆ, ಚತುರಸ್ರಮುದ್ರೆ, ಮೊದಲಾದವುಗಳನ್ನು ಧರಿಸಿಕೊಳ್ಳುವುದರಲ್ಲಾಸಕ್ತರಾ

ಸಕ್ತಾಸ್ಸ್ಯುಸ್ತಾಂತ್ರಿಕೇ ದ್ವಿಜಾಃ || ಆಯುಧೈಶ್ಶಂಖಚಕ್ರಾದ್ಯೈಸ್ತ್ವದಸ್ತ್ರೈರಂಕಿತಾ ಜನಾಃ || ಅಗ್ನಿತಪ್ತೈರ್ಮಹಾಮೋಹಾದ್ಭವೇಯುಶ್ಚಾಂಸಯೋರ್ದ್ವಯೋಃ || ವೇದಸಿದ್ಧೇನ ಮಾರ್ಗೇಣ ಶಿವಸ್ಯಾರಾಧನೇ ದ್ವಿಜಾಃ || ತ್ವದ್ಭಕ್ತಾ ವಿಮುಖಾ ನಿತ್ಯಂ ಭವೇಯುಃ ಪರಿಮೋಹಿತಾಃ || ತ್ವದೀಯೇ ಪಾಂಚರಾತ್ರೇ ಚ ತಂತ್ರೇ ಭಾಗವತೇ ತಥಾ || ದೀಕ್ಷಿತಾಶ್ಚ ದ್ವಿಜಾ ನಿತ್ಯಂ ಭವೇಯುರ್ನಿರ್ಭಯಾ ಹರೇ || ಶ್ರೌತಸ್ಮಾರ್ತ ಸದಾಚಾರೇ ತ್ವಪವರ್ಗಪ್ರದೇ ಶುಭೇ || ತ್ವದ್ಭಕ್ತಾ ವಿಮುಖಾ ನಿತ್ಯಂ ಭವೇಯುರತಿಮೋಹಿತಾಃ || ಶಪ್ತೋ ವಿಷ್ಣುರ್ವಿರಿಂಚೇನ ಮಹಾಮೋಹವಶಂ ಗತಃ || ಮಹಾಕ್ರೋಧೇನ ಸಂಯುಕ್ತಶ್ಶಶಾಪ ಚತುರಾನನಂ || (ವಿಷ್ಣುಃ) ಶಂಕರೇಣ ಭವೇಚ್ಛಿನ್ನಂ ತ್ವದೀಯಂ ಪಂಚಮಂ ಶಿರಃ || ಪಂಕಜೋದ್ಭವ ಕೇನಾಪಿ ಕಾರಣೇನಾಚಿರೇಣ ತು || ತ್ವದ್ಭಕ್ತಾ ಬ್ರಾಹ್ಮಣಾ ಲೋಕೇ ಕ್ಷತ್ರಿಯಾ ವೈಶ್ಯ ಸಂಭವಾಃ || ಶೂದ್ರೇಷು ಸಂಕರಾ ನಿತ್ಯಂ ಭವೇಯುಸ್ತೇ ಪಿತಾಮಹ! || ತಂತ್ರಂ ತ್ವದೀಯಂ ವಿಚ್ಛಿನ್ನಂ ಭವೇತ್ಸರ್ವತ್ರ ಸರ್ವದಾ | ನ ಭವೇತ್ತ್ವತ್ಪ್ರತಿಷ್ಠಾ ಚ ಸಂಪೂಜ್ಯಾ ಪದ್ಮಸಂಭವ || (ಪರಾಶರಃ) ಏವಂ ಸಂಲಪಿತಾ ಮೋಹಾತ್ತಾವಪ್ಯಕುರುತಾಂ ಶುಕ || ಅವಿ

---

ಗಲಿ, ಎಲೈ ವಿಷ್ಣುವೇ! ನಿನ್ನ ಭಕ್ತರು ಬೆಂಕಿಯಿಂದ ಕಾಯಿಸಲ್ಪಟ್ಟ ನಿನ್ನ ಆಯುಧಗಳಾದ ಶಂಖ ಚಕ್ರ ಮೊದಲಾದವುಗಳಿಂದ ತೋಳುಗಳಮೇಲೆ ಗುರುತುಗಳನ್ನು ಮಾಡಿಕೊಳ್ಳುವರಾಗಲಿ, ಎಲೈ ವಿಷ್ಣುವೇ! ನಿನ್ನ ಭಕ್ತರಾದ ಬ್ರಾಹ್ಮಣರು ವೇದೋಕ್ತವಿಧಿಯಿಂದ ಶಿವಪೂಜೆಯನ್ನು ಮಾಡುವುದರಲ್ಲಿ ಆಸೆಯಿಲ್ಲದವರಾಗಿ, ಎಲೈ ಹರಿಯೇ! ನಿನ್ನ ಭಕ್ತರಾದ ಬ್ರಾಹ್ಮಣರು ಪಾಂಚರಾತ್ರತಂತ್ರವನ್ನೋದುವುದರಲ್ಲಿ ಅತ್ಯಾಸಕ್ತರಾಗಿ ನಿರ್ಭಯವಾಗಿ ಪಾಪಕೃತ್ಯಗಳನ್ನು ಮಾಡುವವರಾಗಲಿ, ಎಲೈ ನಾರಾಯಣನೇ! ನಿನ್ನ ಭಕ್ತರು ಜ್ಞಾನಹೀನರಾಗಿ ಮಂಗಳಕರಗಳೂ, ಮೋಕ್ಷಸಾಧಕಗಳೂ, ಶ್ರುತಿಸ್ಮೃತ್ಯುಕ್ತಗಳೂ ಆಗಿರುವ ಸದಾಚಾರಗಳನ್ನು ಆಚರಿಸುವುದರಲ್ಲಿ ಅಪೇಕ್ಷೆಯಿಲ್ಲದವರಾಗಲಿ›› ಈ ರೀತಿಯಾಗಿ ಬ್ರಹ್ಮನಿಂದ ಶಾಪವನ್ನು ಹೊಂದಿದ ಆದಿನಾರಾಯಣನು ಬಹು ಕೋಪವುಳ್ಳವನಾಗಿ, ‹‹ಎಲೈ ಬ್ರಹ್ಮನೇ! ನಿನ್ನ ಐದನೆಯ ತಲೆಯು ಶಿವನಿಂದ ಯಾವುದೋ ಒಂದು ಕಾರಣದಿಂದ ಶೀಘ್ರವಾಗಿ ಕತ್ತರಿಸಲ್ಪಡುವುದಾಗಲಿ. ಲೋಕದಲ್ಲಿ ನಿನ್ನ ಭಕ್ತರಾದ ಬ್ರಾಹ್ಮಣರು ಕ್ಷತ್ರಿಯಧರ್ಮವನ್ನನುಸರಿಸುವವರಾಗಲಿ. ವೈಶ್ಯರಿಂದ ಹುಟ್ಟುವವರಾಗಲಿ. ಶೂದ್ರರಲ್ಲಿ ಸಾಂಕರ್ಯವನ್ನು ಹೊಂದುವವರಾಗಲಿ. ನಿನ್ನ ಆಗಮವು ಸಕಲದೇಶಗಳಲ್ಲೂ, ಸಕಲಕಾಲಗಳಲ್ಲೂ ಇಲ್ಲದೆ ಹೋಗಲಿ. ಮತ್ತು ನಿನ್ನ ವಿಗ್ರಹಕ್ಕೆ ಪ್ರತಿಷ್ಠೆಯು ಆಗದೇ ಹೋಗಲಿ.›› ಎಂದು ಶಪಿಸಿದನು. ಆ ಸಮಯದಲ್ಲಿ ಪರಾಶರನು—ಎಲೈ ಶುಕಮುನಿಯೇ! ವಿಷ್ಣುಬ್ರಹ್ಮರು ಅಜ್ಞಾನದಿಂದ ಒಬ್ಬರಿಗೊಬ್ಬರು ಗಳಹುತ್ತಾ ಶಿವೋತ್ಕರ್ಷವನರಿಯದೆ

ಜ್ಞಾತ್ವಾ ಶಿವಾಧಿಕ್ಯಂ ಮಹಾಮೋಹಮಯಂ ರಣಂ || ರುದ್ರಂ ವಿಶ್ವಾಧಿಕಂ ಜ್ಞಾತ್ವಾ ಮಹರ್ಷಿಂ ಜನಕಂ ವಿಧೇಃ || ಸಂಸಾರಸಾಗರಂ ತೀರ್ತ್ವಾಽಪಾರಂ ಮುಕ್ತಿಂ ಸ ಗಚ್ಛತಿ'' ಇತ್ಯಾದಿಪ್ರಸಿದ್ಧಂ.

ಇತಿ ಹರಿವಿರಿಂಚ್ಯೋರನ್ಯೋನ್ಯಶಾಪವಿಧಿರ್ನವಮೋಪದೇಶೇ ದ್ವಿತೀಯಸ್ಸಂವಾದಃ.

ಶ್ರೀಃ.

## ದಧೀಚಿಮುನಿಶಾಪವಿಧಿಃ.

ರೇ—ಭೋ ಚೋಳ! ಮಹಾಬ್ರಹ್ಮಣರುದ್ರಭಕ್ತಿವಿರಹಿತಾನಾಂ ಬ್ರಾಹ್ಮಣಾನಾಂ ದಕ್ಷಾಧ್ವರಸಮಯೇ ದಧೀಚಿಮುನೇಶ್ಶಾಪವಿಧಿಃ ಶ್ರೂಯತಾಂ, ಆದಿತ್ಯಪುರಾಣೇ,—ದಧೀಚಿಃ, ''ಏಕ ಏವೇತಿ ಯೋ ರುದ್ರಸ್ಸರ್ವವೇದೇಷು ಗೀಯತೇ || ತಸ್ಯ ಪ್ರಸಾದಲೇಶೇನ ಭಕ್ತಿರ್ಭವತಿ ಶಾಂಕರೀ || ಪ್ರಸಂಗಾತ್ಕೌತುಕಾಲ್ಲೋಭಾದ್ಭಯಾದಜ್ಞಾನತೋಽಪಿ ವಾ || ಹರ ಇತ್ಯುಚ್ಚರನ್ಮರ್ತ್ಯಸ್ಸರ್ವಪಾಪೈಃ ಪ್ರಮುಚ್ಯತೇ || ತಸ್ಮಾತ್ಸ ಏವ ದೇವಾನಾಮಧಿಕಶ್ಚಂದ್ರಶೇಖರಃ || ಇಜ್ಯತೇ ಸರ್ವಯಜ್ಞೇಷು ಕಥಂ

---

ಜಗಳವಾಡಿದರು. ಮಹರ್ಷಿಯೂ, ಬ್ರಹ್ಮನಿಗೆ ತಂದೆಯೂ ಆಗಿರುವ ಆದಿರುದ್ರನನ್ನು ಸರ್ವಶ್ರೇಷ್ಠನನ್ನಾಗಿ ತಿಳಿದವನು ಅಪಾರವಾದ ಭವವೆಂಬ ಕಡಲನ್ನು ದಾಟಿ ಮುಕ್ತನಾಗುವನು. ಇತ್ಯಾದಿವಚನವು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ವಿಷ್ಣುಬ್ರಹ್ಮರುಗಳ ಅನ್ಯೋನ್ಯಶಾಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.

### ದಧೀಚಿಮುನಿಶಾಪವಿಧಿಯು.

ರೇ—ಎಲೈ ಚೋಳನೇ! ದಕ್ಷಬ್ರಹ್ಮನು ಯಾಗವನ್ನು ಮಾಡುತ್ತಿದ್ದಕಾಲದಲ್ಲಿ ಶಿವಭಕ್ತಿವಿಹೀನರಾದ ಬ್ರಾಹ್ಮಣರಿಗೆ ದಧೀಚಿಮುನಿಯು ಕೊಟ್ಟ ಶಾಪವಿಚಾರವನ್ನು ಕೇಳು; ಆದಿತ್ಯಪುರಾಣದಲ್ಲಿ—''ಯಾವ ರುದ್ರನು ಅದ್ವಿತೀಯನೆಂದು ಸಕಲ ವೇದಗಳಲ್ಲಿ ಹೇಳಲ್ಪಡುತ್ತಿರುವನೋ, ಆ ರುದ್ರನ ಅನುಗ್ರಹವು ಸ್ವಲ್ಪಮಾತ್ರವುಂಟಾದಾಗ್ಯೂ ಶಿವಭಕ್ತಿಯುಂಟಾಗುವುದು. ಸಂದರ್ಭದಿಂದಾದರೂ, ಕುತೂಹಲದಿಂದಾದರೂ, ಲೋಭದಿಂದಾದರೂ, ಭೀತಿಯಿಂದಾದರೂ, ಅಜ್ಞಾನದಿಂದಾದರೂ ಹರನಾಮವನ್ನುಚ್ಚರಿಸುವ ಮನುಷ್ಯನು ಸಮಸ್ತ ಪಾಪಗಳಿಂದ ಬಿಡಲ್ಪಡುವನು. ಆ ಚಂದ್ರಶೇಖರನಾದ ರುದ್ರನೇ ಸಕಲ ದೇವತೆಗಳಲ್ಲಿ ಶ್ರೇಷ್ಠನಾದ್ದರಿಂದ ಸಕಲ ಯಜ್ಞಗಳಲ್ಲಿ ಆರಾಧಿಸಲ್ಪಡುತ್ತಾನೆ. ಹೀಗಿರುವಲ್ಲಿ; ಎಲೈ ದಕ್ಷನೇ! ನೀನು ಆತನನ್ನು ಏಕೆ ಪೂಜಿಸಲಿಲ್ಲವು?

ದಕ್ಷ ನ ಪೂಜ್ಯತೇ || (ದಕ್ಷಃ) ನಾಹಂ ನಾರಾಯಣಾದನ್ಯಚ್ಛ್ರೇಷ್ಠಂ ಮನ್ಯೇ ದ್ವಿಜೋತ್ತಮ || ಕಾರಣಂ ಸರ್ವಭೂತಾನಾಂ ನಾಸ್ತೀತ್ಯೇವ ಹಿ ನಿಶ್ಚಿತಂ || (ದಧೀಚಿಃ) ಯಜ್ಞಸ್ಯ ಪಾಲಕೋ ವಿಷ್ಣುರಿತಿ ಯನ್ನಿಶ್ಚಿತಂ ತ್ವಯಾ || ಭವಿಷ್ಯತ್ಯನ್ಯಥಾ ಶಶ್ವತ್ಪಶ್ಯಂತಃ ಕಮಲಾಪತಿಂ || ಏತೇ ಚ ಬ್ರಾಹ್ಮಣಾಸ್ಸರ್ವೇ ಯೇ ದ್ವಿಷಂತಿ ಮಹೇಶ್ವರಂ || ಭವಂತಿ ವೇದಬಾಹ್ಯಾಸ್ತೇ ಪಾಪೋಪಹತಚೇತಸಃ || ಪಾಷಂಡಾಚಾರನಿರತಾಸ್ಸರ್ವೇ ನಿರಯಗಾಮಿನಃ || ಕಲೌಯುಗೇ ತು ಸಂಪ್ರಾಪ್ತೇ ಪರಿಬ್ರಾಶ್ಶೂದ್ರಯಾಚಕಾಃ || ಸರ್ವಸ್ಮಾದಧಿಕೋ ರುದ್ರಃ ಪಶುಪಾಶವಿಮೋಚಕಃ || ಪರಾಙ್ಮುಖೋಽಸ್ತು ಯುಷ್ಮಾಕಂ ಮಾಭೂತ್ಪಾರತ್ರಿಕೀ ಗತಿಃ || ಇತಿ ಶಪ್ತ್ವಾ ಯಯೌ ವಿಪ್ರಾನ್ದಧೀಚೋ ಮುನಿಪುಂಗವಃ'' ಸ್ಕಾಂದೇ ದಕ್ಷಾಧ್ವರೇ,—ನಾರಾಯಣಂ ಪ್ರತಿ ದಧೀಚಿಮುನಿವಾಕ್ಯಂ, '' ಶಂಕುಕರ್ಣಗಣೇಶೇನ ಛಿನ್ನಸ್ತೇ ಕೇಶಸಂಚಯಃ || ವೀರಭದ್ರಗಣೇಶೇನ ಶಿರಶ್ಛೇದೋ ಭವಿಷ್ಯತಿ'' ಕೂರ್ಮೇ,—ಸ್ವಭಕ್ತಾನ್ಪ್ರತಿ ವಿಷ್ಣುವಾಕ್ಯಂ, ''ಯೇ ತು ದಕ್ಷಾಧ್ವರೇ ಶಪ್ತಾ ದಧೀಚೇನ ದ್ವಿಜೋತ್ತಮಾಃ || ಭವಿಷ್ಯಂತಿ ಕಲೌ ಭ್ರಷ್ಟಾಃ ಪರಿಹಾರ್ಯಾಃ ಪ್ರಯತ್ನತಃ || ದ್ವಿಷಂತೋ ದೇವವಿಶಾನಂ ಯುಷ್ಮಾಕಂ

---

ದಕ್ಷನು— ಎಲೈ ದ್ವಿಜೋತ್ತಮನಾದ ದಧೀಚಿಮುನಿಯೇ ! ಈಗ ನಾನು ನಾರಾಯಣನಿಗಿಂತ ಬೇರೆಯಾದ ಯಾವನನ್ನೂ ಶ್ರೇಷ್ಠನನ್ನಾಗಿ ತಿಳಿಯೆನು, ಸರ್ವಪ್ರಾಣಿಗಳಿಗೂ ನಾರಾಯಣನೇ ಕಾರಣನಲ್ಲದೆ ಬೇರೊಬ್ಬನಿಲ್ಲವೆಂದು ನಿಶ್ಚೈಸಿದ್ದೇನೆ. ದಧೀಚಿಯು–ಎಲೈ ದಕ್ಷನೇ ! ನೀನು ನಾರಾಯಣನನ್ನೇ ಯಜ್ಞರಕ್ಷಕನನ್ನಾಗಿ ನಿಶ್ಚೈಸಿಕೊಂಡಿರುವುದು ಬೇರೆವಿಧವಾಗಾಗುವುದು. ಯಾವ ಈ ಬ್ರಾಹ್ಮಣರು ವಿಷ್ಣುವನ್ನು ಅಧಿಕನನ್ನಾಗಿ ತಿಳಿಯುತ್ತ ಶಿವನನ್ನು ನಿಂದಿಸುತ್ತಿರುವರೋ ಅವರು ವೇದಬಾಹ್ಯರಾಗಿ ಪಾಪಭೂಯಿಷ್ಠವಾದ ಮನಸ್ಸುಳ್ಳವರಾಗಿ ವೇದವಿರುದ್ಧವಾದ ನಡವಳಿಕೆಯುಳ್ಳವರಾಗಿ ನರಕವನ್ನನುಭವಿಸುವರು. ಅವರು ಕಲಿಯುಗದಲ್ಲಿ ಬಡವರಾಗಿ ಶೂದ್ರರಿಂದ ತಿರುಪೆಯನ್ನೆತ್ತುವರು. ಬ್ರಹ್ಮವಿಷ್ಣ್ವಾದಿ ಪಶುಗಳಲ್ಲಿ ತಗಲಿಕೊಂಡಿರುವ ಮಲ ಮಾಯಾದಿ ಪಾಶಗಳನ್ನು ಛೇದಿಸುವ ರುದ್ರನು ನಿಮ್ಮಗಳಿಗೆ ಅನುಗ್ರಹವನ್ನು ಮಾಡದವನಾಗಲಿ, ನಿಮಗೆ ಪರಲೋಕಗತಿಯುಂಟಾಗದೇ ಹೋಗಲಿ, ಎಂದು ದಕ್ಷಯಾಗದಲ್ಲಿ ನೆರೆದಿರ್ದ ಸಮಸ್ತ ಬ್ರಾಹ್ಮಣರಿಗೆ ಶಾಪವನ್ನಿತ್ತು ತೆರಳಿದನು,, ಎಂದು ಹೇಳಲ್ಪಟ್ಟಿದೆ. ಸ್ಕಾಂದದಲ್ಲಿರುವ ದಕ್ಷಾಧ್ವರದಲ್ಲಿ — ''ಪ್ರಮಥಶ್ರೇಷ್ಠನಾದ ಶಂಕುಕರ್ಣನು ನಿನ್ನ ತಲೆಯ ಕೂದಲುಗಳನ್ನು ಕತ್ತರಿಸಿದನು. ಗಣಾಧಿಪತಿಯಾದ ವೀರಭದ್ರನು ನಿನ್ನ ತಲೆಯನ್ನು ಛೇದಿಸುವನು,, ಎಂದು ನಾರಾಯಣನನ್ನು ಕುರಿತು ದಧೀಚಿಯಿಂದ ಹೇಳಲ್ಪಟ್ಟಿದೆ. ಕೂರ್ಮಪುರಾಣದಲ್ಲಿ — ''ದಕ್ಷಾಧ್ವರಕಾಲದಲ್ಲಿ ದಧೀಚಿಮುನಿಶಾಪವನ್ನು ಹೊಂದಿದ ಬ್ರಾಹ್ಮಣರು ಕಲಿಯುಗದಲ್ಲಿ ಧರ್ಮಭ್ರಷ್ಟರಾಗುವರು. ಸಕಲಲೋಕಕ್ಕೆ ಸ್ವಾಮಿಯಾದ ಶಿವನನ್ನು ದ್ವೇಷಿಸಿದ ನಿಮ್ಮ ವಂಶದಲ್ಲಿ ಹುಟ್ಟಿದವ

ವಂಶಸಂಭವಾಃ || ಶಪ್ತಾಶ್ಚ ಗೌತಮೇನೋರ್ವ್ಯಾಂ ನ ಸಂಭಾಷ್ಯಾ ದ್ವಿಜೋತ್ತಮೈಃ || ತಸ್ಮಾತ್ತಾಸ್ಸ ಪರಿಹರ್ತವ್ಯಾ ನಿಂದಾ ಪಶುಪತೇರ್ದ್ವಿಜೈಃ || ಕರ್ಮಣಾ ಮನಸಾ ವಾಚಾ ತದ್ಭಕ್ತೇಷ್ವಪಿ ಯತ್ನತಃ'' ಇತಿ. ಲೈಂಗೇ,—ಶಕ್ರಂ ಪ್ರತ್ಯುಪಮನ್ಯುವಾಕ್ಯಂ, ''ಯಸ್ಸಮುತ್ಪಾಟಯೇಜ್ಜಿಹ್ವಾಂ ಶಿವನಿಂದಾಕರಸ್ಯ ತು || ತ್ರಿಸಪ್ತಕುಲಮುದ್ಧೃತ್ಯ ಶಿವಲೋಕಂ ಸ ಗಚ್ಛತಿ || ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ || ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯ ಕ್ಷಮೋ ಭವೇತ್'' ಇತಿ. ಅತ ಏವ ಶಿವನಿಂದಾಸಕ್ತಾ ನ ದರ್ಶನೀಯಾ ನ ಸಂಭಾಷ್ಯಾಶ್ಚ.

ಇತಿ ದಕ್ಷಾಧ್ವರೇ ಸರ್ವಬ್ರಾಹ್ಮಣಾನ್ಪ್ರತಿ ದಧೀಚಿಮುನಿಶಾಪವಿಧಿರ್ನವಮೋಪದೇಶೇ ತೃತೀಯಸ್ಸಂವಾದಃ.

---

ಶ್ರೀಃ.

## ಗೌತಮಮುನಿಶಾಪವಿಧಿಃ.

ರೇ—ಭೋ ಚೋಳ! ಗೌತಮಮುನಿನಾ ಸ್ವಾಶ್ರಮಸ್ಥಿತಸರ್ವಬ್ರಾಹ್ಮಣೇಭ್ಯೋ ದತ್ತಃ ಶಾಪವಿಧಿಃ ಶ್ರೂಯತಾಂ, ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈ

---

ರಿಗೆ ಗೌತಮಮುನಿಯಿಂದ ''ನೀವು ಭೂಲೋಕದಲ್ಲಿ ದ್ವಿಜಶ್ರೇಷ್ಠರಿಂದ ಸಂಭಾಷಿಸಲ್ಪಡುವುದಕ್ಕೆ ಅಯೋಗ್ಯರಾಗುವಿರಿ,, ಎಂದು ಶಾಪವು ಕೊಡಲ್ಪಟ್ಟಿತು. ಆದ್ದರಿಂದ ಬ್ರಾಹ್ಮಣರು ಆ ಶಿವನನ್ನೂ ಅವನ ಭಕ್ತರನ್ನೂ ನಿಂದಿಸಬಾರದು. ಆ ನಿಂದೆಯನ್ನು ವಾಙ್ಮನಃಕರ್ಮಗಳಿಂದ ಪ್ರಯತ್ನಪೂರ್ವಕವಾಗಿ ಬಿಡಬೇಕು,, ಎಂದು ವಿಷ್ಣುವಿನಿಂದ ತನ್ನ ಭಕ್ತರಿಗೆ ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ—''ಶಿವನಿಂದಕನ ನಾಲಿಗೆಯನ್ನು ಕೀಳುವವನು ತನ್ನ ಇಪ್ಪತ್ತೊಂದು ಕುಲವನ್ನುದ್ಧರಿಸಿ ಶಿವಲೋಕವನ್ನು ಹೊಂದುವನು. ಶಿವನಿಂದಕನನ್ನು ಸಂಹರಿಸಬೇಕು. ಅಥವಾ ಶಪಿಸಬೇಕು. ಸಂಹರಿಸುವುದಕ್ಕೂ ಶಪಿಸುವುದಕ್ಕೂ ಅಶಕ್ತನಾದರೆ ಆ ಸ್ಥಳವನ್ನಾದರೂ ಬಿಟ್ಟು ಹೋಗಬೇಕು,, ಎಂದು ಉಪಮನ್ಯುಮುನಿಯಿಂದ ಇಂದ್ರನಿಗೆ ಹೇಳಲ್ಪಟ್ಟಿದೆ. ಈ ಕಾರಣದಿಂದ ಶಿವನಿಂದಕರನ್ನು ನೋಡಬಾರದು. ಅವರೊಡನೆ ಮಾತನಾಡಬಾರದು.

ಎಂಬಿಲ್ಲಿಗೆ ದಧೀಚಿಮುನಿಶಾಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



## ಗೌತಮಮುನಿಶಾಪವಿಧಿಯು.

ರೇ—ಎಲೈ ಚೋಳನೇ! ಗೌತಮನು ತನ್ನಾಶ್ರಮದಲ್ಲಿದ್ದ ಸಮಸ್ತ ಬ್ರಾಹ್ಮಣರಿಗೆ ಶಾಪವನ್ನು ಕೊಟ್ಟುದನ್ನು ಕೇಳು; ಸ್ಕಾಂದಾಂತರ್ಗತವಾದ ಸೂತಸಂಹಿತೆಯಲ್ಲಿರುವ ಯಜ್ಞ

ಭವಖಂಡೇ,—ಗೌತಮವಚನಂ, "ವಿಷ್ಣ್ವಾದಿದೇವತಾಸ್ಸರ್ವಾ ವಿಶಿಷ್ಟಾಶ್ಶಂಕರಾದಿತಿ ॥ ಭ್ರಾಂತಿವಿಜ್ಞಾನಸಂಪನ್ನಾ ಭವೇತ ಬ್ರಾಹ್ಮಣಾಧಮಾಃ ॥ ಮಹಾದೇವಸ್ಯ ಚೋತ್ಕರ್ಷೇ ತ್ರಿಪುಂಡ್ರೋದ್ಧೂಳನಾದಿಷು ॥ ರುದ್ರಾಕ್ಷಧಾರಣೇ ರುದ್ರಲಿಂಗಸ್ಯೈವ ತು ಪೂಜನೇ ॥ ರುದ್ರಾಲಯದಿದೃಕ್ಷಾಯಾಂ ರುದ್ರಯಾತ್ರಾದಿಕರ್ಮಸು ॥ ಯದ್ಯತ್ತು ರುದ್ರಸಂಬಂಧಿ ತತ್ರ ತತ್ರಾಪಿ ದುರ್ಜನಾಃ ॥ ಭವೇತ ವಿಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥ ವರ್ತುಲಾಶ್ವತ್ಥಪತ್ರಾರ್ಧಚಂದ್ರದೀಪಾದಿ ಲಿಂಗಿನಃ ॥ ಭವೇತ ಶ್ರದ್ಧಯಾ ಸಾರ್ಧಂ ಲಲಾಟೇ ಬ್ರಾಹ್ಮಣಾಧಮಾಃ ॥ ಪಾಂಚರಾತ್ರೇ ಚ ಕಾಪಾಲೇ ತಥಾ ಕಾಲಾಮುಖೇಪಿ ಚ ॥ ಶಾಕ್ತೇ ಚ ದೀಕ್ಷಿತಾ ಯೂಯಂ ಭವೇತ ಬ್ರಾಹ್ಮಣಾಧಮಾಃ ॥ ವೇದಬಾಹ್ಯೇಷು ತಂತ್ರೇಷು ಪಾಂಚರಾತ್ರಾದಿಷು ದ್ವಿಜಾಃ ॥ ಭವೇತ ದೀಕ್ಷಿತಾ ಯೂಯಂ ಯುಷ್ಮಾಕಂ ವಂಶಜಾಸ್ತಥಾ ॥ ಬಹುನೋಕ್ತೇನ ಕಿಂ ಸಾಕ್ಷಾಚ್ಛಿವೇ ಸಂಸಾರಮೋಚಕೇ ॥ ತತ್ಸಂಬಂಧಿಷು ಸರ್ವೇಷು ಶ್ರುತಿಸ್ಮೃತ್ಯಾದಿಕೇಷು ಚ ॥ ಯುಷ್ಮಾಕಂ ವಂಶಜಾತಾನಾಂ ಯುಷ್ಮಾಕಂ ಚ ತಥೈವ ಚ ॥ ಶ್ರದ್ಧಾಭಾವಸ್ಸದೈವಾಸ್ತು ಶಾಪಸ್ತೀವ್ರಃ ಕೃತೋ ಮಯಾ ॥ (ಸೂತಃ) ಏವಂ ಮುನೀಂದ್ರೇಣ ಕೃತೇ ಚ ಶಾಪೇ ದ್ವಿಜಾಧಮಾಶ್ಚಾಪಿ ತದಾಜ್ಞಯೈವ॥

---

ವೈಭವಖಂಡದಲ್ಲಿ — "ಎಲೈ ಬ್ರಾಹ್ಮಣಾಧಮರೇ! ನೀವು ಶಿವನಿಗಿಂತ ವಿಷ್ಣ್ವಾದಿದೇವತೆಗಳು ಶ್ರೇಷ್ಠರೆಂದು ಭ್ರಮೆಯಿಂದ ತಿಳಿದವರಾಗಿ ಶಿವಾಧಿಕ್ಯದಲ್ಲೂ, ಭಸ್ಮಸ್ನಾನೋದ್ಧೂಳನತ್ರಿಪುಂಡ್ರ ಧಾರಣಗಳಲ್ಲೂ, ರುದ್ರಾಕ್ಷಧಾರಣದಲ್ಲೂ, ಶಿವಲಿಂಗಪೂಜೆಯಲ್ಲೂ, ಶಿವಾಲಯದರ್ಶನದಲ್ಲೂ, ಶಿವಕ್ಷೇತ್ರ ತೀರ್ಥಯಾತ್ರಾದಿ ಸತ್ಕರ್ಮಗಳಲ್ಲೂ ಸರ್ವಪ್ರಕಾರದಿಂದ ಅಪೇಕ್ಷೆಯಿಲ್ಲದವರಾಗಿರಿ, ಶ್ರದ್ಧೆಯಿಂದ ಹಣೆಯಲ್ಲಿ ಅರಳಿಯೆಲೆ, ಅರ್ಧಚಂದ್ರ, ದೀಪ ಮೊದಲಾದವುಗಳ ಗುರುತುಗಳನ್ನು ಧರಿಸಿಕೊಳ್ಳಿರಿ. ಪಾಂಚರಾತ್ರ, ಕಾಪಾಲ, ಕಾಲಾಮುಖ, ಶಾಕ್ತೇಯ ಮತಗಳ ಸಂಬಂಧವಾದ ದೀಕ್ಷೆಗಳನ್ನು ಹೊಂದುವವರಾಗಿರಿ, ನೀವೂ ನಿಮ್ಮ ವಂಶದಲ್ಲಿ ಹುಟ್ಟಿದವರೂ ವೇದವಿರುದ್ಧವಾಗಿರುವ ಪಾಂಚರಾತ್ರಾದಿ ವೈಷ್ಣವಾಗಮಗಳನ್ನೋದುವುದರಲ್ಲಾಸಕ್ತರಾಗಿರಿ. ಬಹು ಮಾತಿನಿಂದೇನು? ನೀವೂ ನಿಮ್ಮ ವಂಶದಲ್ಲಿ ಹುಟ್ಟಿದವರೂ ಹುಟ್ಟತಕ್ಕವರೂ ಸಂಸಾರನಾಶಕನಾದ ಶಿವನಲ್ಲೂ, ಶ್ರುತಿಸ್ಮೃತಿಗಳಿಂದ ಹೇಳಲ್ಪಟ್ಟಿರುವ ಶಿವಧರ್ಮಗಳಲ್ಲೂ ಯಾವಾಗಲೂ ನಂಬುಗೆಯಿಲ್ಲದವರಾಗಿರಿ. ಎಂದು ಈ ರೀತಿಯಾಗಿ ಕ್ರೂರವಾದ ಈ ಶಾಪವು ನನ್ನಿಂದ ಕೊಡಲ್ಪಟ್ಟಿರುವುದು,, ಎಂದು ಗೌತಮಮುನಿಯಿಂದುಸುರಲ್ಪಟ್ಟಿತು. ಆಗ ಅಲ್ಲಿದ್ದ ಸೂತನು—ಈ ರೀತಿಯಾಗಿ ಗೌತಮಶಪ್ತರಾದ ಬ್ರಾಹ್ಮಣಾಧಮರು ಅವನು ಹೇಳಿರುವ ಪ್ರಕಾರವಾಗಿಯೇ ಆದರು. ಗೌತಮನ ಈ ಸಾಮರ್ಥ್ಯವು ಸ್ವಭಾವಜನ್ಯವಾದುದೆಂದು ಪ್ರಸಿದ್ಧವಾಗಿದೆ,, ಎಂದು ಹೇಳಿದನೆಂ

ತಥಾಭವತ್ ತತ್ಕುಲಜಾಶ್ಚ ಸರ್ವೇ ಸ್ವಭಾವಜೋ ಹ್ಯೇಷ ಮುನೇಃ ಪ್ರಭಾವಃ"
ಇತ್ಯಾದಿ ಪ್ರಸಿದ್ಧಂ.

ಇತಿ ಗೌತಮಮುನಿಶಾಪವಿಧಿರ್ನವಮೋಪದೇಶೇ ಚತುರ್ಥಸ್ಸಂವಾದಃ.



ಶ್ರೀಃ.

## ತಪೋನಿಷ್ಠಾದಿಬ್ರಹ್ಮಸ್ವರೂಪವಿಧಿಃ.

ರೇ—ಹೇ ಚೋಳ! ತಪೋನಿಷ್ಠಸ್ಯಾದಿಬ್ರಹ್ಮಣಸ್ಸ್ವರೂಪಂ ಶ್ರೂಯತಾಂ, ಅಥರ್ವಶಿಖಾಯಾಂ,—"ಬ್ರಹ್ಮಾ ತುರೀಯಂ ಸರ್ವಕರಣಾನಿ ಮನಸಿ ಸಂಪ್ರತಿಷ್ಠಾಪ್ಯ ಧ್ಯಾತಾ" ಇತಿ. ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವಖಂಡೇ,—"ಪುರಾ ಪ್ರಜಾಪತಿಸ್ಸಾಕ್ಷಾತ್ ಶ್ರದ್ಧಯಾ ಪರಯಾ ಸಹ || ಭಸ್ಮೋದ್ಧೂಳಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ || ರುದ್ರಾಕ್ಷಮಾಲಾಭರಣೋ ಜಟಾವಲ್ಕಲಸಂಯುತಃ || ಸದಾ ಪಂಚಾಗ್ನಿಮಧ್ಯಸ್ಥಸ್ಸಾಂಬಧ್ಯಾನಪರಾಯಣಃ ||ತತಾಪ ಪರಮಂ ಘೋರಂ ತಪಸ್ಸಂವತ್ಸರತ್ರಯಂ|| ಸ ಪುನಶ್ಶಂಕರಸ್ಯಾಸ್ಯ ಪ್ರಸಾದಾದಂಬಿಕಾಪತೇಃ|| ಪೃಥಿವೀಮಂತರಿಕ್ಷಂ ಚ ದಿವಂ ಚಾಸೃಜದಾಸ್ತಿಕಾಃ" ಇತ್ಯಾದಿ.

---

ದು ಹೇಳಲ್ಪಟ್ಟಿದೆ. ಇತ್ಯಾದಿ ವಚನಪ್ರಮಾಣಗಳಿಂದ ಬ್ರಾಹ್ಮಣರಿಗೆ ಗೌತಮಶಾಪವುಂಟಾದುದು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಗೌತಮಮುನಿಶಾಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



### ತಪೋನಿಷ್ಠಾದಿಬ್ರಹ್ಮಸ್ವರೂಪವಿಧಿಯು.

ರೇ—ಎಲೈ ಚೋಳನೇ! ತಪಸ್ಸಿನಲ್ಲಿ ನಿಷ್ಠೆಯುಳ್ಳ ಬ್ರಹ್ಮನ ಸ್ವರೂಪವನ್ನು ಕೇಳು; ಅಥರ್ವಶಿಖೆಯಲ್ಲಿ—"ಆದಿರುದ್ರನ ಮಗನಾದ ಬ್ರಹ್ಮನು ತ್ರಿಮೂರ್ತ್ಯತೀತನಾದ ಆದಿರುದ್ರನನ್ನು ಸ್ಥಿರಚಿತ್ತನಾಗಿ ಚಿಂತಿಸಿದನು" ಎಂದು ಉಕ್ತವಾಗಿದೆ. ಯಜ್ಞವೈಭವಖಂಡದಲ್ಲಿ—"ಪೂರ್ವದಲ್ಲಿ ಬ್ರಹ್ಮನು ವಿಶೇಷಭಕ್ತಿಯಿಂದ ತನ್ನ ಸರ್ವಾಂಗದಲ್ಲಿ ಭಸ್ಮೋದ್ಧೂಳನವನ್ನು ಮಾಡಿಕೊಂಡು, ಹಣೆಯಲ್ಲಿ ಭಸ್ಮದಿಂದ ತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲಾಲಂಕೃತನಾಗಿ, ಜಟಾಧಾರಿಯೂ, ಅಜಿನಾಂಬರಧಾರಿಯೂ ಆಗಿ ಪಂಚಾಗ್ನಿಮಧ್ಯದಲ್ಲಿ ನಿಂದು ಶಿವಧ್ಯಾನವನ್ನು ಮಾಡುತ್ತಾ ಮೂರುವರ್ಷಪರ್ಯಂತರ ಉಗ್ರತಪಸ್ಸನ್ನು ಮಾಡಿದನು. ಎಲೈ ಆಸ್ತಿಕರೇ! ಆ ಬ್ರಹ್ಮನು ಶಿವಾನುಗ್ರಹದಿಂದ ಭೂಮ್ಯಾಕಾಶ ಮೊದಲಾದವುಗಳನ್ನೂ, ಸ್ವರ್ಗಮೊದಲಾದವುಗಳನ್ನೂ ಸೃಜಿಸಿದನು" ಎಂದಭಿಹಿತವಾಗಿದೆ. ಇತ್ಯಾದಿ ವಚನವು ಪ್ರಸಿದ್ಧವಾಗಿದೆ.

ಇತಿ ತಪೋನಿಷ್ಠಾದಿಬ್ರಹ್ಮಣಸ್ಸ್ವರೂಪವಿಧಿರ್ನವಮೋಪದೇಶೇ ಪಂಚಮಸ್ಸಂವಾದಃ.

ಶ್ರೀಃ.

## ತಪೋನಿಷ್ಠಾದಿನಾರಾಯಣಸ್ವರೂಪವಿಧಿಃ.

ರೇ—ಭೋ ಚೋಳ! ತಪೋನಿಷ್ಠಾದಿನಾರಾಯಣಸ್ಯ ಸ್ವರೂಪಂ ಶ್ರೂಯತಾಂ, ಅಥರ್ವಶಿಖಾಯಾಂ,— “ವಿಷ್ಣುಃ | ಪ್ರಾಣಂ ಮನಸಿ ಸಹಕರಣೈಸ್ಸಂಪ್ರತಿಷ್ಠಾಪ್ಯ ಧ್ಯಾತಾ” ಇತಿ. ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವಖಂಡೇ,—ಸೂತಃ, “ಪುರಾ ನಾರಾಯಣಶ್ಶ್ರೀಮಾನ್ಕಿರೀಟೀ ಗರುಡಧ್ವಜಃ || ಶ್ರೀಮತ್ಕೈಲಾಸಸಾನೌ ಚ ತತಾಪ ಪರಮಂ ತಪಃ || ಭಸ್ಮೋದ್ಧೂಳಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ || ರುದ್ರಾಕ್ಷಮಾಲಾಭರಣೋ ಜಟಾಮಂಡಲಮಂಡಿತಃ || ತಪತಸ್ತಸ್ಯ ದೇವಸ್ಯ ಕೇಶವಸ್ಯ ಮಹಾತ್ಮನಃ || ಪ್ರಾದುರಾಸೀನ್ಮಹಾದೇವಶ್ಶಂಕರಃ ಕರುಣಾಕರಃ || ತಂ ದೃಷ್ಟ್ವಾ ಪುಂಡರೀಕಾಕ್ಷೋ ಮಹಾದೇವಂ ಘೃಣಾನಿಧಿಂ || ಅಂಬಿಕಾಸಹಿತಂ ರುದ್ರಂ ಚಂದ್ರಮೌಳಿಂ ಸನಾತನಂ || ಪ್ರಣಮ್ಯ ದಂಡವದ್ಭೂಮೌ ಭಕ್ತ್ಯಾ ಪರಮಯಾ ಸಹ || ಸ್ತೋತುಮಾರಭತೇ ವಿಷ್ಣುಸ್ಸರ್ವಲೋಕಹಿತಾವಹಃ” ಇತ್ಯಾದಿ ಪ್ರಸಿದ್ಧಂ.

ಇತಿ ತಪೋನಿಷ್ಠಾದಿನಾರಾಯಣಸ್ವರೂಪವಿಧಿರ್ನವಮೋಪದೇಶೇ ಷಷ್ಠಸ್ಸಂವಾದಃ.



ಎಂಬಲ್ಲಿಗೆ ತಪೋನಿಷ್ಠನಾದ ಆದಿಬ್ರಹ್ಮನ ಸ್ವರೂಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.

## ತಪೋನಿಷ್ಠನಾದ ಆದಿನಾರಾಯಣನ ಸ್ವರೂಪವಿಧಿಯು.

ರೇ—ಎಲೈ ಚೋಳನೇ! ತಪೋನಿಷ್ಠನಾದ ಆದಿನಾರಾಯಣನ ಸ್ವರೂಪವನ್ನು ಕೇಳು; ಅಥರ್ವಶಿಖೆಯಲ್ಲಿ—“ರುದ್ರನ ಪತ್ನಿಯಾದ ನಾರಾಯಣಿಯು ತನ್ನ ಹೃದಯಕಮಲಮಧ್ಯದಲ್ಲಿ ಅಂತರ್ಬಹಿರಿಂದ್ರಿಯಗಳೊಡನೆ ಪ್ರಾಣವಾಯುವನ್ನು ದೃಢವಾಗಿ ತಡೆದು ತನ್ನ ಪತಿಯಾದ ರುದ್ರನನ್ನು ಚಿಂತಿಸುತ್ತಿದ್ದಳು,, ಎಂದುಕ್ತವಾಗಿದೆ. ಯಜ್ಞವೈಭವಖಂಡದಲ್ಲಿ—“ಪೂರ್ವದಲ್ಲಿ ಭಸ್ಮ ರುದ್ರಾಕ್ಷ ಜಡೆಗಳನ್ನು ಧರಿಸಿ ಕೈಲಾಸಪರ್ವತದ ತಪ್ಪಲಿನಲ್ಲಿ ತಪಸ್ಸನ್ನು ಮಾಡಿದ ನಾರಾಯಣನಿಗೆ ಕರುಣಾನಿಧಿಯೂ, ಸುಖಪ್ರದನೂ ಆದ ಮಹಾದೇವನು ಪ್ರಸನ್ನವಾದನು,, ಎಂದು ಹೇಳಲ್ಪಟ್ಟಿದೆ.

ಎಂಬಲ್ಲಿಗೆ ತಪೋನಿಷ್ಠನಾದ ಆದಿನಾರಾಯಣನ ಸ್ವರೂಪವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ಶ್ರೀಃ.

## ರುದ್ರಸ್ಯಸರ್ವಜಗದುಪಕಾರಾರ್ಥಂ ಸ್ವಸ್ವರೂಪಧ್ಯಾನವಿಧಿಃ.

ಚೋ—"ತತ್ಪರಂಬ್ರಹ್ಮ ಸ ಏಕಸ್ಸ ಏಕೋ ರುದ್ರಸ್ಸ ಈಶಾನಸ್ಸಭಗವಾಂತ್ಸಮಹೇಶ್ವರಸ್ಸ ಮಹಾದೇವಃ" ಇತ್ಯಥರ್ವಶಿರೋವಾಕ್ಯಾತ್, ಪರಬ್ರಹ್ಮರುದ್ರೇಣ ಕಸ್ಯ ಧ್ಯಾನಂ ಕೃತಂ ?

ರೇ—ಹೇ ಚೋಳ! ತತ್ಪರಿಹಾರಶ್ಶ್ರೂಯತಾಂ, ಪಾದ್ಮೇ ಶಿವರಾಘವಸಂವಾದೇ,—"ಅಥೋತ್ತರಮುಖಶ್ಶಂಭುರ್ನ್ಯಾಸಂ ಕೃತ್ವಾ ಜಜಾಪ ಚ|| ಅಥ ವಿಷ್ಣುರ್ಮಹಾತೇಜಾ ಮಹೇಶಮಿದಮುಕ್ತವಾನ್ || ಸರ್ವೈರ್ನಮಸ್ಯತೇ ಯಸ್ತು ಸರ್ವೈರಿಹಸಮರ್ಚ್ಯತೇ || ಹೂಯತೇ ಸರ್ವಯಜ್ಞೇಷು ಸ ಭವಾನ್ಕಿಂ ಜಪಿಷ್ಯತಿ|| ರಚಿತಾಂಜಲಯಸ್ಸರ್ವೇ ತ್ವಾಮೇವೈಕಮುಪಾಸತೇ || ಸ ಭವಾನ್ದೇವದೇವೇಶ ಕಸ್ಮೈ ವಾ ರಚಿತಾಂಜಲಿಃ || ನಮಸ್ಕಾರಾದಿಪುಣ್ಯಾನಾಂ ಫಲದಸ್ತ್ವಂ ಮಹೇಶ್ವರ || ತವ ಕಃ ಫಲದೋ ವಂದ್ಯಃ ಕೋ ವಾ ತ್ವತ್ತೋಽಧಿಕೋ ವದ || (ಶ್ರೀರುದ್ರಃ) ಧ್ಯಾ

---

ಸಕಲಲೋಕೋಪಕಾರಕ್ಕಾಗಿ ರುದ್ರನು ಸ್ವಸ್ವರೂಪಧ್ಯಾನವಂ ಮಾಡಿದುದು.

ಚೋ—ಆ ಅದ್ವಿತೀಯನಾದ ರುದ್ರನಿಗೆ ಪರಬ್ರಹ್ಮತ್ವವನ್ನೂ, ಸಕಲ ವಿದ್ಯಾಧೀಶತ್ವವನ್ನೂ, ಷಡ್ಗುಣೈಶ್ವರ್ಯಸಂಪನ್ನತೆಯನ್ನೂ, ಮಹೇಶ್ವರತ್ವವನ್ನೂ, ಮಹಾಪ್ರಕಾಶಮಾನತ್ವವನ್ನೂ ಅಥರ್ವಶಿರೋಪನಿಷತ್ತು ನಿರೂಪಿಸುತ್ತಿರುವುದರಿಂದ ಪರಬ್ರಹ್ಮನಾದ ಆದಿರುದ್ರನು ಯಾವನನ್ನು ಚಿಂತಿಸಿದನು ?

ರೇ—ಎಲೈ ಚೋಳನೇ ! ನೀನು ಕೇಳಿದ ಪ್ರಶ್ನೆಗುತ್ತರವನ್ನು ಕೇಳು; ಪದ್ಮಪುರಾಣದಲ್ಲಿರುವ ಶಿವರಾಘವಸಂವಾದದಲ್ಲಿ—"ರುದ್ರನು ಉತ್ತರದಿಗಭಿಮುಖನಾಗಿ ಷಡಂಗನ್ಯಾಸವಂ ಮಾಡಿ, ತನ್ನನ್ನೇ ಹೇಳುವ ಪಂಚಾಕ್ಷರಮಂತ್ರವನ್ನು ಜಪಿಸಿದನು. ಅನಂತರದಲ್ಲಿ ಆದಿನಾರಾಯಣನು ರುದ್ರನನ್ನು ಕುರಿತು—ಯಾವನು ಸರ್ವರಿಂದ ನಮಸ್ಕರಿಸಲ್ಪಡುತ್ತಾನೋ, ಪೂಜಿಸಲ್ಪಡುತ್ತಾನೋ ಆ ನೀನು ಸಮಸ್ತಯಜ್ಞಗಳಲ್ಲಿ ಅಗ್ರಹವಿರ್ಭಾಗವನ್ನು ಪರಿಗ್ರಹಿಸುತ್ತೀಯೆ, ಹೀಗಿರುವಲ್ಲಿ ನೀನು ಏನನ್ನು ಜಪಿಸುತ್ತೀಯೆ? ಎಲೈ ದೇವಾದಿದೇವನಾದ ಮಹಾದೇವನೇ! ಸರ್ವರೂ ಕೈಗಳನ್ನು ಮುಗಿದು ನಿನ್ನೊಬ್ಬನನ್ನೇ ಸೇವಿಸುತ್ತಿರುವುದರಿಂದ ನೀನು ಯಾರಿಗೆ ಕೈ ಮುಗಿದೆ? ನಮಸ್ಕಾರ ಪೂಜಾ ಸ್ತೋತ್ರಾದಿಗಳನ್ನು ಮಾಡುವವರಿಗೆ ಇಷ್ಟಾರ್ಥಗಳನ್ನು ಕೊಡುವನಾವನು? ನಿನ್ನಿಂದ ನಮಸ್ಕಾರವನ್ನು ಮಾಡಿಸಿಕೊಳ್ಳುವುದಕ್ಕೆ ಯೋಗ್ಯನಾವನು? ನಿನಗಿಂತ ಶ್ರೇಷ್ಠನಾವನು? ಹೇಳು? ಎಂದು ಕೇಳಿದ ಆದಿನಾರಾಯಣನಿಗೆ (ರುದ್ರನು) ಎಲೈ

ನೇನ ಕಿಂಚಿದ್ಧ್ಯೇಯಂ ನ ನಮಸ್ಯೇಹ ಕಂಚನ || ನೋಪಾಸ್ಯೇ ಕಂಚನ ಹರೇ ನ ಜಪಿಷ್ಯೇ ಹಿ ಕಂಚನ || ಕಿಂತು ನಾಸ್ತಿಕಜಂತೂನಾಂ ಪ್ರವೃತ್ತ್ಯರ್ಥಮಿದಂ ತ್ವಯಾ || ದರ್ಶನೀಯಂ ಹರೇ ತೇ ಸ್ಯುರನ್ಯಥಾ ಪಾಪಕಾರಿಣಃ || ತಸ್ಮಾಲ್ಲೋಕೋಪಕಾರಾರ್ಥಮಿದಂ ಸರ್ವಂ ಕೃತಂ ಮಯಾ'' ಇತ್ಯಾದಿಪ್ರಸಿದ್ಧಂ.

ಇತಿ ರುದ್ರಸ್ಯ ಸರ್ವಜಗದುಪಕಾರಾರ್ಥಂ ಸ್ವಸ್ವರೂಪಧ್ಯಾನವಿಧಿರ್ನವಮೋಪದೇಶೇ ಸಪ್ತಮಸ್ಸಂವಾದಃ.



ಶ್ರೀಃ

## ರುದ್ರೇಣಾದಿನಾರಾಯಣಸ್ಯತಾರಕಬ್ರಹ್ಮೋಪದೇಶವಿಧಿಃ.

ರೇ—ಹೇ ಚೋಳ! ರುದ್ರೇಣಾದಿನಾರಾಯಣಸ್ಯ ತಾರಕಬ್ರಹ್ಮೋಪದೇಶವಿಧಿಃ ಶ್ರೂಯತಾಂ, ಬೃಹಜ್ಜಾಬಾಲೋಪನಿಷದಿ ಷಾಷ್ಠೇಬ್ರಾಹ್ಮಣೇ,—“ಶಿವವಕ್ಷಸಿ ಸ್ಥಿತಂ ಭಸ್ಮ ನಖೇನಾದಾಯ ಪ್ರಣವೇನಾಭಿಮಂತ್ರ್ಯ ಗಾಯತ್ರ್ಯಾ ಪಂಚಾಕ್ಷರೇಣಾಭಿಮಂತ್ರ್ಯ ಹರಿರ್ಮಸ್ತಕಗಾತ್ರೇಷು ಸಮರ್ಪಯೇತ್ ತಥಾ ಹೃದಿ ಧ್ಯಾಯಸ್ವೇತಿ

---

ವಿಷ್ಣುವೇ! ನನಗೆ ಧ್ಯಾನದಿಂದ ಪ್ರಯೋಜನವಿಲ್ಲವು. ನಾನು ಯಾವನನ್ನೂ ನಮಿಸುವುದಿಲ್ಲ. ಉಪಾಸನೆಮಾಡುವುದಿಲ್ಲ. ಯಾವ ಮಂತ್ರವನ್ನೂ ಜಪಿಸುವುದಿಲ್ಲ. ಎಲೈ ವಿಷ್ಣುವೇ! ನಾನು ಮಾಡಿದ ಈ ಧ್ಯಾನಪೂಜಾರೂಪವಾದ ತಪಸ್ಸನ್ನು ನೀನು ನೋಡಿ ನಾಸ್ತಿಕರಿಗೆ ನನ್ನ ಧ್ಯಾನಜಪಾದಿಗಳಲ್ಲಿ ಬುದ್ಧಿಯುಂಟಾಗುವಂತೆ ಮಾಡಿ ತೋರಿಸೆಂದು ನಿನಗೆ ತಿಳಿಸುವುದಕ್ಕಾಗಿ ನಾನು ಮಾಡಿ ನಿನಗೆ ತೋರಿಸಿದೆನು. ನೀನು ಅದನ್ನು ತೋರಿಸದಿದ್ದರೆ ಆ ನಾಸ್ತಿಕರು ಪಾಪಿಗಳಾಗುವರು,, ಎಂದು ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಅನೇಕವಚನಗಳು ಪ್ರಸಿದ್ಧವಾಗಿವೆ.

ಎಂಬಿಲ್ಲಿಗೆ ಸಕಲಲೋಕೋಪಕಾರಕ್ಕಾಗಿ ರುದ್ರನ ಸ್ವಸ್ವರೂಪಧ್ಯಾನವಿಧಿಯನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.



## ರುದ್ರನಿಂದ ಆದಿನಾರಾಯಣನಿಗೆ ತಾರಕಬ್ರಹ್ಮೋಪದೇಶವಿಧಿಯು.

ರೇ—ಎಲೈ ಚೋಳನೇ! ರುದ್ರನಿಂದ ಆದಿನಾರಾಯಣನಿಗೆ ತಾರಕಬ್ರಹ್ಮೋಪದೇಶವಾದುದನ್ನು ಕೇಳು; ಬೃಹಜ್ಜಾಬಾಲೋಪನಿಷತ್ತಿನಲ್ಲಿ-“ಶಿವನು ತನ್ನ ವಕ್ಷಸ್ಥಲದಲ್ಲಿ ಲಿಪ್ತವಾಗಿದ್ದ ಭಸ್ಮವನ್ನು ಉಗುರಿನಿಂದ ಪರಿಗ್ರಹಿಸಿ, ಪ್ರಣವದಿಂದಲೂ, ಗಾಯತ್ರಿಯಿಂದಲೂ, ಪಂಚಾಕ್ಷರದಿಂದಲೂ ಅಭಿಮಂತ್ರಿಸಿ, ವಿಷ್ಣುವಿನ ಮಸ್ತಕದಲ್ಲೂ, ಅವಯವಗಳಲ್ಲೂ ಪ್ರೋಕ್ಷಿಸಿ ಹೃದಯದಲ್ಲಿ ಧ್ಯಾನಮಾಡು ಎಂದು ವಿಷ್ಣುವಿಗೆ ನಿರೂಪಿಸಿದನು. ಬಳಿಕ ವಿಷ್ಣುವು ತನ್ನ ಹೃದ

ಹರಿಮುಕ್ತ್ವಾ ಶಿವಃ ಸ್ವಹೃದಿ ಧ್ಯಾತ್ವಾ ದೃಷ್ಟೋ ದೃಷ್ಟ ಇತಿ ಶಿವಮಾಹ| ತತೋ ಭಸ್ಮ ಭಕ್ಷಯೇತಿ ಹರಿಮಾಹ ಹರಸ್ತತಃ ಭಕ್ಷಯಿಷ್ಯೇ ಶಿವಂ ಭಸ್ಮ ಸ್ನಾತ್ವಾಽಹಂ ಭಸ್ಮನಾ ಪುರಾ || ದೃಷ್ಟ್ವೇಶ್ವರಂ ಭಕ್ತಿಗಮ್ಯಂ ಭಸ್ಮಾಭಕ್ಷಯದಚ್ಯುತಃ | ತತ್ರಾಶ್ಚರ್ಯಮತೀವಾಸೀತ್ಪ್ರತಿಬಿಂಬಸಮುದ್ಯುತಿಃ | ವಾಸುದೇವಶ್ಶುದ್ಧಮುಕ್ತಾಫಲವರ್ಣೋಽಭವತ್ಕ್ಷಣಾತ್| ತದಾಪ್ರಭೃತಿ ಶುಕ್ಲಾಭೋ ವಾಸುದೇವಃ ಪ್ರಸನ್ನವಾ| ನ ಶಕ್ಯಂ ಭಸ್ಮನೋ ಜ್ಞಾನಂ ಪ್ರಭಾವಂ ತೇ ಕುತೋ ವಿಭೋ | ನಮಸ್ತೇಽಸ್ತು ನಮಸ್ತೇಽಸ್ತು ತ್ವಾಮಹಂ ಶರಣಂ ಗತಃ | ತ್ವತ್ಪಾದಯುಗಳೇ ಶಂಭೋ ಭಕ್ತಿರಸ್ತು ಸದಾ ಮಮ ” ತಥಾ ಪಾದ್ಮೇ ಶಿವರಾಘವಸಂವಾದೇ,— ದಧೀಚಿಮುನಿವಾಕ್ಯಂ, “ ಸ್ವವಕ್ಷಸ್ಸ್ಥಿತಭಸ್ಮೈವ ನಖೇನಾದಾಯ ಶಂಕರಃ || ಪ್ರಣವೇನಾಭಿಮಂತ್ರ್ಯಾಥ ಗಾಯತ್ರ್ಯಾ ಬ್ರಹ್ಮಭಿಸ್ತಥಾ|| ಅಂಗುಳಿಭ್ಯಾಮಥೋ ಗೃಹ್ಯ ಶಿವಃ ಪಂಚಾಕ್ಷರೇಣ ವೈ || ಹರಿಮಸ್ತಕಗಾತ್ರೇಷು ಸರ್ವೇಷ್ವಪಿ ಸಮಾಕ್ಷಿಪತ್ || ಶಾಂತದೃಷ್ಟ್ಯೈ ನಿರೀಕ್ಷ್ಯೈಥ ದೇವೇಶ್ಯಾಹ ಹರಿಂ ಹರಃ || ಧ್ಯಾಯಸ್ವ ಕಿಂ ತೇ ಹೃದಯೇ ಸ ಚ ಧ್ಯಾನಪರೋಽಭವತ್ || ಅಪಶ್ಯದ್ಧೃದಯೇ ದೀಪಂ ದೀರ್ಘಾಕಾರಮತಿಪ್ರಭಂ || ಹರಿರಾಹ ಶಿವಂ ಸಾಕ್ಷಾದ್ದೀಪೋ ದೃಷ್ಟೋ ಮಯೇಶ್ವರಃ || ಶಿವಂ ಪ್ರಾಹ ನ ತೇ ಜ್ಞಾನಂ ಪರಿಪಕ್ವಮಥೋ ಹರೇ || ಭಸ್ಮ ಭಕ್ಷಯ ತೇ ಜ್ಞಾನಂ ಸಮಗ್ರಂ ಸಂಭವಿಷ್ಯತಿ || ಭಕ್ಷಯಿಷ್ಯೇ ಶಿವಂ ಭಸ್ಮ ಸ್ನಾತ್ವಾಽಹಂ ಭಸ್ಮನಾ ಪುರಾ || ದೃಷ್ಟ್ವೇಶ್ವರಂ ಭಕ್ತಿಗಮ್ಯಂ ಭಸ್ಮಾಭಕ್ಷಯದಚ್ಯುತಃ || ತತ್ರಾಶ್ಚರ್ಯಮತೀವಾಸೀತ್ಪ್ರತಿಬಿಂಬಸಮದ್ಯುತಿಃ || ವಾಸುದೇವಶ್ಶುದ್ಧಮುಕ್ತಾಫಲವರ್ಣೋಽಭವತ್ಕ್ಷಣಾತ್ || ತದಾಪ್ರಭೃತಿ ಶುಕ್ಲೋಽಸೌ ವಾಸುದೇವಃ ಪ್ರಸನ್ನವಾನ್ || ಪುನರ್ಧ್ಯಾನಪರೋ ಭೂತ್ವಾ ದೀಪವದ್ವೇದಪೂರುಷಂ || ಶುದ್ಧಸ್ಫಟಿಕಸಂಕಾಶಂ ತ್ರಿನೇತ್ರಂ ದ್ವಿಭುಜಂ ಶಿವಂ || ಬಿಭ್ರಂತಂ ದಕ್ಷಿಣೇ ಹಸ್ತೇ ವರಂ ವಾಮೇ ಕರೇಽಭಯಂ || ಪಂಚವರ್ಷೀಯವಪುಷಂ ಶರಚ್ಚಂದ್ರನಿಭಪ್ರಭಂ || ದೃಷ್ಟವಾನಥ ತಂ ವಿಷ್ಣುಃ ಕೃತಕೃತ್ಯೋಽಭವತ್ತದಾ||

---

ಯದಲ್ಲಿ ಚಿಂತಿಸಿ, ಜ್ಯೋತಿರ್ಲಿಂಗವನ್ನು ನೋಡಿದೆನೆಂದು ತಿಳಿಸಿದನು. ಬಳಿಕ ಭಸ್ಮವನ್ನು ಭಕ್ಷಿಸು ಎಂದು ವಿಷ್ಣುವಿಗೆ ಶಿವನು ಹೇಳಿದನು. ಅನಂತರದಲ್ಲಿ ವಿಷ್ಣುವು ಮೊದಲು ಈ ರೀತಿಯಾಗಿ ಭಸ್ಮದಿಂದ ಸ್ನಾನಮಾಡಿ ಭಸ್ಮವನ್ನು ಭಕ್ಷಿಸುವೆನೆಂದು ಭಕ್ತಿಯಿಂದ ತಿಳಿಯಲು ಯೋಗ್ಯನಾದ ಶಿವನನ್ನು ನೋಡಿ, ಭಸ್ಮವನ್ನು ಭಕ್ಷಿಸಿದನು. ಆ ಸಮಯದಲ್ಲಿ ಬಹು ಆಶ್ಚರ್ಯವುಂಟಾಯಿತು. ವಾಸುದೇವನೆನಿಸಿದ ವಿಷ್ಣುವು ಆಕ್ಷಣದಲ್ಲಿ ಸ್ವಚ್ಛವಾದ ಮುತ್ತಿನಂತೆ ಹೊಳೆಯುತ್ತ ಶಿವನ ಕಾಂತಿಯೊಡನೆ ಸಮವಾದ ಕಾಂತಿಯುಳ್ಳವನಾದನು. ಆಗಿನಿಂದ ವಿಷ್ಣುವು ಶುಕ್ಲವರ್ಣ

ಅಥಾಹ ಶಂಭುರ್ಭರ್ಗೋ ವಿಷ್ಣೋ ವದ ದೃಷ್ಟಂ ತು ಕಿಂ ತ್ವಯಾ ॥ ಹರಿರಾಹ ಮಯಾ ದೃಷ್ಟಃ ಪುರುಷಶ್ಶಾಂತವಿಗ್ರಹಃ ॥ ಇತ್ಯುದೀರ್ಯ ಮಹಾವಿಷ್ಣುಶ್ಶಿವಪಾದೌ ಪ್ರಣಮ್ಯ ಚ ॥ ನ ಶಕ್ತಿಂ ಭಸ್ಮನೋ ಜಾನೇ ಪ್ರಭಾವಂ ತೇ ಕುತೋ ವಿಭೋ ॥ ನಮಸ್ತೇಽಸ್ತು ನಮಸ್ತೇಽಸ್ತು ತ್ವಾಮೇವ ಶರಣಂ ಗತಃ'' (ಶಿವಃ) ವರಂ ವೃಣು ಮಹಾಭಾಗ ಮನಸಾ ಯತ್ತ್ವಮಿಚ್ಛಸಿ ॥ ಶಿವೇರಿತಮಥಾಕರ್ಣ್ಯ ಹರಿರ್ವವ್ರೇ ವರೋತ್ತಮಂ॥ (ವಿಷ್ಣುಃ) ತ್ವತ್ಪದಯುಗಳೇ ಶಂಭೋ ಭಕ್ತಿರಸ್ತು ಸದಾ ಮಮ ॥ (ದಧೀಚಿಃ) ಅಥ ದತ್ವಾ ವರಂ ಶಂಭುರಿದಮಾಹ ವಚೋ ಹರಿಂ ॥ ಭಸ್ಮಧಾರಣಸಂಪನ್ನೋ ಮಮ ಭಕ್ತೋ ಭವಿಷ್ಯತಿ'' ಸ್ಕಾಂದೇ ಸೂತಸಂಹಿತಾಯಾಂ,——''ಯಶ್ಶಿವಸ್ಸರ್ವಭೂತಾನಾಮೀಶ್ವರಸ್ಸ್ವತ ಏವ ತು ॥ ಈಶಾನಸ್ಸರ್ವವಿದ್ಯಾನಾಂ ಸ ಏವಾದಿಗುರುರ್ಬುಧಾಃ ॥ ತಸ್ಯ ಶಿಷ್ಯೋ ಮಹಾವಿಷ್ಣುಸ್ಸರ್ವಜ್ಞಾನಮಹೋದಧಿಃ'' ತಥಾ ತತ್ರೈವ ಮುಕ್ತಿಯೋಗಖಂಡೇ,——ಸೂತಃ, ''ನಿಶಮ್ಯ ವೇದಾರ್ಥಮಶೇಷಮಚ್ಯುತಃ ಪ್ರಣಮ್ಯ ಶಂಭುಂ ಶಶಿಶೇಖರಂ ಹರಂ ॥ ಪ್ರಗೃಹ್ಯ ಪಾದಾಂಬುಜಮಾಸ್ತಿಕೋ ಹರಿಸ್ಸ್ವಮೂರ್ಧ್ನಿ ವಿನ್ಯಸ್ಯ ಕರದ್ವಯೇನ ಸಃ ॥ ಅತಿಪ್ರಸಾದೇನಶಿವಸ್ಯ ಕೇಶವಸ್ಸಮಸ್ತಸಂಸಾರವಿವರ್ಜಿತೋಽಭವತ್'' ಇತಿ. ಆದಿತ್ಯಪುರಾಣೇ,-ವಿಷ್ಣುವಾಕ್ಯಂ, ''ನಿಶ್ಚಲಾ

---

ವುಳ್ಳವನಾಗಿ, ಎಲೈ ವ್ಯಾಪಕನಾದ ಶಿವನೇ ! ಭಸ್ಮದ ಮಹಿಮೆಯನ್ನು ಈವರೆಗೂ ತಿಳಿಯದಿರುವ ನಾನು ನಿನ್ನ ಮಹಿಮೆಯನ್ನೆಂತು ಬಲ್ಲೆನು ? ನಿನಗೆ ನಮಸ್ಕಾರವಾಗಲಿ! ನಿನಗೆ ನಮಸ್ಕಾರವಾಗಲಿ !! ನಾನು ನಿನ್ನನ್ನು ಮರೆಹೊಕ್ಕಿರುವೆನು. ಎಲೈ ಸುಖಾವಾಸಸ್ಥಾನನಾದ ಶಿವನೇ ! ನಿನ್ನ ಚರಣಯುಗ್ಮದಲ್ಲಿ ನನಗೆ ಯಾವಾಗಲೂ ಭಕ್ತಿಯಿರಲಿ,, ಎಂದು ಹೇಳಲ್ಪಟ್ಟಿದೆ. ಅದೇ ರೀತಿಯಾಗಿ ಪದ್ಮಪುರಾಣಾಂತರ್ಗತವಾದ ಶಿವರಾಘವಸಂವಾದದಲ್ಲಿ ದಧೀಚಿಮುನಿಯಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಸೂತಸಂಹಿತೆಯಲ್ಲಿ——''ಎಲೈ ವಿದ್ವಾಂಸರಾದ ಮುನಿಗಳಿರಾ ! ಯಾರ ಪ್ರೇರಣೆಯೂ ಇಲ್ಲದೆ, ತಾನಾಗಿಯೇ ಸಕಲಪ್ರಾಣಿಗಳಿಗಧಿಪತಿಯಾದ ಆ ಶಿವನೇ–ವೇದವೇದಾಂಗಾದಿ ಸಕಲ ವಿದ್ಯೆಗಳಿಗೆ ಸ್ವಾಮಿಯಾಗಿರುವುದರಿಂದಲೇ ಜಗತ್ತಿಗೆ ಆದಿಗುರುವಾಗಿರುತ್ತಾನೆ. ಮಹಾವಿಷ್ಣುವು ಆ ಶಿವನ ಶಿಷ್ಯನಾದ್ದರಿಂದಲೇ ಸರ್ವಜ್ಞನೆನಿಸಿರುತ್ತಾನೆ,, ಎಂದು ದಧೀಚಿಮುನಿಯಿಂದ ಹೇಳಲ್ಪಟ್ಟಿದೆ. ಅಲ್ಲಿರುವ ಮುಕ್ತಿಯೋಗಖಂಡದಲ್ಲಿ——''ವೇದಾಗಮಗಳಲ್ಲಿ ಪ್ರಾಮಾಣ್ಯಬುದ್ಧಿಯುಳ್ಳ ಅಚ್ಯುತನಾದ ವಿಷ್ಣುವು–ಶಿವನ ಮುಖದಿಂದ ವೇದಾರ್ಥವನ್ನು ಸಂಪೂರ್ಣವಾಗಿ ಕೇಳಿ ತಿಳಿದು, ಶಿವನನ್ನು ನಮಿಸಿ, ಅವನ ಪಾದಗಳನ್ನು ತನ್ನ ತಲೆಯ ಮೇಲಿರಿಸಿಕೊಂಡು, ಅವನ ಅನುಗ್ರಹವನ್ನು ವಿಶೇಷವಾಗಿ ಹೊಂದಿ, ಸಂಸಾರದುಃಖರಹಿತನಾದನು,, ಎಂದು ಸೂತಮುನಿಯಿಂದ ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ——''ಸಕಲ ದೇವತೆಗಳಿಂದ ಪೂಜಿತನಾಗಿರುವ ಎಲೈ ಶಿವನೇ ! ನನಗೆ ನಿನ್ನಲ್ಲಿ ಭಕ್ತಿಯು ದೇವತಾಂತರಸಂಸರ್ಗರಹಿತವಾಗಿ ದೃಢ

ಶ್ವಯಿ ಮೇ ಭಕ್ತಿರ್ಭವತ್ವವ್ಯಭಿಚಾರಿಣೀ || ವರೈಃ ಕಿಮನ್ಯೈರ್ಭಗವನ್ಮಕೋಽಪಿ ಸುರಪೂಜಿತ || ಏವಮಸ್ತ್ವಿತಿ ಸಂಭಾಷ್ಯ ಸಮಾಲಿಂಗ್ಯ ಚ ಶಾರ್ಙ್ಗಿಣಂ || ಪಾಲಯಾಲಂ ಮಹಾದೇಶಾದಿತ್ಯುಕ್ತ್ವಾಂತರ್ಹಿತೋಽಭವತ್ '' ಇತ್ಯಾದಿಪ್ರಸಿದ್ಧಂ

ಇತಿ ರುದ್ರೇಣಾದಿನಾರಾಯಣಸ್ಯ ತಾರಕಬ್ರಹ್ಮೋಪದೇಶವಿಧಿರ್ನವಮೋಪದೇಶೇಽಷ್ಟಮಸ್ಸಂವಾದಃ.

---

ಶ್ರೀಃ.

## ಉಪಮನ್ಯುಮುನಿನಾ ನಾರಾಯಣಸ್ಯ ಪಾಶುಪತವ್ರತೋಪದೇಶಪೂರ್ವಕ ಶಿವಲಿಂಗದೀಕ್ಷಾವಿಧಿಃ.

ರೇ—ಭೋ ಚೋಳ ! ಉಪಮನ್ಯುಮಹಾಮುನಿನಾ ಆದಿನಾರಾಯಣಸ್ಯ ಪಾಶುಪತವ್ರತೋಪದೇಶವಿಧಿಶ್ಶ್ರೂಯತಾಂ, ಅಥರ್ವಶಿರಸಿ,-''ಓಂ ಅಗ್ನಿರಿತಿ ಭಸ್ಮ | ವಾಯುರಿತಿ ಭಸ್ಮ | ಜಲಮಿತಿ ಭಸ್ಮ | ಸ್ಥಲಮಿತಿ ಭಸ್ಮ | ವ್ಯೋಮೇತಿ ಭಸ್ಮ | ಸರ್ವಂ ಹವಾ ಇದಂ ಭಸ್ಮ | ಮನ ಇತ್ಯೇತಾನಿ ಚಕ್ಷೂಂಷಿ ಭಸ್ಮಾನಿ | ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್ | ತಸ್ಮಾದ್ವ್ರತಮೇತತ್ಪಾಶುಪತಂ|

---

ವಾಗಿರುತ್ತದೆ. ಹೀಗಿರುವಾಗ್ಯೆ ಬೇರೇ ವಿಧವಾದ ವರಗಳಿಂದ ನನಗೆ ಪ್ರಯೋಜನವಿಲ್ಲವೆಂದು ಹೇಳಿದ ವಿಷ್ಣುವನ್ನು ಶಿವನು – ನಿನ್ನಿಷ್ಟದಂತೆ ಆಗಲಿ ಎಂದು ಹೇಳಿ ಅಬ್ಬಿಕೊಂಡು ನನ್ನ ಅಪ್ಪಣೆಗನುಸಾರವಾಗಿ ಲೋಕವನ್ನು ಪಾಲಿಸೆಂದು ಆಜ್ಞಾಪಿಸಿ ಮರೆಯಾದನು,, ಎಂದು ವಿಷ್ಣುವಿನಿಂದುಕ್ತವಾಗಿದೆ. ಇತ್ಯಾದಿವಚನಗಳಿಂದ ಆದಿನಾರಾಯಣನು ಶಿವನಿಗೆ ಶಿಷ್ಯನಾಗಿ ತಾರಕಬ್ರಹ್ಮೋಪದೇಶವನ್ನು ಹೊಂದಿದ ವಿಷಯವು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ರುದ್ರನಿಂದ ಆದಿನಾರಾಯಣನಿಗೆ ತಾರಕಬ್ರಹ್ಮೋಪದೇಶವಿಧಾನವನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.

---

## ಉಪಮನ್ಯುಮುನಿಯಿಂದ ನಾರಾಯಣನಿಗೆ ಪಾಶುಪತವ್ರತೋಪದೇಶಪೂರ್ವಕ ಶಿವಲಿಂಗದೀಕ್ಷಾವಿಧಿಯು.

ರೇ — ಎಲೈ ಚೋಳನೇ ! ಉಪಮನ್ಯುಮಹಾಮುನಿಯಿಂದ ಆದಿನಾರಾಯಣನಿಗೆ ಪಾಶುಪತವ್ರತೋಪದೇಶವಾದುದನ್ನು ಕೇಳು; ಅಥರ್ವಶಿರಸ್ಸಿನಲ್ಲಿ – ''ಓಂ ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ ಇತ್ಯಾದಿ ಮಂತ್ರಗಳಿಂದ ಭಸ್ಮವನ್ನು ಪರಿಗ್ರಹಿಸಿ, ಉದ್ಧೂಳನಂಗೈದು ಧರಿಸಿಕೊಳ್ಳುವುದೇ ಪಾಶುಪತವ್ರತವು. ಇದನ್ನು ಪಶುಗಳು ಪಾಶಮುಕ್ತರಾಗುವುದಕ್ಕಾಗಿ ಆಚರಿಸ

ಪಶುಪಾಶವಿಮೋಕ್ಷಾಯ" ಇತಿ. ಲೈಂಗೇ,—"ಬಹುಮಾನೇನ ವೈ ಕೃಷ್ಣಸ್ತ್ರಿಃ ಕೃತ್ವಾ ತು ಪ್ರದಕ್ಷಿಣಂ || ನಮಶ್ಚಕಾರ ತಂ ದೃಷ್ಟ್ವಾ ಧೌಮ್ಯಾಗ್ರಜಮುನಿಂ ದ್ವಿಜಾಃ || ಭಸ್ಮನೋದ್ಧೂಳ್ಯ ತಂ ಕೃಷ್ಣಮುಪಮನ್ಯುರ್ಮಹಾದ್ಯುತಿಃ || ಓಮಗ್ನಿರಿತಿ ವಿಪ್ರೇಂದ್ರಾ ವಾಯುರಿತ್ಯಾದಿಭಿಃ ಕ್ರಮಾತ್ || ದಿವ್ಯಂ ಪಾಶುಪತಂ ಜ್ಞಾನಂ ಪ್ರದದೌ ಪ್ರೀತಮಾನಸಃ || ತದಾ ಪ್ರಭೃತಿ ತಂ ಕೃಷ್ಣಂ ಮುನಯಸ್ಸಂಶ್ರಿತವ್ರತಾಃ || ದಿವ್ಯಾಃ ಪಾಶುಪತಾಸ್ಸರ್ವೇ ತಸ್ಥುಸ್ಸಂವೃತ್ಯ ಸರ್ವದಾ" ಸ್ಕಾಂದೇ ಶಿವರಹಸ್ಯೇ,—"ಉಪಮನ್ಯುಂ ಮುನಿಶ್ರೇಷ್ಠಂ ದೇವರ್ಷಿಗಣಸೇವಿತಂ || ತತೋ ಭಕ್ತ್ಯಾ ಯಥಾನ್ಯಾಯಮುಪಗಮ್ಯಾಭಿವಂದ್ಯ ಚ || ವಾಸುದೇವೋ ಜಗದ್ವಂದ್ಯೋ ಭೂಮಾವುಪವಿವೇಶ ಹ || ಅಥಾಬ್ರವೀತ್ಸುಸರ್ವಿಷ್ಣುರುಪಮನ್ಯುಂ ತಪೋನಿಧಿಂ || ಕೃತಾಂಜಲಿಪುಟೋ ಭೂತ್ವಾ ದೇವೇಂದ್ರ ಇವ ವಾಕ್ಪತಿಂ || ಯಥಾ ಪಶ್ಯಾಮ್ಯಹಂ ದೇವಮುಮಾಕಾಂತಂ ಮಹೇಶ್ವರಂ || ಏವಮುಕ್ತ್ವಾ ತತಸ್ತಸ್ಮಾತ್ಪ್ರಾಪ್ಯ ದೀಕ್ಷಾಂ ಸ ಕೇಶವಃ ||ಶಿವಮಾರಾಧಯಾಮಾಸ ವಿಧಿವನ್ನಿಯಮಾನ್ವಿತಃ" ಶಿವಧರ್ಮಪುರಾಣೇ,—"ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ|| ವಿಷ್ಣುತ್ವಂ ಪ್ರಾಪ್ತವಾಂಸ್ತೇನ ಸಾದ್ಭುತಂ ಚ ಸನಾತನಂ" ಪರಾಶರಪುರಾಣೇ,—"ರೌದ್ರಂ ಲಿಂಗಂ ಮ

---

ಬೇಕು,, ಎಂದು ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ—"ಎಲೈ ದ್ವಿಜರೇ! ಮಹಾತೇಜಸ್ವಿಯಾದ ಉಪಮನ್ಯುವು—ತನಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದ ವಿಷ್ಣುವಿಗೆ 'ಅಗ್ನಿರಿತಿ ಭಸ್ಮ,' ಇತ್ಯಾದಿ ಮಂತ್ರಗಳಿಂದ ಭಸ್ಮವನ್ನಭಿಮಂತ್ರಿಸಿ ಸ್ನಾನೋದ್ಧೂಳನಪೂರ್ವಕವಾಗಿ ತ್ರಿಪುಂಡ್ರಧಾರಣಮಾಡಿ ಪಾಶುಪತವ್ರತವನ್ನು ಪದೇಶಿಸಿದನು. ಆ ಪಾಶುಪತವ್ರತನಿಷ್ಠರಾದ ಮುನಿಗಳು ಸಮಾನವ್ರತವುಳ್ಳವನಾದ ಮಹಾವಿಷ್ಣುವಿನ ಹತ್ತಿರದಲ್ಲಿ ಆಕಾಲಮೊದಲ್ಗೊಂಡು ಇರುವವರಾದರು,, ಎಂದಭಿಹಿತವಾಗಿದೆ. ಸ್ಕಾಂದದಲ್ಲಿರುವ ಶಿವರಹಸ್ಯದಲ್ಲಿ—"ಸಕಲಲೋಕವಂದ್ಯನಾದ ಮಹಾವಿಷ್ಣುವು ದೇವರ್ಷಿ ಸಮೂಹದಿಂದ ಸೇವಿಸಲ್ಪಡುತ್ತಿದ್ದ ಮುನಿಶ್ರೇಷ್ಠನಾದ ಉಪಮನ್ಯುವನ್ನು ಭಕ್ತಿಯಿಂದ ಸಾಷ್ಟಾಂಗಪ್ರಣಾಮವನ್ನಾಚರಿಸಿ, ಕೈಗಳನ್ನು ಜೋಡಿಸಿ ನಿಂತು, ನಾನು ನಿನ್ನನ್ನು ಪರಮೇಶ್ವರನನ್ನಾಗಿ ಭಾವಿಸುತ್ತೇನೆ ಎಂದು ಹೊಗಳಿ, ಆ ಮುನಿಯದೆಸೆಯಿಂದ ದೀಕ್ಷಾಪೂರ್ವಕವಾಗಿ ಲಿಂಗಧಾರಣವನ್ನು ಮಾಡಿಸಿಕೊಂಡು ವಿಧ್ಯುಕ್ತಕ್ರಮಾನುಸಾರವಾಗಿ ಶಿವಲಿಂಗವನ್ನಾರಾಧಿಸಿದನು,, ಎಂದೂ, ಶಿವಧರ್ಮಪುರಾಣದಲ್ಲಿ—"ವಿಷ್ಣುವು ಇಂದ್ರನೀಲರತ್ನಮಯವಾದ ಶಿವಲಿಂಗವನ್ನು ಯಾವಾಗಲೂ ಪೂಜಿಸುತ್ತಾನೆ. ಆ ಲಿಂಗಪೂಜಾಬಲದಿಂದಲೇ ಆಶ್ಚರ್ಯಕರವೂ, ಸನಾತನವೂ ಆದ ವಿಷ್ಣುತ್ವವನ್ನು ಪಡೆದನು,, ಎಂದೂ. ಪಾರಾಶರಪುರಾಣದಲ್ಲಿ—"ಮಹಾವಿಷ್ಣುವು ಪರಿಶುದ್ಧವೂ, ಇಂದ್ರನೀಲಶಿಲಾಮಯವೂ, ರಮಣೀಯವೂ ಆದ ಶಿವಲಿಂಗವನ್ನು ಪೂ

ಹಾವಿಷ್ಣುರ್ಭಕ್ತ್ಯಾ ಶುದ್ಧಂ ಶಿಲಾಮಯಂ|| ಚಾರು ಚಿತ್ರಂ ಸಮಭ್ಯರ್ಚ್ಯ ಪ್ರಾಪ್ತ ವಾನ್ಪರಮಂ ಪದಂ'' ಇತಿ. ಮಹಾಭಾರತೇ,—'' ಅನಾದ್ಯಂತಂ ಪರಂ ರುದ್ರಂ ನ ದೇವಾ ಋಷಯೋ ವಿದುಃ || ಏಕಸ್ತಂ ವೇದ ಭಗವಾನಾದಿನಾರಾಯಣೋ ಹರಿಃ || ನಾರಾಯಣಾದೃಷಿಗಣಾಸ್ತೇಭ್ಯೋ ಮರ್ತ್ಯಾ ಮಹೋರಗಾಃ || ದೇವಾ ದೇವ ರ್ಷಯಶ್ಚೈವ ತಂ ವಿದುರ್ದುಃಖಭೇಷಜಂ || ಹರಿರ್ಮಯೋ ಗುಹಶ್ಚೈವ ರಾಮೋ ಬಾಣಾಸುರಸ್ತಥಾ || ರಾವಣೋ ಭೀಮಸೇನಶ್ಚ ಸಪ್ತ ಮಾಹೇಶ್ವರಾಸ್ಸ್ಮೃತಾಃ'' ಇತ್ಯಾದಿಪ್ರಸಿದ್ಧಂ.

ಇತ್ಯುಪಮನ್ಯುಮಹಾಮುನಿನಾ ನಾರಾಯಣಸ್ಯ ಪಾಶುಪತವ್ರತೋಪದೇಶಪೂರ್ವಕ ಶಿವಲಿಂಗದೀಕ್ಷಾವಿಧಿರ್ನವಮೋಪದೇಶೇ ನವಮಸ್ಸಂವಾದಃ.

ಇತಿ ಶ್ರೀ ಸೋಸಲೆರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕ ಸಂವಾದರೂಪಶಿವಾಧಿಕ್ಯಶಿಖಾಮಣೌ ವಿಷ್ಣೋರ್ಭೃಗುಮು ನಿಶಾಪಾದಿನವಮೋಪದೇಶೇ ನವಮೋಪದೇಶಃ.



ಜಿಸಿ ಉತ್ಕೃಷ್ಟಸ್ಥಾನವನ್ನು ಹೊಂದಿದನು,, ಎಂದೂ ಹೇಳಲ್ಪಟ್ಟಿದೆ. ಮಹಾಭಾರತದಲ್ಲಿ— ''ಜನನಮರಣಗಳಿಲ್ಲದಿರುವ ಪರಮಾತ್ಮನಾದ ಜಗದಾದಿರುದ್ರನ ಸ್ವರೂಪವನ್ನು ದೇವತೆಗಳೂ, ಋಷಿಗಳೂ ತಿಳಿದವರಾಗಿಲ್ಲವು, ಪೂಜ್ಯನೂ ಹರಿಶಬ್ದವಾಚ್ಯನೂ ಆದ ಆದಿನಾರಾಯಣನೊಬ್ಬನೇ ತಿಳಿದಿರುತ್ತಾನೆ. ಆ ನಾರಾಯಣನದೆಸೆಯಿಂದ ಋಷಿಸಮೂಹಗಳು ತಿಳಿದುಕೊಂಡುವು. ಆ ಋ ಷಿಬೃಂದದಿಂದ ಮಾನವರು ತಿಳಿದರು. ಅವರಿಂ ಮಹೋರಗರು ತಿಳಿದರು. ಅವರಿಂದ ದೇವತೆಗಳು ತಿಳಿದರು. ಅವರಿಂದ ದೇವರ್ಷಿಗಳು ತಿಳಿದರು. ವಿಷ್ಣು, ಮಯ, ಗುಹ, ಶ್ರೀರಾಮ, ಬಾಣ, ರಾವಣ, ಭೀಮಸೇನ ಈ ಏಳುಮಂದಿಗಳು ಶಿವಭಕ್ತರೆಂದು ನೆನೆಯಲ್ಪಟ್ಟಿರುವರು,, ಎಂದು ಹೇ ಳಲ್ಪಟ್ಟಿದೆ. ಇತ್ಯಾದಿವಚನಗಳಿರುವುದರಿಂದ ನಾರಾಯಣನು ಉಪಮನ್ಯುಮುನಿಯಿಂದ ಪಾಶು ಪತವ್ರತೋಪದೇಶಪೂರ್ವಕವಾಗಿ ದೀಕ್ಷೆಯನ್ನು ಹೊಂದಿದನೆಂದು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಉಪಮನ್ಯುಮುನಿಯಿಂದ ನಾರಾಯಣನಿಗೆ ಪಾಶುಪತವ್ರತೋಪದೇಶಪೂರ್ವಕವಾಗಿ ಶಿವಲಿಂಗದೀಕ್ಷಾವಿಧಾನವನ್ನು ಹೇಳುವ ಒಂಭತ್ತನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಒಂಭತ್ತನೆಯ ಉಪದೇಶವು ಸಂಪೂರ್ಣವಾಯಿತು.



ಶ್ರೀಮೃಡಾಯನಮಃ.

## ದಶಮೋಪದೇಶಃಪ್ರಾರಭ್ಯತೇ.



### ಕೃಷ್ಣಾರ್ಜುನಸಂವಾದಸಂಭವಶಿವಾಧಿಕ್ಯನಿರ್ಣಯವಿಧಿಃ.

ರೇ— ಹೇ ಚೋಳ ! ಪುರಾ ಪುರುಷೋತ್ತಮೋ ನೈಜಪೂಜಾಮರ್ಜುನಕೃತಾಂ ರುದ್ರಾಯ ನಿವೇದ್ಯ ತಸ್ಮೈ ಪಾರ್ಥಾಯ ರುದ್ರಾಧಿಕ್ಯಂ ಬೋಧಯಾಮಾಸ. ತದುಕ್ತಂ ಮಹಾಭಾರತೇ,-“ ತಚ್ಚೋಪಹಾರಂ ಸಕಲಂ ನೈಶಂ ನೈತ್ಯಕಮಾತ್ಮನಃ|| ದದರ್ಶ ತ್ರ್ಯಂಬಕಾಭ್ಯಾಶೇ ವಾಸುದೇವನಿವೇದಿತಂ || ನ ಹಿ ಮಾಂ ಶಕ್ಷ್ಯಸಿ ದ್ರಷ್ಟುಮನೇನೈವ ಸ್ವಚಕ್ಷುಷಾ || ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ” ಮಹಾಭಾರತೇ ಭೀಷ್ಮಪರ್ವಣಿ ಭಗವದ್ಗೀತಾಯಾಂ,—ಅರ್ಜುನಃ, “ ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ || (ಕೃಷ್ಣಃ) ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ || ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ || ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ||

---

## ಹತ್ತನೆಯ ಉಪದೇಶ ಪ್ರಾರಂಭವು.

### ಕೃಷ್ಣಾರ್ಜುನಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯವಿಧಿಯು.

ರೇ—ಎಲೈ ಚೋಳನೇ ! ವಿಷ್ಣು ಅರ್ಜುನನಿಂದ ಮಾಡಲ್ಪಟ್ಟ ತನ್ನ ಪೂಜೆಯನ್ನು ಶಿವನಿಗೋಸ್ಕರ ಅರ್ಪಿಸುತ್ತಿದ್ದನಾದ್ದರಿಂದ ಶಿವನ ಸಾನ್ನಿಧ್ಯದಲ್ಲಿ ಇದ್ದ ಆ ಪೂಜೋಪಹಾರವನ್ನು ಅರ್ಜುನನು ನೋಡಿದನು. ಆಗ ಆ ವಿಷ್ಣುವು- ಎಲೈ ಅರ್ಜುನನೇ ! ಶಿವನೊಡನೆ ಸಂಬಂಧವನ್ನು ಹೊಂದಿರುವ ನನ್ನನ್ನು ನೀನು ಈ ನಿನಗಿರುವ ಕಣ್ಣುಗಳಿಂದ ನೋಡಲಾರೆ, ಆದ್ದರಿಂದ ನಾನು ಕೊಡುವ ಜ್ಞಾನನೇತ್ರದಿಂದ ನನಗಿರುವ ಶಿವಸಂಬಂಧವನ್ನು ನೋಡು,, ಎಂದು ಮಹಾಭಾರತದಲ್ಲಿ ಹೇಳಲ್ಪಟ್ಟಿದೆ. ಭಗವದ್ಗೀತೆಯಲ್ಲಿ—ಅರ್ಜುನನು, “ಎಲೈ ಪುರುಷಶ್ರೇಷ್ಠನೇ ! ಬ್ರಹ್ಮವೆಂದರೇನು? ಅಧ್ಯಾತ್ಮವೆಂದರೇನು? ಕರ್ಮವೆಂದರೇನು?

ವಿಷ್ಣುವು—“ಯಾವಾಗಲೂ ನಾಶರಹಿತವಾಗಿರುವುದೇ ಪರಬ್ರಹ್ಮವು. ಸ್ವಭಾವವೇ ಅಧ್ಯಾತ್ಮವು. ಭೂತಭಾವೋತ್ಪತ್ತಿಯನ್ನುಂಟುಮಾಡುವ ಸೃಷ್ಟಿಯೇ ಕರ್ಮವು. ಎಲೈ ಪಾರ್ಥನೇ! ಬೇರೊಂದನ್ನು ಚಿಂತಿಸದೆ ಶಿವನೊಡನೆ ಕೂಡುವುದನ್ನೇ ಅಭ್ಯಾಸಮಾಡುವ ಮನಸ್ಸಿನಿಂದ ಶ್ರೇಷ್ಠನಾದ ಪರಮಪುರುಷನಾದ ಶಿವನನ್ನು ಚಿಂತಿಸುತ್ತಿರುವವನು ಆ ಪರಮಪುರುಷನನ್ನೇ ಹೊಂದುವ

ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ || ಭ್ರುವೋರ್ಮಧ್ಯೇ ಪ್ರಾಣ ಮಾವೇಶ್ಯ ಸಮ್ಯಕ್ಸತಂ ಪರಂ ಪುರುಷಮುಪೈತಿ ದಿವ್ಯಂ || ಯದಕ್ಷರಂ ಪ್ರಾಣವಿ ದೋ ವದಂತಿ ವಿಶಂತಿ ಯದ್ಯತಯೋ ವೀತರಾಗಾಃ || ಯದಿಚ್ಛಂತೋ ಬ್ರಹ್ಮಚ ರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ'' ತತ್ರೈವ, ''ತತಃ ಪದಂ ತತ್ಪ ರಿಮಾರ್ಗಿತವ್ಯಂ ಯಸ್ಮಿನ್ಗತಾ ನ ನಿವರ್ತಂತಿ ಭೂಯಃ || ತಮೇವ ಚಾದ್ಯಂ ಪುರು ಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ'' ತತ್ರೈವ, ''ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ || ಭ್ರಾಮಯಂತ್ಸರ್ವಭೂತಾನಿ ಯಂತ್ರಾ ರೂಢಾನಿ ಮಾಯಯಾ||ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ||ತತ್ಪ್ರಸಾದಾ ತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ'' ಇತ್ಯಾದಿ. ಕೂರ್ಮಪುರಾಣೇ,- ಶ್ರೀಕೃಷ್ಣಃ, ''ದೃಷ್ಟವಾನಸಿ ತಂ ಪಾರ್ಥ ವಿಶ್ವಾಕ್ಷಂ ವಿಶ್ವತೋ ಮುಖಂ||ಪ್ರತ್ಯಕ್ಷ ಮೇವ ಸರ್ವೇಶಂ ರುದ್ರಂ ಸರ್ವಜಗದ್ಗುರುಂ || ಜ್ಞಾನಂ ತದೈಶ್ವರಂ ದಿವ್ಯಂ ಯ

---

ನು. ಹುಬ್ಬುಗಳ ಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ ಪ್ರಾಣವಾಯುವನ್ನು ಚೆನ್ನಾಗಿ ನಿರೋಧಿ ಸುವವನು ಆ ಪರಮಾತ್ಮನನ್ನೇ ಹೊಂದುವನು. ವೇದಾರ್ಥವನ್ನು ಬಲ್ಲವರೂ ವೈರಾಗ್ಯಶಾಲಿಗ ಳೂ ಆದ ಯತಿಗಳು ಯಾವುದನ್ನು ನಾಶರಹಿತವನ್ನಾಗಿ ಹೇಳುತ್ತಾರೋ, ಪ್ರವೇಶಿಸುತ್ತಾರೋ, ಯಾರು ಯಾವುದನ್ನು ಹೊಂದಲಿಚ್ಛೆಯಿಂದ ಬ್ರಹ್ಮಚಾರಿಗಳಾಗಿರುತ್ತಾರೋ, ಆ ವಸ್ತುವಿನ ಸ್ವ ರೂಪವನ್ನು ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ,, ಎಂದು ಹೇಳಲ್ಪಟ್ಟಿದೆ. ಆ ಗೀತೆಯಲ್ಲೇ ಪ್ರ ದೇಶಾಂತರದಲ್ಲಿ—''ಯಾವ ವಸ್ತುವಿನಲ್ಲಿ ಲೀನರಾದವರು ಈವರೆಗೂ ಹಿಂದಿರುಗದೆ ಅಲ್ಲೇ ಇರುತ್ತಾರೋ ಆ ಕಾರಣದಿಂದ ಆ ವಸ್ತುವು ಹುಡುಕುವುದಕ್ಕೆ ಯೋಗ್ಯವಾದದ್ದು. ಯಾವನಿಂದ ಆದಿಪ್ರಕೃತಿಯು ಉಂಟಾಯಿತೋ ಆ ಆದಿಪುರುಷನನ್ನೇ ನಾನು ಮರೆಹೊಂದುವೆನು,, ಮತ್ತ ಮಾಗೀತೆಯಲ್ಲೇ ಸ್ಥಳಾಂತರದಲ್ಲಿ* ''ಎಲೈ ಅರ್ಜುನನೇ ! ಈಶ್ವರನು—ತನ್ನಲ್ಲಿರುವ ಮಾ ಯಾಶಕ್ತಿಬಲದಿಂದ ಸರ್ವಪ್ರಾಣಿಗಳನ್ನು ಸಂಸಾರಚಕ್ರವೆಂಬ ಯಂತ್ರವನ್ನೇರಿಸಿ ತಿರುಗಿಸುತ್ತಾ ಸರ್ವಪ್ರಾಣಿಗಳ ಹೃದಯದಲ್ಲಿ ವಾಸಿಸುತ್ತಿರುವನು. ಆದ್ದರಿಂದ ಸರ್ವಪ್ರಕಾರದಿಂದಲೂ ಆವನ ನ್ನೇ ಮರೆಹೊಂದು. ಏತಕ್ಕೆಂದರೆ; ಆತನ ಅನುಗ್ರಹದಿಂದ ಉತ್ಕೃಷ್ಟವಾದ ಶಾಂತಿಯನ್ನು ಹೊಂದಿ, ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯುವೆ,, ಎಂದಭಿಹಿತವಾಗಿದೆ. ಕೂರ್ಮ ಪುರಾಣದಲ್ಲಿ— ''ಎಲೈ ಅರ್ಜುನನೇ ! ವಿಶ್ವಾಕ್ಷನೂ, ವಿಶ್ವತೋಮುಖನೂ, ಸರ್ವೇಶನೂ, ಸರ್ವ ಜಗದ್ಗುರುವೂ ಆದ ರುದ್ರನನ್ನು ಪ್ರತ್ಯಕ್ಷವಾಗಿಯೇ ನೋಡಿದೆ, ನೀನು ಆ ಶಿವಸಂಬಂಧವಾದ ದಿವ್ಯಜ್ಞಾನವನ್ನು ಸರಿಯಾಗಿ ತಿಳಿದಿರುವೆ. ಆದ್ದರಿಂದ ರಕ್ಷಕನಾದ ಆ ಶಿವನನ್ನು ಮರೆಹೊಂದಿ

---

* ಇದು ಶಿವಪರವೆಂಬುದಕ್ಕೆ ಭಗವದ್ಗೀತೆಯ ''ತತ್ತ್ವೈಕದರ್ಶನಭಾಷ್ಯ,,ವನ್ನು ನೋಡಿ ತಿಳಿಯತಕ್ಕದ್ದು.

ಥಾವದ್ವಿದಿತಂ ತ್ವಯಾ || ಯಜಸ್ವ ಪರಯಾ ಭಕ್ತ್ಯಾ ಶರಣ್ಯಂ ಶರಣಂ ಶಿವಂ || ಪಾಂಡವೋಪಿ ಸ ತದ್ವಾಕ್ಯಾತ್ಸಂಪ್ರಾಪ್ಯ ಶರಣಂ ಶಿವಂ || ಸಂತ್ಯಜ್ಯ ಸರ್ವಕರ್ಮಾಣಿ ತದ್ಭಕ್ತಿಪರವೋಭವತ್ '' ಇತ್ಯಾದಿಪ್ರಸಿದ್ಧಂ.

ಇತಿ ಕೃಷ್ಣಾರ್ಜುನಸಂವಾದಸಂಭವಶಿವಾಧಿಕ್ಯನಿರ್ಣಯವಿಧಿರ್ದಶಮೋಪದೇಶೇ ಪ್ರಥಮಸ್ಸಂವಾದಃ.

---

ಶ್ರೀಃ.

## ಸತ್ಯಸಂಧಾಚ್ಯುತಸಂವಾದಸಂಭವಶಿವಾಧಿಕ್ಯನಿರ್ಣಯಃ.

ರೇ—ಭೋ ಚೋಳ! ಶಿವಾಧಿಕ್ಯಂ ಸತ್ಯಸಂಧಾಚ್ಯುತಸಂವಾದೇಪಿ ಶ್ರೂಯತಾಂ ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವಖಂಡೇ,—'' ಪುರಾ ಕಶ್ಚಿದ್ದ್ವಿಜಶ್ರೇಷ್ಠಸ್ಸರ್ವಲಕ್ಷಣಸಂಯುತಃ || ಸತ್ಯಸಂಧಾಭಿಧೋ ನಿತ್ಯಂ ವಿಷ್ಣುಭಕ್ತೋ ವಿಶೇಷತಃ || ಅಭೂತ್ತೇನ ಕೃತಂ ಸರ್ವಂ ಶ್ರುತಿಸ್ಮೃತ್ಯುದಿತಂ ಸದಾ || ಪ್ರತಿಷ್ಠಾ ಚ ಕೃತಾ ವಿಷ್ಣೋರ್ಬಹುಶಃ ಪಂಡಿತೋತ್ತಮೈಃ || ಆರಾಧಿತಶ್ಚ ಭಗವಾನ್ವಿಷ್ಣುರ್ವಿಶ್ವಜಗನ್ಮಯಃ || ಸರ್ವಸ್ವಂ ವಿಷ್ಣವೇ ದತ್ತಂ ಸತ್ಯಸಂಧೇನ ಸಾದರಂ || ಪ್ರತ್ಯಕ್ಷಮ

---

ಉತ್ಕೃಷ್ಟವಾದ ಭಕ್ತಿಯಿಂದ ಪೂಜಿಸು. ಎಂದು ಹೇಳಿದ ಶ್ರೀಕೃಷ್ಣನ ಮಾತನ್ನು ಕೇಳಿದ ಅರ್ಜುನನು ಶಿವನನ್ನು ಮರೆಪೊಕ್ಕು ಸ್ವರ್ಗಾದ್ಯನಿತ್ಯಭೋಗಸಾಧಕಗಳಾದ ಕರ್ಮಗಳೆಲ್ಲವನ್ನೂ ಬಿಟ್ಟು ಆ ಶಿವಭಕ್ತಿಯಲ್ಲೇ ಆಸಕ್ತನಾದನು,, ಎಂದು ಹೇಳಲ್ಪಟ್ಟಿದೆ.

ಎಂಬಿಲ್ಲಿಗೆ ಕೃಷ್ಣಾರ್ಜುನಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯವಿಧಿಯನ್ನು ಹೇಳುವ ಹತನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.

---

### ಸತ್ಯಸಂಧಾಚ್ಯುತಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯವು.

ರೇ - ಎಲೈ ಚೋಳನೇ ! ಸತ್ಯಸಂಧನಿಗೂ ವಿಷ್ಣುವಿಗೂ ನಡೆದ ವಾಗ್ವಾದದಲ್ಲಿರುವ ಶಿವಾಧಿಕ್ಯವಿಚಾರವನ್ನು ಕೇಳು; ಯಜ್ಞವೈಭವಖಂಡದಲ್ಲಿ—''ಎಲೈ ಮುನಿಗಳಿರಾ ! ಬ್ರಾಹ್ಮಣನಿಗಿರಬೇಕಾದ ಸಕಲ ಲಕ್ಷಣಗಳಿಂದ ಕೂಡಿದ ಸತ್ಯಸಂಧನೆಂಬ ಬ್ರಾಹ್ಮಣನು ಯಾವಾಗಲೂ ವಿಶೇಷವಾಗಿ ವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿ ನಿತ್ಯದಲ್ಲೂ ಶ್ರೌತಸ್ಮಾರ್ತಕರ್ಮಗಳನ್ನಾಚರಿಸುತ್ತಾ ಪಂಡಿತೋತ್ತಮರಿಂದ ವಿಷ್ಣುಮೂರ್ತಿಪ್ರತಿಷ್ಠೆಯನ್ನು ಮಾಡಿಸಿ, ಆ ವಿಷ್ಣುಮೂರ್ತಿಪೂಜೆಯಲ್ಲಾಸಕ್ತನಾಗಿ, ತನ್ನ ಸರ್ವಸ್ವವನ್ನೂ ವಿಷ್ಣುಸೇವೆಗಾಗಿಯೇ ಉಪಯೋಗಿಸಿದನು. ವಿಷ್ಣು ಆತನಿಗೆ ಪ್ರತ್ಯಕ್ಷನಾಗಿ, ನನಗೆ ಮಹಾಭಕ್ತನೂ, ಸತ್ಯವನ್ನೇ ನುಡಿಯುವುದರಲ್ಲಾಸಕ್ತನೂ ಆಗಿ

ಭವತ್ತಸ್ಯ ಪ್ರಸನ್ನಃ ಪಂಕಜೇಕ್ಷಣಃ || ಪ್ರಾಹ ಗಂಭೀರಯಾ ವಾಚಾ ಸತ್ಯಸಂಧಂ ಪ್ರತಿ ದ್ವಿಜಾಃ || ಸತ್ಯಸಂಧ ಮಹಾಭಕ್ತ ಮಮ ಸತ್ಯಪರಾಯಣ || ವರಂ ವೃಣು ಮಹಾಭಾಗ ವರಂ ದಾಸ್ಯಾಮಿ ದುರ್ಲಭಂ || (ಸತ್ಯಸಂಧಃ) ಪ್ರಸಾದಂ ಕುರು ಮೇ ದೇವ ಮುಚ್ಯೇಽಹಂ ಯೇನ ಬಂಧನಾತ್ || ಇತಿ ತಂ ಪ್ರಾರ್ಥಯಾಮಾಸ ಸತ್ಯಸಂಧೋ ಜನಾರ್ದನಂ || (ವಿಷ್ಣುಃ) ನಾಹಂ ಸಂಸಾರಮಗ್ನಾನಾಂ ಸಾಕ್ಷಾತ್ಸಂಸಾರಮೋಚಕಃ || ಬ್ರಹ್ಮಾದಿದೇವತಾಶ್ಚಾನ್ಯಾ ನೈವ ಸಂಸಾರಮೋಚಕಾಃ||ಶಿವ ಏವ ಹಿ ಜಂತೂನಾಂ ಮಹಾಸಂಸಾರವರ್ತಿನಾಂ || ಸಂಸಾರಮೋಚಕಸ್ಸಾಕ್ಷಾತ್ಸರ್ವಜ್ಞಸ್ಸಾಂಬ ಈಶ್ವರಃ || ನ ತಸ್ಯ ಕರಣಂ ಕಾರ್ಯಂ ವಸ್ತುತೋ ವಿದ್ಯತೇಽನಘ || ನ ತತ್ಸಮಶ್ಚಾಪ್ಯಧಿಕಶ್ಚೇತನೋ ದೃಶ್ಯತೇ ಕ್ವಚಿತ್ || ಮಮ ಬ್ರಹ್ಮಾದಿದೇವಾನಾಮಪಿ ತಸ್ಯ ಪ್ರಸಾದತಃ || ವಿಜ್ಞಾನಾದಿತ್ರಯಂ ಯಸ್ಮಾತ್ಸ ಏವ ಭವಮೋಚಕಃ|| ತ್ವಂ ತತ್ಪೂರ್ಣಪ್ರಸಾದಾಯ ಸತ್ಯಸಂಧ ಮಮ ಪ್ರಿಯ||ಮಹಾದೇವಂ ಮಹಾತ್ಮಾನಂ ಭಜ ಕಾರುಣಿಕೋತ್ತಮಂ || ಮಹಾದೇವಂ ಸಮಾಶ್ರಿತ್ಯ ವಾಂಛಿತಂ ನಾಪ್ನುಯಾದ್ಯದಿ || ಮಹಾದೇವಾನ್ಮಹಾದೇವಂ ಕಥಮನ್ಯಂ ಸಮಾಶ್ರಯೇತ್ || ನಾಮತಶ್ಚಾರ್ಥತಶ್ಚಾಪಿ ಮಹಾದೇವೋ ಮಹೇಶ್ವರಃ || ತದನ್ಯೇ ಕೇವಲಂ ದೇವಾ ಮಹಾದೇ

---

ರುವ ಅದೃಷ್ಟಶಾಲಿಯಾದ ಎಲೈ ಸತ್ಯಸಂಧನೇ ! ಇತರರಿಂದ ಪಡೆಯಲಶಕ್ಯವಾದ ವರವನ್ನು ನಿನಗೆ ಕೊಡುವೆನು ಕೇಳೆಂದನು. ಸತ್ಯಸಂಧನು—ಎಲೈ ಸ್ವಾಮಿ ! ಯಾವ ಅನುಗ್ರಹದಿಂದ ನಾನು ಭವಬಂಧದಿಂದ ಬಿಡುಗಡೆಯನ್ನು ಹೊಂದುವೆನೋ, ಆ ಅನುಗ್ರಹವನ್ನೇ ನನಗೆ ಮಾಡೆಂದು ಬಿನ್ನೈಸಿದನು.

ವಿಷ್ಣುವು—“ಭವಬಂಧದಿಂದ ನಿನ್ನನ್ನು ನಾನು ಬಿಡಿಸತಕ್ಕವನಲ್ಲವು, ಬ್ರಹ್ಮಾದಿಗಳೂ ಬಿಡಿಸತಕ್ಕವರಲ್ಲ. ಸರ್ವಜ್ಞನೂ, ಸರ್ವೇಶ್ವರನೂ, ಪಾರ್ವತೀಸಹಿತನೂ ಆಗಿರುವ ಶಿವನೋರ್ವನೇ ಭವಬಂಧದಿಂ ಬಿಡಿಸತಕ್ಕವನು. ಎಲೈ ಪುಣ್ಯಶಾಲಿಯಾಗಿರುವ ಸತ್ಯಸಂಧನೇ ! ಆ ಶಿವನಿಗೆ ಕಾರ್ಯಕಾರಣಗಳು ಸತ್ಯವಾಗೂ ಇಲ್ಲವು. ಆತನಿಗೆ ಸಮಾನನೂ, ಆತನಿಗಿಂತ ಶ್ರೇಷ್ಠನೂ, ಎಲ್ಲಿಯೂ ಕಾಣಲ್ಪಡುವುದಿಲ್ಲವು. ನನಗೂ ಬ್ರಹ್ಮಾದಿದೇವತೆಗಳಿಗೂ ಆ ಶಿವನ ಅನುಗ್ರಹದದೆಸೆಯಿಂದ ವಿಜ್ಞಾನಾದಿತ್ರಯವುಂಟಾಯಿತಾದ್ದರಿಂದ ಆತನೇ ಭವಬಂಧದಿಂದ ಬಿಡಿಸತಕ್ಕವನಾಗಿರುತ್ತಾನೆ ನನ್ನ ಪ್ರೇಮಪಾತ್ರನಾದ ಎಲೈ ಸಂಧನೇ ! ನೀನು ಆತನ ಪೂರ್ಣಾನುಗ್ರಹವನ್ನು ಸಂಪಾದಿಸುವುದಕ್ಕಾಗಿ ಮಹಾನುಭಾವನೂ, ಅತಿಕೃಪಾಶಾಲಿಯೂ ಆಗಿರುವ ಆ ಮಹಾದೇವನನ್ನೇ ಸೇವಿಸು. ಮಹಾದೇವನನ್ನಾಶ್ರೈಸಿ ಕೋರಿಕೆಯನ್ನು ನೆರವೇರಿಸಿಕೊಳ್ಳದಿದ್ದರೆ ಮಹಾದೇವನಿಂದನ್ಯನಾದ ಮಹಾದೇವನನ್ನು ಆಶ್ರೈಸುವುದು ಹೇಗೆ? ಮಹೇಶ್ವರನಾದ ಶಿವನು ನಾಮದಿಂದಲೂ, ಅರ್ಥದಿಂದಲೂ ಮಹಾದೇವನೇ ಆಗಿರುತ್ತಾನೆ. ಆ ಶಿವನಿಂದನ್ಯರಾದ ಬ್ರಹ್ಮಾದಿಗಳು ದೇವತೆಗ

ವಾ ನ ಚಾನಘಾಃ || ಮಹಾದೇವಂ ವಿನಾ ಯೋ ಮಾಂ ಭಜತೇ ಶ್ರದ್ಧಯಾನ್ವಿ ತಃ || ನಾಸ್ತಿ ತಸ್ಯ ವಿನಿರ್ಮೋಕ್ಷಸ್ಸಂಸಾರಾಜ್ಜನ್ಮಕೋಟಿಭಿಃ || ಸರ್ವಮುಕ್ತಂ ಸ ಮಾಸೇನ ಮಮ ಭಕ್ತಸ್ಯ ತೇಽನಘ || ಶಿವಾದನ್ಯಂ ಪರಿತ್ಯಜ್ಯ ಶಿವಂ ಸಾಂಬಂ ಸ ದಾ ಭಜ || (ಸೂತಃ) ಏವಮುಕ್ತ್ವಾ ಹರಿಶ್ಶ್ರೀಮಾನ್ಕಿರೀಟೀ ಗರುಡಧ್ವಜಃ || ಸರ್ವ ವಿಜ್ಞಾನಸಂಪನ್ನಸ್ತತ್ರೈವಾಂತರ್ಹಿತೋಽಭವತ್ || ಸತ್ಯಸಂಧೋ ಮಹಾಧೀಮಾನ್ಮ ಹಾವಿಷ್ಣೋಃ ಪ್ರಸಾದತಃ || ಪರಿತ್ಯಜ್ಯಾಖಿಲಾನ್ದೇವಾನಾಶ್ರಿತೋಽಭವದೀಶ್ವರಂ || ಈಶ್ವರಸ್ಯ ಪ್ರಸಾದೇನ ಸತ್ಯಸಂಧೋ ಮಹಾದ್ವಿಜಃ || ಜ್ಞಾನಂ ವೇದಾಂತಜಂ ಲ ಬ್ಧ್ವಾ ವಿಮುಕ್ತೋ ಭವಬಂಧನಾತ್ || ಭವಂತೋಪಿ ದ್ವಿಜಶ್ರೇಷ್ಠಾಶ್ಶಿವಾದನ್ಯತ್ತು ದೈವತಂ || ಪರಿತ್ಯಜ್ಯ ಪ್ರಸಾದಾಯ ಭಜಧ್ವಂ ಶಿವಮವ್ಯಯಂ || ಪ್ರಸಾದಾದ್ದೇವ ದೇವಸ್ಯ ಬ್ರಹ್ಮಾ ಬ್ರಹ್ಮತ್ವಮಾಗತಃ || ವಿಷ್ಣುರ್ವಿಷ್ಣುಪದಂ ಪ್ರಾಪ್ತೋ ರುದ್ರೋ ರುದ್ರತ್ವಮಾಗತಃ || ಅತಿರಹಸ್ಯಮಿದಂ ಕಥಿತಂ ಮಯಾ ಶ್ರುತಿಪರಂ ಪರಯಾ ತು ಸಮಾಗತಂ || ಮುನಿಪರಂ ಪರಯಾಪಿ ಸಮಾಗತಂ ನ ಗದಿತವ್ಯಮಶೇಷಜನಸ್ಯ ತತ್ ''

---

ಳಿಂದೆನಿಸಿಕೊಳ್ಳುವರಲ್ಲದೆ, ಮಹಾದೇವಶಬ್ದವಾಚ್ಯರೂ ದೋಷರಹಿತರೂ ಅಲ್ಲವು. ಮಹಾದೇವನನ್ನು ಪೂಜಿಸದೆ ನನ್ನನ್ನು ಪೂಜಿಸತಕ್ಕವನಿಗೆ ಕೋಟಿಜನ್ಮಗಳು ಕಳೆದರೂ ಸಂಸಾರಬಂಧದದೆಸೆಯಿಂದ ಬಿಡುಗಡೆಯುಂಟಾಗುವುದಿಲ್ಲವು. ನನ್ನ ಭಕ್ತನಾಗಿರುವ ನಿನಗೆ ಸಕಲ ವಿಚಾರವೂ ಸಂಕ್ಷೇಪದಿಂದ ನಿರೂಪಿಸಲ್ಪಟ್ಟಿತು. ಆದ್ದರಿಂದ ಎಲೈ ಸತ್ಯಸಂಧನೇ ! ನೀನು ಶಿವನದೆಸೆಯಿಂದನ್ಯರಾದ ದೇವತೆಗಳನ್ನು ಬಿಟ್ಟು ಆಶಕ್ತಿವಿಶಿಷ್ಟನಾದ ಶಿವನನ್ನೇ ಯಾವಾಗಲೂ ಸೇವಿಸು.

ಸೂತನು—"ಸಂಪದ್ಯುಕ್ತನೂ, ಕಿರೀಟಿಯೂ, ಗರುಡಧ್ವಜನೂ, ಸರ್ವಜ್ಞಾನಸಂಪನ್ನನೂ ಆದ ವಿಷ್ಣುವು ಈ ರೀತಿಯಾಗಿ ಹೇಳಿ ಅಲ್ಲಿಯೇ ಅಂತರ್ಧಾನನಾದನು. ಮಹಾಬುದ್ಧಿಶಾಲಿಯಾದ ಸತ್ಯಸಂಧನು ಶ್ರೀ ಮಹಾವಿಷ್ಣುವಿನ ಅನುಗ್ರಹದದೆಸೆಯಿಂದ ಶಿವೇತರದೇವತೆಗಳನ್ನು ಸೇವಿಸದೆ ಶಿವನನ್ನಾಶ್ರಯಿಸಿ ಆತನ ಅನುಗ್ರಹದಿಂದ ಉಪನಿಷದರ್ಥಪರ್ಯಾಲೋಚನೆಯಿಂದುಂಟಾಗತಕ್ಕ ಜ್ಞಾನವನ್ನು ಸಂಪಾದಿಸಿ, ಅದರಿಂದ ಭವಪಾಶಮುಕ್ತನಾದನು. ಆದ್ದರಿಂದ ಎಲೈ ದ್ವಿಜಶ್ರೇಷ್ಠರಾದ ಮುನಿಗಳಿರಾ! ನೀವು ಶಿವನಿಂದನ್ಯನಾದ ದೈವವನ್ನು ಪರಿತ್ಯಜಿಸಿ ನಾಶರಹಿತನಾದ ಶಿವನನ್ನೇ ಸೇವಿಸಿರಿ. ಶಿವಾನುಗ್ರಹದಿಂದಲೇ ಬ್ರಹ್ಮನು ಬ್ರಹ್ಮತ್ವವನ್ನು, ವಿಷ್ಣುವು ವಿಷ್ಣುತ್ವವನ್ನು, ರುದ್ರನು ರುದ್ರತ್ವವನ್ನು ಹೊಂದಿದನು. ಶ್ರುತಿಪರಂಪರಾಗತವೂ ಮುನಿಪರಂಪರಾಗತವೂ ಆದ ಅತಿರಹಸ್ಯವಾದ ಈ ವಿಚಾರವು ನನ್ನಿಂದ ಹೇಳಲ್ಪಟ್ಟಿತು. ಅದನ್ನು ನೀವು ಎಲ್ಲರಿಗೂ ಹೇಳಬಾರದು,, ಎಂದು ಸೂತಮುನಿಯಿಂದ ಮುನಿಗಳಿಗುಪದೇಶಮಾಡಲ್ಪಟ್ಟಿದೆ.

ಇತಿ ಸತ್ಯಸಂಧಾಚ್ಯುತಸಂವಾದಸಂಭವಶಿವಾಧಿಕ್ಯನಿರ್ಣಯೋ
ದಶಮೋಪದೇಶೇ ದ್ವಿತೀಯಸ್ಸಂವಾದಃ.



ಶ್ರೀಃ.

## ಜ್ವಾಲಾಲಿಂಗಸ್ವರೂಪನಿರ್ಣಯಃ.

ರೇ—ಭೋ ಚೋಳ! ಹರಿವಿರಿಂಚಿಮೃಗ್ಯಜ್ವಾಲಾಲಿಂಗಸ್ವರೂಪಂ ಶ್ರೂಯತಾಂ, ಋಗ್ವೇದೇ ಬಾಷ್ಕಳಸಂಹಿತಾಯಾಂ ಲಿಂಗಸೂಕ್ತೇ,—“ ಯುದ್ಧೇ ಸಂಯುಕ್ತಾವುಭೌ ಚ ದೃಷ್ಟ್ವಾ ಬ್ರಹ್ಮವಿಷ್ಣೂರಜಸಾ ಬದ್ಧವೈರೌ ಮಧ್ಯೇ ತಯೋರ್ದೃಕ್ಶ್ಯತೇ ಜಾತವೇದಾಸ್ಸ್ಥಾಣುರುದತಿಷ್ಠದ್ಭುವನಸ್ಯ ಗೋಪ್ತಾ ದೃಷ್ಟ್ವೈವ ಚ ಸ್ಥಾಣುಮುಪಯುಮ್ಯ ಯುದ್ಧಂ ಪ್ರತಸ್ಥತುರ್ದೂರಮನಾದಿದೃಕ್ಷೂ ವರಾಹೋ ವಿಷ್ಣುರ್ನಿಮಮಜ್ಜ ಭೂಮೌ ಬ್ರಹ್ಮೋತ್ಪಪಾತ ದಿವಮಾಶು ಗೃಧ್ರಃ|ಬುದ್ಧ್ವೈವ ಸಂಚಿಂತ್ಯ ಸುಚಿರಾಯ ದೇವಂ ಸ್ತುತಿಂ ತೌ ಚಕ್ರತುಃ ಪರಮಂ ಸ್ವರಾಜಂ” ಕಿಂಚ ಶಿವಧರ್ಮಪುರಾಣೇ,-ನಂದಿಕೇಶ್ವರಃ, “ ಪೂರ್ವಮೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ||

---

ಎಂಬಿಲ್ಲಿಗೆ ಸತ್ಯಸಂಧನಿಗೂ ವಿಷ್ಣುವಿಗೂ ನಡೆದ ಸಂವಾದದಿಂದುಂಟಾದ ಶಿವಾಧಿಕ್ಯನಿರ್ಣಯ
ವನ್ನು ಹೇಳುವ ಹತ್ತನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



## ಜ್ವಾಲಾಲಿಂಗಸ್ವರೂಪನಿರ್ಣಯವು.

ರೇ—ಎಲೈ ಚೋಳನೇ! ವಿಷ್ಣುಬ್ರಹ್ಮರಿಂದ ಹುಡುಕಲ್ಪಟ್ಟುದಾದ ಉರಿಲಿಂಗದ ಸ್ವರೂಪವನ್ನು ಕೇಳು; ಋಗ್ವೇದದ ಬಾಷ್ಕಳಸಂಹಿತೆಯಲ್ಲಿರುವ ಲಿಂಗಸೂಕ್ತದಲ್ಲಿ—“ಬ್ರಹ್ಮವಿಷ್ಣುಗಳು ರಜೋಗುಣಮಹಿಮೆಯಿಂದ ಒಬ್ಬನನ್ನೊಬ್ಬನು ದ್ವೇಷಿಸುತ್ತಾ ಯುದ್ಧಮಾಡುವುದರಲ್ಲುದ್ಯುಕ್ತರಾದ್ದರಿಂದ ಅವರ ಮಧ್ಯದಲ್ಲಿ ಜಗದ್ರಕ್ಷಕನಾದ ಸ್ಥಾಣುಶಬ್ದವಾಚ್ಯನಾದ ಶಿವನು ಜ್ಯೋತಿರ್ಲಿಂಗರೂಪನಾಗಿ ಆವಿರ್ಭವಿಸಿದನು. ಆಗ ಅವರಿಬ್ಬರೂ ಆ ಉರಿಲಿಂಗವನ್ನು ನೋಡಿ, ಯುದ್ಧವನ್ನು ನಿಲ್ಲಿಸಿ ಆ ಲಿಂಗದ ಆದ್ಯಂತವನ್ನು ನೋಡುವುದಕ್ಕೋಸ್ಕರ ವಿಷ್ಣು ಹಂದಿಯಾಗಿ, ಪಾದಗಳನ್ನು ನೋಡುವುದಕ್ಕಾಗಿ ಭೂಮಿಯಲ್ಲಿ ಮುಳುಗಿದನು. ಬ್ರಹ್ಮನು ಹಂಸವಾಗಿ ಮಸ್ತಕವನ್ನು ನೋಡುವುದಕ್ಕಾಗಿ ಆಕಾಶಕ್ಕೆ ಹಾರಿದನು. ಹೀಗೆ ಬಹುದೂರದವರೆಗೆ ಹೋಗಿ ನೋಡಿದಾಗ್ಯೂ ಆ ಲಿಂಗದ ತುದಿ ಬುಡಗಳನ್ನು ನೋಡಲಾಗದೆ ಯೋಚನೆಮಾಡಿ ತಿಳಿದು ಸರ್ವೋತ್ಕೃಷ್ಟನೂ, ಸ್ವಪ್ರಕಾಶನೂ ಆದ ಪರಮೇಶ್ವರನನ್ನು ಸ್ತುತಿಸಿದರು,, ಎಂದು ಹೇಳಲ್ಪಟ್ಟಿದೆ. ಮತ್ತು ಶಿವಧರ್ಮಪುರಾಣದಲ್ಲಿ—“ಪೂರ್ವದಲ್ಲಿ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಜಲಮಯ

ವಿವಾದಸ್ಸುಮಹಾನಾಸೀದ್ಬ್ರಹ್ಮವಿಷ್ಣ್ವೋಃ ಪರಸ್ಪರಂ || ಅಹಂ ಕರ್ತೇತ್ಯಹಂ ಕರ್ತಾ ನ ಮತ್ತೋಽನ್ಯೋ ಜಗತ್ಪ್ರಭುಃ || ಏವಮಾಹ ಹರಿಂ ಬ್ರಹ್ಮಾ ಬ್ರಹ್ಮಾಣಂ ಚ ಹರಿಸ್ತದಾ || ತಯೋರ್ದರ್ಪಾಪಹಾರಾಯ ಪ್ರಬೋಧಾರ್ಥಂ ಚ ದೇವಯೋಃ || ಮಧ್ಯೇ ಸಮುತ್ಥಿತಂ ಲಿಂಗಮೈಶ್ವರಂ ತೈಜಸಂ ಪರಂ || ಜ್ವಾಲಾವೃತ್ತಂ ಮಹಾದಿವ್ಯಮಪ್ರಮೇಯಮನಾಮಯಂ || ಯೋಜನಾಯುತವಿಸ್ತೀರ್ಣಂ ಸ್ಥಿತಂ ತದ್ವಿಮಲೇಂಭಸಿ || ಜ್ವಾಲಾಭಿರ್ಮೋಹಿತೌ ತಸ್ಯ ಲಿಂಗಸ್ಯ ಸುರಸತ್ತಮೌ || ತತೋ ವಿಸ್ಮಯಮಾಪನ್ನೌ ಪಶ್ಯಂತಾವಮರಾಧಿಪೌ || ಗತಾವೂರ್ಧ್ವಮಧಸ್ತಸ್ಯ ಗೃಧ್ರಸೂಕರರೂಪಿಣೌ || ಅಧೋ ಪ್ರಷ್ಟುಂ ಗತೋ ವಿಷ್ಣುರೂರ್ಧ್ವಂ ಚೈವ ಪಿತಾಮಹಃ || ನಾಪಶ್ಯಂತಾವಧಶ್ಚೋರ್ಧ್ವಂ ತೌ ಸಮೇತ್ಯ ಪರಸ್ಪರಂ ||ಕೃತಾಂಜಲಿಪುಟೌ ಭೂತ್ವಾ ಲಿಂಗಂ ತುಷ್ಟುವತುಸ್ತದಾ ” ಲೈಂಗೇ,—ಬ್ರಹ್ಮವಿಷ್ಣುಕೃತಸ್ತವಃ, “ ಅನಾದೇ ದೇವದೇವೇಶ ಲೋಕರಕ್ಷಾಧುರಂಧರ || ನಮಶ್ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ || ಪ್ರಳಯಾಂಬುಧಿಸಂಸ್ಥಾಯ ಪ್ರಳಯೋತ್ಪತ್ತಿಹೇತವೇ || ನಮಶ್ಶಿವಾ

---

ವಾಗಿ ನಾಶವನ್ನು ಹೊಂದಿದ್ದಾಗ್ಯೆ “ತಾನು ಜಗತ್ಕರ್ತನು,, “ತಾನು ಜಗತ್ಕರ್ತನು,, ತನ್ನ ದೆಸೆಯಿಂದನ್ಯನಾದ ಜಗದೀಶನಿಲ್ಲವೆಂದು ಬ್ರಹ್ಮನನ್ನು ಕುರಿತು ವಿಷ್ಣುವೂ, ವಿಷ್ಣುವನ್ನು ಕುರಿತು ಬ್ರಹ್ಮನೂ ಹೀಗೆ ಒಬ್ಬನಿಗೊಬ್ಬನು ಹೇಳುತಾ, ಜಗಳವಾಡುತ್ತಿದ್ದುದರಿಂದ ಅವರಿಗೆ ಅಹಂಕಾರವನಡಗಿಸುವುದಕ್ಕೂ ಜ್ಞಾನವನ್ನುಂಟುಮಾಡುವುದಕ್ಕೂ ಅವರ ಮಧ್ಯದಲ್ಲಿ ಜ್ವಾಲಾಮಯವೂ, ಮಹಾಶ್ರೇಷ್ಠವೂ, ಅಳತೆಗೆ ಶಿಲ್ಕದುದೂ, ಭವರೋಗರಹಿತವೂ, ತೇಜೋಮಯವೂ ಆದ ಶಿವಲಿಂಗವು—ಆ ನಿರ್ಮಲವಾದ ನೀರಿನಲ್ಲಿ ಹತ್ತುಸಾವಿರ ಯೋಜನದವರೆಗೂ ವಿಸ್ತಾರವನ್ನು ಹೊಂದಿ ಪ್ರಾದುರ್ಭವಿಸಿತಾದ್ದರಿಂದ ಆ ಬ್ರಹ್ಮವಿಷ್ಣುಗಳು ಆ ಜ್ಯೋತಿರ್ಲಿಂಗದ ಜ್ವಾಲೆಗಳಿಂದ ಮೋಹಿತರಾಗಿ ಆಶ್ಚರ್ಯಪಡುತ್ತ ಆ ಲಿಂಗದ ಮಸ್ತಕದರ್ಶನಕ್ಕೋಸ್ಕರ ಬ್ರಹ್ಮನು ಹಂಸರೂಪವಾಗಿ ಆಕಾಶಕ್ಕೆ ಹಾರಿಹೋಗಿ, ವಿಷ್ಣುವು ಪಾದದರ್ಶನಕ್ಕೋಸ್ಕರ ಭೂಮಿಯನ್ನು ಬಗೆದುಕೊಂಡು ಹೋಗಿ ನೋಡಲಾಗದೆ ಹಿಂದಿರುಗಿ ಬಂದು ಕೈಮುಗಿದು ಲಿಂಗವನ್ನು ಸ್ತುತಿಸಿದರು,, ಎಂದು ನಂದೀಶ್ವರನಿಂದ ಹೇಳಲ್ಪಟ್ಟಿದೆ. ಆ ಬ್ರಹ್ಮವಿಷ್ಣುಗಳು ಮಾಡಿದ ಸ್ತೋತ್ರವು ಲಿಂಗಪುರಾಣದಲ್ಲಿ — “ಆದಿಯಿಲ್ಲದವನೂ, ದೇವದೇವೇಶನೂ, ಜಗತ್ಪರಿಪಾಲನಭಾರವಾಹಿಯೂ ಆದ ಎಲೈ ಶಿವನೇ ! ಮಂಗಳಕರನೂ, ಶಾಂತನೂ, ಪರಬ್ರಹ್ಮನೂ, ಲಿಂಗಮೂರ್ತಿಯೂ ಆಗಿರುವ ನಿನಗೋಸ್ಕರ ನಮಸ್ಕಾರವು. ಮಹಾಪ್ರಳಯವುಂಟಾದಕಾಲದಲ್ಲಿ ಸಮುದ್ರದಲ್ಲಿದ್ದವನೂ, ಪ್ರಳಯವುಂಟಾಗುವುದಕ್ಕೆ ಕಾರಣನೂ, ಮಂಗಳಸ್ವರೂಪನೂ, ಶಾಂತನೂ, ಪರಬ್ರಹ್ಮಸ್ವರೂಪನೂ, ಲಿಂಗರೂಪವಾದ ಶರೀರವುಳ್ಳವನೂ ಆಗಿರುವ ನಿನಗೋಸ್ಕರ ನಮಸ್ಕಾರವು. ಜ್ವಾಲೆಗಳ ಮಾಲೆ

ಯ.........॥ ಜ್ವಾಲಾಮಾಲಾವೃತಾಂಗಾಯ ಜ್ವಲನಸ್ತಂಭರೂಪಿಣೇ ॥ ನಮಶ್ಶಿವಾಯ.........॥ ವೇದಾಂತಸಾರರೂಪಾಯ ಕಾಲರೂಪಾಯ ಧೀಮತೇ॥ ನಮಶ್ಶಿವಾಯ.........॥ ನಿರ್ವಿಕಾರಾಯ ನಿತ್ಯಾಯ ಸತ್ಯಾಯಾಮಲತೇಜಸೇ॥ ನಮಶ್ಶಿವಾಯ.........॥ ಆದಿಮಧ್ಯಾಂತಶೂನ್ಯಾಯ ಸ್ವಭಾವಾಮಲತೇಜಸೇ ॥ ನಮಶ್ಶಿವಾಯ.........॥ ಮಹಾದೇವಾಯ ಮಹತೇ ಜ್ಯೋತಿಷೇಽನಂತತೇಜಸೇ ॥ ನಮಶ್ಶಿವಾಯ .........॥ ಪ್ರಧಾನಪುರುಷೇಶಾಯ ವ್ಯೋಮರೂಪಾಯ ವೇಧಸೇ ॥ ನಮಶ್ಶಿವಾಯ .........'' ‹‹ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಂ'' ಇತಿ ಋಗ್ವೇದಾದಿಮಂತ್ರಮಾರಭ್ಯ, ‹‹ ಓಮಾಪೋಜ್ಯೋತಿರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಂ'' ಇತಿ ಗಾಯತ್ರೀಶಿರಃಪರ್ಯಂತಮುಪಕ್ರಮೋಪಸಂಹಾರರೂಪಮೀಮಾಂಸಾನ್ಯಾಯೇನ ಹರಿವಿರಿಂಚಿಭ್ಯಾಂ ಮೃಗ್ಯಮಾಣಸ್ಯ ಜ್ವಾಲಾಲಿಂಗಸ್ಯ ಮಹತ್ವಂ ವಿಜ್ಞೇಯಂ. ವಿಸ್ತರೇಣಾಲಂ.

ಇತಿ ಜ್ವಾಲಾಲಿಂಗಸ್ವರೂಪವಿಧಿರ್ದಶಮೋಪದೇಶೇ
ತೃತೀಯಸ್ಸಂವಾದಃ.

---

ಯಿಂದಾವರಿಸಲ್ಪಟ್ಟವನೂ, ಅಗ್ನಿಸ್ತಂಭರೂಪನೂ, ಉಪನಿಷತ್ಸಾರರೂಪನೂ, ಕಾಲರೂಪನೂ, ಮಹಾಬುದ್ಧಿಶಾಲಿಯೂ, ವಿಕಾರರಹಿತನೂ, ಶಾಶ್ವತನೂ, ಸತ್ಸ್ವರೂಪನೂ, ನಿರ್ದೋಷವಾದ ಕಾಂತಿಯುಳ್ಳವನೂ, ಆದಿಮಧ್ಯಾವಸಾನಗಳಿಲ್ಲದವನೂ, ಸ್ವಭಾವದಿಂದನಿರ್ಮಲವಾದ ತೇಜಸ್ಸುಳ್ಳವನೂ, ಮಹಾಪ್ರಕಾಶಮಾನನೂ, ಸರ್ವಶ್ರೇಷ್ಠನೂ, ತೇಜೋರೂಪನೂ, ಅಪರಿಮಿತತೇಜಸ್ಸುಳ್ಳವನೂ, ಜಗದುತ್ಪತ್ತಿಗೆ ಕಾರಣವಾದ ಪ್ರಕೃತಿಗೊಡೆಯನೂ, ಆಕಾಶಸ್ವರೂಪನೂ ಆಗಿರುವ ಶಿವಗೋಸ್ಕರ ನಮಸ್ಕಾರವು,, ಎಂದು ಹೇಳಲ್ಪಟ್ಟಿದೆ. ಋಗ್ವೇದದಲ್ಲಿರುವ ‹‹ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಂ,, ಎಂಬ ಮೊದಲನೆಯ ಮಂತ್ರ ಮೊದಲಾಗಿ ‹‹ಓಮಾಪೋಜ್ಯೋತಿರಸೋಽಮೃತಂಬ್ರಹ್ಮಭೂರ್ಭುವಸ್ಸುವರೋಂ›› ಎಂಬ ಗಾಯತ್ರೀಮಂತ್ರದ ಶಿರಃಪರ್ಯಂತವಾಗಿ ಉಪಕ್ರಮೋಪಸಂಹಾರರೂಪವಾದ ಮೀಮಾಂಸಾನ್ಯಾಯಸಾಹಾಯ್ಯದಿಂದ ಆ ಜ್ಯೋತಿರ್ಲಿಂಗದ ಮಹತ್ವವನ್ನು ತಿಳಿಯತಕ್ಕದ್ದು. ವಿಸ್ತಾರದಿಂದ ಸಾಕು.

ಎಂಬಿಲ್ಲಿಗೆ ಜ್ವಾಲಾಲಿಂಗದ ಸ್ವರೂಪವಿಧಿಯನ್ನು ಹೇಳುವ ಹತ್ತನೆಯ ಉಪದೇಶದಲ್ಲಿ
ಮೂರನೆಯ ಸಂವಾದವು ಮುಗಿದುದು.



ಶ್ರೀಃ.

# ಶಿವಲಿಂಗಾದಿಪ್ರತಿಷ್ಠಾವಿಧಿಃ.

ಚೋ—"ಪುರಮಧ್ಯೇ ಸ್ಥಿತಿರ್ವಿಷ್ಣೋರೀಶ್ವರಸ್ಯ ತಥಾ ನ ಹಿ ||ಅತ ಈಶಾನದಿಕ್ಪಾಲೋ ರುದ್ರ ಇತ್ಯಾಹುರಾದರಾತ್" ಇತ್ಯಭಿಯುಕ್ತೋಕ್ತೇಃ ಭೋ ರೇಣುಕಗಣೇಶ! ಕಿಮುತ್ತರಂ ?

ರೇ—ಹೇ ಚೋಳ! ತತ್ಪರಿಹಾರಃ ಶ್ರೂಯತಾಂ, ಕಾಶ್ಯಪೀಯಶಿಲ್ಪಶಾಸ್ತ್ರೇ,-"ಭುವಃ ಪಾದೌ ಯಾತುಧಾನದಿಶ್ಯೈಶಾನ್ಯಾಂ ತು ತಚ್ಛಿರಃ||ಮಸ್ತಕೇ ತು ಭುವೋ ರುದ್ರೋ ಮಧ್ಯೇ ವಿಷ್ಣುರಜಃ ಪದೇ||ಅತೋ ನಗರನಿರ್ಮಾಣೇ ಲಿಂಗಮೀಶಾನದಿಕ್ತಟೇ || ಸ್ಥಾಪ್ಯಂ ಮಧ್ಯೇ ಹರಿಃ ಪಾದೇ ವಿಧಿರ್ವಾಸ್ತುವಿಚಾರಕೈಃ || ಸ್ವಯಂಭುಲಿಂಗಯುಗ್ಭೂಮೌ ಲಿಂಗಮಧ್ಯಂ ಪುರಂ ಬುಧಃ || ಕುರ್ಯಾದಾವರಣೇ ಶಂಭೋಃ ಪ್ರತಿಷ್ಠಾಮನ್ಯನಾಕಿನಾಂ" ಇತ್ಥಂ ಸರ್ವಶಿಲ್ಪಶಾಸ್ತ್ರೋಕ್ತೇಃ, ಭೂಮೇರುತ್ತಮಾಂಗೇ ನಾರಾಯಣನಯನಕಮಲಪೂಜ್ಯಶಿವಲಿಂಗಸ್ಯ ಪ್ರತಿಷ್ಠಾ ಶ್ರೇಷ್ಠತರಾ. ಹೇ

---

## ಶಿವಲಿಂಗಾದಿಪ್ರತಿಷ್ಠಾವಿಧಿಯು.

ಚೋ — ಎಲೈ ರೇಣುಕಗಣೇಶನೇ! ಪಟ್ಟಣದ ಮಧ್ಯದಲ್ಲಿ ವಿಷ್ಣುವಿಗ್ರಹದ ಪ್ರತಿಷ್ಠೆಯಾಗುತ್ತದೆ. ಈಶ್ವರವಿಗ್ರಹಪ್ರತಿಷ್ಠೆಯಾಗುವುದಿಲ್ಲ. ಈಶ್ವರನ ವಿಗ್ರಹಪ್ರತಿಷ್ಠೆಯು ಪಟ್ಟಣದ ಈಶಾನ್ಯದಿಕ್ಕಿನಲ್ಲಾಗುವುದರಿಂದ ರುದ್ರನು ಈಶಾನದಿಕ್ಪಾಲಕನೆಂದು ಹೇಳುವರು,, ಎಂದಿರುವ ಅಭಿಯುಕ್ತರ ವಚನಕ್ಕೆ ಉತ್ತರವನ್ನು ಹೇಳು?

ರೇ — ಎಲೈ ಚೋಳನೇ! ಅದರ ಪರಿಹಾರವನ್ನು ಕೇಳು; ಕಾಶ್ಯಪೀಯದಲ್ಲಿರುವ ಶಿಲ್ಪಶಾಸ್ತ್ರದಲ್ಲಿ— "ಭೂದೇವಿಯ ಪಾದಗಳು ನೈರುತ್ಯದಿಕ್ಕಿನಲ್ಲಿ, ಶಿರಸ್ಸು ಈಶಾನ್ಯದಿಕ್ಕಿನಲ್ಲಿ ಇರುವುದರಿಂದ ಭೂಮಿಯ ಮಸ್ತಕವಿರುವ ಭಾಗದಲ್ಲಿ ರುದ್ರಮೂರ್ತಿಪ್ರತಿಷ್ಠೆಯೂ, ಮಧ್ಯದಲ್ಲಿ ವಿಷ್ಣುಮೂರ್ತಿಪ್ರತಿಷ್ಠೆಯೂ, ಪಾದಗಳಿರುವ ಭಾಗದಲ್ಲಿ ಬ್ರಹ್ಮಮೂರ್ತಿಪ್ರತಿಷ್ಠೆಯೂ ಮಾಡಲ್ಪಡತಕ್ಕದು ಪ್ರಸಿದ್ಧವಾಗಿರುವುದರಿಂದ ವಾಸ್ತುವಿಚಾರವನ್ನರಿತವರು ಪಟ್ಟಣವನ್ನು ಕಟ್ಟುವಕಾಲದಲ್ಲಿ ಪಟ್ಟಣದ ಈಶಾನ್ಯದಿಕ್ಕಿನಲ್ಲಿ ಶಿವಲಿಂಗಪ್ರತಿಷ್ಠೆಯನ್ನೂ, ಮಧ್ಯದಲ್ಲಿ ವಿಷ್ಣುಮೂರ್ತಿಪ್ರತಿಷ್ಠೆಯನ್ನೂ, ನೈರುತ್ಯದಿಕ್ಕಿನಲ್ಲಿ ಬ್ರಹ್ಮಮೂರ್ತಿಪ್ರತಿಷ್ಠೆಯನ್ನೂ ಮಾಡಬೇಕು. ತಾನಾಗಿ ಉದ್ಭವಿಸಿದ ಲಿಂಗವುಳ್ಳ ಸ್ಥಳದಲ್ಲಿ ಪಟ್ಟಣವನ್ನು ಕಟ್ಟುವ ಸಂದರ್ಭದಲ್ಲಿ ಆ ಲಿಂಗದ ಸುತ್ತಲೂ ಪಟ್ಟಣವನ್ನು ಕಟ್ಟಬೇಕು. ಆ ಸ್ವಯಂಭುಲಿಂಗಾಲಯದ ಆವರಣದಲ್ಲಿ ವಿಷ್ಣ್ವಾದಿದೇವತಾಮೂರ್ತಿಗಳನ್ನು ಪ್ರತಿಷ್ಠಿಸಬೇಕು. ಈ ರೀತಿಯಾಗಿ ಸಮಸ್ತ ಶಿಲ್ಪಶಾಸ್ತ್ರಗ್ರಂಥಗಳಲ್ಲಿ ಹೇಳಿರುವುದರಿಂದ ಭೂದೇವಿಯ ಮಸ್ತಕವಿರುವದಿಕ್ಕಿನಲ್ಲಿ ನಾರಾಯಣನ ನೇತ್ರಕಮಲದಿಂದ ಪೂಜ್ಯ

ಚೋಳ! ಕಿಂತು ಸರ್ವಲೋಕೇಷು ಸರ್ವದೇಹಿನಾಮುತ್ತಮಾಂಗಂ ಶಿವಲಿಂಗಾಶ್ರಯ
ಮಿತ್ಯಸ್ಮಿನ್ನರ್ಥೇ ಪೂರ್ವೋದಾಹೃತಂ “ಭ್ರುವೋರ್ಘ್ರಾಣಸ್ಯ ಯಸ್ಸಂಧಿಃ” ಇತಿ
ಜಾಬಾಲಶ್ರುತಿವಾಕ್ಯಂ, “ಭ್ರುವೋರ್ಘ್ರಾಣಸ್ಯ ಯಾ ಸಂಧಿಸ್ತತ್ರ ವಾರಾಣಸೀ ಸ್ಥಿ
ತಾ” ಇತ್ಯಾದಿವಾಕ್ಯಂ ಚಾತ್ರಾನುಸಂಧೇಯಂ. ಇತ್ಯಾದಿಶ್ರುತಿಪುರಾಣವಾಕ್ಯಾ
ತ್ಸರ್ವದೇಹ್ಯುತ್ತಮಾಂಗಂ ರುದ್ರಲಿಂಗಾಶ್ರಯಂ. ಅತಏವ ರುದ್ರಸಾರೂಪ್ಯಪದಯು
ಕ್ತಸ್ಯ ಈಶಾನದಿಕ್ಪಾಲಕಸ್ಯ ಯಶೋವತೀ ಪುರೀ ರುದ್ರಭಕ್ತಾಶ್ರಯಾ. ತದುಕ್ತಂ
ಕಾಶಿಕಾಖಂಡೇ,—“ಅಲಕಾಯಾಃ ಪುರೋಭಾಗೇ ಪುರ್ಯೈಶಾನೀ ಯಶೋವತೀ ||
ಅಸ್ಯಾಂ ವಸಂತಿ ಸತತಂ ರುದ್ರಭಕ್ತಾಸ್ತಪೋಧನಾಃ || ಶಿವಸ್ಮರಣಸಂಯುಕ್ತಾಶ್ಶಿವ
ವ್ರತಪರಾಯಣಾಃ || ಶಿವಸತ್ಕೃತಕರ್ಮಾಣಶ್ಶಿವಪೂಜಾಪರಾಯಣಾಃ || ತತ್ರ ರು
ದ್ರಪುರೇ ರಮ್ಯೇ ರುದ್ರರೂಪಧರಾಮರಾಃ || ಅಜೈಕಪಾದಹಿರ್ಬುಧ್ನಮುಖ್ಯಾ
ಏಕಾದಶ ಸ್ಥಿತಾಃ” ಇತ್ಯಾದಿವಾಕ್ಯಾತ್ ಭೂಮೇರುತ್ತಮಾಂಗಭೂತಾ ಐಶಾನೀ
ದಿಕ್ ಸರ್ವತ್ರ ಸರ್ವದಾ ರುದ್ರಲಿಂಗಾಸ್ಪದಾ ತತ್ತಾವದಾಸ್ತಾಂ. ಮೃತಾನಾಂ ದೇ
ವಾನಾಂ ಪ್ರತಿಷ್ಠಾ ತು ವೀರಶಿಲಾರೂಪೇಣೇತಿ ಶಿಲ್ಪಶಾಸ್ತ್ರಪ್ರಸಿದ್ಧಾ. ವಿಷ್ಣೋರ್ದೃಶಂ
ಜನ್ಮಮರಣಪೀಡಿತತ್ವಂ ತು ಪ್ರಸಿದ್ಧಂ. ತದುಕ್ತಂ ಮಹಾಭಾರತೇ,—“ದೂರ್ವಾ
ಸೋಚ್ಛಿಷ್ಟಶೇಷಸ್ಯ ಪಾದಬಾಹ್ವಾಂಗಲೇಪನಾತ್ || ಸಹಸಾ ವಜ್ರಕಾಯತ್ವಂ

---

ವಾದ ಶಿವಲಿಂಗಮೂರ್ತಿಯನ್ನು ಪ್ರತಿಷ್ಠಿಸತಕ್ಕುದು ಶ್ರೇಷ್ಠವಾದದ್ದು. ಎಲೈ ಚೋಳನೇ! ಮ
ತ್ತೂ ಸರ್ವಲೋಕಗಳಲ್ಲಿರುವ ಸರ್ವಪ್ರಾಣಿಗಳ ಉತ್ತಮಾಂಗವು ಶಿವಲಿಂಗಾಶ್ರಯವಾದುದೆಂದು
ನಮ್ಮಿಂದ ಮೊದಲು ಉದಹರಿಸಲ್ಪಟ್ಟಿರುವ “ಭ್ರುವೋರ್ಘ್ರಾಣಸ್ಯಯಸ್ಸಂಧಿಃ,, ಎಂಬ ಜಾಬಾಲ
ಶ್ರುತಿವಾಕ್ಯವನ್ನೂ, “ಭ್ರುವೋರ್ಘ್ರಾಣಸ್ಯ ಯಾ ಸಂಧಿಸ್ತತ್ರ ವಾರಾಣಸೀ ಸ್ಥಿತಾ” ಇತ್ಯಾದಿವಾ
ಕ್ಯಗಳನ್ನೂ ಇಲ್ಲಿ ಸೇರಿಸಿಕೊಳ್ಳುವುದು. ಇತ್ಯಾದಿ ಶ್ರುತಿಪುರಾಣವಾಕ್ಯಗಳಿರುವುದರಿಂದಲೇ ಶಿವ
ಸಾರೂಪ್ಯಪದಯುಕ್ತವಾದ ಈಶಾನದಿಕ್ಪಾಲಕನ ಯಶೋವತೀಪಟ್ಟಣವು ಶಿವಭಕ್ತರಿಗಾಶ್ರಯ
ವಾಗಿರುವುದು. ಈ ವಿಷಯವು ಕಾಶಿಕಾಖಂಡದಲ್ಲಿ—“ಅಲಕಾಪಟ್ಟಣದ ಮುಂಭಾಗದಲ್ಲಿ ಈ
ಶಾನ್ಯದಿಕ್ಕಿನಲ್ಲಿ ಇರತಕ್ಕ ಯಶೋವತೀಪಟ್ಟಣದಲ್ಲಿ ತಪೋಧನರೂ, ಶಿವಧ್ಯಾನಯುತರೂ, ಶಿವ
ವ್ರತಾಸಕ್ತರೂ, ಶಿವಪೂಜಾಸಕ್ತರೂ ಆದ ಶಿವಭಕ್ತರು ಯಾವಾಗಲೂ ವಾಸಮಾಡುತ್ತಾರೆ. ಆ
ಪಟ್ಟಣದಲ್ಲಿ ಅಜ, ಏಕಪಾದ ಮೊದಲಾದ ಏಕಾದಶರುದ್ರರು ಇರುತ್ತಾರೆ” ಎಂದು ಹೇಳಲ್ಪ
ಟ್ಟಿದೆ. ಇತ್ಯಾದಿವಾಕ್ಯಗಳಿರುವುದರದೆಸೆಯಿಂದ ಭೂದೇವಿಗೆ ಮಸ್ತಕವಾದ ಈಶಾನದಿಕ್ಕು ಯಾ
ವಾಗಲೂ ರುದ್ರಲಿಂಗಾಶ್ರಯವಾಗಿದೆ. ಅದಂತಿರಲಿ. ಮೃತರಾದ ದೇವತಾವಿಗ್ರಹಪ್ರತಿಷ್ಠೆಯು
ವೀರಶಿಲಾರೂಪದಿಂದ ಪ್ರತಿಷ್ಠೆಯಲ್ಲದೆ ಬೇರೆಯಲ್ಲವು. ಆ ವಿಷಯವು ಮಹಾಭಾರತದಲ್ಲಿ—
“ವೀರಮಾಹೇಶ್ವರನಾದ ದೂರ್ವಾಸಮುನಿಯ ಉಚ್ಛಿಷ್ಟವನ್ನು ವಿಷ್ಣುವು ಪಾದಗಳನ್ನು ಹೊರ

ಪ್ರಾಪ್ತವಾನ್ವಿಷ್ಣುರವ್ಯಯಃ || ಶಬರಸ್ಯ ಶರಾಹತ್ಯಾ ಭಿನ್ನೇ ಪಾದತಲೇ ಹರಿಃ || ಪಾರ್ಥಸ್ಯ ಶಕ್ತಿಮಾದಾಯ ಮಮಾರ ಮುನಿಶಾಪತಃ || ಪ್ರೇತಕಾರ್ಯಂ ಹರೇಃ ಕೃತ್ವಾ ಪಾರ್ಥಃ ಪರಮಧರ್ಮವಿತ್ ||ರಾಮಸ್ಯಚ ತಥಾ ಚಕ್ರೇ ಯಾದವಾನಾಂ ತಥಾ ಪುನಃ'' ಇತ್ಯಾದಿ. ತತ್ತಿಷ್ಠತು, ಆದಿಕೇಶವಸ್ಯ ಶೃಂಖಲಾಬಂಧನವಿಧಿಃ ಶ್ರೂಯತಾಂ, ಶಿವಕ್ಷೇತ್ರೇಷು ಪಶ್ಯ, ಯಜುರ್ವೇದಾರಣ್ಯೇ ತೃತೀಯಪ್ರಶ್ನೇ ಪುರುಷಸೂಕ್ತೇ,-''ದೇವಾಯದ್ಯಜ್ಞಂ ತನ್ವಾನಾಃ|ಅಬಧ್ನನ್ಪುರುಷಂ ಪಶುಂ'' ಇತಿ. ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—'' ಕ್ಷೀರೋದಧ್ಯುತ್ತರೇ ತೀರೇ ಶೇಷತಲ್ಪಂ ಹರಿಂ ದ್ವಿಜಾಃ || ಬದ್ಧ್ವಾ ಶೃಂಖಲಯಾನೀಯ ಬಂಧಿತಂ ಚಕ್ರುರ್ಗಣಾಃ || ಅದ್ಯಾಪಿ ದೃಶ್ಯತೇ ವಿಷ್ಣುರ್ಬದ್ಧೋ ವಿಶ್ವೇಶಸನ್ನಿಧೌ'' ಇತಿ. ಕಾಮಿಕತಂತ್ರೇ,—'' ಸ್ವಯಂಭು ಶಿವಲಿಂಗಂ ತು ವಸೇದ್ಯತ್ರ ಮಹೀತಲೇ || ಸ್ಥಾಪಿತಃ ಕೇಶವಸ್ತತ್ರ ಶೃಂಖಲಾಬಂಧಿತೋ ಬುಧೈಃ'' ಅತಏವ ಗಜಾರಣ್ಯೇ ವೈದ್ಯೇಶ್ವರಾಲಯೇ, ದುರ್ಗಾಕರೇ ರಾಮೇಶ್ವರಾಲಯೇ, ರಾಮೇಶ್ವರೇ ಶೃಂಖಲಾಬಂಧಿತಪುರುಷೋತ್ತಮಸ್ವರೂಪಂ ಪುರು

---

ತು, ಮಿಕ್ಕ ಅಂಗಕ್ಕೆ ಲೇಪನಮಾಡಿದನಾದುದರಿಂದ ಆ ಕ್ಷಣದಲ್ಲೇ ವಜ್ರಕಾಯನಾದನು. ಬೇಡನ ಬಾಣದ ಹೊಡತದಿಂದ ಆ ವಿಷ್ಣುವಿನ ಪಾದತಲವು ಕತ್ತರಿಸಲ್ಪಡಲು ಅರ್ಜುನನ ಶಕ್ತಿಯನ್ನು ತೆಗೆದುಕೊಂಡು ಹಿಂದೆ ಉಂಟಾಗಿದ್ದ ಮುನಿಶಾಪದದೆಸೆಯಿಂದ ಮರಣವನ್ನೈದಿದನು. ಬಳಿಕ ಪರಮಧರ್ಮವನ್ನು ತಿಳಿದ ಅರ್ಜುನನು ಆ ವಿಷ್ಣುವಿನ ಪ್ರೇತಕಾರ್ಯವನ್ನು ಮಾಡಿದನು. ಮತ್ತೂ ಅದರಂತೆ ರಾಮನಿಗೂ, ಯಾದವರಿಗೂ ಪ್ರೇತಕಾರ್ಯವನ್ನು ಮಾಡಿದನು'' ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಆ ವಿಷಯವಿರಲಿ! ಆದಿಕೇಶವನ ಶೃಂಖಲಾಬಂಧನವಿಧಿಯನ್ನು ಕೇಳು; ಮತ್ತೂ ಶಿವಕ್ಷೇತ್ರಗಳಲ್ಲಿ ನೋಡು; ಪುರುಷಸೂಕ್ತದಲ್ಲಿ—''ಬ್ರಹ್ಮಾದಿದೇವತೆಗಳು ಯಾವ ಪುರುಷನನ್ನುದ್ದೇಶಿಸಿ ಯಜ್ಞವನ್ನು ಮಾಡುತ್ತ ವಿಷ್ಣುವನ್ನು ಆ ಯಾಗಕ್ಕೆ ಪಶುವನ್ನಾಗಿ ಶೃಂಖಲೆಯಿಂದ ಕಟ್ಟಿದರೋ ಎಂದು ಹೇಳಲ್ಪಟ್ಟಿದೆ. ಸ್ಕಾಂದದ ಸನತ್ಕುಮಾರಸಂಹಿತೆಯಲ್ಲಿ– ''ಎಲೈ ಬ್ರಹ್ಮರ್ಷಿಗಳಿರಾ! ಅತಿಬಲಪರಾಕ್ರಮಿಯೆಂಬ ರುದ್ರನ ಹುಂಕಾರದಿಂದ ಹುಟ್ಟಿದ ಗಣಗಳು ಕ್ಷೀರಸಮುದ್ರದ ಉತ್ತರದಡದಲ್ಲಿ ಶೇಷಶಾಯಿಯಾಗಿದ್ದ ವಿಷ್ಣುವನ್ನು ನಡುವಿಗೆ ಹಗ್ಗವನ್ನು ಬಿಗಿದು ತಂದು ಶೃಂಖಲೆಯಿಂದ ಕಟ್ಟಿದರು. ಶೃಂಖಲಾಬಂಧಿತವಾದ ವಿಷ್ಣುಮೂರ್ತಿಯು ಈಗಲೂ ಕಾಶಿಯಲ್ಲಿ ವಿಶ್ವೇಶ್ವರಲಿಂಗದ ಹತ್ತಿರದಲ್ಲಿ ಕಾಣಲ್ಪಡುತ್ತಿದೆ'' ಎಂದೂ, ಕಾಮಿಕತಂತ್ರದಲ್ಲಿ – ''ಭೂಲೋಕದಲ್ಲಿ ಸ್ವಯಂಭುಶಿವಲಿಂಗದ ಸನ್ನಿಧಿಯಲ್ಲಿ ಶೃಂಖಲೆಯಿಂದ ಕಟ್ಟಲ್ಪಟ್ಟ ವಿಷ್ಣುಮೂರ್ತಿಯು ವಿದ್ವಾಂಸರಿಂದ ಪ್ರತಿಷ್ಠಿಸಲ್ಪಟ್ಟಿರುವುದು,, ಎಂದೂ ಹೇಳಲ್ಪಟ್ಟಿದೆ. ಈ ಕಾರಣದಿಂದಲೇ ಗಜಾರಣ್ಯ (ತಲಕಾಡು) ದಲ್ಲಿರುವ ವೈದ್ಯೇಶ್ವರಾಲಯದಲ್ಲೂ, ದುರ್ಗಾಕರದ ರಾಮೇಶ್ವರಾಲಯದಲ್ಲೂ, ರಾಮೇಶ್ವರಕ್ಷೇತ್ರದಲ್ಲೂ ಶೃಂಖಲಾಬಂಧಿತನಾಗಿರುವ ವಿಷ್ಣುವಿನ

ಷವರ್ಯೈರದ್ಯಾಪಿ ಪರೀಕ್ಷಿತವ್ಯಂ.

ಚೋ—" ವಿಷ್ಣ್ವರ್ಧಂ ಶಂಕರಸ್ಯಾರ್ಧಂ ಭವೇದ್ಧರಿಹರಾಹ್ವಯಂ" ಇತಿ ಶಿಲ್ಪಶಾಸ್ತ್ರೋಕ್ತವಾಕ್ಯಾತ್, ಶೃಂಖಲಾಬಂಧೋ ಹರಿಹರಯೋಸ್ಸಮೋ ಭವತ್ಯೇವ ಕೋಽತ್ರ ದೋಷಃ ?

ರೇ—ಭೋ ಚೋಳ! ತ್ವದೀಯಶಂಕಾಪರಿಹಾರಸ್ಸಾಧು ಶ್ರೂಯತಾಂ, ಕಾಮಿಕತಂತ್ರೇ,—" ಗುಹಾಸುರವಧಾರ್ಥಂ ತು ತಪಸ್ತಪ್ತ್ವಾ ಹರಿರ್ದೃಢಾ ‖ ಪ್ರಸಾದ್ಯ ಶಂಭುಂ ತದ್ರೂಪಮರ್ಧನಾರೀಶ್ವರಾತ್ಮಕಂ" ಸ್ಕಾಂದೇ ಸನತ್ಕುಮಾರಸಂಹಿತಾಯಾಂ,—" ಹರಿರ್ವೃಷಭರೂಪೇಣ ಬಭಾರ ಶಿರಸಾ ಭುವಂ ‖ ಅರ್ಧನಾರೀಶ್ವರೋ ಭೂತ್ವಾ ಸ ಜಘಾನ ಗುಹಾಸುರಂ" ಇತ್ಯಾದಿಪುರಾಣರಹಸ್ಯವಾಕ್ಯಾರ್ಥೈರೇಕಸ್ಯ ಕೇಶವಸ್ಯ ಬಹುರೂಪಧಾರಿತ್ವವತ್, ಹರಿಹರಸ್ವರೂಪಂ ನಿಶ್ಚಿತವ್ಯಂ. ತದೇವ ಶಂಕರನಾರಾಯಣಾದಿಕ್ಷೇತ್ರೇಷು ಶಿಲ್ಪಿಭಿಃ ಪ್ರತಿಷ್ಠಿತಂ. ವಿಸ್ತರೇಣಾಲಂ. ಹೇ ಚೋಳ! ಹರಿಹರಪತ್ನೀಲಕ್ಷ್ಮ್ಯರ್ಧಪಾರ್ವತ್ಯರ್ಧರೂಪಾ ನಾಸ್ತಿ. ಹರಿಹರಪುತ್ರಃ ಕಾಮಷಣ್ಮುಖಾರ್ಧರೂಪೋ ನಾಸ್ತಿ. ಹರಿಹರಭಕ್ತಃ ಶ್ವೇತಮೃತ್ತಿಕಾರ್ಧಭಸ್ಮಾರ್ಧಧಾರೀ ನಾಸ್ತಿ.

---

ಸ್ವರೂಪವನ್ನು ಪುರುಷಶ್ರೇಷ್ಠರು ಈಗಲೂ ಪರೀಕ್ಷಿಸತಕ್ಕದು.

ಚೋ— "ವಿಷ್ಣುವಿನ ಅರ್ಧಶರೀರವೂ ಶಿವನ ಅರ್ಧಶರೀರವೂ ಸೇರಿ ಹರಿಹರೇಶ್ವರನೆಂಬ ಹೆಸರುಂಟಾಯಿತು" ಎಂದು ಹೇಳತಕ್ಕ ಶಿಲ್ಪಶಾಸ್ತ್ರವಚನವಿರುವುದರದೆಸೆಯಿಂದ ಹರಿಹರರಿಗೆ ಶೃಂಖಲಾಬಂಧವು ಸಮಾನವಾಗಿಯೇ ಇರುತ್ತದೆ. ಈ ವಿಷಯದಲ್ಲಿ ದೋಷವೇನು?

ರೇ— ಎಲೈ ಚೋಳನೇ! ನಿನ್ನ ಶಂಕೆಗೆ ಉತ್ತರವನ್ನು ಲೇಸಾಗಿ ಕೇಳು; ಕಾಮಿಕತಂತ್ರದಲ್ಲಿ— "ವಿಷ್ಣುವು ಗುಹಾಸುರನನ್ನು ಕೊಲ್ಲುವುದಕ್ಕೋಸ್ಕರ ತಪಸ್ಸಿನಿಂದ ಶಿವಾನುಗ್ರಹವನ್ನು ಪಡೆದು ಅರ್ಧನಾರೀಶ್ವರಾತ್ಮಕವಾದ ಆ ಶಿವನಸ್ವರೂಪವನ್ನು ಧರಿಸಿದನು" ಎಂದೂ, ಸನತ್ಕುಮಾರಸಂಹಿತೆಯಲ್ಲಿ— "ವಿಷ್ಣುವು ತ್ರಿಪುರಸಂಹಾರಕಾಲದಲ್ಲಿ ವೃಷಭಾಕಾರನಾಗಿ ಶಿವನಿಗೆ ರಥವಾದ ಭೂಮಿಯನ್ನು ತಲೆಯಮೇಲೆ ಹೊತ್ತನು. ಆ ವಿಷ್ಣುವೇ ಅರ್ಧನಾರೀಶ್ವರನಾಗಿ ಗುಹಾಸುರನನ್ನು ಕೊಂದನು" ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ಪುರಾಣಗಳ ರಹಸ್ಯವಾದ ವಾಕ್ಯಾರ್ಥಗಳಿಂದ ಒಬ್ಬ ವಿಷ್ಣುವಿಗೆ ಅನೇಕರೂಪಗಳಂ ಧರಿಸುವಿಕೆಯುಂಟಾದಂತೆ ಹರಿಹರಸ್ವರೂಪವುಂಟಾಯಿತೆಂದು ನಿಶ್ಚೈಸತಕ್ಕದ್ದು. ಆ ಹರಿಹರಸ್ವರೂಪವೇ ಶಂಕರನಾರಾಯಣಾದಿಕ್ಷೇತ್ರಗಳಲ್ಲಿ ಶಿಲ್ಪಜ್ಞರಿಂದ ಮಾಡಲ್ಪಟ್ಟುದಾಗಿದೆ. ಬಹಳ ಮಾತಿನಿಂದೇನು? ಎಲೈ ಚೋಳನೇ! ಹರಿಹರಪತ್ನಿಯೆಂದರೆ ಲಕ್ಷ್ಮಿಯೂ ಪಾರ್ವತಿಯೂ ಎಂದರ್ಥವಾಗುವುದಿಲ್ಲ. ಹರಿಹರಭಕ್ತನೆಂದರೆ ಶ್ವೇತಮೃತ್ತಿಕೆಯನ್ನು ಧರಿಸಿದ ವೈಷ್ಣವನೂ, ಭಸ್ಮಧಾರಿಯಾದ ಶೈವನೂ ಎಂದರ್ಥವಾಗುವುದಿಲ್ಲ. ಈ ಕಾರಣದಿಂದ 'ಹರಿಶ್ಚ ಹರಶ್ಚ—ಹರಿಹರೌ' ಎಂದು ದ್ವಂದ್ವಸಮಾಸವನ್ನು ಹೇಳದೇ 'ಹರಿಂ-

ಅತಏವ ಹರಿಹರಾವಿತಿ ದ್ವಂದ್ವಸಮಾಸೋ ನ ವಕ್ತವ್ಯಃ. ಹರಿಂ-ಯಮಸಮಾನಂ ಗುಹಾಸುರಂ, ಹರತೀತಿ ಹರಿಹರಪದಸ್ಯ ವಿಗ್ರಹೋ ವಿಜ್ಞೇಯಃ. ವಿಸ್ತರೇಣಾಲಂ.

ಇತಿ ಶಿವಲಿಂಗಾದಿಪ್ರತಿಷ್ಠಾವಿಧಿರ್ದಶಮೋಪದೇಶೇ ಚತುರ್ಥಸ್ಸಂವಾದಃ.

---

ಶ್ರೀಃ.

## ಶಿವಲಿಂಗಪೂಜಾದಿನಿರ್ಣಯಃ.

ಚೋ—ಭೋ ರೇಣುಕಗಣೇಶ! "ಯೋನೇರ್ಲಿಂಗಸ್ಯ ಸಂಯೋಗೇ ರುದ್ರಲಿಂಗಮಿಹೋಚ್ಯತೇ ‖ ತದೇವ ದೃಶ್ಯಂ ಕಿಂ ಸ್ಪೃಶ್ಯಂ ಕಿಂವಾ ಪೂಜ್ಯಂ ಕಿಮುಚ್ಯತಾಂ" ಇತ್ಯಭಿಯುಕ್ತೋಕ್ತೇಃ ಕಿಮುತ್ತರಂ?

ರೇ—ಹೇ ಚೋಳ! ತ್ವತ್ಕೃತಪ್ರಶ್ನಸ್ಯ ಸಮೀಚೀನಃ ಪರಿಹಾರೋಽಸ್ತಿ ಶ್ರೂಯತಾಂ, ಕಾಶ್ಯಪೀಯಶಿಲ್ಪಶಾಸ್ತ್ರೇ,—"ನಾರಾಯಣಮುಖಾಲೇಖಾ ನಿಖಿಲಾಶ್ಶಕ್ತಿಲಿಂಗಜಾಃ‖ಲಿಂಗಂ ಶಕ್ತಿಯುತಂ ಪೂಜ್ಯಂ ಸ್ವಯಂಭುಸ್ಥಾಪಿತಂ ತು ವಾ‖ಸ್ವಯಂಭು ಸೂತ್ರರಹಿತಂ ಸ್ಥಾಪಿತಂ ಬ್ರಹ್ಮಸೂತ್ರಯುಕ್" ಸ್ಕಾಂದೇ ಕಾಳಿಕಾಖಂಡೇ ವ್ಯಾ

---

ಯಮಸಮಾನನಾದ ಗುಹಾಸುರನನ್ನು, ಹರತಿ-ಕೊಲ್ಲುತ್ತಾನೆ. ಈ ರೀತಿಯಾಗಿ ಹರಿಹರಪದಕ್ಕೆ ವಿಗ್ರಹವನ್ನು ಹೇಳತಕ್ಕದ್ದೆಂದು ತಿಳಿಯುವವನಾಗು. ವಿಸ್ತಾರದಿಂದ ಸಾಕು.

ಎಂಬಲ್ಲಿಗೆ ಶಿವಲಿಂಗಾದಿಪ್ರತಿಷ್ಠಾವಿಧಿಯನ್ನು ಹೇಳುವ ಹತ್ತನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.



### ಶಿವಲಿಂಗಪೂಜಾದಿನಿರ್ಣಯವು.

ಚೋ—ಎಲೈ ರೇಣುಕಗಣೇಶನೇ! ಯೋನಿಗೆ ಶಿಶ್ನದ ಸಂಬಂಧವುಂಟಾಗಲು ಅದೇ ರುದ್ರಲಿಂಗವೆಂದು ಹೇಳಲ್ಪಡುತ್ತದೆ. ಅದನ್ನು ನೋಡಬಹುದೇ? ಅದನ್ನು ಮುಟ್ಟಬಹುದೇ? ಪೂಜಿಸಬಹುದೇ? ಹೇಳಲ್ಪಡಲಿ,, ಎಂದಿರುವ ಅಭಿಯುಕ್ತರವಾಕ್ಯಕ್ಕೆ ಉತ್ತರವೇನು?

ರೇ ಎಲೈ ಚೋಳನೇ! ನೀನು ಕೇಳಿದ ಪ್ರಶ್ನೆಗೆ ಲೇಸಾದ ಉತ್ತರವಿರುತ್ತದೆ ಕೇಳು; ಕಾಶ್ಯಪೀಯಶಿಲ್ಪಶಾಸ್ತ್ರದಲ್ಲಿ —,,ಆ ನಾರಾಯಣಾದಿ ಸರ್ವದೇವತೆಗಳು ಶಕ್ತಿವಿಶಿಷ್ಟವಾದ ಲಿಂಗದಲ್ಲೇ ಜನಿಸಿದವರಾಗಿರುತ್ತಾರೆ. ತಾನಾಗಿ ಉದ್ಭವಿಸಿದ ಲಿಂಗವಾದರೂ, ಪ್ರತಿಷ್ಠಿತಲಿಂಗವಾದರೂ ಶಕ್ತಿಸಹಿತವಾಗಿದ್ದರೆ ಪೂಜ್ಯವಾದದ್ದು. ಅವುಗಳಲ್ಲಿ ಸ್ವಯಂಭುಲಿಂಗವು ಬ್ರಹ್ಮಸೂತ್ರವಿಲ್ಲದುದಾಗಿರುತ್ತದೆ. ಪ್ರತಿಷ್ಠಿತಲಿಂಗವು ಬ್ರಹ್ಮಸೂತ್ರವುಳ್ಳುದಾಗಿರುತ್ತದೆ,, ಎಂದುಕ್ತವಾಗಿದೆ.

ಸಾಷ್ಟಕೇ,-ವ್ಯಾಸಃ, ‹‹ ಬ್ರಹ್ಮಾತ್ರಲಿಂಗೇ ಹರಿರತ್ರ ಜಾತಸ್ಸುರಾಸುರಾಶ್ಛೇದಮಿಹಾರ್ಚಯಂತಿ||ತಥಾಪಿ ಮೂಢಾ ನ ವಿಚಾರಯಂತಿ ಕೋ ವಾsಧಿಕೋಽಪ್ಯಸ್ತಿ ಸಮೋ ಹರಸ್ಯ'' ಇತ್ಯಾದಿ. ಸ್ಕಾಂದೇ ಶರಭಾಧ್ಯಾಯೇ,-ನರಹರಿಂ ಪ್ರತಿ ಶರಭರುದ್ರವಾಕ್ಯಂ, ‹‹ ಪ್ರಕೃತಿಸ್ತ್ವಂ ಪುಮಾನ್ರುದ್ರಸ್ತ್ವಯಿ ತದ್ವೀರ್ಯಮಾಹಿತಂ || ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ || ತಲ್ಲಿಂಗಸ್ಯ ತು ಮಾಹಾತ್ಮ್ಯಂ ಯುವಾಂ ದ್ರಷ್ಟುಂ ನಹಿ ಕ್ಷಮೌ'' ಲೈಂಗೋಪರಿಭಾಗೇ,-‹‹ಆಕಾಶಶ್ಶಂಕರೋ ಜ್ಞೇಯಃ ಪೃಥಿವೀ ಶಂಕರಪ್ರಿಯಾ||ಜ್ಞೇಯಂ ಸರ್ವಮುಮಾರೂಪಂ ಜ್ಞಾತ್ವಾ ದೇವಂ ಮಹೇಶ್ವರಂ|| ಯೇ ಯೇ ಪದಾರ್ಥಾ ಲಿಂಗಾಂಕಾಸ್ತೇ ತೇ ಶಿವವಿಭೂತಯಃ ||ಅರ್ಥಾ ಭಗಾಂಕಿತಾ ಯೇ ಯೇ ತೇ ತೇ ಗೌರ್ಯಾ ವಿಭೂತಯಃ || ಪೀಠಾಕೃತಿಮುಮಾಂ ದೇವೀಂ ಲಿಂಗರೂಪಂ ತು ಶಂಕರಂ || ಪ್ರತಿಷ್ಠಾಪ್ಯ ಪ್ರಯತ್ನೇನ ಪೂಜಯಂತಿ ಸುರಾಸುರಾಃ'' ಋಗ್ವೇದೇ,—‹‹ ತವ ಶ್ರಿಯೇ ಮರುತೋ ಮರ್ಜಯಂತ ರುದ್ರಯತ್ತೇ ಜನಿಮ

---

ಸ್ಕಾಂದಾಂತರ್ಗತವಾದ ಕಾಳಿಕಾಖಂಡದಲ್ಲಿರುವ ವ್ಯಾಸಾಷ್ಟಕದಲ್ಲಿ— ‹‹ಈ ಶಿವಲಿಂಗದಲ್ಲಿ ಬ್ರಹ್ಮಾದಿದೇವತೆಗಳೂ ದಾನವರೂ ಜನಿಸಿದವರಾಗಿ ಈ ಲಿಂಗವನ್ನೇ ಪೂಜಿಸುತ್ತಾರೆ. ಹಾಗಾದರೂ ಮೂಢಜನರು ಶಿವನಿಗೆ ಸಮಾನನೂ, ಶಿವನಿಂದಧಿಕನೂ ಯಾವನೂ ಇಲ್ಲವೆಂದು ವಿಚಾರಪೂರ್ವಕವಾಗಿ ತಿಳಿಯತಕ್ಕವರಾಗಿಲ್ಲವು,, ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಸ್ಕಾಂದದಲ್ಲಿರುವ ಶರಭಾಧ್ಯಾಯದಲ್ಲಿ—‹‹ಎಲೈ ನೃಸಿಹ್ಮನೇ! ನೀನು ಪ್ರಕೃತಿಯು, ರುದ್ರನು ಪುರುಷನು ಆಗಿರುವದರಿಂದ ನಿನ್ನಲ್ಲಿ ಆ ರುದ್ರನಿಂದ ವೀರ್ಯವು ಬಿಡಲ್ಪಟ್ಟಿತು. ಆದ್ದರಿಂದಲೇ ನಿನ್ನ ನಾಭಿಕಮಲದೆಸೆಯಿಂದ ಪಂಚಮುಖನಾದ ಬ್ರಹ್ಮನು ಹುಟ್ಟಿದನು. ಆ ಲಿಂಗದ ಮಹಿಮೆಯನ್ನಾದರೋ ಬ್ರಹ್ಮವಿಷ್ಣುಗಳಾದ ನೀವಿಬ್ಬರೂ ನೋಡುವುದಕ್ಕೋಸ್ಕರ ಶಕ್ತರಲ್ಲವೆಂಬಂಶವು ಪ್ರಸಿದ್ಧವಾಗಿಯೇ ಇರುತ್ತದೆ,, ಎಂದು ನರಹರಿಯನ್ನು ಕುರಿತು ಶರಭರುದ್ರನಿಂದ ಹೇಳಲ್ಪಟ್ಟಿದೆ. ಲಿಂಗಪುರಾಣದಲ್ಲಿ—‹‹ಆಕಾಶವು ಶಿವಸ್ವರೂಪವೆಂದು, ಪೃಥಿವಿಯು ಶಕ್ತಿಸ್ವರೂಪವೆಂದು ತಿಳಿಯತಕ್ಕದ್ದು. ಸಮಸ್ತವೂ ಶಿವಶಕ್ತ್ಯಾತ್ಮಕವೆಂದು ತಿಳಿಯಬೇಕು. ಲಿಂಗಾಂಕಿತವಾದ ವಸ್ತುಗಳೆಲ್ಲವೂ ಶಿವಸಂಪದ್ರೂಪಗಳಾಗಿರುತ್ತವೆ. ಭಗಾಂಕಿತವಾದ ವಸ್ತುಗಳೆಲ್ಲವೂ ಶಿವಶಕ್ತಿಯಾದ ಪಾರ್ವತೀದೇವಿಯ ಸಂಪದ್ರೂಪಗಳಾಗಿರುತ್ತವೆ. ಆದ್ದರಿಂದ ದೇವಾಸುರರು ಶಿವಶಕ್ತಿಯಾದ ಉಮೆಯನ್ನು ಪೀಠವನ್ನಾಗಿಯೂ, ಶಿವನನ್ನು ಲಿಂಗರೂಪನನ್ನಾಗಿಯೂ ತಿಳಿದು ಪ್ರಯತ್ನಪೂರ್ವಕವಾಗಿ ಲಿಂಗವನ್ನು ಪ್ರತಿಷ್ಠಿಸಿ ಪೂಜಿಸುತ್ತಾರೆ,, ಎಂದು ಹೇಳಲ್ಪಟ್ಟಿದೆ. ಋಗ್ವೇದದಲ್ಲಿ—‹‹ಎಲೈ ರುದ್ರನೇ! ನಿನ್ನ ಸಂಬಂಧಿಯಾದ ಮನೋಹರವಾದ ಸ್ಫಟಿಕಾದಿಭೇದದಿಂದ ನಾನಾರೂಪಗಳುಳ್ಳ ಶಿವಲಿಂಗವು ಯಾವುದಿರುತ್ತದೆಯೋ, ಆ ಲಿಂಗವನ್ನು ನಿನ್ನ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯು

ಚಾರು ಚಿತ್ರಂ'' ಇತಿ. ತದೇವಾಹ ನೈರುಕ್ತಃ,—'' ಹೇ ರುದ್ರ ಪರಮೇಶಾನ ಚಾರು ಅತ್ಯಂತಶೋಭನಂ || ತಥಾ ಚಿತ್ರಂ ಚಾಯನೀಯಂ ಪೂಜನೀಯಮಿತಿ ಸ್ಮೃತಂ|| ಯತ್ತೇ ಜನಿಮಲಿಂಗಂ ಯತ್ತ್ವತನ್ಮರುತಸ್ಸುರಾಃ || ವಿಷ್ಣ್ವಾದಯಶ್ಶ್ರಿಯೇ ಸ್ವಸ್ವಪದಪ್ರಾಪ್ತ್ಯರ್ಥಮಾದರಾತ್ || ಮರ್ದಯಂತ ಸ್ವೀಯಹಸ್ತಸ್ಪರ್ಶಪೂರ್ವಂ ಯಜಂತಿ ಹಿ'' ಮಾನವಪುರಾಣೇ,-ಮನುಃ, ''ಯೇ ವೇದತ್ರಯಸಂಸಿದ್ಧಶ್ರೇಷ್ಠಭಸ್ಮಾವಕುಂಠಿತಾಃ || ತ್ರಿಪುಂಡ್ರಧಾರಿಣಸ್ತದ್ವತ್ಸದಾ ರುದ್ರಾಕ್ಷಧಾರಿಣಃ || ರೌದ್ರಂ ಲಿಂಗಂ ಶ್ರಿಯೇ ಸ್ವೀಯಂ ಮರುತೋ ಮರ್ದಯಂತಿ ತೇ'' ಪರಾಶರಪುರಾಣೇ,—''ರೌದ್ರಂ ಲಿಂಗಂ ಮಹಾವಿಷ್ಣುರ್ಜನಿಮಾಖ್ಯಂ ಶಿಲಾಮಯಂ || ಚಾರು ಚಿತ್ರಂ ಸಮಭ್ಯರ್ಚ್ಯ ಪ್ರಾಪ್ತವಾನ್ಪರಮಂ ಪದಂ || ಸಾ ಚ ಲಕ್ಷ್ಮೀಸ್ಸಮಾಖ್ಯಾತಾ ಮಹಾವಿಷ್ಣೋಸ್ತು ವಲ್ಲಭಾ || ರೌದ್ರಂ ಲಿಂಗಂ ಸಮಭ್ಯರ್ಚ್ಯ ಸಂಪೂಜ್ಯಾಸ್ಸರ್ವಚೇತನೈಃ'' ಇತ್ಯಾದಿಪ್ರಸಿದ್ಧಂ. ಕಿಂಚ ಹೇ ಚೋಳ ! ಸ್ವಕೀಯಶಕ್ತಿಪೀಠಯುಕ್ತಂ ರೌದ್ರಲಿಂಗಂ ತು ನಾರಾಯಣಾದಿದೇವೈರ್ವ್ಯಾಸಾದಿಮಹರ್ಷಿಭಿಸ್ಸದಾ ಪೂಜ್ಯಮೇವ. ತಚ್ಛಕ್ತಿಪೀಠಾಜ್ಜಾಯಮಾನನಾರಾಯಣಾದಿದೇವಾಃ ತಚ್ಛಕ್ತಿಪೀಠಾಶ್ಚ ಪೂಜ್ಯಾ ಏವ.

---

ಙ್ಯ ಪದವನ್ನು ಹೊಂದುವುದಕ್ಕೋಸ್ಕರ ದೇವತೆಗಳು ಪೂಜಿಸಿದರು' ಎಂದು ಹೇಳಲ್ಪಟ್ಟಿದೆ. ಅದೇ ಅರ್ಥವನ್ನು ನಿರುಕ್ತಕಾರನು ''ಹೇ ರುದ್ರ ಪರಮೇಶಾನ,, ಇತ್ಯಾದಿವಾಕ್ಯಗಳಿಂದ ಸ್ಪಷ್ಟವಾಗಿ ಹೇಳಿರುತ್ತಾನೆ. ಮಾನವಪುರಾಣದಲ್ಲಿ—''ದೇವತೆಗಳು ಮೂರುವೇದಗಳಲ್ಲೂ ಪ್ರತಿಪಾದಿತವಾಗಿರುವ ಪರಿಶುದ್ಧವಾದ ಭಸ್ಮದಿಂದ ಸ್ನಾನೋದ್ಧೂಳನವನ್ನು ಹೊಂದಿ ತ್ರಿಪುಂಡ್ರಧಾರಿಗಳೂ ರುದ್ರಾಕ್ಷಧಾರಿಗಳೂ ಆಗಿ, ಯಾವಾಗಲೂ ತಾವು ಧರಿಸಿರುವ ಶಿವಲಿಂಗವನ್ನು ಸಂಪತ್ತನ್ನು ಹೊಂದುವುದಕ್ಕಾಗಿ ತಮ್ಮ ಕೈಯಿಂದ ಪೂಜಿಸುತ್ತಾರೆ'' ಎಂದೂ, ಪಾರಾಶರಪುರಾಣದಲ್ಲಿ— ''ಶ್ರೇಷ್ಠನಾದ ವಿಷ್ಣುವು 'ಜನಿಮ, ಎಂಬ ಹೆಸರನ್ನು ಹೊಂದಿದುದೂ, ಮನೋಹರವೂ, ಸ್ಫಟಿಕಾದಿಭೇದದಿಂದ ನಾನಾರೂಪಗಳುಳ್ಳುದೂ, ಶಿಲಾಮಯವೂ ಆದ ಶಿವಲಿಂಗವನ್ನು ವಿಧ್ಯನುಸಾರವಾಗಿ ಪೂಜಿಸಿ ಶ್ರೇಷ್ಠವಾದ ಪರಮಪದವನ್ನು ಹೊಂದಿದನು. ಮತ್ತೂ ವಿಷ್ಣುಪತ್ನಿಯೆಂದು ಪ್ರಸಿದ್ಧಳಾದ ಲಕ್ಷ್ಮೀದೇವಿಯು ಶಿವಲಿಂಗವನ್ನು ಪೂಜಿಸಿ ಸರ್ವರಿಂದಲೂ ಪೂಜ್ಯಳಾದಳು,, ಎಂದೂ ಹೇಳಲ್ಪಟ್ಟಿದೆ. ಇತ್ಯಾದ್ಯನೇಕಪ್ರಮಾಣವಚನಗಳಿಂದ ಲಿಂಗಪೂಜೆಯು ಅವಶ್ಯಕರ್ತವ್ಯವೆಂದು ಸಿದ್ಧವಾಗುತ್ತದೆ. ಮತ್ತಮೆಲೈ ಚೋಳನೇ! ತನ್ನ ಶಕ್ತಿಪೀಠಗಳಿಂದ ಕೂಡಿದ ಶಿವಲಿಂಗವು ವಿಷ್ಣ್ವಾದಿದೇವತೆಗಳಿಂದಲೂ, ವ್ಯಾಸಾದಿಮಹರ್ಷಿಗಳಿಂದಲೂ ನಿರಂತರವೂ ಪೂಜಿಸಿಕೊಳ್ಳಲು ಯೋಗ್ಯವೇ ಆಗಿರುವುದು. ಆ ಶಿವಶಕ್ತಿಪೀಠಗಳಿಂದುದ್ಭವಿಸಿದ ವಿಷ್ಣ್ವಾದಿದೇವತೆಗಳೂ, ಆ ಶಿವಶಕ್ತಿಪೀಠಗಳೂ ಪೂಜ್ಯಗಳೇ ಆಗಿರುತ್ತವೆ.

ಚೋ—ಹೇ ರೇಣುಕಗಣೇಶ ! ಭವದೀಯವೀರಶೈವೈರೇತದ್ರುದ್ರಲಿಂಗಮಾರಾಧ್ಯತೇ ಕಿಂ ?

ರೇ—ಹೇ ಚೋಳ ! ವೀರಶೈವೈಃ ಪೂಜ್ಯಮಿಷ್ಟಲಿಂಗಸ್ವರೂಪಂ ಶ್ರೂಯತಾಂ ಅಥರ್ವಶಿರಸಿ,—“ ಇಷ್ಟಮೂರ್ಜಂ ತಪಸಾಽನುಯಚ್ಛತಿ ” ವಾತುಲತಂತ್ರೇ,— “ ಸಕಲಂ ದೃಕ್ಕಲಾಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್ ॥ ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟಪರಿಹಾರಕಂ॥ ಇಷ್ಟಮೂರ್ಜಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ ॥ ಇಷ್ಟಲಿಂಗಮಿತಿ ಪ್ರಾಹ ತಸ್ಮಾದಾಥರ್ವಣೀ ಶ್ರುತಿಃ ” ವೀರತಂತ್ರೇ,—“ ಜ್ಞಾನಶಕ್ತ್ಯಾತ್ಮಕಂ ಲಿಂಗಮಿಷ್ಟಂ ಯೋಗಿಭಿರರ್ಚ್ಯತೇ ” ಸ್ಕಾಂದೇ ಶಾಂಕರಸಂಹಿತಾಯಾಂ ಶಿವಷಣ್ಮುಖಸಂವಾದೇ,—ಶಿವಃ, “ ಯೋ ಹಸ್ತಪೀಠೇ ನಿಜಲಿಂಗಮಿಷ್ಟಂ ವಿನ್ಯಸ್ಯ ತಲ್ಲೀನಮನಃಪ್ರಚಾರಃ ॥ ಬಾಹ್ಯಕ್ರಿಯಾಸಂಕುಲನಿಸ್ಪೃಹಾತ್ಮಾ ಸಂಪೂಜಯತ್ಯಂಗ ಸ ವೀರಶೈವಃ ” ಇತ್ಯಾದಿಪ್ರಸಿದ್ಧಂ. ಹೇ ಚೋಳ ! ದೋಷಾಪವಾದವಿರಹಿತಮನ್ಮತಸ್ಯ ಪ್ರಸಂಗಸ್ತೇ ಮಾಸ್ತು. ಶಿವಲಿಂಗಯುಕ್ತಕಾಶ್ಯಾದಿಶಿವಕ್ಷೇತ್ರಾ

---

ಚೋ —ನಿನ್ನ ಸಂಬಂಧಿಗಳಾಗಿರುವ ವೀರಶೈವರು ಈ ಶಿವಲಿಂಗವನ್ನು ಪೂಜಿಸುತ್ತಿರುವರೇ ಏನು?

ರೇ —ಎಲೈ ಚೋಳನೇ! ವೀರಶೈವರಿಂದ ಪೂಜ್ಯವಾದ ಇಷ್ಟಲಿಂಗದ ಸ್ವರೂಪವನ್ನು ಕೇಳು; ಅಥರ್ವಶಿರಸ್ಸಿನಲ್ಲಿ—“ಇಷ್ಟಮೂರ್ಜಂ ತಪಸಾನುಯಚ್ಛತಿ„ ಎಂದೂ, ಆ ಅರ್ಥವೇ ವಾತುಲತಂತ್ರದಲ್ಲಿ —“ಸಕಲವಾದುದರಿಂದ ನೇತ್ರೇಂದ್ರಿಯಕ್ಕೆ ಗೋಚರವೂ, ಶ್ರೇಷ್ಠವೂ ಆದ ಇಷ್ಟಲಿಂಗವು ತನ್ನನ್ನು ತಪಃಕರ್ಮಾದಿಗಳಿಂದಾರಾಧಿಸತಕ್ಕವರಿಗೆ ಅನಿಷ್ಟ ಪರಿಹಾರಪೂರ್ವಕವಾಗಿ ಇಷ್ಟಾರ್ಥಗಳನ್ನೀಯುವುದರಿಂದ ಇದನ್ನು ಇಷ್ಟಲಿಂಗವೆಂದು ಅಥರ್ವಣಶ್ರುತಿಯು ಹೇಳುತ್ತಿದೆ,, ಎಂದೂ, ವೀರತಂತ್ರದಲ್ಲಿ —“ಜ್ಞಾನಶಕ್ತ್ಯಾತ್ಮಕವಾದ ಲಿಂಗವು ಇಷ್ಟಲಿಂಗರೂಪವನ್ನು ಹೊಂದಿ, ಯೋಗಿಗಳಿಂದ ಪೂಜಿಸಲ್ಪಡುತ್ತದೆ,, ಎಂದೂ ಉಕ್ತವಾಗಿದೆ. ಸ್ಕಾಂದದಲ್ಲಿರುವ ಶಾಂಕರಸಂಹಿತೆಯಲ್ಲಿ ಶಿವಷಣ್ಮುಖಸಂವಾದದಲ್ಲಿ—“ಎಲೈ ಷಣ್ಮುಖನೇ ! ತನ್ನ ಗುರುವಿನಿಂದ ತನಗೆ ದೀಕ್ಷಾಪೂರ್ವಕವಾಗಿ ಕೊಡಲ್ಪಟ್ಟ ಇಷ್ಟಲಿಂಗವನ್ನು ತನ್ನ ವಾಮಹಸ್ತವೆಂಬ ಪೀಠದಲ್ಲಿರಿಸಿ ಆ ಲಿಂಗದಲ್ಲೇ ಚಿತ್ತವನ್ನು ಸ್ಥಿರವಾಗಿಟ್ಟು ಪಶುಹಿಂಸಾಪ್ರಧಾನವಾಗುಳ್ಳ ಜ್ಯೋತಿಷ್ಟೋಮಾದಿರೂಪವಾದ ಬಾಹ್ಯಕ್ರಿಯೆಗಳೆಂಬ ಪಶುಕರ್ಮಗಳಲ್ಲಿ ಆಸೆಯಿಲ್ಲದವನಾಗಿ ಪೂಜಿಸತಕ್ಕವನೇ ವೀರಶೈವನು,, ಎಂದು ಶಿವನಿಂದ ನಿರೂಪಿತವಾಗಿದೆ. ಇತ್ಯಾದಿ ವಚನಪ್ರಮಾಣಗಳಿಂದ ವೀರಶೈವರಿಂದ ಪೂಜಿಸಲ್ಪಡತಕ್ಕ ಇಷ್ಟಲಿಂಗದ ಸ್ವರೂಪವು ಪ್ರಸಿದ್ಧವಾಗಿದೆ. ಎಲೈ ಚೋಳನೇ! ದೋಷಾಪವಾದಗಳಿಲ್ಲದಿರುವ ನನ್ನ ಮತದ ಪ್ರಸಂಗವು ನಿನಗೆ ಬೇಡ. ಶಿವಲಿಂಗದಿಂದ ಕೂಡಿದ ಕಾಶಿ ಮೊದಲಾದ ಕ್ಷೇತ್ರಗಳ ಮಾಹಾತ್ಮ್ಯವು ಸಕಲ ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದನ್ನು ಕೇಳು;

ನಾಂ ಮಾಹಾತ್ಮ್ಯಂ ಸರ್ವಪುರಾಣಪ್ರಸಿದ್ಧಂ. ಶೃಣು; ಮಾನವಪುರಾಣೇ,—" ತತ್ರ ತತ್ರ ಮಹೇಶಸ್ಯ ವೈಭವಂ ಪರಮಂ ಬುಧಾಃ || ತದೀಯಾಸ್ಸಕಲಾ ದೇಶಾ ವಿಶಿಷ್ಟಾಸ್ಸೈವ ಸಂಶಯಃ" ಕಾಶೀಕಾಖಂಡೇ,—" ಕಾಶೀಪುರೇ ಸಂತ್ಯಜತಾಂ ಶರೀರಂ ಶರೀರಿಣಾಂ ನಾಸ್ತಿ ಪುನಶ್ಶರೀರಂ || ತೇಷಾಂ ತು ಕಂಠೇ ಗರಳಂ ಲಲಾಟೇ ತ್ರಿಲೋಚನಂ ಚಂದ್ರಕಳಾ ಚ ಮೌಳೌ" ಇತ್ಯಾದಿಭಿಃ ಶಿವಲಿಂಗಯುಕ್ತಪುಣ್ಯಕ್ಷೇತ್ರಮಹತ್ವಂ ವಿಜ್ಞೇಯಂ, ತತ್ತಾವದಾಸ್ತಾಂ. ಪುರಾ ತಾರಕಾಸುರಪೀಡಿತಾ ನಾರಾಯಣಾದಿದೇವಾ ರುದ್ರವೀರ್ಯಪಾನತತ್ಪರಾ ಏವ. ತದುಕ್ತಮಾದಿತ್ಯಪುರಾಣೇ ಮಾನವೀಯಸಂಹಿತಾಯಾಂ,--ತಾರಕಾಸುರವಾಕ್ಯಂ, " ಯೋಽಸೌ ದೇವಾಧಿದೇವೇಶಃ ಕಪರ್ದೀ ನೀಲಲೋಹಿತಃ || ತಸ್ಯ ರೇತಸ್ಸುರಾಃ ಪೀತ್ವಾ ಸಗರ್ಭಾ ವಿಷ್ಣುನಾ ಸಹ" ಕಿಂಚ ತತ್ರೈವ ಪ್ರದೇಶಾಂತರೇ,—" ಪ್ರಸಾರ್ಯ ಸ್ವಾಂಜಲಿಂ ಶಂಭುಂ ರೇತೋ ಮುಂಚೇತಿ ಸೋಽಬ್ರವೀತ್ || ದೇವದೇವಾಮೃತಂ ದಿವ್ಯಂ ಹಸ್ತಾಭ್ಯಾಂ ಮಮ ಶಂಕರ || ಶೀಘ್ರಮೇವ ಪ್ರಯುಚ್ಛ ತ್ವಂ ಪಿಬಂತು ಸುರಪುಂಗವಾಃ || ತತೋ ಲಿಂಗಾದ್ವಿನಿಷ್ಕ್ರಾಂತಂ ಚಂದ್ರಬಿಂಬಾತ್ಸುನಿರ್ಮಲಂ ||ಜಾತಿನೀಲೋತ್ಪಲಾಮೋದಂ

---

ಮಾನವಪುರಾಣದಲ್ಲಿ— "ಎಲೈ ಪಂಡಿತರೇ! ಶಿವನ ಉತ್ಕೃಷ್ಟವಾದ ವ್ಯಾಪಕತೆಯಂತಿರಲಿ! ಸಕಲಸ್ಥಾನಗಳು ಅವನ ಸಂಬಂಧಿಗಳೂ ಅವನಿಂದ ಕೂಡಿದವುಗಳೂ ಆಗಿರುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲವು," ಎಂದೂ, ಕಾಶೀಕಾಖಂಡದಲ್ಲಿ "ಕಾಶೀಪಟ್ಟಣದಲ್ಲಿ ದೇಹವನ್ನು ತ್ಯಜಿಸತಕ್ಕ ಜೀವರಿಗೆ ಪುನಃ ದೇಹವುಂಟಾಗುವುದಿಲ್ಲವು. ಮತ್ತೇನೆಂದರೆ ಅವರು ನೀಲಕಂಠರೂ, ತ್ರಿನೇತ್ರರೂ, ಚಂದ್ರಕಲಾಧಾರಿಗಳೂ ಆಗುವರು," ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ಶಿವಲಿಂಗದಿಂದ ಕೂಡಿದ ಪುಣ್ಯಕ್ಷೇತ್ರಗಳ ಮಹತ್ವವು ತಿಳಿಯತಕ್ಕದ್ದು. ಅದಂತಿರಲಿ! ಪೂರ್ವಕಾಲದಲ್ಲಿ ತಾರಕಾಸುರನಿಂದ ಹಿಂಸಿಸಲ್ಪಟ್ಟ ದೇವತೆಗಳು ವಿಷ್ಣುವಿನಿಂದ ಕೂಡಿದವರಾಗಿ ಆದಿರುದ್ರನಾದ ಶಿವನ ವೀರ್ಯವನ್ನು ಪಾನಮಾಡಿದರೆಂಬ ವಿಷಯವು ಆದಿತ್ಯಪುರಾಣದಲ್ಲಿರುವ ಮಾನವೀಯಸಂಹಿತೆಯಲ್ಲಿ —"ದೇವಾಧಿದೇವನೂ, ಜಡೆ ಮುಡಿಯುಳ್ಳವನೂ, ಕಾಲಕೂಟವಿಷವನ್ನು ಧರಿಸಿದುದರಿಂದ ಕಪ್ಪಾದ ಕಂಠವುಳ್ಳವನೂ ಆದ ಶಿವನ ರೇತಸ್ಸನ್ನು ದೇವತೆಗಳು ವಿಷ್ಣುಸಹಿತರಾಗಿ ಸೇವಿಸಿ ಗರ್ಭಧಾರಿಗಳಾದರು," ಎಂದು ತಾರಕಾಸುರನಿಂದ ಹೇಳಲ್ಪಟ್ಟದೆ ಮತ್ತೂ ಆ ಪುರಾಣದಲ್ಲಿ ಬೇರೊಂದು ಸ್ಥಳದಲ್ಲಿ —"ದೇವತೆಗಳಿಗೋಸ್ಕರ ಅಗ್ನಿಯಿಂದ ಪ್ರಾರ್ಥಿಸಲ್ಪಟ್ಟ ಪರಮೇಶ್ವರನು ಅಗ್ನಿಯ ಹಸ್ತಗಳಲ್ಲಿ ವೀರ್ಯದಾನವನ್ನು ಮಾಡಿದನು. ಆ ರೇತಸ್ಸನ್ನು ಅಗ್ನಿಯೂ ವಿಷ್ಣು ಮೊದಲಾದವರೂ ಸೇವಿಸಿದರು," ಎಂದು ಹೇಳಲ್ಪಟ್ಟಿದೆ. ಈ ರೀತಿಯಾಗಿ ಶಿವನ ವೀರ್ಯವನ್ನು ಸೇವಿಸುವುದರಲ್ಲಾಸಕ್ತರಾದ ವಿಷ್ಣ್ವಾದಿದೇವತೆಗಳು ಶಿವಲಿಂಗಪೂಜಕರೆಂದು

ಪಾಣೌ ವಹ್ನೇರ್ದದೌ ಶಿವಃ || ಪಪೌ ವಹ್ನಿಸ್ತತಶ್ಶುಕ್ಲಂ ಜ್ವಲತ್ತದ್ಭಾಸ್ಕರಪ್ರಭಂ ||
ಅಥ ಪೀತೇ ತದಾ ಶುಕ್ಲೇ ವಹ್ನಿನಾ ಮುನಿಪುಂಗವಾಃ || ರೇತಃ ಪಾನೇನ ಸಂತಪ್ತಾ
ದೇವಾನ್ವಿಷ್ಣುಪುರೋಗಮಾನ್ || ವಿಸೃಜ್ಯ ತಾನ್ಸ ಭಗವಾಂಸ್ತತ್ರೈವಾಂತರಧೀಯ
ತ" ಇತ್ಥಂ ರುದ್ರವೀರ್ಯಪಾನತತ್ಪರಾ ವಿಷ್ಣ್ವಾದಯಃ ರುದ್ರಲಿಂಗಪೂಜಕಾ ಇತಿ ಕಿ
ಮು ವಕ್ತವ್ಯಂ? ಇತ್ಥಂ ಲೈಂಗೇಪಿ ಪ್ರಸಿದ್ಧಂ. ತತಶ್ಚ ತ್ವದಾಸ್ತಾಂ. "ಭಿಷಕ್ತ
ಮಂ ತ್ವಾ ಭಿಷಜಾಂ ಶೃಣೋಮಿ" ಇತಿ ಋಗ್ವೇದವಾಕ್ಯಾತ್, "ಯಾ ತೇ ರು
ದ್ರ ಶಿವಾ ತನೂಶ್ಶಿವಾ ವಿಶ್ವಾಹ ಭೇಷಜೀ ಶಿವಾರುದ್ರಸ್ಯ ಭೇಷಜೀ ತಯಾ ನೋ
ಮೃಡ ಜೀವಸೇ" ಇತಿ ಯಜುರ್ವೇದವಾಕ್ಯಾತ್, ರುದ್ರ ಏಕಏವ ಭವರೋಗವೈ
ದ್ಯಃ, ರುದ್ರಬೀಜಮೇಕಮೇವ ಸಕಲದೇಹಿದೇಹಲೋಕಗತಸರ್ವದೋಷನಿವಾರಕಮ
ಹೌಷಧಮಿತಿ ಪ್ರಸಿದ್ಧಂ. ವೈದ್ಯಶಾಸ್ತ್ರೇ ಶಿವಪಾದೋದಕಮಹತ್ವಮಪಿ ಶ್ರೂಯತಾಂ,
"ನಿರ್ಮಾಲ್ಯಸಲಿಲಂ ಪ್ರಾಶ್ಯ ದೇವದೇವಸ್ಯ ಶೂಲಿನಃ || ಕ್ಷಯಾಪಸ್ಮಾರಕುಷ್ಠಾ
ದ್ಯೈರ್ಮುಚ್ಯತೇ ಕಿಲ್ಬಿಷೈರಪಿ" ಇತ್ಯಾದಿಪ್ರಸಿದ್ಧಂ.

---

ಹೇಳತಕ್ಕದ್ದೇನಿದೆ? ಈ ರೀತಿಯಾಗಿ ಲಿಂಗಪುರಾಣದಲ್ಲೂ ಪ್ರಸಿದ್ಧವಾಗಿದೆ. ಆ ವಿಷಯವಂತಿರಲಿ! ಎಲೈ ಶಿವನೇ! ನಿನ್ನನ್ನು ವೈದ್ಯರೊಳಗೆ ಶ್ರೇಷ್ಠನಾದ ವೈದ್ಯನನ್ನಾಗಿ ಕೇಳುತ್ತೇನೆ, ಎಂದು ಋಗ್ವೇದವಾಕ್ಯವು ಹೇಳುತ್ತಿರುವುದರಿಂದಲೂ, ಎಲೈ ಪರಮೇಶ್ವರನೇ! ನಿನ್ನ ಯಾವ ಇಷ್ಟಲಿಂಗರೂಪವಾದ ದೇಹವುಂಟೋ, ಆ ದೇಹವು ಸರ್ವಮಂಗಳೆಯೊಡನೆ ಕೂಡಿರುವುದರಿಂದ ಮಾಂಗಲ್ಯವುಳ್ಳದ್ದು. ಎಲೈ ಪರಮೇಶ್ವರನೇ! ನಿನ್ನ ಪ್ರಾಣಲಿಂಗರೂಪವಾದ ಆವದೇಹವುಂಟೋ ಅದು ಮಾಂಗಲ್ಯವುಳ್ಳದಾಗಿ, ರುದ್ರಶಬ್ದವಾಚ್ಯವಾದ ಮಾಹೇಶ್ವರಜ್ವರಕ್ಕೆ ಔಷಧವಾಗಿರುವುದು. ಎಲೈ ಪರಮೇಶ್ವರನೇ! ನಿನ್ನ ಭಾವಲಿಂಗರೂಪವಾದ ಯಾವ ದೇಹವುಂಟೋ, ಅದು ಮಾಂಗಲ್ಯವುಳ್ಳದಾಗಿ ಸಮಸ್ತ ಮಾಯಾಪ್ರಪಂಚರೂಪವಾದ ಭವರೋಗವನ್ನು ಸಂಹರಿಸುವುದಕ್ಕೆ ಔಷಧವಾಗಿರುವುದು. ಎಲೈ ಮೃಡಶಬ್ದವಾಚ್ಯನಾದ ಶಿವನೇ! ನಿನ್ನ ಆ ತನುತ್ರಯವಾದ ಲಿಂಗತ್ರಯಗಳನ್ನು ಪೂಜಿಸುವ ನಮ್ಮ ಅಂಗತ್ರಯವನ್ನು ರಕ್ಷಿಸು, ಎಂದು ಯಜುರ್ವೇದವಾಕ್ಯವು ಹೇಳುತ್ತಿರುವುದರಿಂದಲೂ ಆದಿರುದ್ರನಾದ ಶಿವನೇ ಭವರೋಗನಿವಾರಕನಾದ ವೈದ್ಯನಾಗಿರುತ್ತಾನೆ. ಆ ರುದ್ರನ ವೀರ್ಯವೊಂದೇ ಸಕಲಜೀವರ ದೇಹಗಳನ್ನೂ ಸಕಲಲೋಕಗಳನ್ನೂ ಹೊಂದಿದ ಸಕಲ ದೋಷಗಳನ್ನು ನಿವಾರಿಸುವುದರಲ್ಲಿ ಮಹೌಷಧವೆಂದು ಪ್ರಸಿದ್ಧವಾಗಿದೆ. ವೈದ್ಯಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಶಿವಪಾದೋದಕಮಹತ್ವವನ್ನು ಕೂಡ ಕೇಳು; "ಶಿವಪಾದೋದಕವನ್ನು ಸ್ವೀಕರಿಸಿದವನು ಕ್ಷಯಾಪಸ್ಮಾರಕುಷ್ಠಾದಿರೋಗಗಳಿಂದಲೂ, ಪಾಪಗಳಿಂದಲೂ ಬಿಡಲ್ಪಡುತ್ತಾನೆ" ಇತ್ಯಾದಿವಚನಗಳು ಪ್ರಸಿದ್ಧವಾಗಿವೆ.

ಇತಿ ಶಿವಲಿಂಗಪೂಜಾದಿನಿರ್ಣಯೋ ದಶಮೋಪದೇಶೇ ಪಂಚಮಸ್ಸಂವಾದಃ.

ಶ್ರೀಃ.

## ರುದ್ರಸ್ಯಾಷ್ಟಮೂರ್ತಿಸ್ವರೂಪವಿಧಿಃ.

ರೇ—ಹೇ ಚೋಳ! ಲೋಕೇ ಸರ್ವದರ್ಶನಾಧಿದೇವಾಸ್ತದ್ಭಕ್ತಾಶ್ಚ ಶಕ್ತಿವಿಶಿಷ್ಟರುದ್ರಮೂರ್ತಿ ಸಂಭವಾಏವ, ಅಸ್ಮಾಭಿಃ ಪೂರ್ವಮುದಾಹೃತಂ "ಮಾಯಾಂ ತು ಪ್ರಕೃತಿಂ ವಿಂದ್ಯಾತ್" ಇತಿ ಶ್ರುತಿವಚನಮತ್ರಾಪಿ ಯೋಜನೀಯಂ, ತಸ್ಮಿನ್ನರ್ಥೇ ಲಿಂಗಪುರಾಣೇ,—"ಭೂಮ್ಯಂಬ್ವಗ್ನಿಮರುದ್ವ್ಯೋಮ ಭಾಸ್ಕರೋ ದೀಕ್ಷಿತಶ್ಶಶೀ॥ ಭವಸ್ಯ ಮೂರ್ತಯಃ ಪ್ರೋಕ್ತಾಶ್ಶಿವಸ್ಯ ಪರಮಾತ್ಮನಃ॥ ಶಂಭೋರ್ವಿಶ್ವಂಭರಾ ಮೂರ್ತಿರ್ಬ್ರಹ್ಮಾದ್ಯಖಿಲಧಾರಿಣೀ॥ಪರಾಪರಾಣಾಂ ಭೂತಾನಾಂ ಸರ್ವೇಷಾಂ ಧಾರಣೋದ್ಯತಾ॥ ಸಂಜೀವನೀ ಸಮಸ್ತಾನಾಂ ಭೂತಾನಾಮೇವ ಪಾವನೀ॥ ಅಂಬಿಕಾಪ್ರಾಣನಾಥಸ್ಯ ಮೂರ್ತಿರಂಬುಮಯೀ ಪರಾ॥ ಸರ್ವದೇವಮಯೀ ಶಂಭೋಃ ಶ್ರೇಷ್ಠಾ ಚಾಗ್ನಿಮಯೀ ತನೂಃ॥ವದಂತಿ ವೇದಶಾಸ್ತ್ರಜ್ಞಾ ಯಜಂತಿ ಚ ಯಥಾ

---

ಎಂಬಲ್ಲಿಗೆ ಶಿವಲಿಂಗಪೂಜಾದಿನಿರ್ಣಯವನ್ನು ಹೇಳುವ ಹತ್ತನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.

## ರುದ್ರನ ಅಷ್ಟಮೂರ್ತಿಸ್ವರೂಪವಿಧಿಯು.

ರೇ—ಎಲೈ ಚೋಳನೇ! ಲೋಕದಲ್ಲಿರುವ ಸಮಸ್ತದರ್ಶನಗಳ ಅಧಿದೇವತೆಗಳೂ, ಆ ಅಧಿದೇವತೆಗಳ ಭಕ್ತರೂ ಶಕ್ತಿವಿಶಿಷ್ಟನಾದ ಆದಿರುದ್ರನ ಶರೀರದಿಂದಲೇ ಹುಟ್ಟಿದವರಾಗಿರುತ್ತಾರೆಂಬ ವಿಷಯಕ್ಕೆ ಸಾಧಕವಾಗಿರುವ ನಮ್ಮಿಂದ ಮೊದಲು ಉದಾಹರಿಸಲ್ಪಟ್ಟಿರುವ "ಮಾಯಾಂ ತು ಪ್ರಕೃತಿಂ ವಿಂದ್ಯಾತ್", ಎಂಬ ಶ್ರುತಿವಚನವನ್ನು ಇಲ್ಲಿಯೂ ಯೋಜನೆಯಂ ಮಾಡಿಕೊಳ್ಳಬೇಕು. ಆ ಶ್ರುತ್ಯರ್ಥವಿಷಯದಲ್ಲಿ ಲಿಂಗಪುರಾಣದಲ್ಲಿ—"ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮರು ಭವಶಬ್ದವಾಚ್ಯನಾದ ಪರಮಾತ್ಮನಾದ ಶಿವನ ಶರೀರಗಳಾಗಿರುತ್ತವೆಯೆಂದು ಹೇಳಲ್ಪಟ್ಟಿದೆ. ಶಿವನ–ವಿಶ್ವಂಭರಾಖ್ಯವಾದ ಶರೀರವು ಬ್ರಹ್ಮಾದಿಸಕಲದೇವತೆಗಳನ್ನು ಧರಿಸಿದುದೂ ಪೋಷಿಸತಕ್ಕುದೂ ಆಗಿರುತ್ತದೆ, ಜಲಮಯವಾದ ಶರೀರವು ಸಕಲಪ್ರಾಣಿಗಳನ್ನು ಶುದ್ಧಿಗೊಳಿಸತಕ್ಕುದೂ ಜೀವನವೂ ಆಗಿರುತ್ತದೆ, ಅಗ್ನಿಮಯವಾದ ಶರೀರವನ್ನು ವೇದಶಾಸ್ತ್ರಜ್ಞರು ಸರ್ವದೇವತಾಮಯವನ್ನಾಗಿ ಹೇಳುತ್ತಾರಲ್ಲದೆ ವಿಧ್ಯನುಸಾರವಾಗಿ ಪೂಜಿಸು

ವಿಧಿ || ಅಂತಸ್ಸ್ಥಾ ಜಗದಂಡಾನಾಂ ಬಹಿಸ್ಸ್ಥಾ ಚ ಶರೀರಿಣಾಂ || ಶರೀರಸ್ಥಾ ಚ ಸರ್ವೇಷಾಂ ವಾಯುಮೂರ್ತಿಃ ಪಟೀಯಸೀ || ಅಂತಸ್ಥಂ ಜಗದಂಡಾನಾಂ ಬಹಿಸ್ಥಂ ಚ ವಿಯದ್ವಿಭು || ಶರೀರಂ ಸರ್ವಭೂತಾನಾಂ ವ್ಯೋಮಮೂರ್ತೆರ್ಗರೀಯಸೀ || ಸರ್ವೇಷಾಮೇವ ಭೂತಾನಾಮಾತ್ಮನ್ಯೇವ ವ್ಯವಸ್ಥಿತಂ || ಸೂರ್ಯಾತ್ಮಕೋ ಮಹಾತೇಜಾ ದೇಹೋ ಹೇತುರುಮಾಪತೇಃ || ಶರೀರಿಣಾಮಶೇಷಾಣಾಂ ಮನಸ್ಯಂತರ್ವ್ಯವಸ್ಥಿತಂ||ವಪುಸ್ಸೋಮಾತ್ಮಕಂ ಶಂಭೋಸ್ತಸ್ಯ ಸರ್ವಜಗದ್ಗುರೋಃ||ಆತ್ಮಾ ತಸ್ಯಾಷ್ಟಮೀ ಮೂರ್ತಿರ್ಯಜಮಾನಾಹ್ವಯಾಪರಾ||ಚರಾಚರಶರೀರೇಷು ಸರ್ವೇಷ್ವೇವ ವ್ಯವಸ್ಥಿತಾ|| ಮೂರ್ತಯೋಽಷ್ಟೌ ಶಿವಸ್ಯೈತಾ ವಂದನೀಯಾಃ ಪ್ರಯತ್ನತಃ || ಶ್ರೇಯೋರ್ಥಿಭಿರ್ನರೈರ್ನಿತ್ಯಂ ಶ್ರೇಯಸಾಮೇಕಹೇತವಃ'' ಇತಿ. ಬೃಹದಾರಣ್ಯಕೋಪನಿಷದಂತರ್ಯಾಮಿಬ್ರಾಹ್ಮಣೇ,—'' ಯಸ್ಯ ಪೃಥಿವೀ ಶರೀರಂ '' ಇತ್ಯಾದಿಪ್ರಸಿದ್ಧಂ. ವಿಸ್ತರಭಯಾನ್ನೇಹ ಲಿಖಿತಂ.

ಇತಿ ರುದ್ರಸ್ಯಾಷ್ಟಮೂರ್ತಿಸ್ವರೂಪವಿಧಿರ್ದಶಮೋಪದೇಶೇ
ಷಷ್ಠಸ್ಸಂವಾದಃ.



ತ್ತಾರೆ, ವಾಯುಮಯವಾದ ಶರೀರವು ಸಕಲ ಜಗದಂಡಗಳೊಳಗೂ, ಸಕಲ ಶರೀರಧಾರಿಗಳ ಹೊರಗೂ ಶರೀರಗಳೊಳಗೂ ಇರುತ್ತದೆ, ಆಕಾಶಮಯವಾದ ಶರೀರವು ಜಗದಂಡಗಳ ಒಳಗೂ ಹೊರಗೂ ಸಕಲ ಪ್ರಾಣಿಗಳ ಶರೀರದಲ್ಲೂ ಸಮರ್ಥವಾಗಿರುತ್ತದೆ. ಅತಿಶಯತೇಜಸ್ಸುಳ್ಳ ಸೂರ್ಯಾತ್ಮಕವಾದ ಶರೀರವು ಸಕಲಪ್ರಾಣಿಗಳ ಮನಸ್ಸಿನೊಳಗಿರುತ್ತದೆ, ಚಂದ್ರಾತ್ಮಕವಾದ ಶರೀರವು ಸಕಲ ಪ್ರಾಣಿಗಳ ಮನಸ್ಸಿನೊಳಗಿರುತ್ತದೆ. ಎಂಟನೆಯ ಮೂರ್ತಿಯಾದ ಆತ್ಮನು ಯಜಮಾನನೆಂಬ ನಾಮದಿಂದ ಸಕಲ ಚರಾಚರ ಪ್ರಾಣಿಗಳ ಶರೀರಗಳಲ್ಲಿರುತ್ತಾನೆ. ಶ್ರೇಯಸ್ಸನ್ನು ಅಪೇಕ್ಷಿಸುವ ಮನುಷ್ಯರಿಂದ ಶ್ರೇಯಸ್ಸಿಗೆ ಮುಖ್ಯಕಾರಣಗಳಾದ ಶಿವನ ಈ ಅಷ್ಟಮೂರ್ತಿಗಳು ನಿತ್ಯದಲ್ಲಿ ಪ್ರಯತ್ನದಿಂದ ವಂದನೀಯಗಳಾಗಿರುತ್ತವೆ,, ಎಂದು ಹೇಳಲ್ಪಟ್ಟಿದೆ, ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿಬ್ರಾಹ್ಮಣದಲ್ಲಿ— ''ಯಾವನಿಗೆ ಪೃಥ್ವಿಯು ಶರೀರವಾಗಿರುತ್ತದೆಯೋ,, ಎಂದು ಮೊದಲಾಗಿ ಪ್ರಸಿದ್ಧವಾಗಿದೆ. ಈ ವಿಷಯದಲ್ಲಿ ಇನ್ನೂ ಬಹುಪ್ರಮಾಣವಚನಗಳಿದ್ದಾಗ್ಯೂ ಗ್ರಂಥವಿಸ್ತಾರಭೀತಿಯಿಂದುದಹರಿಸಲ್ಪಡಲಿಲ್ಲವು.

ಎಂಬಿಲ್ಲಿಗೆ ರುದ್ರನ ಅಷ್ಟಮೂರ್ತಿಸ್ವರೂಪವಿಧಿಯನ್ನು ಹೇಳುವ ಹತ್ತನೆಯ
ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ಶ್ರೀಃ.

## ಅಷ್ಟಮೂರ್ತ್ಯಧಿದೇವತಾಸ್ವರೂಪವಿಚಾರವಿಧಿಃ.

ರೀ—ಹೇ ಚೋಳ! ಪೂರ್ವೋಕ್ತಾಷ್ಟಮೂರ್ತ್ಯಧಿದೇವತಾನಾಮಧೇಯಾನಿ ಶ್ರೂಯತಾಂ, ಯಜುರ್ವೇದೇ ಶತರುದ್ರೀಯೇ,—"ನಮೋ ಭವಾಯ ಚ ರುದ್ರಾಯ ಚ | ನಮಶ್ಶರ್ವಾಯ ಚ ಪಶುಪತಯೇ ಚ | ನಮ ಉಗ್ರಾಯ ಚ ಭೀಮಾಯ ಚ" ಇತಿ. ನಾರಾಯಣೋಪನಿಷದಿ ಪಂಚಬ್ರಹ್ಮಮಂತ್ರೇ,—"ಮಹಾದೇವಾಯ ಧೀಮಹಿ"—"ಈಶಾನಸ್ಸರ್ವವಿದ್ಯಾನಾಂ" ಇತಿ. ಲೈಂಗೇ,—"ವಿಶ್ವಂಭರಾತ್ಮನಸ್ತಸ್ಯ ಶರ್ವಸ್ಯ ಪರಮೇಷ್ಠಿನಃ || ವಿಕೇಶೀ ಕಥ್ಯತೇ ಪತ್ನೀ ಸುತಶ್ಚಾಂಗಾರಕಸ್ಸ್ಮೃತಃ|| ಸಂಜೀವನಸ್ಯ ಲೋಕಾನಾಂ ಭವಸ್ಯ ಸಲಿಲಾತ್ಮನಃ || ಉಮಾ ಸಂಕೀರ್ತಿತಾ ಪತ್ನೀ ಸುತಶ್ಶುಕ್ರಃ ಪ್ರಕೀರ್ತಿತಃ|| ಸ್ವಾಹಾ ವಹ್ನ್ಯಾತ್ಮನಸ್ತಸ್ಯ ಪ್ರೋಕ್ತಾ ಪಶುಪತೇಃ ಪ್ರಿಯಾ || ಷಣ್ಮುಖೋ ಭಗವಾನ್ದೇವೋ ಬುಧೈಃ ಪುತ್ರ ಉದಾಹೃತಃ|| ಈಶಾನಸ್ಯ ಜಗತ್ಕರ್ತುರ್ದೇವಸ್ಯ ಪವನಾತ್ಮನಃ || ಶಿವಾ ಪತ್ನೀ ಬುಧೈರುಕ್ತಾ ಪುತ್ರ

---

### ಅಷ್ಟಮೂರ್ತ್ಯಧಿದೇವತಾಸ್ವರೂಪವಿಚಾರವಿಧಿಯು.

ರೀ—ಎಲೈ ಚೋಳನೇ! ಮೊದಲು ಹೇಳಲ್ಪಟ್ಟ ಅಷ್ಟಮೂರ್ತಿಗಳಧಿದೇವತೆಗಳ ನಾಮಗಳನ್ನು ಕೇಳು; ಯಜುರ್ವೇದದಲ್ಲಿರುವ ಶತರುದ್ರೀಯದಲ್ಲಿ—"ಸಮಸ್ತ ಜಗಜ್ಜಾಲಸೃಷ್ಟಿಗೆ ಮೂಲಕಾರಣವಾಗಿರುವ, ಭಕ್ತರ ಭವದುಃಖವನ್ನು ಪರಿಹರಿಸುತ್ತಿರುವ, ಅಜನೆಂಬ ರುದ್ರನಿಗೋಸ್ಕರ ನಮಸ್ಕಾರವು. ಸಮಸ್ತ ಜಗಜ್ಜಾಲವನ್ನು ಸಂಹರಿಸುವ ಬ್ರಹ್ಮಾದಿ ಪಶುಗಳಿಗೊಡೆಯನಾಗಿರುವ ಕಪಾಲೀಶನೆಂಬ ರುದ್ರನಿಗೋಸ್ಕರ ನಮಸ್ಕಾರವು. ಪಾಪಗಳನ್ನೂ ರೋಗಗಳನ್ನೂ ಭೂತಪ್ರೇತಪಿಶಾಚಾದಿಗಳನ್ನೂ ಸಂಹರಿಸುವುದರಲ್ಲಿ ಕ್ರೂರನಾಗಿರುವ ಆ ಪಾಪರೋಗಾದಿಗಳಿಗೆ ಭಯಂಕರನಾಗಿರುವ ಪಾಶಹಸ್ತನೆಂಬ ರುದ್ರನಿಗೋಸ್ಕರ ನಮಸ್ಕಾರವು,, ಎಂದೂ, ನಾರಾಯಣೋಪನಿಷತ್ತಿನ ಪಂಚಬ್ರಹ್ಮಮಂತ್ರದಲ್ಲಿ—"ಮಹಾದೇವನಿಗೋಸ್ಕರ ಉಪಾಸನೆಮಾಡುತ್ತೇವೆ,,—"ಸರ್ವವಿದ್ಯೆಗಳಿಗಧಿಪತಿಯು,, ಎಂದೂ ಹೇಳಲ್ಪಟ್ಟಿದೆ. ಲೈಂಗ್ಯಪುರಾಣದಲ್ಲಿ—"ಪೃಥಿವ್ಯಾತ್ಮಕನಾದ ಆ ಶರ್ವನಿಗೆ ವಿಕೇಶಿಯು ಪತ್ನಿಯೆಂದೂ, ಅಂಗಾರಕನು ಪುತ್ರನೆಂದೂ ಹೇಳಲ್ಪಟ್ಟಿದೆ. ಸಕಲ ಲೋಕಗಳಲ್ಲಿರುವ ಜೀವರನ್ನು ಭವರೋಗದಿಂದ ಬದುಕಿಸುವುದರಲ್ಲಿ ಸಂಜೀವನೌಷಧನಾದ ಜಲಾತ್ಮಕನಾದ ಭವನಿಗೆ ಉಮಾದೇವಿಯು ಪತ್ನಿಯೆಂದೂ ಶುಕ್ರನು ಪುತ್ರನೆಂದೂ ಹೇಳಲ್ಪಟ್ಟಿದೆ, ಅಗ್ನ್ಯಾತ್ಮಕನಾದ ಆ ಪಶುಪತಿಗೆ ಸ್ವಾಹಾದೇವಿಯು ಪತ್ನಿಯೆಂದೂ ಷಣ್ಮುಖನು ಪುತ್ರನೆಂದೂ ಹೇಳಲ್ಪಟ್ಟಿದೆ. ಜಗದೀಶನಾದ ವಾಯ್ವಾತ್ಮಕನಾದ ಈಶಾನನಿಗೆ ಶಿವಾದೇವಿಯು ಪತ್ನಿಯೆಂದೂ ಗಜಾನನನು ಪುತ್ರನೆಂದೂ, ಮಹಾಮಹಿಮಶಾಲಿಯಾದ ಆಕಾಶಾತ್ಮಕನಾದ ಭೀ

ಶ್ಚಾಸ್ಯ ಗಜಾನನಃ ॥ ಮಹಾಮಹಿಮದೇವಸ್ಯ ಭೀಮಸ್ಯ ಗಗನಾತ್ಮನಃ ॥ ದಿಶೋ ದಶ ಸ್ಮೃತಾ ದೇವ್ಯಾಸ್ಸುತಸ್ಸ್ವರ್ಗಗುರುಸ್ಸ್ಮೃತಃ ॥ ಸೂರ್ಯಾತ್ಮಕಸ್ಯ ರುದ್ರಸ್ಯ ಭಕ್ತಾನಾಂ ಭದ್ರದಾಯಿನಃ ॥ ಸಮ್ಯಕ್ಛಾಯಾ ಸ್ಮೃತಾ ದೇವೀ ಪುತ್ರಶ್ಚಾಸ್ಯ ಶನೈಶ್ಚರಃ ॥ ಸೋಮಾತ್ಮಕಸ್ಯ ದೇವಸ್ಯ ಮಹಾದೇವಸ್ಯ ಸೂರಿಭಿಃ ॥ ದಯಿತಾ ರೋಹಿಣೀ ಪ್ರೋಕ್ತಾ ಬುಧಸ್ತಸ್ಯ ಶರೀರಜಃ ॥ ಉಗ್ರಾಖ್ಯಸ್ಯ ಚ ದೇವಸ್ಯ ಯಜಮಾನಾತ್ಮನಃ ಪ್ರಭೋಃ ॥ ದೀಕ್ಷಾ ಪತ್ನೀ ಬುಧೈರುಕ್ತಾ ಸಂತಾನಾಖ್ಯಸ್ಸುತಸ್ಸ್ಮೃತಃ ॥ ಸಪ್ತ ಮೂರ್ತಿರ್ಜಗದ್ವ್ಯಾಪ್ತಾ ಶಂಭೋರಂಗಾನಿ ದೇಹಿನಾಂ ॥ ಆತ್ಮಾ ತಸ್ಯಾಷ್ಟಮೀ ಮೂರ್ತಿಸ್ಸರ್ವಭೂತಶರೀರಗಃ '' ಇತ್ಯಾದಿಪ್ರಸಿದ್ಧಂ. ವಿಸ್ತರೇಣಾಲಂ.

ಇತ್ಯಷ್ಟಮೂರ್ತ್ಯಧಿದೇವತಾಸ್ವರೂಪವಿಚಾರವಿಧಿರ್ದಶಮೋಪದೇಶೇ
ಸಪ್ತಮಸ್ಸಂವಾದಃ.

——— :卍: ———

ಶ್ರೀಃ

## ಶಿವಸ್ಯಸರ್ವದೇಹಿಧೀಕರ್ಮಪ್ರೇರಕತ್ವನಿರ್ಣಯಃ.

ರೇ—ಹೇ ಚೋಳ! ಪುರಾ ಶಂಭೋರ್ನಿಶ್ವಾಸಮಾರುತಾದ್ವೇದಾ ಜಾತಾ,

---

ಮನಿಗೆ ದಶದಿಗಂಗನೆಯರು ಪತ್ನಿಯರೆಂದೂ ಬೃಹಸ್ಪತಿಯು ಪುತ್ರನೆಂದೂ, ಭಕ್ತರಿಗೆ ಮಂಗಳವನ್ನುಂಟುಮಾಡುವ ಸೂರ್ಯಾತ್ಮಕನಾದ ರುದ್ರನಿಗೆ ಛಾಯಾದೇವಿಯು ಪತ್ನಿಯೆಂದೂ ಶನೈಶ್ಚರನು ಪುತ್ರನೆಂದೂ, ಚಂದ್ರಾತ್ಮಕನಾದ ಮಹಾದೇವನಿಗೆ ರೋಹಿಣಿಯು ಪತ್ನಿಯೆಂದೂ ಬುಧನು ಪುತ್ರನೆಂದೂ, ಯಜಮಾನಾತ್ಮಕನಾದ ಉಗ್ರನಿಗೆ ದೀಕ್ಷಾದೇವಿಯು ಪತ್ನಿಯೆಂದೂ ಸಂತಾನನು ಪುತ್ರನೆಂದೂ ಹೇಳಲ್ಪಟ್ಟಿದೆ. ಶಿವನ– ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರಾತ್ಮಕಗಳಾದ ಏಳು ಶರೀರಗಳು ಸಕಲ ಲೋಕಗಳನ್ನೂ, ಸಕಲ ಜೀವರ ಶರೀರಗಳನ್ನು ವ್ಯಾಪಿಸಿರುತ್ತವೆ. ಆ ಪರಮೇಶ್ವರನ ಎಂಟನೆಯ ತನುವಾದ ಆತ್ಮನು ಸಕಲಜೀವರ ಶರೀರವನ್ನು ಹೊಂದಿರುತ್ತಾನೆ,, ಎಂದು ಉಕ್ತವಾಗಿದೆ. ಇತ್ಯಾದಿ ವಾಕ್ಯಗಳು ಪ್ರಸಿದ್ಧವಾಗಿವೆ. ವಿಸ್ತಾರದಿಂದಸಾಕು.

ಎಂಬಲ್ಲಿಗೆ ಅಷ್ಟಮೂರ್ತ್ಯಧಿದೇವತಾಸ್ವರೂಪವಿಚಾರವಿಧಿಯನ್ನು ಹೇಳುವ ಹತ್ತನೆಯ
ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.



## ಶಿವನಿಗೆ ಸರ್ವದೇಹಿಗಳ ಬುದ್ಧಿಕರ್ಮಪ್ರೇರಕತ್ವನಿರ್ಣಯವು.

ರೇ— ಎಲೈ ಚೋಳನೇ! ಪೂರ್ವಕಾಲದಲ್ಲಿ ಶಿವನ ನಿಟ್ಟುಸುರಿನದೆಸೆಯಿಂದ ವೇದಗಳು

ಶಸ್ಯಾತ್ಮಸ್ಯ ಸಕಲಪ್ರಾಣಿಬುದ್ಧಿಕರ್ಮಪ್ರೇರಕತಾಂ ಶೃಣು; ಶ್ವೇತಾಶ್ವತರೋಪನಿಷದಿ,—"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ | ತಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಲೈಂಗೇ,—"ಬ್ರಹ್ಮಾಣಂ ವಿದಧೇ ವೇದಾನಗ್ರಪುತ್ರೇ ಚತುರ್ಮುಖೇ || ಪ್ರಹಿಣೋತಿ ಸ್ಮ ತಸ್ಮೈ ಚ ಜ್ಞಾನಮಾತ್ಮಪ್ರಕಾಶಕಂ" ನಾರಾಯಣೋಪನಿಷದಿ,—"ವಿಶ್ವಾಧಿಕೋ ರುದ್ರೋ ಮಹರ್ಷಿರ್ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ದೇವಶ್ಶುಭಯಾ ಸ್ಮೃತ್ಯಾ ಸಂಯುನಕ್ತು" ಶ್ವೇತಾಶ್ವತರೋಪನಿಷದಿ,—"ವಿಶ್ವಾಧಿಕೋ ರುದ್ರೋ ಮಹರ್ಷಿರ್ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು" ರುದ್ರಗಾಯತ್ರ್ಯಾಂ,—"ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ | ತನ್ನೋ ರುದ್ರಃ ಪ್ರಚೋದಯಾತ್" ಶಿವಗಾಯತ್ರೀ ಮಂತ್ರೇ,—"ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್" ಇತ್ಯಾದಿ. ಇತಿ ಶಿವಸ್ಯಸರ್ವದೇಹಿನಾಂಬುದ್ಧಿಪ್ರೇರಕತ್ವಂ. ಭೋ ಚೋಳ! ಶಿವಸ್ಯ ಸರ್ವದೇಹಿನಾಂ ಕರ್ಮಪ್ರೇರಕತ್ವಮಪಿ ಶ್ರೂಯತಾಂ, ಬ್ರಹ್ಮೋಪನಿಷದಿ,—"ಕರ್ಮಾಧ್ಯಕ್ಷಸ್ಸರ್ವಭೂತಾಧಿವಾಸಃ" ಇತಿ. ವೃದ್ಧಜಾಬಾಲೋಪನಿಷದಿ,—"ಸರ್ವ ಕರ್ಮಸಾಕ್ಷೀ ಪರಮಾತ್ಮಾವತಿಷ್ಠ

---

ಹುಟ್ಟಿದವು. ಆ ಕಾರಣದಿಂದ ಆತನಿಗಿರುವ ಸಕಲ ಪ್ರಾಣಿಬುದ್ಧಿಕರ್ಮಪ್ರೇರಕತ್ವವನ್ನು ಕೇಳು; ಶ್ವೇತಾಶ್ವತರೋಪನಿಷತ್ತಿನಲ್ಲಿ—"ಯಾವ ಪರಮೇಶ್ವರನು ಜಗತ್ಸೃಷ್ಟಿಗಿಂತ ಮೊದಲು ಬ್ರಹ್ಮನನ್ನು ಹುಟ್ಟಿಸಿ, ಆತನಿಗೆ ವೇದಗಳನ್ನು ಉಪದೇಶಿಸಿ ಕೊಟ್ಟನೋ, ಆ ಸಕಲಾತ್ಮರ ಬುದ್ಧಿಯನ್ನು ಪ್ರಕಾಶಗೊಳಿಸತಕ್ಕ ಮಹಾದೇವನನ್ನು ಮೋಕ್ಷಾಭಿಲಾಷಿಯಾದ ನಾನು ರಕ್ಷಕನನ್ನಾಗಿ ಹೊಂದುವೆನು,, ಎಂದು ನಿರೂಪಿತವಾಗಿದೆ. ಆ ಅರ್ಥವು ಲಿಂಗಪುರಾಣದಲ್ಲಿ ಕಥಿತವಾಗಿದೆ. ನಾರಾಯಣೋಪನಿಷತ್ತಿನಲ್ಲಿ—"ವಿಶ್ವಾಧಿಕನೂ, ಮಹರ್ಷಿಯೂ ಆದ ಯಾವ ರುದ್ರನು ಹುಟ್ಟುತ್ತಿರುವ ಬ್ರಹ್ಮನನ್ನು ನೋಡಿದನೋ ಆ ದೇವನು ನಮ್ಮನ್ನು ಮಂಗಳಕರವಾದ ಬುದ್ಧಿಯೊಡನೆ ಕೂಡಿಸಲಿ,, ಎಂದುಕ್ತವಾಗಿರುವುದಲ್ಲದೆ ಶ್ವೇತಾಶ್ವತರೋಪನಿಷತ್ತಿನಲ್ಲೂ, ರುದ್ರಗಾಯತ್ರೀ ಮಂತ್ರದಲ್ಲೂ, ಶಿವಗಾಯತ್ರೀಮಂತ್ರದಲ್ಲೂ ಹೇಳಲ್ಪಟ್ಟಿದೆ. ಇತ್ಯಾದಿವಚನಗಳಿರುವುದರಿಂದ ಶಿವನೇ ಸರ್ವಜೀವರ ಬುದ್ಧಿಪ್ರೇರಕನೆಂಬಂಶವು ಪ್ರಸಿದ್ಧವಾಗಿದೆ. ಎಲೈ ಚೋಳನೇ! ಪರಶಿವನೇ ಸರ್ವಜೀವರ ಕರ್ಮಪ್ರೇರಕನೆಂಬುದನ್ನು ಕೇಳು; ಬ್ರಹ್ಮೋಪನಿಷತ್ತಿನಲ್ಲಿ—"ಸಕಲ ಪ್ರಾಣಿಗಳ ಹೃದಯವಾಸಿಯಾಗಿರುವ ಶಿವನು ಆ ಜೀವರನ್ನು ಸಕಲ ಕರ್ಮಗಳಲ್ಲಿ ಪ್ರೇರಿಸುವುದರಲ್ಲಿ ಅಧಿಕಾರಿಯಾಗಿರುತ್ತಾನೆ,, ಎಂದು ಉಕ್ತವಾಗಿದೆ. ವೃದ್ಧಜಾಬಾಲೋಪನಿಷತ್ತಿನಲ್ಲಿ—"ಪರಮಾತ್ಮ

ತೇ'' ಕಠವಲ್ಲ್ಯುಪನಿಷದಿ,-‘‘ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ | ಭಯಾ
ದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ'' ಬೃಹದಾರಣ್ಯಕೇ,-‘‘ಭೀಷಾಽ
ಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ ಭೀಷಾಸ್ಯೇಂದ್ರಶ್ಚಾಗ್ನಿಶ್ಚ ಮೃತ್ಯುರ್ಧಾವತಿ
ಪಂಚಮಃ'' ಲೈಂಗೇ,-‘‘ಭುಕ್ತಮಾಹಾರಜಾತಂ ಚ ಪಚತೇ ದೇಹಿನಾಮಪಿ||ಉದ
ಸ್ಥಸ್ಸದಾ ವಹ್ನಿರ್ವಿಶ್ವೇಶ್ವರನಿಯೋಗತಃ||ಉದಯಾಸ್ತಮಯೌ ಕುರ್ವನ್ ಕುರುತೇ ಕಾ
ಲಮಾಜ್ಞಯಾ||ಆದಿತ್ಯಸ್ತಸ್ಯ ನಿತ್ಯಸ್ಯ ಶರ್ವಸ್ಯ ಪರಮೇಷ್ಠಿನಃ||ದೇವಾನ್ಪಾತ್ಯಸುರಾನ್
ಹಂತಿ ತ್ರಿಲೋಕೀಮಪಿ ರಕ್ಷತಿ||ಆಜ್ಞಯಾ ತಸ್ಯ ದೇವಸ್ಯ ಸರ್ವದೇವೈರಲಂಘ್ಯಯಾ||
ನಿರ್ದೇಶೇನ ಶಿವಸ್ಯೈವ ಭೇದೈಃ ಪ್ರಾಣಾದಿಭಿರ್ನಿಜೈಃ || ಬಿಭರ್ತಿ ಸರ್ವಭೂತಾನಾಂ
ಶರೀರಾಣಿ ಪ್ರಭಂಜನಃ || ಜೀವತಾಂ ವ್ಯಾಧಿಭಿಃ ಪೀಡಾಂ ಮೃತಾನಾಂ ಯಾತನಾ
ತೈಃ||ಅಧಾರ್ಮಿಕಾಣಾಂ ಕೀನಾಶಃ ಕುರುತೇ ಶಂಕರಾಜ್ಞಯಾ|| ವಿತ್ತಂ ವಿತ್ತೇಶ್ವರಸ್ತ
ಸ್ಯ ಶಾಸನಾತ್ಪರಮೇಶಿತುಃ||ಪುಣ್ಯಾನುರೂಪಂ ಸರ್ವೇಷಾಂ ಪ್ರಾಣಿನಾಂ ಸಂಪ್ರಯಚ್ಛ
ತಿ || ಚತುರ್ವಿಧಾನಿ ಭೂತಾನಿ ಚರಾಣಿ ಸ್ಥಾವರಾಣಿ ಚ||ನಿಯೋಗಾತ್ತಸ್ಯ ವರ್ತಂ
ತೇ ದೇವದೇವಸ್ಯ ಧೀಮತಃ'' ಇತ್ಯಾದಿಪ್ರಸಿದ್ಧಂ.

---

ನಾದ ಶಿವನು ಸರ್ವಾತ್ಮರಕರ್ಮಸಾಕ್ಷಿಯಾಗಿದ್ದಾನೆ,, ಎಂದೂ, ಕಠವಲ್ಲ್ಯುಪನಿಷತ್ತಿನಲ್ಲಿರುವ ‘‘ಈ
ಪರಮೇಶ್ವರನದೆಸೆಯಿಂದ ಭಯವನ್ನು ಹೊಂದಿ, ಅಗ್ನಿಯು ತಪಿಸುತ್ತಾನೆ. ಸೂರ್ಯನು ತಪಿಸು
ತ್ತಾನೆ. ಇಂದ್ರನು ಸ್ವರ್ಗವನ್ನು ಪಾಲಿಸುತ್ತಾನೆ. ವಾಯುವು ಬೀಸುತ್ತಾನೆ. ಮೃತ್ಯುವು ಓಡು
ತ್ತದೆ,, ಎಂಬ ಈ ಅರ್ಥವೇ ಬೃಹದಾರಣ್ಯಕೋಪನಿಷತ್ತಿನಲ್ಲುಕ್ತವಾಗಿದೆ. ಲಿಂಗಪುರಾಣದಲ್ಲಿ-
‘‘ಶಿವನ ಆಜ್ಞೆಯಿಂದ ಅಗ್ನಿಯು ಸರ್ವಜೀವರ ಹೊಟ್ಟೆಯೊಳಗಿರುತ್ತಾ ಅವರಿಂದ ಭುಂಜಿಸಲ್ಪಟ್ಟ
ಆಹಾರ ಸಮೂಹವನ್ನು ಬೇಯಿಸುತ್ತದೆ. ಸೂರ್ಯನು ಉದಯಾಸ್ತಗಳನ್ನು ಹೊಂದಿ ಕಾಲವನ್ನು
ಟುಮಾಡುತ್ತಾನೆ. ವಾಯುವು ದೇವತೆಗಳನ್ನು ಕಾಪಾಡುತ್ತದೆ. ರಾಕ್ಷಸರನ್ನು ಕೊಲ್ಲುತ್ತದೆ.
ಮೂರುಲೋಕಗಳನ್ನು ಕಾಪಾಡುತ್ತದೆ. ಪ್ರಾಣಾಪಾನಾದಿಭೇದಗಳನ್ನು ಹೊಂದಿ ಸಕಲಪ್ರಾಣಿ
ಗಳ ಶರೀರಗಳನ್ನು ಪೋಷಿಸುತ್ತದೆ. ಯಮನು ಬದುಕಿರತಕ್ಕವರಿಗೆ ರೋಗಗಳಿಂದ ಬಾಧೆಯ
ನ್ನೂ ಪಾಪಿಗಳಾಗಿ ಮೃತರಾದವರಿಗೆ ಅನೇಕ ಯಾತನೆಗಳಿಂದ ಹಿಂಸೆಯನ್ನೂ ಮಾಡುತ್ತಾನೆ.
ಕುಬೇರನು ಸಕಲ ಪ್ರಾಣಿಗಳಿಗೂ ಅವರ ಪುಣ್ಯಾನುಸಾರವಾಗಿ ದ್ರವ್ಯವನ್ನು ಕೊಡುತ್ತಾನೆ.
ಚರಾಚರರೂಪಗಳಾದ ಪ್ರಾಣಿಗಳೆಲ್ಲವೂ ಆ ಶಿವನ ಆಜ್ಞೆಯದೆಸೆಯಿಂದಲೇ ಇರುತ್ತವೆ,, ಎಂದು
ಹೇಳಲ್ಪಟ್ಟಿದೆ. ಇತ್ಯಾದಿ ವಚನಗಳಿಂದ ಶಿವನೇ ಸರ್ವಾತ್ಮರುಗಳ ಬುದ್ಧಿ ಮತ್ತು ಕರ್ಮಗಳನ್ನು
ಪ್ರೇರಿಸುವಾತನೆಂದು ಪ್ರಸಿದ್ಧವಾಗಿದೆ.

ಇತಿ ಶಿವಸ್ಯ ಸರ್ವದೇಹಿಧೀಕರ್ಮಪ್ರೇರಕತ್ವನಿರ್ಣಯೋ ದಶಮೋಪದೇಶೇ ಅಷ್ಟಮಸ್ಸಂವಾದಃ.

ಶ್ರೀಃ.

## ರುದ್ರಸ್ಯಸರ್ವದೇಹಿನಾಂತತ್ತತ್ಕರ್ಮಫಲಪ್ರದಾನನಿರ್ಣಯಃ.

ರೇ— ಭೋ ಚೋಳ! ಸರ್ವೇಶ್ವರಶ್ಶಂಕರಏವ ಸರ್ವದೇಹಿಭ್ಯಃ ಸ್ವಸ್ವಕೃತಸುಕೃತದುಷ್ಕೃತರೂಪಕರ್ಮದ್ವಾರೇಣ ಸ್ವರ್ಗನರಕಾದಿಫಲಪ್ರದಾತಾ ಇತ್ಯರ್ಥೇ ಶ್ರುತಿಃ ಶ್ರೂಯತಾಂ, ವೃದ್ಧಜಾಬಾಲೋಪನಿಷದಿ,—"ಇದಂ ಮಹಂತಾ ಸ್ವರೂಪಾನಭಿಜ್ಞಾಸ್ಸರ್ವಜ್ಞೇಶ್ವರಪ್ರೇರ್ಯಾ ಜನ್ಮಾದಿಸಂಯುಕ್ತಾಸ್ಸಂಸಾರದುಃಖನಿಮಗ್ನಾಸ್ಸ್ವಸ್ವಕೃತದುಷ್ಕೃತಕರ್ಮಣಾ ಪರಮೇಶ್ವರಪ್ರೇರಣಯಾ ಬದ್ಧಾಸ್ಸಂಸಾರಿಣೋ ಜೀವಾಃ ತತ್ತತ್ಸುಕೃತದುಷ್ಕೃತಕರ್ಮದ್ವಾರಾತ್ ಸ್ವರ್ಗನರಕಪ್ರದಾನಾದಿನಾ ತನ್ನಿಯಾಮಕಃ ಪರಮೇಶ್ವರಃ ಪತಿಃ" ಇತಿ. ಮುಂಡಕೋಪನಿಷದಿ,—"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ | ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ

---

ಎಂಬಿಲ್ಲಿಗೆ ಶಿವನಿಗೆ ಸರ್ವದೇಹಿಗಳ ಧೀಕರ್ಮಪ್ರೇರಕತ್ವವನ್ನು ಹೇಳುವ ಹತ್ತನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.

## ರುದ್ರನಿಗೆ ಸರ್ವದೇಹಿಗಳ ತತ್ತತ್ಕರ್ಮಫಲಪ್ರದಾನನಿರ್ಣಯವು.

ರೇ — ಎಲೈ ಚೋಳನೇ! ಸರ್ವೇಶ್ವರನಾದ ಶಿವನೇ ಸಕಲ ಜೀವರಿಗೆ ಅವರವರ ಕರ್ಮಾನುಸಾರವಾಗಿ ಸ್ವರ್ಗನರಕಾದಿ ಫಲಗಳನ್ನು ಕೊಡತಕ್ಕವನೆಂಬರ್ಥವನ್ನು ಶ್ರುತಿಯಲ್ಲಿ ಹೇಳಿರುವುದನ್ನು ಕೇಳು; ವೃದ್ಧಜಾಬಾಲೋಪನಿಷತ್ತಿನಲ್ಲಿ — "ತಮ್ಮ ಪುಣ್ಯಪಾಪಕರ್ಮದಿಂದಲೂ, ಶಿವನ ಪ್ರೇರಣೆಯಿಂದಲೂ ಪಾಶಬದ್ಧರಾಗಿರುವ ಸರ್ವಜೀವರಿಗೆ ಪರಮೇಶ್ವರನು ಆಯಾ ಪುಣ್ಯಪಾಪಗಳಿಗನುಸಾರವಾಗಿ ಸ್ವರ್ಗ ನರಕಗಳನ್ನು ಕೊಡತಕ್ಕವನಾದ್ದರಿಂದ ಅವರಿಗೆ ನಿಯಾಮಕನೂ ಪತಿಯೂ ಆಗಿದ್ದಾನೆ,, ಎಂದೂ, ಮುಂಡಕೋಪನಿಷತ್ತಿನಲ್ಲಿ — "ಪರಮಸ್ನೇಹಿತರಾದ ಜೀವೇಶ್ವರರೆಂಬ ಎರಡು ಪಕ್ಷಿಗಳು ಒಡಗೂಡಿ ಶರೀರವೆಂಬ ವೃಕ್ಷವನ್ನವಲಂಬಿಸಿದವು ಅವೆರಡರೊಳಗೆ ಜೀವನೆಂಬ ಪಕ್ಷಿಯು ಶರೀರವೆಂಬ ವೃಕ್ಷದಲ್ಲಿ ಹುಟ್ಟಿದ ಮಾನಸ, ವಾಚಕ, ಕಾಯಕ ಕರ್ಮರೂಪವಾದ ಹಣ್ಣನ್ನು ಇಂದ್ರಿಯ ದ್ವಾರಗಳಿಂದ ಆಸ್ವಾದಿಸುತ್ತದೆ. ಶಿವನೆಂಬ ಪಕ್ಷಿಯು ತಾನು ಆ ಫಲವನ್ನು ಸೇವಿಸದೆ ಜೀವನೆಂಬ ಪಕ್ಷಿಗೆ ತೋರ್ಪಡಿಸಿಕೊಡುತ್ತದೆ. ಎಂದೂ ಹೇಳಲ್ಪಟ್ಟಿದೆ. ಈ

ನಶ್ನನ್ನನ್ಯೋ ಅಭಿಚಾಕಶೀತಿ '' ಸೂತಸಂಹಿತಾಯಾಂ,—'' ದ್ವಾ ಸುಪರ್ಣಾ ಶರೀರೇಽಸ್ಮಿನ್ ಜೀವೇಶಾಖ್ಯೌ ಸಹಸ್ಥಿತೌ || ತಯೋರ್ಜೀವಃ ಫಲಂ ಭುಂಕ್ತೇ ಕರ್ಮಣಾಂ ನ ಮಹೇಶ್ವರಃ '' ಶ್ವೇತಾಶ್ವತರೋಪನಿಷದಿ,—'' ಜ್ಞಾಜ್ಞೌ ದ್ವಾವಜಾವೀಶಾನೀಶಾವಜಾ ಹ್ಯೇಕಾ ಭೋಕ್ತೃಭೋಗಾರ್ಥಯುಕ್ತಾ ''—'' ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ'' ವಾಯವೀಯಸಂಹಿತಾಯಾಂ,—'' ಅಜ್ಞೋ ಜಂತುರನೀಶೋಽಯಮಾತ್ಮನಸ್ಸುಖದುಃಖಯೋಃ || ಈಶ್ವರಪ್ರೇರಿತೋ ಗಚ್ಛೇತ್ಸ್ವರ್ಗಂ ವಾ ಶ್ವಭ್ರಮೇವ ವಾ '' ಭಗವದ್ಗೀತಾಯಾಂ, -- '' ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ || ಭ್ರಾಮಯಂತ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ '' ಬ್ರಹ್ಮಗೀತಾಯಾಂ,—'' ಆದಾನೇಪಿ ತಥಾದಾನೇ ನ ಸ್ವತಂತ್ರೋ ಮಹರ್ಷೇ ಹರಿಃ || ತಥೈವಾಹಂ ಸುರಶ್ರೇಷ್ಠಾಸ್ಸತ್ಯಮುಕ್ತಂ ಮಯೋದಿತಂ '' ಅನ್ಯತ್ರ,—'' ಯೋ ಮೇ ಗರ್ಭಗತಸ್ಯಾಪಿ ವೃತ್ತಿಂ ಕಲ್ಪಿತವಾನ್ಪ್ರಭುಃ || ಶೇಷವೃತ್ತಿವಿಧಾನೇಪಿ ಕಿಂ ಸುಪ್ತಸ್ಸೋಽಥವಾ ಮೃ

---

ಅರ್ಥವು ಸೂತಸಂಹಿತೆಯಲ್ಲಿ ಹೇಳಲ್ಪಟ್ಟಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ —''ಸ್ವತಂತ್ರನಾದ ಶಿವನು ಜ್ಞಾನರೂಪನಾಗಿರುವನು. ಪರತಂತ್ರನಾದ ಜೀವನು ಅಜ್ಞಾನಿಯಾಗಿರುವನು. ಪ್ರಕೃತಿತನಾದ ಶಿವನು ಭೋಕ್ತೃವಾದ ಆತ್ಮಭೋಗ ವಸ್ತುವಿನೊಡನೆ ಕೂಡಿದವನಾಗಿರುವನು. ಪರತಂತ್ರನಾದ ಜೀವಾತ್ಮನು ಸುಬುದ್ಧಿಕರ್ಮವಶದಿಂದ ಬಂದ ಸಮಸ್ತ ಭೋಗವನ್ನು ಅನುಭವಿಸತಕ್ಕವನಾದ್ದರಿಂದ ಸಂಸಾರವೆಂಬ ಪಾಶದಿಂದ ಬಿಗಿಯಲ್ಪಟ್ಟವನಾಗಿ, ಬಳಿಕ ತನ್ನಿಂದ ಮಾಡಲ್ಪಟ್ಟ ಪಾಪಪುಣ್ಯಗಳಿಗನುಸಾರವಾಗಿ ಫಲವನ್ನು ಕೊಡತಕ್ಕವನಾದ ಮಹಾದೇವನನ್ನು ಶ್ರುತಿವಚನದಿಂದಲೂ, ಗುರೂಕ್ತಿಯಿಂದಲೂ, ಸ್ವಾನುಭವದಿಂದಲೂ ತಿಳಿದು, ಮಲ ಮಾಯಾ ಕರ್ಮರೂಪಗಳಾದ ಸಕಲ ಪಾಶಗಳಿಂದ ಬಿಡಲ್ಪಡುವನು,, ಎಂದು ಉಕ್ತವಾಗಿದೆ. ವಾಯುವೀಯಸಂಹಿತೆಯಲ್ಲಿ— ''ಮೂಢನಾದ ಈ ಜೀವನು -ಸ್ವತಂತ್ರನಾಗಿ ಸುಖದುಃಖಗಳನ್ನನುಭವಿಸುವುದರಲ್ಲಿ ಅಶಕ್ತನಾದ್ದರಿಂದ ಪರಮೇಶ್ವರನಿಂದ ಪ್ರೇರಿಸಲ್ಪಟ್ಟವನಾಗಿ ಸ್ವರ್ಗವನ್ನಾದರೂ, ಅಧೋಭುವನಕ್ಕೆ ಹೋಗುವ ರಂಧ್ರದ ಬಾಗಿಲನ್ನಾದರೂ ಹೊಂದುವನು,, ಎಂದೂ, ಭಗವದ್ಗೀತೆಯಲ್ಲಿ—ಎಲೈ ಅರ್ಜುನನೇ! ಈಶ್ವರನು ಸಕಲ ಪ್ರಾಣಿಗಳ ಹೃದಯದಲ್ಲಿ ವಾಸಿಸುತ್ತಾ ತನ್ನಲ್ಲಿಡಬಿಡದಿರುವ ಮಾಯೆಯಿಂದ ಸರ್ವರನ್ನು ಸಂಸಾರಚಕ್ರವನ್ನೇರಿಸಿ ತಿರುಗಿಸುತ್ತಲಿರುತ್ತಾನೆ,, ಎಂದೂ, ಬ್ರಹ್ಮಗೀತೆಯಲ್ಲಿ ಎಲೈ ದೇವತಾಶ್ರೇಷ್ಠರೇ! ಕೊಡುವುದರಲ್ಲಿಯೂ ತೆಗೆದುಕೊಳ್ಳುವುದರಲ್ಲಿಯೂ ವಿಷ್ಣುವು ಸ್ವತಂತ್ರನಲ್ಲದಿರುವಂತೆ ನಾನೂ ಸ್ವತಂತ್ರನಲ್ಲವೆಂದು ಹೇಳತಕ್ಕ ನನ್ನ ಮಾತು ಸತ್ಯವಾದದ್ದು,, ಎಂದೂ, ಬೇರೊಂದುಗ್ರಂಥದಲ್ಲಿ—''ನಾನು ತಾಯಿಯ ಬಸುರಲ್ಲಿದ್ದಾಗ್ಯೆ ನನಗೆ ಯಾವಪ್ರಭುವು ಜೀವನವನ್ನು ಕಲ್ಪಿಸಿದನೋ, ಆತನು ಉಳಿದವರಿಗೆ ಜೀವನವನ್ನು ಕಲ್ಪಿಸುವ ವಿಷಯದ

ಶಃ ||ವಿದ್ಯಯಾ ಚ ಶ್ರಿಯಾ ಜ್ಞಾನಶಕ್ತ್ಯಾ ನ್ಯೂನಾಧಿಕಾ ನರಾಃ || ಶಿವಾಜ್ಞಯಾ ಸಂಭವಂತಿ ಸ್ವಕರ್ಮಪರಿಪಾಕತಃ || ಸ್ವರ್ಗಚ್ಯುತಾನಾಮಿಹ ಜೀವಲೋಕೇ ಪುಂಸಾಂ ತು ನಿತ್ಯಂ ಹೃದಯೇ ವಸಂತಿ ||ದಾನಪ್ರಸಂಗೋ ಮಧುರಾ ಚ ವಾಣೀ ದೇವಾರ್ಚನಂ ಧಾರ್ಮಿಕತರ್ಪಣಂ ಚ || ಕವಿತ್ವಮಾರೋಗ್ಯಮತೀವಮೋಹಾತ್ಸ್ತ್ರೀಣಾಂ ಪ್ರಿಯತ್ವಂ ಕನಕಸ್ಯ ಲಾಭಃ || ಸ್ವಪ್ನೇಪಿ ತಥ್ಯಂ ಸುಜನಸ್ಯ ಪೂಜಾ ಸ್ವರ್ಗಚ್ಯುತಾನಾಂ ಕಿಲ ಚಿಹ್ನಮೇತತ್ || ವಿರೋಧಿತಾ ಬಂಧುಜನೇಷು ನಿತ್ಯಂ ಸರಾಗತಾ ಮೂರ್ಖಜನಪ್ರಸಂಗೇ || ಅತೀವ ರೋಷಃ ಕಟುಕಾ ಚ ವಾಣೀ ನರಸ್ಯ ಚಿಹ್ನಂ ನರಕಾಗತಸ್ಯ ” ಅತ್ರ ಋಣಾನುಬಂಧಪ್ರಾಪ್ತಿನಿಯತಿಕಾಲಕರ್ಮಾದಯೋ ಜಡಾ ಈಶ್ವರಪ್ರೇರ್ಯಾ ಈಶ್ವರ ಏವ ತತ್ಫಲಪ್ರದ ಇತಿ ವಿಜ್ಞೇಯಃ.

ಇತಿ ರುದ್ರಸ್ಯ ಸರ್ವದೇಹಿನಾಂ ತತ್ತತ್ಕರ್ಮಫಲಪ್ರದಾನನಿರ್ಣಯೋ ದಶಮೋಪದೇಶೇ ನವಮಸ್ಸಂವಾದಃ.



---

ಲ್ಲಿ ಮಲಗಿದವನಂತೆಯೂ, ಸತ್ತವನಂತೆಯೂ ಇರುವುದಿಲ್ಲವು. ಮನುಷ್ಯರು ವಿದ್ಯೆಯಿಂದಲೂ, ಸಂಪತ್ತಿನಿಂದಲೂ, ತಿಳುವಳಿಕೆಯಿಂದಲೂ ತಾರತಮ್ಯವನ್ನು ಹೊಂದಿ ಶಿವನ ಆಜ್ಞಾನುಸಾರವಾಗಿ ತಮ್ಮ ತಮ್ಮ ಕರ್ಮವಿಪಾಕದದೆಸೆಯಿಂದ ಜನ್ಮವನ್ನೆತ್ತುವರು. ಸ್ವರ್ಲೋಕಭೋಗವನ್ನನುಭವಿಸುತ್ತಿದ್ದು ಮನುಷ್ಯಲೋಕಕ್ಕೆ ಬಂದಿರುವ ಜನರು ಯಾವಾಗಲೂ ದಾನಪ್ರಸಂಗವುಳ್ಳವರೂ, ಮಧುರವಚನಗಳುಳ್ಳವರೂ, ದೇವತಾರಾಧನೆಯನ್ನು ಮಾಡತಕ್ಕವರೂ, ಧರ್ಮಾರ್ಥವಾಗಿ ತರ್ಪಣಕ್ರಿಯೆಯುಳ್ಳವರೂ, ಕಾವ್ಯಕರ್ತರೂ, ಆರೋಗ್ಯಶಾಲಿಗಳೂ, ಸ್ತ್ರೀಸಂಬಂಧವಾದ ಮೋಹವುಳ್ಳವರೂ, ಪ್ರೀತಿಯುಳ್ಳವರೂ, ಸುವರ್ಣಲಾಭವುಳ್ಳವರೂ, ಸ್ವಪ್ನದಲ್ಲೂ ಸತ್ಯವನ್ನೇ ನುಡಿಯತಕ್ಕವರೂ, ಸಜ್ಜನರನ್ನು ಪೂಜಿಸತಕ್ಕವರೂ, ಆಗಿರುತ್ತಾರೆ. ನರಕವನ್ನನುಭವಿಸುತ್ತಿದ್ದು ಮಾನವಲೋಕಕ್ಕೆ ಬಂದಿರುವವರು ಯಾವಾಗಲೂ ಬಂಧುಜನರಲ್ಲಿ ವಿರೋಧವನ್ನು ಬಳಸತಕ್ಕವರೂ, ದುರ್ಜನಸಂಸರ್ಗವುಳ್ಳವರೂ, ಪರಮಕುಪಿತರೂ, ಕಠಿಣವಚನಗಳನ್ನು ನುಡಿಯತಕ್ಕವರೂ ಆಗಿರುತ್ತಾರೆ,, ಎಂದು ಹೇಳಲ್ಪಟ್ಟಿದೆ. ಇಲ್ಲಿ, ಋಣಾನುಬಂಧ, ಅದೃಷ್ಟ, ಕಾಲ, ಕರ್ಮ ಮೊದಲಾದವುಗಳು ಜಡರೂಪಗಳಾಗಿರುವುದರಿಂದ ಈಶ್ವರನಿಂದ ಪ್ರೇರಿಸಲ್ಪಡತಕ್ಕವುಗಳಾಗಿರುತ್ತವೆ. ಈಶ್ವರನೇ ಆಯಾ ಕರ್ಮಗಳಿಗೆ ತಕ್ಕ ಫಲಗಳನ್ನು ಕೊಡತಕ್ಕವನಾಗಿರುತ್ತಾನೆ. ಎಂದು ತಿಳಿಯತಕ್ಕದ್ದು.

ಎಂಬಲ್ಲಿಗೆ ರುದ್ರನಿಗೆ ಸಕಲದೇಹಿಗಳ ತತ್ತತ್ಕರ್ಮಫಲಪ್ರದಾನನಿರ್ಣಯವನ್ನು ಹೇಳುವ ಹತ್ತನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.



ಇತಿ ಶ್ರೀ ಸೋಸಲಿರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕ ಸಂವಾದರೂಪಶಿವಾಧಿಕ್ಯಶಿಖಾಮಣೌ ಕೃಷ್ಣಾರ್ಜುನಸಂವಾದಾ ದಿನವಸಂವಾದವಿಚಾರೋ ದಶಮೋಪದೇಶಃ.



ಶ್ರೀಮೃತ್ಯುಂಜಯಾಯನಮಃ.

## ಏಕಾದಶೋಪದೇಶಃ ಪ್ರಾರಭ್ಯತೇ.



### ಯಕ್ಷರುದ್ರಾಜ್ಞಾಸಾಮರ್ಥ್ಯವಿಧಿಃ.

ರೇ—ಹೇ ಚೋಳ! ಶ್ರುತಿಪ್ರಸಿದ್ಧಂ ಯಕ್ಷರುದ್ರಾಜ್ಞಾಬಲಂ ಶೃಣುಕಾಂ, ತವಲ್ಕಾರೋಪನಿಷದಿ,—"ಅಥ ವಾಯುಮಬ್ರುವನ್ | ವಾಯವೇ ತದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ || ತದಭ್ಯದ್ರವತ್ತಮಭ್ಯವದತ್ಕೋಽಸೀತಿ ವಾಯುರ್ವಾ ಅಹಮಸ್ಮೀತ್ಯಬ್ರವೀನ್ಮಾತರಿಶ್ವಾ ವಾ ಅಹಮಸ್ಮೀತಿ || ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಂ ಸರ್ವಮಾದದೀಯಂ ಯದಿದಂ ಪೃಥಿವ್ಯಾಮಿತಿ || ತಸ್ಮೈ ತೃಣಂ ನಿದ

---

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಹತ್ತನೆಯ ಉಪದೇಶವು ಸಂಪೂರ್ಣವಾಯಿತು.



## ಹನ್ನೊಂದನೆಯ ಉಪದೇಶ ಪ್ರಾರಂಭವು.

### ಯಕ್ಷರುದ್ರಾಜ್ಞಾಸಾಮರ್ಥ್ಯವಿಧಿಯು.

ರೇ—ಎಲೈ ಚೋಳನೇ! ಶ್ರುತಿಪ್ರಸಿದ್ಧವಾದ ಯಕ್ಷರುದ್ರನ ಆಜ್ಞಾಸಾಮರ್ಥ್ಯವನ್ನು ಕೇಳು; ತವಲ್ಕಾರೋಪನಿಷತ್ತಿನಲ್ಲಿ— "ಆ ಈ ಯಕ್ಷನ ಸ್ವರೂಪವೆಂತಹುದೆಂಬುದಂ ತಿ (ವಾಯುವು) ಹಾಗೆಯೇ ಆಗಲಿ ಎಂದು ಆ ಯಕ್ಷನ ಎದುರಾಗಿ ಹೊಂದಿದನು. (ಯಕ್ಷನು) ನೀನಾವನು? (ವಾಯು) ನಾನು ವಾಯುಪುರುಷನು. (ಯಕ್ಷನು) ಆ ನಿನ್ನಲ್ಲಿ ಏನುಸಾಮರ್ಥ್ಯವಿರುತ್ತದೆ? (ವಾಯು) ಭೂಮಿಯಲ್ಲಿರುವ ಈ ಸಕಲ ಪದಾರ್ಥಗಳನ್ನೂ ಪರಿಗ್ರಹಿಸತಕ್ಕವನಾಗಿರುತ್ತೇನೆ, (ಯಕ್ಷನು) ಈ ತೃಣವನ್ನು ಪರಿಗ್ರಹಿಸು ಎಂದು ಮುಂದಿಟ್ಟನು. (ವಾಯು)

ಧಾವೇಶದಾದಶ್ನೈತಿ ತದುಪಪ್ರೀಯೂಯ ಸರ್ವಜವೇನ ತನ್ನ ಶಶಾಕಾದಾತುಂ ಸ ಕ ಏವ ನಿವವೃತೇ '' ಇತ್ಯಾದಿ. ಸ್ಕಾಂದೇ ಸನತ್ಕುಮಾರಸಂಹಿತಾಯಾಂ ಭೃಂಗೀಶ್ವರಕೃತಸ್ತೋತ್ರೇ,—'' ನಾಲಂ ಚಾಲಯಿತುಂ ತೃಣಂ ಚ ಪವನಶ್ಶಂಭೋ ತ್ವದಾಜ್ಞಾಂ ವಿನಾ ದಗ್ಧುಂ ತನ್ನಸಮರ್ಥ ಏಷ ದಹನಶ್ಛೇತ್ತುಂ ನ ವಜ್ರೇಣ ತತ್ || ಶಕ್ರೋ ಗೋತ್ರಭಿದಪ್ಯಹೋ ಜಗದಿದಂ ಸರ್ವಂ ತ್ವದಾಜ್ಞಾವಶಂ ಕಾರುಣ್ಯಾಕರ ಭೋ ಪಿತಃ ಪಶುಪತೇ ದೋಷಾಕರಂ ಪಾಹಿ ಮಾಂ '' ಇತಿ. ಶೈವೇ ವಾಯವೀಯ ಸಂಹಿತಾಯಾಂ,—ವಿಷ್ಣುಂ ಪ್ರತ್ಯುಪಮನ್ಯುವಾಕ್ಯಂ, '' ಆಶ್ಚರ್ಯಮಿದಂ ಕೃಷ್ಣ ಶಂಭೋರಮಿತಕರ್ಮಣಃ || ಆಜ್ಞಾಕೃತಂ ಶೃಣುಷ್ವೈತಚ್ಛ್ರುತಂ ಶ್ರುತಿಮುಖೇ ಮಯಾ || ಪುರಾ ಕಿಲ ಸುರಾಸ್ಸರ್ವೇ ಸಂಯುತಾಸ್ತೇ ಪರಸ್ಪರಂ || ಅಸುರಾನ್ ಸಮರೇ ಜಿತ್ವಾ ಜೇತಾಹಮಹಮಿತ್ಯುತ || ತದಾ ಮಹೇಶ್ವರಸ್ತೇಷಾಂ ಮಧ್ಯತೋಽಮರವೇಷಧೃತ್ || ಸ್ವಲಕ್ಷಣೈರ್ವಿಹೀನಾಂಗಸ್ಸ್ವಯಂ ಯಕ್ಷ ಇವಾಭವತ್ || ಸ ತಾನಾಹ ಸುರಾನ್ಯಕ್ಷಸ್ತೃಣಮಾದಾಯ ಭೂತಲೇ||ಯ ಏತದ್ವಿಕೃತಿಂ ಕರ್ತುಂ ಕ್ಷಮತೇ ಸ ಹಿ ದೈತ್ಯಜಿತ್ || ಇತಿ ಯಕ್ಷವಚಶ್ಶ್ರುತ್ವಾ ವಜ್ರಪಾಣಿಶ್ಶಚೀಪತಿಃ || ಕಿಂಚಿ

---

ತನ್ನ ಸಾಮರ್ಥ್ಯವೆನಿಸಿದ ವೇಗದಿಂದ ಆ ತೃಣದಮುಂದೆ ಹೋಗಿ ಅದನ್ನು ತೆಗೆದುಕೊಳ್ಳುವುದಕ್ಕಸಮರ್ಥನಾಗಿ ಹಿಂದಿರುಗಿದನು,, ಎಂದು ಹೇಳಲ್ಪಟ್ಟಿದೆ. ಸ್ಕಾಂದಪುರಾಣಾಂತರ್ಗತವಾದ ಸನತ್ಕುಮಾರಸಂಹಿತೆಯಲ್ಲಿರುವ ಭೃಂಗೀಶ್ವರರಚಿತವಾದ ಶಿವಸ್ತೋತ್ರದಲ್ಲಿ—''ಎಲೈ ಪರಮೇಶ್ವರನೇ! ನಿನ್ನಾಜ್ಞೆಯಿಲ್ಲದೆ ಚಂಡಮಾರುತನು ಹುಲ್ಲನ್ನಲ್ಲಾಡಿಸುವುದಕ್ಕೂ ಸಮರ್ಥನಲ್ಲ. ಈಕಾಲಾಗ್ನಿಯು ಆ ಹುಲ್ಲನ್ನು ಸುಡುವುದಕ್ಕೂ ಸಮರ್ಥನಲ್ಲ. ಇಂದ್ರನು ವಜ್ರಾಯುಧದಿಂದ ಬೆಟ್ಟಗಳನ್ನು ಸೀಳತಕ್ಕವನಾದಾಗ್ಯೂ ತನ್ನ ಆ ವಜ್ರಾಯುಧದಿಂದ ಹುಲ್ಲನ್ನು ಕತ್ತರಿಸುವುದಕ್ಕೂ ಸಮರ್ಥನಲ್ಲ. ಇದು ಆಶ್ಚರ್ಯವು! ಬ್ರಹ್ಮಾದಿತೃಣಾಂತವಾದ ಈ ಸಮಸ್ತಲೋಕವು ನಿನ್ನಾಜ್ಞೆಗೆ ಅಧೀನವಾಗಿದೆ. ಆದ್ದರಿಂದ ಕೃಪಾನಿಧಿಯೂ. ಬ್ರಹ್ಮಾದಿಪಶುಗಳಿಗೊಡೆಯನೂ, ಆಗಿರುವ ಎಲೈ ಜಗತ್ಪತಿಯಾದ ಶಿವನೇ ! ಸಕಲ ದೋಷಗಳಿಗೆ ಆಶ್ರಯನಾಗಿರುವ ನನ್ನನ್ನು ರಕ್ಷಿಸು,, ಎಂದು ಹೇಳಲ್ಪಟ್ಟಿದೆ. ವಾಯವೀಯಸಂಹಿತೆಯಲ್ಲಿ—''ಎಲೈ ಕೃಷ್ಣನೇ ! ಶಿವನ ಆಜ್ಞೆಯಿಂದುಂಟಾದ ಬಹು ಆಶ್ಚರ್ಯಕರವಾದ ಸಂಗತಿಯನ್ನು ಕೇಳು; ನಾನು ಈ ಸಂಗತಿಯನ್ನು ಶ್ರುತಿಯಲ್ಲಿ ಹೇಳಿರುವುದನ್ನು ಕೇಳಿದೆನು. ಪೂರ್ವದಲ್ಲಿ ಸಕಲದೇವತೆಗಳು ಒಟ್ಟಾಗಿ ರಾಕ್ಷಸರೊಡನೆ ಯುದ್ಧವನ್ನು ಮಾಡಿ ಜಯಶೀಲರಾಗಿ, ನಾನು ಜೈಸಿದೆನು. ನಾನು ಜೈಸಿದೆನೆಂದು ಒಬ್ಬರಿಗೊಬ್ಬರು ಜಗಳವಾಡುತ್ತಿದ್ದಾಗ್ಯೆ ಶಿವನು ತನ್ನ ಚಿಹ್ನೆಗಳನ್ನು ಮರೆಮಾಚಿಕೊಂಡು, ದೇವತಾವೇಷಧರಿಸಿ ಅವರ ಮಧ್ಯದಲ್ಲಿ ಯಕ್ಷನಂತೆ ಕಾಣಿಸಿಕೊಂಡು. ನೆಲದಮೇಲೆ ಬಿದ್ದಿದ್ದ ಒಂದು ಹುಲ್ಲನ್ನು ಕೈಯಿಂದ ತೆಗೆದುಕೊಂಡು ಈ ಹುಲ್ಲನ್ನಲ್ಲಾಡಿಸುವವನೇ ರಾಕ್ಷಸರನ್ನು ಜೈಸಿದವನೆಂದು

ಶ್ಚಕೃದ್ಧೋ ವಿಹಸ್ಯಾಪಿ ತೃಣಮಾದಾತುಮುದ್ಯತಃ || ಯದ್ಯತ್ತೃಣಮುಪಾದಾತುಂ ಮನಸಾಪಿ ನ ಶಕ್ಯತೇ ||ಯದಾ ತದಾಪಿ ತಚ್ಛೇತ್ತುಂ ವಜ್ರಂ ವಜ್ರಧರೋಽಧವತ್|| ತದ್ವಜ್ರಂ ಪ್ರತಿವಜ್ರೇಣ ಸಂಸ್ಪೃಷ್ಟಮಿವ ಸರ್ವತಃ || ತೃಣೇನಾಭಿಹತಂ ತೇನ ತಿರ್ಯಗಗ್ರಂ ಪಪಾತ ಹ || ತತಶ್ಚಾನ್ಯೇಪಿ ಸಂರಬ್ಧಾ ಲೋಕಪಾಲಾ ಮಹಾಬಲಾಃ||ದಧ್ರೇವ ತದುದ್ದಿಶ್ಯ ಸ್ವಾಯುಧಾನಿ ಸಹಸ್ರಶಃ|| ಪ್ರಜಜ್ವಾಲ ಮಹಾನ್ವಹ್ನಿಃ ಪ್ರಚಂಡಃ ಪವನೋ ವವೌ || ಆಯುಧಾನಿ ಯಮಾದೀನಾಂ ಕುಂಠಿತಾನಿ ಬಭೂವತುಃ || ಪ್ರವೃದ್ಧಮನ್ಯವೋ ದೇವಾಃ ಪ್ರಳಯಸ್ಸಮುಪಸ್ಥಿತಃ || ಏವಂ ದೇವೈಸ್ಸಮಾರಬ್ಧಂ ಸರ್ವಂ ಸಾಮರ್ಥ್ಯಮುತ್ಕಟಂ || ವ್ಯರ್ಥಮಾಸೀದಹೋ ಕೃಷ್ಣ ಯಕ್ಷಸ್ಯಾಜ್ಞಾಬಲೇನ ವೈ || ತದಾಹ ಯಕ್ಷಂ ದೇವೇಂದ್ರಃ ಕೋ ಭವಾನಿತ್ಯಮರ್ಷತಃ || ತತಸ್ಸ ಪಶ್ಯತಾಮೇವ ತೇಷಾಮಂತರಧೀಯತ'' ಸೂತಗೀತಾಯಾಂ,—''ಶಿವಸ್ಯಾಜ್ಞಾಬಲಾದ್ವಿಷ್ಣುರ್ಜಾಯತೇ ಮ್ರಿಯತೇಪಿ ಚ||ಬ್ರಹ್ಮಾ ಸರ್ವಜಗತ್ಕರ್ತಾ ವಿರಾಟ್ಸಮ್ರಾಟ್ಸ್ವರಾಡಪಿ || ಬ್ರಹ್ಮಣಶ್ಚ ತಥಾ ವಿಷ್ಣೋರ್ದಂಶಸ್ಯ ಮಶಕಸ್ಯ ಚ || ಪ್ರವೃತ್ತೇಶ್ಚ ನಿವೃತ್ತೇಶ್ಚ ಹೇತುರಿಚ್ಛಾ ಪಿನಾಕಿನಃ'' ಇತ್ಯಾದಿ.

---

ಪರಿಭಾವಿಸಬೇಕೆಂದನು. ಇಂದ್ರನು ಯಕ್ಷನ ಮಾತನ್ನು ಕೇಳಿ, ಸ್ವಲ್ಪ ಕೋಪವನ್ನು ಹೊಂದಿ, ನಕ್ಕು; ಹುಲ್ಲನ್ನು ತೆಗೆದುಕೊಳ್ಳುವುದಕ್ಕೆ ಯತ್ನಿಸಿದನಾದಾಗ್ಯೂ ಮನಸ್ಸಿನಿಂದಲೂ ತೆಗೆದುಕೊಳ್ಳುವುದರಲ್ಲಿ ಶಕ್ತನಾಗದೆ ಅದನ್ನು ವಜ್ರಾಯುಧದಿಂದ ಕಡಿಯುವುದಕ್ಕೆ ಉದ್ಯುಕ್ತನಾದನು. ಆಗ ಆ ವಜ್ರಾಯುಧವು ಆ ಹುಲ್ಲಿನಿಂದ ಹೊಡೆಯಲ್ಪಟ್ಟದಾಗಿ ಪ್ರತಿವಜ್ರಾಯುಧದಿಂದ ಹೊಡೆಯಲ್ಪಟ್ಟದ್ದೋ ಎಂಬಹಾಗೆ ಮಡಿಸಿಹೋದ ತುದಿಯುಳ್ಳುದಾಗಿ ಬಿದ್ದಿತು. ಬಳಿಕ ಉಳಿದ ಮಹಾಬಲಶಾಲಿಗಳಾದ ದಿಕ್ಪತಿಗಳು ಆ ಹುಲ್ಲನ್ನು ಕತ್ತರಿಸುವುದಕ್ಕಾಗಿ ಅನೇಕ ಆಯುಧಗಳನ್ನು ಧರಿಸಿದರು. ಆಗ ಅಗ್ನಿಯು ಪ್ರಜ್ವಲಿಸಿದನು. ವಾಯುವು ಕ್ರೂರವಾಗಿ ಬೀಸಿತು. ಯಮಾದಿಗಳ ಆಯುಧಗಳು ಮೊಟಕಾದವು. ಹೀಗಾಗುತ್ತಿರುವಾಗ್ಗೆ ದೇವತೆಗಳಿಗೆ ಆ ಹುಲ್ಲಿನ ವಿಷಯದಲ್ಲಿ ಕೋಪವು ಹೆಚ್ಚಿತು. ಆಗ ಪ್ರಳಯಕಾಲವೇ ಉಂಟಾಯಿತೋ ಎಂಬಹಾಗೆ ತೋರಿತು. ಈ ರೀತಿಯಾಗಿ ದೇವತೆಗಳ ಪ್ರಬಲವಾದ ಸಕಲ ಸಾಮರ್ಥ್ಯವು ಪ್ರಯೋಜನವಿಲ್ಲದುದಾಯಿತು. ಆಗ ಇಂದ್ರನು ನೀನಾವನೆಂದು ಯಕ್ಷನನ್ನು ಕೇಳಿದನು. ಆ ಯಕ್ಷನಾದರೋ ಅವರೆಲ್ಲರೂ ನೋಡುತ್ತಿರುವಾಗಲೇ ಮರೆಯಾದನು,, ಎಂದು ಉಪಮನ್ಯುಮುನಿಯಿಂದ ಕೃಷ್ಣನನ್ನು ಕುರಿತು ಹೇಳಲ್ಪಟ್ಟದೆ. ಸೂತಗೀತೆಯಲ್ಲಿ—''ಶಿವನ ಆಜ್ಞಾಬಲದಿಂದಲೇ ವಿಷ್ಣುವು ಜನನ ಮರಣಗಳನ್ನನುಭವಿಸುತ್ತಾನೆ. ಬ್ರಹ್ಮನು ಜಗತ್ಕರ್ತನೂ, ವಿರಾಟ್ಪುರುಷನೂ, ಮಂಡಲೇಶ್ವರನೂ, ಸ್ವರಾಜ್ಯಾಧಿಪತಿಯೂ ಆಗಿರುತ್ತಾನೆ. ಬ್ರಹ್ಮನಿಗೂ, ವಿಷ್ಣುವಿಗೂ, ಕಾಡುನೊಣಕ್ಕೂ, ಸೊಳ್ಳೆಗೂ, ಪ್ರವೃತ್ತಿಗೂ, ನಿವೃತ್ತಿಗೂ ಪಿನಾಕಧಾರಿಯಾದ ಶಿವನ ಇಚ್ಛಾಶಕ್ತಿಯೇ ಕಾರಣವಾಗಿರುತ್ತದೆ,, ಎಂದು ಹೇಳಲ್ಪಟ್ಟದೆ. ಇತ್ಯಾದಿವಚನಗಳಿಂದ ರುದ್ರನಾಜ್ಞಾಸಾಮರ್ಥ್ಯವು ಪ್ರಸಿದ್ಧವಾಗಿದೆ.

ಇತಿ ಯಕ್ಷರುದ್ರಾಜ್ಞಾಸಾಮರ್ಥ್ಯವಿಧಿರೇಕಾದಶೋಪದೇಶೇ
ಪ್ರಥಮಸ್ಸಂವಾದಃ.



ಶ್ರೀಃ.

## ರುದ್ರಸ್ಯನಿತ್ಯಸಿದ್ಧಪಾಶುಪತ್ಯಪಟ್ಟಾಭಿಷೇಕನಿರ್ಣಯವಿಧಿಃ.

ಚೋ—" ಸೋಽಬ್ರವೀದ್ವರಂ ವೃಣೇ | ಅಹಮೇವ ಪಶೂನಾಮಧಿಪತಿರಸಾನಿ " ಇತಿ ಋಗ್ವೇದವಾಕ್ಯಾತ್, ಹೇ ರೇಣುಕಗಣೇಶ! ಪುರಾ ತ್ರಿಪುರಸಂಹಾರಸಮಯೇ ರುದ್ರೇಣ ಪಾಶುಪತ್ಯವರಯಾಚನಂ- ಕೃಪಣೋಚಿತಮತಸ್ತಸ್ಯಸ್ವಾತಂತ್ರ್ಯಂ ನ ಯುಕ್ತಂ.

ರೇ—ಭೋ ಚೋಳ! ಲೋಕೇ ದಂಡನಾಥಸಚಿವಸೇನಾಪತಿಸಾಮಂತಪುರೋಹಿತಾದಿಭಿಸ್ಸಕಲಪೌರಜನೈಃ ಸಾಮ್ರಾಜ್ಯಪಟ್ಟಾಭಿಷಿಕ್ತಸ್ಯ ರಾಜಕುಮಾರಸ್ಯ ಯಥಾ ಸ್ವಾಮಿತ್ವಸ್ವಾತಂತ್ರ್ಯಾದಿಕಂ ಪ್ರಸಿದ್ಧಂ. ತಥಾ ರುದ್ರಸ್ಯ ಪಾಶುಪತ್ಯಂ ನಿತ್ಯಸಿದ್ಧಮೇವ. ತದುಕ್ತಂ ಯಜುರ್ವೇದೇ,-" ನಮಶ್ಶರ್ವಾಯ ಚ ಪಶುಪತಯೇ ಚ "-

---

ಎಂಬಿಲ್ಲಿಗೆ ಯಕ್ಷರುದ್ರಾಜ್ಞಾಸಾಮರ್ಥ್ಯವಿಧಿಯನ್ನು ಹೇಳುವ ಹನ್ನೊಂದನೆಯ
ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



## ರುದ್ರನಿಗೆ ನಿತ್ಯಸಿದ್ಧವಾದ ಪಶುಪತಿಪಟ್ಟಾಭಿಷೇಕನಿರ್ಣಯವಿಧಿಯು.

ಚೋ—"ನಾನೇ ಪಶುಪತಿಯಾಗಬೇಕೆಂದು ವರವನ್ನು ಆ ಶಿವನು ಪ್ರಾರ್ಥಿಸಿದನು,, ಎಂದು ಹೇಳತಕ್ಕ ಋಗ್ವೇದವಾಕ್ಯವಿರುವುದರಿಂದ ಎಲೈ ರೇಣುಕಗಣೇಶನೇ! ಪೂರ್ವದಲ್ಲಿ ತ್ರಿಪುರನಾಶವನ್ನುಂಟುಮಾಡಿದ ಕಾಲದಲ್ಲಿ ರುದ್ರನು ಪಾಶುಪತ್ಯವರವನ್ನು ಬೇಡಿಕೊಂಡದ್ದು ಕಾರ್ಪಣ್ಯಬುದ್ಧಿಯುಳ್ಳವನಿಗುಚಿತವಾದ್ದರಿಂದ ಅವನಿಗೆ ಸ್ವಾತಂತ್ರ್ಯತೆಯಿರುತ್ತದೆಯೆಂದು ಹೇಳತಕ್ಕುದು ಸರಿಯಲ್ಲವು.

ರೇ—ಎಲೈ ಚೋಳನೇ! ಲೋಕದಲ್ಲಿ ದಂಡನಾಥ, ಸಚಿವ, ಸೇನಾಪತಿ, ಸಾಮಂತ, ಪುರೋಹಿತ ಮೊದಲಾದ ಎಲ್ಲಾ ಪುರಜನರೂ ಒಟ್ಟುಗೂಡಿ, ರಾಜಕುಮಾರನನ್ನು ಸಾಮ್ರಾಜ್ಯಪಟ್ಟಾಭಿಷಿಕ್ತನನ್ನಾಗಿ ಮಾಡಿ, ಸ್ವಾಮಿಯನ್ನಾಗಿಯೂ ಸ್ವತಂತ್ರನನ್ನಾಗಿಯೂ ನಿಯಮಿಸುವಂತೆ, ರುದ್ರನಿಗೆ ಪಶುಪತಿತ್ವವು ನಿತ್ಯಸಿದ್ಧವಾಗಿದೆ. ಆ ವಿಚಾರವು ಯಜುರ್ವೇದದಲ್ಲಿ—"ಬ್ರಹ್ಮಾದಿಪ

“ ಬ್ರಹ್ಮಾದಯಃ ಪಶವೋ ರುದ್ರಃ ಪಶೂನಾಮಧಿಪತಿಃ ” ವಾಯುವೀಯಸಂಹಿತಾಯಾಂ,—“ ಬ್ರಹ್ಮಾದಿಸ್ತಂಬಪರ್ಯಂತಾಃ ಪಶವಃ ಪರಿಕೀರ್ತಿತಾಃ ॥ ತೇಷಾಂ ಪತಿತ್ವಾದ್ದೇವೇಶಃ ಶಿವಃ ಪಶುಪತಿಸ್ಸ್ಮೃತಃ ” ಇತಿ. ತತ್ತಾವದಾಸ್ತಾಂ, ಅಯೇ ವಿಜಯೇಂದ್ರಚೋಳ ! ಮಧುಕೈಟಭಾಸುರಾಭ್ಯಾಂ ವಿಷ್ಣುನಾಪಿ ವರಯಾಚನಂ ಕೃತಾಂ, ಮಾರ್ಕಂಡೇಯಪುರಾಣೇ,—“ ತಾವಪ್ಯತಿಬಲೋದ್ರಿಕ್ತೌ ವಿಷ್ಣುಮಾಯಾವಿಮೋಹಿತೌ ॥ ಉಕ್ತವಂತೌ ಮದೋನ್ಮತ್ತೌ ವ್ರಿಯತಾಮಿತಿ ಕೇಶವಂ ॥ (ಹರಿರುವಾಚ) ಭವೇತಾಮದ್ಯ ಮೇ ತುಷ್ಟೌ ಮಮ ವಧ್ಯಾವುಭಾವಪಿ ॥ ಕಿಮನ್ಯೇನ ವರೇಣಾದ್ಯ ಏತಾವದ್ಧಿ ವೃತಂ ಮಯಾ ” ಇತಿ. ಸುರಾಪಾನಾಸಕ್ತಮಧುಕೈಟಭಾಸುರವರದಾನಾತ್, ಸುಧಾಪಾನಾಸಕ್ತಸುರಶ್ರೇಷ್ಠವರಂ ನ ಶ್ರೇಷ್ಠತರಂ ವಾ ? ಭೂರಪ್ಪಣಸ್ಯಾದಿನಾರಾಯಣಸ್ಯ ಬಲೇಃ ತ್ರಿಪದಪರಿಮಿತಭೂಮಿಯಾಚನೇ ಕೃಪಣತ್ವಮಸ್ತ್ಯೇವ “ ಸಕ್ತಸ್ಯ ದೇವಪೂಜಾಸು ವಿಪ್ರಸ್ಯಾಢಕಿಕಾಂ ಮಹೀಂ ॥ ದತ್ವಾ ಲಭತೇ

ಶುಗಳಿಗೊಡೆಯನಾದ ಶಿವನಿಗೋಸ್ಕರ ನಮಸ್ಕಾರವು,, ಎಂದೂ, “ಬ್ರಹ್ಮಾದಿಗಳು ಪಶುಗಳಾಗಿರುವರು. ಆ ಪಶುಗಳಿಗೆ ರುದ್ರನು ಅಧಿಪತಿಯಾಗಿರುವನು,, ಎಂದೂ ಹೇಳಲ್ಪಟ್ಟಿದೆ. ವಾಯುವೀಯಸಂಹಿತೆಯಲ್ಲಿ—“ಬ್ರಹ್ಮ ಮೊದಲಾಗಿ ತೃಣಪರ್ಯಂತರವಾಗಿರುವ ಪ್ರಾಣಿಗಳೆಲ್ಲರೂ ಪಶುಗಳೆಂದು ಹೇಳಲ್ಪಟ್ಟಿರುವರು. ದೇವಾಧಿಪತಿಯಾಗಿರುವ ಶಿವನು ಆ ಪಶುಗಳಿಗೊಡೆಯನಾದ್ದರಿಂದ ಪಶುಪತಿಯೆಂದು ನೆನೆಯಲ್ಪಟ್ಟನು,, ಎಂದು ಹೇಳಲ್ಪಟ್ಟಿದೆ. ಅದಂತಿರಲಿ. ಎಲೈ ವಿಜಯೇಂದ್ರಚೋಳನೇ! ವಿಷ್ಣುವು ಮಧು ಕೈಟಭರೆಂಬ ಅಸುರರದೆಸೆಯಿಂದ ವರವನ್ನು ಕೇಳಿಕೊಂಡ ಸಂಗತಿಯನ್ನು ಕೇಳು; ಮಾರ್ಕಂಡೇಯಪುರಾಣದಲ್ಲಿ — “ಅಧಿಕಸಾಮರ್ಥ್ಯದಿಂದ ಕೊಬ್ಬಿದವರಾದ ಆ ಮಧುಕೈಟಭಾಸುರರು ವಿಷ್ಣುಮಾಯೆಯಿಂದ ವಿಶೇಷವಾಗಿ ಮೋಹವನ್ನು ಹೊಂದಿ, ಗರ್ವದಿಂದ ಉನ್ಮತ್ತಾವಸ್ಥೆಯನ್ನು ಹೊಂದಿ, ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ! ನಮ್ಮಿಂದೇನಾದರೊಂದು ವರವನ್ನು ಕೇಳಿ ತೆಗೆದುಕೊಳ್ಳುವವನಾಗೆಂದು ಹೇಳಿದರು. ವಿಷ್ಣುವು ನನಗೆ ವರವನ್ನು ಕೊಡುವ ವಿಷಯದಲ್ಲಿ ಸಂತೋಷಪಡುತ್ತಿರುವ ನೀವಿಬ್ಬರೂ ಈಗ ನನ್ನಿಂದ ಸಂಹರಿಸಿಕೊಳ್ಳಲಿಕ್ಕೆ ಯೋಗ್ಯರಾಗಿರಿ. ಮಿಕ್ಕವರಗಳಿಂದ ಪ್ರಯೋಜನವಿಲ್ಲವಾದ್ದರಿಂದ ಈ ವರವನ್ನು ಯಾಚಿಸಿರುತ್ತೇನೆಂದು ವಿಷ್ಣುವು ಹೇಳಿದನು” ಎಂದು ಹೇಳಲ್ಪಟ್ಟಿದೆ. ಮದ್ಯಪಾನಾಸಕ್ತರಾದ ಮಧುಕೈಟಭಾಸುರರದೆಸೆಯಿಂದ ವರಯಾಚನೆಯಂ ಮಾಡಿದುದಕ್ಕಿಂತಲೂ, ಅಮೃತಪಾನಾಸಕ್ತರಾದ ದೇವತೆಗಳದೆಸೆಯಿಂದ ವರಯಾಚನೆಯನ್ನು ಮಾಡಿದುದು ಶ್ರೇಷ್ಠವಲ್ಲವೇ ? ಬಹುಮಾತುಗಳಿಂದೇನು. ಭೂದೇವಿಗೆ ಪತಿಯಾದ ಆದಿನಾರಾಯಣನಿಗೆ ಬಲಿಚಕ್ರವರ್ತಿಯದೆಸೆಯಿಂದ ಮೂರುಹೆಜ್ಜೆಯ ಪರಿಮಾಣವನ್ನುಳ್ಳ ಭೂಮಿಯನ್ನು ಯಾಚಿಸಿದುದರಿಂದ ಕೃಪಣತ್ವವಿರುತ್ತದೆ,, ಎಂದು ಹೇಳಲ್ಪಟ್ಟಿದೆ. “ದೇವಪೂಜೆಯಲ್ಲಾಸಕ್ತನಾದ ಬ್ರಾಹ್ಮಣನಿಗೋಸ್ಕರ ಒಂದುಕೊಳಗ ಭೂಮಿಯನ್ನು ದಾನಮಾಡಿದವನು

ಗಂಗಾಯಾಂ ತ್ರಿರಾತ್ರಸ್ನಾನಜಂ ಫಲಂ" ಇತ್ಯಾದಿಬೃಹನ್ನಾರದೀಯೇ ಪ್ರಸಿದ್ಧಂ. ವಿಸ್ತರಭಯಾನ್ನೇಹಲಿಖಿತಂ.

ಇತಿ ರುದ್ರಸ್ಯ ನಿತ್ಯಸಿದ್ಧಪಾಶುಪತ್ಯಪಟ್ಟಾಭಿಷೇಕನಿರ್ಣಯವಿಧಿರೇಕಾದಶೋಪದೇಶೇ ದ್ವಿತೀಯಸ್ಸಂವಾದಃ.

---

ಶ್ರೀಃ.

## ಕಾಲಭೈರವರುದ್ರೇಣಬ್ರಹ್ಮಶಿರಶ್ಛೇದನವಿಧಿಃ.

ಚೋ—"ತತ್ಸ್ಮೃತ್ವಾ ಕ್ರೋಧಯುಕ್ತೇನ ಶಂಕರೇಣ ಮಹಾತ್ಮನಾ ‖ ನಖಾಗ್ರೇಣ ಶಿರಶ್ಛಿನ್ನಂ ಬ್ರಾಹ್ಮಂ ಪುರುಷವಾದಿ ತತ್ ‖ ತತಸ್ಸಮಾಗತಾ ರೌದ್ರೀ ನೀಲಾಂಜನಗಿರಿಪ್ರಭಾ ‖ ಸರಕ್ತಮೂರ್ಧಜಾ ಯಾತಾ ಬ್ರಹ್ಮಹತ್ಯಾ ಹರಾಂತಿಕಂ" ಇತಿ ವಾಮನಪುರಾಣವಾಕ್ಯಾತ್, ಪಾಶುಪತ್ಯಸಾಮರ್ಥ್ಯಾತ್ಪಶುಪತಿನಾ ಬ್ರಹ್ಮಹತ್ಯಾದೋಷಃ ಕೃತಃ, ಸ ತು ತಸ್ಯ ಕಿನ್ನ ದೋಷಃ?

ರೇ—ಭೋ ಚೋಳ! ವಿಚಾರಮೂಢೇನ ತ್ವಯಾ ಕೃತಶಂಕಾಯಾಃ ಪರಿಹಾರಶ್ಶ್ರೂಯತಾಂ, ಸ್ಕಾಂದೇ ಕಾಶೀಖಂಡೇ,—"ಕಾಪಾಲಿಕೋ ಯಯೌ ದೇ

---

ಮೂರುರಾತ್ರಿ ಗಂಗಾಸ್ನಾನದಿಂದುಂಟಾಗುವ ಫಲವುಂಟಾಗುವುದು" ಇತ್ಯಾದಿವಚನವು ಬೃಹನ್ನಾರದೀಯದಲ್ಲಿ ಪ್ರಸಿದ್ಧವಾಗಿದೆ. ಗ್ರಂಥವಿಸ್ತಾರಭಯದಿಂದ ಇಲ್ಲಿ ಬರೆಯಲ್ಪಡಲಿಲ್ಲವು.

ಎಂಬಲ್ಲಿಗೆ ರುದ್ರನಿಗೆ ನಿತ್ಯಸಿದ್ಧವಾದ ಪಾಶುಪತ್ಯಪಟ್ಟಾಭಿಷೇಕನಿರ್ಣಯವಿಧಿಯನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



### ಕಾಲಭೈರವರುದ್ರನಿಂದುಂಟಾದ ಬ್ರಹ್ಮಶಿರಶ್ಛೇದನವಿಧಿಯು.

ಚೋ—ಕಠಿನವಾದ ಮಾತನ್ನು ನುಡಿದ ಬ್ರಹ್ಮನ ತಲೆಯನ್ನು ಶಿವನು ಉಗುರಿನ ತುದಿಯಿಂದ ಕತ್ತರಿಸಿದನು. ಆ ಬ್ರಹ್ಮಹತ್ಯೆಯು—ಭೀಕರಸ್ವರೂಪವುಳ್ಳದಾಗಿ ನೀಲಪರ್ವತದಂತೆಯೂ, ಅಂಜನಪರ್ವತದಂತೆಯೂ ಕಾಂತಿಯನ್ನು ಹೊಂದಿ ಹರನ ಹತ್ತಿರಕ್ಕೆ ಬಂದಿತು,, ಎಂದು ವಾಮನಪುರಾಣೋಕ್ತಿಯಿರುವುದರದೆಸೆಯಿಂದ ಶಿವನು ತನಗುಂಟಾದ ಪಶುಪತಿತ್ವಸಾಮರ್ಥ್ಯದದೆಸೆಯಿಂದ ಬ್ರಹ್ಮನನ್ನು ಕೊಂದು ಬ್ರಹ್ಮಹತ್ಯದೋಷವನ್ನು ಪಡೆದನು. ಅವನಿಗದು ಪಾಪವಲ್ಲವೇನು?

ರೇ—ಎಲೈ ಚೋಳನೇ! ವಿಚಾರಶೂನ್ಯನಾದ ನೀನು ಮಾಡಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು ಕೇಳು; ಸ್ಕಾಂದಪುರಾಣದಲ್ಲಿರುವ ಕಾಶೀಖಂಡದಲ್ಲಿ—"ನಾರಾಯಣನು ತನ

ವೋ ನಾರಾಯಣನಿಕೇತನಂ||ಅಥಾಯಾಂತಂ ಮಹಾಕಾಲಂ ತ್ರಿನೇತ್ರಂ ಸರ್ಪಭೂಷಣಂ || ಮಹಾದೇವಾಂಶಸಂಭೂತಂ ಭೈರವಂ ಭೀಷಣಾಕೃತಿಂ || ಪಪಾತ . ದಂಡವದ್ಭೂಮೌ ದೃಷ್ಟ್ವಾ ತಂ ಗರುಡಧ್ವಜಃ " ಕಾಲಭೈರವರುದ್ರೋ ದುಷ್ಟಬ್ರಹ್ಮಣಃ ಪಂಚಮಂ ಶಿರಶ್ಚಿಚ್ಛೇದ. ಬ್ರಹ್ಮಾ ತು ನ ಮಮಾರ. ಏವಂ ಸ್ಥಿತೇ ತಸ್ಯ ರುದ್ರಸ್ಯ ಕಥಂ ಬ್ರಹ್ಮಹತ್ಯಾದೋಷಃ ? ತತ್ರಾವದಾಸ್ತಾಂ. " ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮಃ" ಇತಿ ಯಜುರ್ವೇದ ವಾಕ್ಯಾತ್, ದಕ್ಷಾಧ್ವರೇ ದಕ್ಷಬ್ರಹ್ಮಣಃ ಯಜ್ಞನಾರಾಯಣಾದೀನಾಂ ಚ ಶಿರಶ್ಛೇದಕಸ್ಯ ರುದ್ರಾಪರಾವತಾರಸ್ಯ ಶ್ರೀ ವೀರಭದ್ರೇಶ್ವರಸ್ಯ ಬ್ರಹ್ಮಹತ್ಯಾದೋಷಃ ಪುರಾಣೇಷು ಯತ್ರ ಕುತ್ರಾಪಿ ನ ವರ್ಣಿತಃ. ತದುಕ್ತಂ ಲೈಂಗೇ—" ವೀರಭದ್ರೋ ಮಹಾತೇಜಾ ಹಿಮಕುಂದೇಂದುಸನ್ನಿಭಃ || ಭದ್ರಕಾಳೀಪ್ರಿಯೋ ನಿತ್ಯಂ ಮಾತೃಣಾಮಭಿರಕ್ಷಕಃ || ರುದ್ರಸ್ಯ ತನಯೋ ರೌದ್ರಶ್ಶೂಲಾಸಕ್ತಮಹಾಕರಃ || ಸಹಸ್ರಬಾಹುಸ್ಸರ್ವಜ್ಞಸ್ಸರ್ವಾಯುಧಧರಸ್ಸ್ವಯಂ || ತ್ರೇತಾಗ್ನಿನಾಶಕೋ ದೇವಸ್ತ್ರೈಲೋಕ್ಯಾಭಯದಃ ಪ್ರಭುಃ||ತ್ರೈಲೋಕ್ಯನಮಿತಶ್ಶ್ರೀಮಾನ್ ಶಿವಪಾದಾರ್ಚನೇ ರತಃ||ಯ

---

ಮನೆಗೆ ಕಪಾಲಧಾರಿಯೂ, ತ್ರಿನೇತ್ರನೂ, ಸರ್ಪಕುಂಡಲನೂ ಆಗಿ ಬಂದ ಶಿವಾಂಶಸಂಜಾತನಾದ ಆ ಭೈರವನನ್ನು ನೋಡಿ ಪ್ರಣಾಮವನೆಸಗಿದನು,, ಎಂದು ಹೇಳಲ್ಪಟ್ಟಿದೆ. ರುದ್ರನು ಕಾಲಭೈರವರೂಪಧಾರಿಯಾಗಿ ದುಷ್ಟಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದನು. ಬ್ರಹ್ಮನು ಸಾಯಲಿಲ್ಲ. ಹೀಗಿರಲು, ಆ ರುದ್ರನಿಗೆ ಬ್ರಹ್ಮಹತ್ಯದೋಷವು ಹೇಗುಂಟಾಯಿತು ? ಅದಂತಿರಲಿ; ದಕ್ಷಾಧ್ವರದಲ್ಲಿ ದಕ್ಷಪ್ರಜಾಪತಿಯ ತಲೆಯನ್ನೂ, ಯಜ್ಞನಾರಾಯಣಾದಿಗಳ ತಲೆಗಳನ್ನೂ ಕತ್ತರಿಸಿದ ವೀರಭದ್ರೇಶ್ವರನಿಗೋಸ್ಕರ ನಮಸ್ಕಾರವು. ದಕ್ಷಾಧ್ವರದಲ್ಲಿ ಇಂದ್ರೋಪೇಂದ್ರಾದಿ ಸಮಸ್ತದೇವತೆಗಳ ಕರಚರಣಾದ್ಯವಯವಗಳನ್ನು ಕೆಡಿಸುತ್ತಿದ್ದವನೂ, ರಥಾರೂಢರಾಗಿ ಬಂದಿದ್ದ ದೇವತೆಗಳಿಗೆ ಶತ್ರುಸಮೂಹವಾಗಿದ್ದ ಲೀಲಾವಿಗ್ರಹಗಳನ್ನು ಹೊಂದಿದ ನಿನಗೋಸ್ಕರ ನಮಸ್ಕಾರವು,, ಎಂದು ಹೇಳತಕ್ಕ ಯಜುರ್ವೇದವಚನವಿರುವುದರದೆಸೆಯಿಂದ, ದಕ್ಷಾಧ್ವರದಲ್ಲಿ ದಕ್ಷಬ್ರಹ್ಮ, ಯಜ್ಞನಾರಾಯಣ ಮೊದಲಾದವರ ತಲೆಗಳನ್ನು ಕಡಿದ ರುದ್ರನ ಅಪರಾವತಾರಿಯಾದ ಶ್ರೀವೀರಭದ್ರೇಶ್ವರನಿಗೆ ಬ್ರಹ್ಮಹತ್ಯದೋಷವುಂಟಾಗಿರುತ್ತದೆಯೆಂದು ಪುರಾಣಗಳಲ್ಲಿ ಎಲ್ಲೂ ಹೇಳಲ್ಪಟ್ಟಿರುವುದಿಲ್ಲವು. ಆ ವಿಚಾರವು ಲಿಂಗಪುರಾಣದಲ್ಲಿ - "ಮಂಜಿನೊಡನೆಯೂ, ಮೊಲ್ಲೆಹೂವಿನೊಡನೆಯೂ, ಚಂದ್ರನೊಡನೆಯೂ ಸಮಾನವಾದ ಕಾಂತಿಯುಳ್ಳವನೂ, ಭದ್ರಕಾಳೀದೇವಿಗೆ ಪತಿಯೂ ಸಪ್ತಮಾತೃಗಳನ್ನು ರಕ್ಷಿಸತಕ್ಕವನೂ, ರುದ್ರನ ಮಗನಾದ್ದರಿಂದಲೇ ರೌದ್ರನೂ, ತ್ರಿಶೂಲಹಸ್ತನೂ, ಸಹಸ್ರಬಾಹುವೂ, ಸರ್ವಜ್ಞನೂ, ಸಕಲಾಯುಧಗಳನ್ನು ಧರಿಸಿದವನೂ, ತ್ರೇತಾಗ್ನಿನಾಶಕನೂ, ಪ್ರಕಾಶಮಾನನೂ, ಮೂರುಲೋಕಗಳಿಗಭಯವನ್ನಿತ್ತವನೂ, ನಿಗ್ರಹಾನುಗ್ರಹಸಮರ್ಥ

ಜ್ಞಸ್ಯ ಚ ಶಿರಚ್ಛೇತ್ತಾ ಪೂಷ್ಣೋ ದಂತವಿನಾಶಕಃ ವಹ್ನೇರ್ಹಸ್ತಹರಸ್ತಾಕ್ಷ್ಣಾದ್ಭಗನೇತ್ರನಿಪಾತನಃ||ಪಾದಾಂಗುಷ್ಠೇನ ಸೋಮಾಂಗಪೇಷಕೋ ದಕ್ಷಶಿಕ್ಷಕಃ||ಸರಸ್ವತ್ಯಾ ಗಿರಾಂದೇವ್ಯಾ ನಾಸಿಕೋಷ್ಠೌರ್ವ್ಯೇಷ್ಟಕೃಂತನಃ||ಉಪೇಂದ್ರೇಂದ್ರಯಮಾದೀನಾಂ ದೇವಾನಾಮಂಗತಕ್ಷಕಃ||ಗಣೇಶ್ವರೋ ಯಸ್ಸೇನಾನೀಸ್ಸ ಮೇ ಪಾಪಂ ವ್ಯಪೋಹತು" ಇತ್ಥಮೇವ ಪುರಾಣಾಂತರೇ ವೀರಭದ್ರಸ್ಯ ಮಹಾನ್ವಿಕ್ರಮಃ ಪ್ರಸಿದ್ಧಃ. ಏವಂಸ್ಥಿತೇ ತಜ್ಜನಕಸ್ಯ ರುದ್ರಸ್ಯ ಕಥಂ ಬ್ರಹ್ಮಹತ್ಯಾದೋಷಃ? "ತ್ವಂ ದೇವೇಷು ಬ್ರಾಹ್ಮಣೋಽಸಿ" ಇತ್ಯಾದಿಪೂರ್ವೋಕ್ತಸಾಮವೇದವಾಕ್ಯಾತ್, "ಬ್ರಾಹ್ಮಣೋ ಭಗವಾನ್ರುದ್ರಃ ಕ್ಷತ್ರಿಯಃ ಪರಮೋ ಹರಿಃ|| ಬ್ರಹ್ಮಾ ವೈಶ್ಯಸ್ತಥಾ ಶೂದ್ರೋ ವಜ್ರೀ ಸಾಮಶ್ರುತಿಃ ಖಲು" ಇತಿ ಸ್ಕಾಂದಪರಾಶರಾದಿಪುರಾಣವಾಕ್ಯಾತ್, "ಚಕರ್ತ ಕರಜಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ" ಇತಿ ಸ್ಕಾಂದವಾಕ್ಯಾಚ್ಚ ದುಷ್ಟವೈಶ್ಯಸ್ಯ ಬ್ರಹ್ಮಣಶ್ಶಿಕ್ಷಯಾ ಕಾಲಭೈರವಸ್ಯ ಕುತೋ ಬ್ರಹ್ಮಹತ್ಯಾದೋಷಃ? ತತ್ತಾವದಾಸ್ತಾಂ. ಶ್ರೀರಾಮಸ್ಯ ಶಿವಲಿಂಗಪೂಜಯಾ ಪರಮಶಿವಭಕ್ತಪೌಲಸ್ತ್ಯಹನನದೋ

---

ನೂ, ಮೂರುಲೋಕದವರಿಂದ ನಮಸ್ಕರಿಸಲ್ಪಟ್ಟವನೂ, ಷಡ್ಗುಣೈಶ್ವರ್ಯಸಂಪನ್ನನೂ, ಶಿವಪಾದಾರ್ಚನೆಯಲ್ಲಾಸಕ್ತನೂ, ಯಜ್ಞನಾರಾಯಣನ ತಲೆಯನ್ನು ಕತ್ತರಿಸಿದವನೂ, ಪೂಷನೆಂಬ ಸೂರ್ಯನ ಹಲ್ಲುಗಳನ್ನು ಮುರಿದವನೂ, ಅಗ್ನಿಯ ಕೈಗಳನ್ನು ಮುರಿದವನೂ, ಭಗನೆಂಬ ಸೂರ್ಯನ ಕಣ್ಣುಗಳನ್ನು ಕಿತ್ತವನೂ, ಪಾದಾಂಗುಷ್ಠದಿಂದ ಚಂದ್ರನ ಶರೀರವನ್ನು ಹೊಸಗಿದವನೂ, ದಕ್ಷಶಿಕ್ಷಕನೂ, ಸರಸ್ವತಿಯ ಮೂಗನ್ನೂ ಮೇಲ್ದುಡಿಯ ತುಟಿಯನ್ನೂ ಕತ್ತರಿಸಿದವನೂ, ವಿಷ್ಣು ಇಂದ್ರ ಯಮಾದಿಗಳ ಅಂಗಗಳನ್ನು ಕೆತ್ತಿದವನೂ, ಪ್ರಮಥಾಧಿಪತಿಯೂ, ಶಿವಸೇನೆಗೆ ದಳಪತಿಯೂ ಆದಾ ವೀರಭದ್ರನು ನನ್ನ ಪಾಪವನ್ನು ಹೋಗಲಾಡಿಸಲಿ,, ಎಂದುಕ್ತವಾಗಿದೆ. ಈ ರೀತಿಯಾಗಿಯೇ ಬೇರೆ ಪುರಾಣಗಳಲ್ಲೂ ವೀರಭದ್ರನ ಶ್ರೇಷ್ಠವಾದ ಪರಾಕ್ರಮವು ಪ್ರಸಿದ್ಧವಾಗಿದೆ. ಹೀಗಿರುವಾಗ್ಯೆ ಆ ವೀರಭದ್ರನ ತಂದೆಯಾದ ರುದ್ರನಿಗೆ ಬ್ರಹ್ಮಹತ್ಯದೋಷವು ಹೇಗೆ ಉಂಟಾಗುತ್ತದೆ? ಎಲೈ ಚೋಳನೇ! "ನೀನು ದೇವತೆಗಳಲ್ಲಿ ಬ್ರಾಹ್ಮಣನಾಗಿರುತ್ತೀಯೆ,, ಎಂದು ಮೊದಲಾಗಿ ಹೇಳತಕ್ಕ ಪೂರ್ವೋಕ್ತವಾದ ಸಾಮವೇದವಾಕ್ಯವಿರುವುದರದೆಸೆಯಿಂದ "ಷಡ್ಗುಣೈಶ್ವರ್ಯಸಂಪನ್ನನಾದ ರುದ್ರನು ಬ್ರಾಹ್ಮಣನು. ವಿಷ್ಣುವು ಕ್ಷತ್ರಿಯನು. ಬ್ರಹ್ಮನು ವೈಶ್ಯನು. ಇಂದ್ರನು ಶೂದ್ರನು,, ಎಂದು ಹೇಳತಕ್ಕ ಸ್ಕಾಂದ ಪರಾಶರಾದಿ ಪುರಾಣಗಳ ವಾಕ್ಯಗಳಿರುವುದರದೆಸೆಯಿಂದ "ಉಗುರಿನ ತುದಿಯಿಂದ ಬ್ರಹ್ಮನ ಐದನೆಯ ಶಿರಸ್ಸನ್ನು ಕತ್ತರಿಸಿದನು,, ಎಂದು ಹೇಳತಕ್ಕ ಸ್ಕಾಂದಪುರಾಣವಾಕ್ಯವಿರುವುದರದೆಸೆಯಿಂದ ದುಷ್ಟವೈಶ್ಯನಾದ ಬ್ರಹ್ಮನನ್ನು ಶಿಕ್ಷಿಸಿದುದರಿಂದ ಕಾಲಭೈರವನಿಗೆ ಬ್ರಹ್ಮಹತ್ಯದೋಷವೆಲ್ಲಿಯದು? ಅದಂತಿರಲಿ. ಶ್ರೀರಾಮನು ಪರಮಶಿವಭಕ್ತನಾದ ರಾವಣನನ್ನು ಕೊಂದದ್ದರಿಂದುಂಟಾದ ದೋಷವನ್ನು ಶಿವಲಿಂಗಪೂಜಾಬಲದಿಂದ

ಷನಿವೃತ್ತಿಃ ಶ್ರೂಯತಾಂ, ಆದಿತ್ಯಪುರಾಣೇ,—"ಪ್ರತಿಷ್ಠಾಪ್ಯ ಮಹಾದೇವಂ ಸೇತುಮಧ್ಯೇ ಸ ರಾಘವಃ ॥ ಲಬ್ಧವಾನ್ಪರಮಾಂ ಭಕ್ತಿಂ ಶಿವೇ ಶಂಭೋರನುಗ್ರಹಾತ್ ॥ ರಾಮೇಶ್ವರ ಇತಿ ಖ್ಯಾತೋ ಮಹಾದೇವಃ ಪಿನಾಕಧೃತ್ ॥ ತಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾ ವ್ಯಪೋಹತಿ" ಇತ್ಥಂ ಸೇತುಖಂಡೇಪಿ ಪ್ರಸಿದ್ಧಂ.

ಇತಿ ಕಾಲಭೈರವರುದ್ರೇಣ ಬ್ರಹ್ಮಶಿರಶ್ಛೇದನವಿಧಿರೇಕಾದಶೋಪದೇಶೇ ತೃತೀಯಸ್ಸಂವಾದಃ.



ಶ್ರೀಃ.

## ಬಾಣಾಸುರರಣವಿಚಾರವಿಧಿಃ.

ಚೋ—"ಜೃಂಭಯಾಮಾಸ ಗೋವಿಂದೋ ಜೃಂಭಣಾಸ್ತ್ರೇಣ ಶಂಕರಂ" ಇತ್ಯಾದಿಭಾಗವತವಾಕ್ಯಾತ್, ಭೋ ರೇಣುಕಗಣೇಶ! ಹರೇಸ್ಸಾಮರ್ಥ್ಯಾದಪಿ ಹರಸ್ಯ ಸಾಮರ್ಥ್ಯಂ ಕುತಃ?

ರೇ—ಭೋ ಚೋಳ! ತತ್ಪರಿಹಾರಶ್ಶ್ರೂಯತಾಂ, ರಾಮಾಯಣೇ,—ಲಕ್ಷ್ಮಣಂಪ್ರತಿ ಶ್ರೀರಾಮವಾಕ್ಯಂ, "ಬಾಣೋಪಿ ಪ್ರಣಿಪತ್ಯಾಽಽಹ ಮೈತ್ರೇಯಾಥ

---

ಹೊಗಲಾಡಿಸಿಕೊಂಡ ಸಂಗತಿಯನ್ನು ಕೇಳು; ಆದಿತ್ಯಪುರಾಣದಲ್ಲಿ—"ಆ ಶ್ರೀರಾಮನು ಶಿವನ ಅನುಗ್ರಹದದೆಸೆಯಿಂದ ಶಿವನಲ್ಲಿ ಶ್ರೇಷ್ಠವಾದ ಭಕ್ತಿಯನ್ನು ಹೊಂದಿದವನಾಗಿ ಸೇತುಮಧ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿದುದರಿಂದ ಮಹಾದೇವನು ರಾಮೇಶ್ವರವೆಂದು ಪ್ರಸಿದ್ಧನಾದನು,, ಎಂದುಕ್ತವಾಗಿದೆ. ಈ ರೀತಿಯಾಗಿ ಸೇತುಖಂಡದಲ್ಲೂ ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಕಾಲಭೈರವರುದ್ರನಿಂದ ಬ್ರಹ್ಮಶಿರಶ್ಛೇದನವಿಧಿಯನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



### ಬಾಣಾಸುರನ ಯುದ್ಧವಿಚಾರವಿಧಿಯು.

ಚೋ—"ನಾರಾಯಣನು—ಬಾಣಾಸುರನೊಡನೆ ಯುದ್ಧವನ್ನು ಮಾಡುವಾಗ್ಗೆ ಜೃಂಭಣಾಸ್ತ್ರದಿಂದ ಶಿವನನ್ನು ನಡುಗಿಸಿದನು,, ಎಂದು ಭಾಗವತವಾಕ್ಯವು ಹೇಳುತ್ತಿರುವುದರದೆಸೆಯಿಂದ ಎಲೈ ರೇಣುಕಗಣೇಶನೇ! ಹರಿಯ ಸಾಮರ್ಥ್ಯಕ್ಕಿಂತಲೂ ಹರನ ಸಾಮರ್ಥ್ಯವೆಲ್ಲಿಯದು?

ರೇ—ಎಲೈ ಚೋಳನೇ! ನಿನ್ನ ಪ್ರಶ್ನೆಗುತ್ತರವನ್ನು ಕೇಳು; ರಾಮಾಯಣದಲ್ಲಿ—"ಬಾಣಾಸುರನು ನನ್ನ ಸಾವಿರ ತೋಳುಗಳಿಗೆ ಯುದ್ಧವಿಲ್ಲದಿರುವುದರಿಂದ ದುಃಖಪಡುತ್ತಿದ್ದೇನೆ

ತ್ರಿಲೋಚನಂ || ದೇವ ಬಾಹುಸಹಸ್ರೇಣ ನಿರ್ವಿಣ್ಣೋಽಸ್ಮ್ಯಾಹವಂ ವಿನಾ || ಕದಾ ಮನ್ಮೇತದ್ಬಾಹೂನಾಂ ಸಾಫಲ್ಯಜನಕೋ ರಣಃ || ಭವಿಷ್ಯತಿ ವಿನಾ ಯುದ್ಧಂ ಧೃತೈಸ್ತೈರ್ಮಮ ಕಿಂ ಭುಜೈಃ || (ತತ್ರ ಶಿವವಾಕ್ಯಂ) "ಮಯೂರಧ್ವಜಭಂಗಸ್ತೇ ಯದಾ ಬಾಣ! ಭವಿಷ್ಯತಿ || ಪಿಶಿತಾಶಜನಾನಂದಂ ಪ್ರಾಪ್ಸ್ಯಸಿ ತ್ವಂ ತದಾರಣಂ" ಇತಿ ಶಿವೇನ ವರಪ್ರದಾನಾತ್, "ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ" ಇತಿ ನ್ಯಾಯಾತ್, ಮಹಾಭಾರತೇ,—ಹರಿಂ ಪ್ರತಿ ಹರವಾಕ್ಯಂ, "ಅಸ್ಮತ್ಸಹಾಯಸಂದೃಪ್ತೋ ಬಾಣೋ ವಧ್ಯಸ್ತವಾಚ್ಯುತ || ಮಯಾ ದತ್ತವರೋ ದೈತ್ಯಸ್ತತಸ್ತ್ವಾಂ ಕ್ಷಮಯಾಮ್ಯಹಂ" ಇತಿ ಶಿವವಾಕ್ಯಾತ್, ಕಾಶೀಖಂಡೇ,—ವಿಷ್ಣುಃ, "ಮಯಿ ಯಾ ಪರಮಾ ಶಕ್ತಿಸ್ತ್ರಿಲೋಕೀರಕ್ಷಣಕ್ಷಮಾ || ತತ್ರ ಹೇತುರ್ಮಹೇಶಾನಸ್ಸುದರ್ಶನಚಕ್ರದಃ || ತಸ್ಯೇಶಸ್ಯ ಪದಾಂಗುಷ್ಠರೇಖಾನಿರ್ಮಿತಚಕ್ರತಃ || ಜಲಂಧರಸ್ಯ ದೃಪ್ತಸ್ಯ ಶಿರಶ್ಛಿನ್ನಂ ಮಯಾ ಪುರಾ || ತಚ್ಚಕ್ರಂ ತು ಮಯಾ ಲಬ್ಧಂ ನೇತ್ರಪದ್ಮಾರ್ಚನಾದ್ವಿಭೋಃ || ಏತತ್ಸುದರ್ಶನಾಖ್ಯಂ ವೈ ದೈತ್ಯಚಕ್ರವಿಮರ್ದನಂ" ಸ್ಕಾಂದೇ ಶರಭಾಧ್ಯಾಯೇ,—ನರಹರಿಂ ಪ್ರತಿ ಶರಭರುದ್ರವಾಕ್ಯಂ,

---

ನನ್ನೀ ತೋಳುಗಳಿಗೆ ಸಾಫಲ್ಯವನ್ನುಂಟುಮಾಡುವ ಯುದ್ಧವು ಯಾವಾಗ ಉಂಟಾಗುವುದು? ಯುದ್ಧವಿಲ್ಲದೆ ಧರಿಸಲ್ಪಟ್ಟಿರುವ ಈ ತೋಳುಗಳಿಂದ ನನಗೆ ಪ್ರಯೋಜನವೇನು?" ಎಂದು ನಮಸ್ಕಾರಪೂರ್ವಕವಾಗಿ ಶಿವನಿಗೆ ಬಿನ್ನೈಸಿದನಾದ್ದರಿಂದ, ಶಿವನು—"ನಿನಗೆ ಷಣ್ಮುಖನಿಂದ ಅಪಜಯವುಂಟಾದಾಗ್ಯೆ ರಾಕ್ಷಸರಿಗೆ ಸಂತೋಷವನ್ನುಂಟುಮಾಡತಕ್ಕ ಯುದ್ಧವನ್ನು ಹೊಂದುವೆ," ಎಂದು ಶಿವನು ವರವನ್ನು ಕೊಟ್ಟನೆಂದು ಶ್ರೀರಾಮನಿಂದ ಲಕ್ಷ್ಮಣನಿಗೆ ಹೇಳಲ್ಪಟ್ಟಿದೆ. "ತಾನು ನೆಟ್ಟು ಬೆಳೆಯಿಸಿದ ಗಿಡವು—ವಿಷವೃಕ್ಷವಾದಾಗ್ಯೂ, ಅದನ್ನು ತಾನೇ ಕಡಿಯತಕ್ಕುದು ಉಚಿತವಲ್ಲವು," ಎಂದು ನ್ಯಾಯವಿರುವುದರಿಂದಲೂ, ಮಹಾಭಾರತದಲ್ಲಿ—"ಎಲೈ ಕೃಷ್ಣನೇ! ನನ್ನಿಂದ ಕೊಡಲ್ಪಟ್ಟುದಾದ ವರದಿಂದ ಬಹಳವಾಗಿ ಕೊಬ್ಬಿದವನಾಗಿರುವ ಬಾಣಾಸುರನನ್ನು ನೀನು ಕೊಲ್ಲುವವನಾಗು. ಶಿವಭಕ್ತನಾದ ಆತನನ್ನು ಕೊಲ್ಲುವುದರಿಂದ ನಿನಗುಂಟಾಗುವ ಅಪರಾಧವನ್ನು ಕ್ಷಮಿಸುವೆನು," ಎಂದು ಕೃಷ್ಣನನ್ನು ಕುರಿತು ಶಿವನ ವಾಕ್ಯವಿರುವುದರಿಂದಲೂ, ಕಾಶೀಖಂಡದಲ್ಲಿ—"ಮೂರುಲೋಕಗಳನ್ನೂ ಸಂರಕ್ಷಿಸಲು ಶಕ್ತವಾದ ಸಾಮರ್ಥ್ಯವು ನನ್ನಲ್ಲಿರುವುದಕ್ಕೆ ನನಗೆ ಸುದರ್ಶನಾಖ್ಯವಾದ ಚಕ್ರವನ್ನು ದಯಪಾಲಿಸಿದ ಆ ಶಿವನೇ ಕಾರಣನಾಗಿರುತ್ತಾನೆ. ಆ ಶಿವನ ಪಾದಾಂಗುಷ್ಠದ ರೇಖೆಯಿಂದ ನಿರ್ಮಿಸಲ್ಪಟ್ಟುದಾದ ಚಕ್ರದಿಂದ ಜಲಂಧರಾಸುರನ ಶಿರಸ್ಸನ್ನು ಛೇದಿಸಿದೆನು. ನಾನು ಪುನಃ ಶಿವನನ್ನು ನನ್ನ ನೇತ್ರಕಮಲದಿಂದ ಪೂಜಿಸಿ ಆ ಚಕ್ರವನ್ನೇ ಪಡೆದೆನು. ಈ ಸುದರ್ಶನಚಕ್ರವು ದೈತ್ಯಸಮೂಹವನ್ನು ನಾಶಮಾಡತಕ್ಕುದಾಗಿದೆ" ಎಂದು ವಿಷ್ಣುವಾಕ್ಯವಿರುವುದರಿಂದಲೂ, ಸ್ಕಾಂದದಲ್ಲಿರುವ ಶರಭಾಧ್ಯಾಯದಲ್ಲಿ—

" ಚಕ್ರಂ ವಿಕ್ರಮಸಾಹಾಯ್ಯಂ ಚಕ್ರಪಾಣೇ ತವ ಪ್ರಿಯಂ || ಕುತಃ ಪ್ರಾಪ್ತಂ ಕೃತಂ ಕೇನ ತ್ವಯಾ ತದಪಿ ವಿಸ್ಮೃತಂ " ಇತ್ಯಾದಿವಾಕ್ಯಾತ್, ಭೋ ಚೋಳ! ಹರಸ್ತ್ವಯಂ ತದ್ಬಾಣಬಾಹುಕಂಡೂನಿವಾರಣಸ್ಯ ಅನುಚಿತತ್ವಾತ್ ಜೃಂಭಣಾಸ್ತ್ರ ವ್ಯಾಜೇನ ಸ್ವಯಂ ಜೃಂಭಿತೋ ಭೂತ್ವಾ ಕೃಷ್ಣಾಯ ಚಕ್ರಂ ದತ್ವಾ ತೇನ ತದ್ಬಾಹು ಕಂಡೂನಿವಾರಣಂ ಕಾರಯಾಮಾಸೇತಿ ಪ್ರಸಿದ್ಧಾ ಕಥಾತ್ರಾನುಸಂಧೇಯಾ.

ಹೇ ಚೋಳ! ಜಲಂಧರದೈತ್ಯೇನ ಬಧ್ಯಮಾನಸ್ಯ ವಿಷ್ಣೋಸ್ಸಾಮರ್ಥ್ಯಂ ಕ್ವ ಗತಂ? ಲೈಂಗೇ,—ಜಲಂಧರವಾಕ್ಯಂ, " ಸರಥೋ ಭಗವಾನ್ವಿಷ್ಣುಃ ಕ್ಷಿಪ್ತಶ್ಚ ಶತ ಯೋಜನೇ || ಗರುಡೋಪಿ ಮಯಾ ಬದ್ಧೋ ನಾಗಪಾಶೇನ ಸಾಚ್ಯುತಃ " ಸ್ಕಾಂದೇ ಜಲಂಧರೋಪಾಖ್ಯಾನೇ,—" ಜಲಂಧರೋ ಹರಿಂ ಶೇಷರಜ್ಜ್ವಾ ಸಂಬದ್ಧ್ಯ ಚಾಲಯನ್ || ಕ್ಷೀರಾಬ್ಧಿಕಾರಾಗಾರೇ ಚ ವ್ಯಭಿಚಿಕ್ಷೇಪ ಬಾಧಯನ್ " ಇತ್ಯಾದಿ ಪ್ರಸಿದ್ಧಂ. ತತ್ತಾವದಾಸ್ತಾಂ. ದಕ್ಷಾಧ್ವರೇ ಮಹಾಸಮರ್ಥೇನ ವಿಷ್ಣುನಾ ವೀರ ಭದ್ರೇಶ್ವರಂ ನಿರೀಕ್ಷ್ಯ ಕಿಮರ್ಥಂ ಪಲಾಯಿತಂ? ತದುಕ್ತಂ ವಾಮನಪುರಾಣೇ,— " ವೀರಭದ್ರೇಶ್ವರಂ ದೃಷ್ಟ್ವಾ ಕ್ರೋಧಾದಾರಕ್ತಲೋಚನಂ || ವಿಹಾಯ ವಿಷ್ಣು

---

"ಪರಾಕ್ರಮಕ್ಕೆ ಸಹಾಯಕಾರಿಯಾದ ಚಕ್ರವು ನಿನಗೆ ಹೇಗೆ ಬಂದಿತು? ಇದು ಯಾವನಿಂದ ಕೊಡಲ್ಪಟ್ಟಿತು? ಆ ಸಂಗತಿಯನ್ನೆಲ್ಲವನ್ನೂ ನೀನು ಮರೆತುಬಿಟ್ಟಿರುತ್ತೀಯೆ?" , ಇತ್ಯಾದಿವಚನವು ಶರಭರುದ್ರನಿಂದ ನರಹರಿಯನ್ನು ಕುರಿತು ಹೇಳಲ್ಪಟ್ಟಿದೆ.

ಎಲೈ ಚೋಳನೇ! ಶಿವನು—ತಾನೇ ಆ ಬಾಣಾಸುರನ ತೋಳುಗಳ ನವೆಯನ್ನು ಹೋಗಲಾಡಿಸುವುದು ಯೋಗ್ಯವಲ್ಲವೆಂದು ತಿಳಿದು, ಜೃಂಭಣಾಸ್ತ್ರವ್ಯಾಜದಿಂದ ತಾನು ಸೋತವನಾಗಿ ವಿಷ್ಣುವಿಗೆ ಚಕ್ರವನ್ನು ಕೊಟ್ಟು ಆತನಿಂದ ಆ ಬಾಣನ ಭುಜತೀಂಟೆಯನ್ನು ಪರಿಹರಿಸಿದನೆಂದು ಪ್ರಸಿದ್ಧವಾಗಿರತಕ್ಕ ಕಥೆಯನ್ನು ಇಲ್ಲಿ ಸೇರಿಸಿಕೊಳ್ಳಬೇಕು.

ಎಲೈ ಚೋಳನೇ! ಜಲಂಧರನಿಂದ ಬಿಗಿಯಲ್ಪಟ್ಟ ವಿಷ್ಣುವಿನ ಸಾಮರ್ಥ್ಯವೆಲ್ಲಿಹೋಯಿತು? ಲೈಂಗ್ಯಪುರಾಣದಲ್ಲಿ—"ರಥಸಹಿತನಾದ ವಿಷ್ಣುವು ನನ್ನಿಂದ ನೂರುಯೋಜನ ದೂರದಲ್ಲಿ ಸೆಯಲ್ಪಟ್ಟನು. ವಿಷ್ಣುವಿನಿಂದ ಕೂಡಿದ ಗರುಡನು ನನ್ನಿಂದ ನಾಗಪಾಶದಿಂದ ಬಿಗಿಯಲ್ಪಟ್ಟನು" ಎಂದು ಜಲಂಧರನಿಂದ ಹೇಳಲ್ಪಟ್ಟಿದೆ. ಸ್ಕಾಂದಾಂತರ್ಗತವಾದ ಜಲಂಧರೋಪಾಖ್ಯಾನದಲ್ಲಿ— "ಜಲಂಧರನು ವಿಷ್ಣುವನ್ನು ನಾಗಪಾಶದಿಂದ ಕಟ್ಟಿ ಕ್ಷೀರಸಮುದ್ರವೆಂಬ ಸೆರೆಮನೆಯಲ್ಲಿ ಬಿಸುಟಿದನು" ಎಂದು ಹೇಳಲ್ಪಟ್ಟಿದೆ. ಅದಂತಿರಲಿ! ಮಹಾಸಮರ್ಥನಾದ ವಿಷ್ಣುವು ದಕ್ಷನ ಯಾಗಕಾಲದಲ್ಲಿ ವೀರಭದ್ರೇಶ್ವರನನ್ನು ನೋಡಿ ಏನು ಕಾರಣದಿಂದ ಓಡಿಹೋದನು? ಆ ಸಂಗತಿಯು ವಾಮನಪುರಾಣದಲ್ಲಿ—"ಕೋಪದದೆಸೆಯಿಂದ ಕೆರಳಿದ ಕಣ್ಣುಳ್ಳ ವೀರಭದ್ರೇಶ್ವರನನ್ನು ವಿಷ್ಣುವು ನೋಡಿ ಹೆದರಿ ಆ ಸ್ಥಳವನ್ನು ಬಿಟ್ಟು ಓಡಿಹೋದನು" ಎಂದುಕ್ತವಾಗಿದೆ. ಮತ್ತು

ಸ್ತಂ ದೇಶಂ ಪ್ರದುದ್ರಾವ ಮಹಾಭಯಾತ್ '' ಕಿಂಚ ಶಿವೇನಾಸ್ಯ ವಿಷ್ಣೋಸ್ತನಯಯೋರ್ವಿರಿಂಚಿಮನ್ಮಥಯೋಶ್ಶಿವೇನ ಸಂಹೃತಯೋಃ, ಸ್ವಹೃದಯೇ ತೇನೈವ ತ್ರಿಶೂಲೇನ ವಿದಾರಿತೇ ಚ ಸತಿ ತದಾನೀಂ ಸ್ವಸ್ಯ ಸಾಮರ್ಥ್ಯಂ ಕ್ವ ಗತಂ? ತದುಕ್ತಂ ಕೌರ್ಮೇ,—'' ನಿರ್ಭಿದ್ಯ ಹೃದಯಂ ವಿಷ್ಣೋಸ್ಸಾರ್ಧಂ ಪ್ರಮಥಪುಂಗವೈಃ || ವಿವೇಶ ಶೂಲೇನಾದಾಯ ತತ್ಕಳೇವರಮೀಶ್ವರಃ '' ಇತ್ಯಾದಿಪ್ರಸಿದ್ಧಂ.

ಇತಿ ಬಾಣಾಸುರರಣವಿಚಾರವಿಧಿರೇಕಾದಶೋಪದೇಶೇ ಚತುರ್ಥಸ್ಸಂವಾದಃ.



ಶ್ರೀಃ.

## ವೃಕಾಸುರವರಪ್ರದಾನವಿಚಾರಃ.

ಚೋ—'' ವೃಕಾಸುರಾಯ ಗಿರಿಶೋ ವರಂ ದತ್ವಾತಿಸಂಕಟಂ || ಯಸ್ಯ ಮೂರ್ಧ್ನಿ ಕರಂ ಸ್ಥಾಸ್ಯೇ ತದಾ ಸ ಮ್ರಿಯತಾಮಿತಿ || ಸ ತದ್ವರಪರೀಕ್ಷಾರ್ಥಂ ಶಂಭೋರ್ಮೂರ್ಧ್ನಿ ತದಾಸುರಃ || ಸ್ವಹಸ್ತಂ ದಾತುಮಾರೇಭೇ ಪರ್ಯಧಾವತ್ಸ ವೈ ದಿಶಃ || ದೈತ್ಯಂ ಭಗವತೀ ಸ್ತುತ್ವಾ ವಚೋಭಿರತಿಕೋಮಲೈಃ || ಮೋಹಯಂತೀ ಜಗಾದೇತ್ಥಂ ತ್ವದೀಯೇ ಮಸ್ತಕೇಽಧುನಾ || ನಟ ತ್ವಂ ದನುಜಶ್ರೇಷ್ಠ ಕರಂ ನಿಕ್ಷಿ

ಆ ವಿಷ್ಣುವು ತನ್ನ ಮಕ್ಕಳಾದ ಬ್ರಹ್ಮ ಮನ್ಮಥರನ್ನು ಶಿವನು ಸಂಹರಿಸಿದಾಗಲೂ, ಮತ್ತು ತನ್ನ ಎದೆಯನ್ನು ತ್ರಿಶೂಲದಿಂದ ಶಿವನು ಸೀಳುವಾಗಲೂ ತನ್ನ ಸಾಮರ್ಥ್ಯವು ಎಲ್ಲಿಗೆ ಹೋಗಿತ್ತು? ಆ ವಿಷಯವು ಕೂರ್ಮಪುರಾಣದಲ್ಲಿ —''ವಿಷ್ಣುವಿನ ಹೃದಯವನ್ನು ಶಿವನು ತ್ರಿಶೂಲದಿಂದ ಸೀಳಿ, ಆ ವಿಷ್ಣುವಿನ ಶರೀರವನ್ನು ಪ್ರಮಥರೊಡಗೂಡಿ ತೆಗೆದುಕೊಂಡು ಹೋದನು,, ಎಂಬುದೇ ಮೊದಲಾದುದನ್ನು ಹೇಳಿರುವುದು ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ಬಾಣಾಸುರನ ಯುದ್ಧವಿಚಾರವಿಧಿಯನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

### ವೃಕಾಸುರವರಪ್ರದಾನವಿಚಾರವು.

ಚೋ —''ಶಿವನು ವೃಕಾಸುರನಿಗೆ ನೀನು ಯಾವಯಾವನ ತಲೆಯಮೇಲೆ ಕೈಯನ್ನಿಡುವೆಯೋ ಅವನು ಮೃತಿಯನ್ನು ಹೊಂದಲಿ ಎಂಬ ವರವನ್ನು ಕೊಟ್ಟನು. ಆಗ ಆ ವೃಕನು ಆ ವರವನ್ನು ಪರೀಕ್ಷಿಸುವುದಕ್ಕಾಗಿ ಶಿವನ ತಲೆಯಮೇಲೆ ಕೈಯ್ಯನ್ನಿಡಲು ಯತ್ನಿಸಲು, ಆ ಶಿವನು ಓಡಿಹೋದನು. ಆಗ ನಾರಾಯಣಿಯು ಆ ದೈತ್ಯನನ್ನು ಅತ್ಯಂತ ಮೃದೂಕ್ತಿಗಳಿಂದ ಸ್ತುತಿಸಿ ಮೋಹವನ್ನುಂಟುಮಾಡುತ್ತ, ಎಲೈ ರಾಕ್ಷಸಶ್ರೇಷ್ಠನೇ! ನೀನು ನಿನ್ನ ಕೈಯನ್ನು ನಿನ್ನ ತಲೆಯ

ಷ್ಟ ತಾವಕಂ || ದೈತ್ಯಸ್ಸ ತು ತಥಾಕೃತ್ವಾ ಭುವಿ ನಿರ್ಭಿನ್ನಶೀರ್ಷಕಃ || ನ್ಯಪತತ್ಪು ರತಸ್ತಸ್ಯಾಃ ಕುಲಿಶಪ್ರಹತೋ ಯಥಾ " ಇತ್ಯಾದಿವಾಕ್ಯಾತ್, ಸ್ವಾಮಿನ್ ರೇಣುಕಗಣೇಶ! ನಾರಾಯಣ್ಯಾ ರಕ್ಷಿತಸ್ಯ ರುದ್ರಸ್ಯ ಕಿಮಾಧಿಕ್ಯಂ ?

ರೇ—ಹೇ ಚೋಳ! ವರದಾತಾ ಹರಸ್ಸ್ವೇನ ವೃಕಾಸುರೋ ನ ಹಂತವ್ಯ ಇತಿ ತಂ ನಾರಾಯಣ್ಯಾ ಸಂಹಾರಂ ಕಾರಯಾಮಾಸೇತಿ ಪೂರ್ವವಚ್ಛಂಕಾಪರಿಹಾರೋऽತ್ರಾಪಿ ವಿಜ್ಞೇಯಃ. ತದುಕ್ತಂ ಸ್ಕಾಂದೇ ಸನತ್ಕುಮಾರಸಂಹಿತಾಯಾಂ,— " ದಾಕ್ಷಾಯಣೀವಿಯುಕ್ತಸ್ಯ ಶಂಭೋರ್ನೇತ್ರಾಗ್ನಿಮಧ್ಯತಃ || ವೀರಭದ್ರೋऽಪಿ ಸಂಜಾತೋ ಭೀರುರುದ್ರಸ್ಫುಲಿಂಗತಃ || ವೃಕಾಸುರೋ ಭೀರುರುದ್ರಂ ಪ್ರಸಾದ್ಯ ಪ್ರಾಪ್ತವಾನ್ವರಂ || ಯಸ್ಯ ಮೂರ್ಧ್ನಿ ಕರೋ ನ್ಯಸ್ತಸ್ಸ ಭೂಯಾದ್ಭಸ್ಮಸಾತ್ಕ್ಷಣಾತ್ || ಇತಿ ಲಬ್ಧ್ವಾ ವರಂ ದೈತ್ಯಸ್ತತ್ಪರೀಕ್ಷಾರ್ಥಮಾಶಿತಃ || ಭೀರುರುದ್ರಸ್ಯ ಶಿರಸಿ ಕರಂ ದಾತುಂ ಸಮುದ್ಯತಃ || ತಸ್ಮಿನ್ ಪಲಾಯಮಾನೇऽಥ ದೈತ್ಯಂ ನಾರಾಯಣೀ ತದಾ || ದೃಷ್ಟ್ವಾವದ ಸ್ವಮಸ್ತಕೇ ಹಸ್ತಂ ಪ್ರಣಿಧಾಯ ನನರ್ತ ಸಾ || ಮತ್ಪತ್ನೀ ಭವ ಭೋ

---

ಮೇಲೆ ಇಟ್ಟು ಕುಣಿಯುವವನಾಗು ಎಂದು ಹೇಳಿದನಾದ್ದರಿಂದ ಆ ದೈತ್ಯನಾದರೋ ಅದೇಪ್ರಕಾರವಾಗಿ ಮಾಡಿ ಒಡೆದುಹೋದ ತಲೆಯುಳ್ಳವನಾಗಿ ವಜ್ರಾಯುಧದಿಂದ ಹೊಡೆಯಲ್ಪಟ್ಟವನೋ ಎಂಬಹಾಗೆ ನಾರಾಯಣಿಯ ಮುಂದೆ ನೆಲದಮೇಲೆ ಬಿದ್ದನು,, ಎಂಬುದೇ ಮೊದಲಾಗಿ ವಾಕ್ಯಗಳಿರುವುದರಿಂದ ಎಲೈ ಸ್ವಾಮಿಯಾದ ರೇಣುಕಗಣೇಶನೇ! ನಾರಾಯಣಿಯಿಂದ ವೃಕಾಸುರನದೆಸೆಯಿಂದ ರಕ್ಷಿಸಲ್ಪಟ್ಟ ಶಿವನಿಗೆ ಶ್ರೇಷ್ಠತೆಯೆಲ್ಲಿಯದು?

ರೇ—ಎಲೈ ಚೋಳನೇ! ಶಿವನು ವೃಕಾಸುರನಿಗೋಸ್ಕರ ತಾನೇ ವರವನ್ನು ಕೊಟ್ಟು, ತಾನೇ ಆ ರಾಕ್ಷಸನನ್ನು ಕೊಲ್ಲತಕ್ಕದು ಸರಿಯಲ್ಲವೆಂದು ಯೋಚಿಸಿ, ನಾರಾಯಣಿಯಿಂದ ಆ ಅಸುರನನ್ನು ಕೊಲ್ಲಿಸಿದನೆಂದು ಮೊದಲಿನಂತೆ ಇಲ್ಲಿಯೂ ಶಂಕಾಸಮಾಧಾನವೆಂದು ತಿಳಿಯತಕ್ಕದ್ದು. ಆ ವಿಷಯವು ಸ್ಕಾಂದಪುರಾಣದಲ್ಲಿರತಕ್ಕ ಸನತ್ಕುಮಾರಸಂಹಿತೆಯಲ್ಲಿ—"ದಾಕ್ಷಾಯಣೀವಿಯೋಗವನ್ನು ಹೊಂದಿದ ಶಿವನ ಅಗ್ನಿನೇತ್ರಮಧ್ಯದದೆಸೆಯಿಂದ ಹುಟ್ಟಿದ ಭೀರುರುದ್ರನ ಸ್ಫುಲಿಂಗದದೆಸೆಯಿಂದ ವೀರಭದ್ರನು ಹುಟ್ಟಿದನು. ವೃಕಾಸುರನು ಭೀರುರುದ್ರನ ಪ್ರಸನ್ನತೆಯನ್ನು ಹೊಂದಿ, ಆತನಿಂದ "ಯಾವನ ತಲೆಯಮೇಲೆ ಕೈಯನ್ನಿರಿಸುವೆನೋ ಅವನು ಆಕ್ಷಣದಲ್ಲಿ ಬೂದಿಯಾಗಲಿ,, ಎಂದು ವರವನ್ನು ಪಡೆದು, ಆ ವರವನ್ನು ಪರೀಕ್ಷಿಸುವುದಕ್ಕಾಗಿ ಭೀರುರುದ್ರನ ತಲೆಯಮೇಲೆಯೇ ಕೈಯನ್ನಿಡುವುದಕ್ಕೆ ಯತ್ನಿಸಿದನು. ಆಗ ಆ ರುದ್ರನು ಓಡಿಹೋಗಲು, ಬಳಿಕ ನಾರಾಯಣಿಯು ಆ ದೈತ್ಯನ ಮುಂದೆ ತನ್ನ ತಲೆಯ ಮೇಲೆ ಕೈಯನ್ನಿಟ್ಟು ಕುಣಿದಳು. ಆಗ ಆ ರಾಕ್ಷಸನು ಎಲೈ ನಾರಿಯೇ! ನೀನು ನನಗೆ ಮಡದಿಯಾದರೆ ನಿನ್ನ ಶರೀರವನ್ನು ನಾನು ಸುಡುವುದಿಲ್ಲ,, ಎಂದು ಹೇಳಿದನಾದ್ದರಿಂದ ಆಗ ಆ ನಾರಾಯಣಿಯು "ನೀನು ಯಾವಾಗ

ನಾರಿ ನ ದಹಾಮಿ ವಪುಸ್ತವ || ಯದಾಚರಿಷ್ಯೇ ನೃತ್ಯಂ ತ್ವಂ ಮನ್ನಾಟ್ಯಸದೃಶಂ ತದಾ || ಅಹಂ ಪತ್ನೀ ಭವಿಷ್ಯಾಮಿ ಲಾಸ್ಯಮಾಚರ ಸತ್ವರಂ || ತಥಾಸ್ತ್ವಿತಿ ಸ್ವಹಸ್ತಂ ತು ಪ್ರಣಿಧಾಯ ಸ್ವಮಸ್ತಕೇ || ನೃತ್ಯಮಾನಃ ಕ್ಷಣಾದೇವ ಭಸ್ಮೀಭೂತೋ ವೃಕಾಸುರಃ || ತತೋ ನಾರಾಯಣೀ ಭೀರುರುದ್ರಂ ಪ್ರಾಪ್ಯ ಜಗಾದ ತತ್ || ನಾರಾಯಣೀಂ ಸಮಾಲಿಂಗ್ಯ ಭುಜಾಭ್ಯಾಂ ಸಾಧು ಸಾಧ್ವಿತಿ || ಭೈರವಂ ಜನಯಾಮಾಸ ಕಾಪಾಲಿಕಮತೇಶ್ವರಂ || ನಾರಾಯಣ್ಯಾಂ ಭೀರುರುದ್ರಾಜ್ಜಾತೋ ಭೈರವನಾಮಕಃ || ನಾರಾಯಣೀ ಭೈರವಶ್ಚ ಲಿಂಗಂ ಶ್ರೀಪತಿಸಂಜ್ಞಿತಂ ||ಸಂಸ್ಥಾಪ್ಯ ಪೂಜಯಾಮಾಸ ಸದ್ಭಕ್ತ್ಯಾ ಪರಮೇಶಿತುಃ || ಕೋಲಾಹಲಪುರೇ ಪ್ರತ್ಯಕ್ಸಿತಾದ್ರೌ ಚ ಪರಿಸ್ಫುಟಂ'' [ಅತ್ರ ಭೀರುಃ—ರುದ್ರಃ, ತಸ್ಯಾಪತ್ಯಂ ಪುಮಾನ್ ಭೈರವಃ. ಇತಿ ವಿಗ್ರಹಃ ಪ್ರಸಿದ್ಧಃ. ತಸ್ಯಾಪತ್ಯಮಿತ್ಯಣ್‌ಪ್ರತ್ಯಯಃ.] '' ಶಿವಕೇಶವಯೋರೈಕ್ಯಂ ಕಲಯೇ ಕಾಲಭೈರವಂ '' ಇತಿ ಕಾಶಿಕಾಖಂಡವಾಕ್ಯಾತ್, '' ಖಟ್ವಾಂಗೀ ವಿಷ್ಣುವಲ್ಲಭಃ'' ಇತಿ ಶಿವಾಷ್ಟೋತ್ತರಶತನಾಮಸ್ತೋತ್ರೇ ವಿಷ್ಣುವಾಕ್ಯಾತ್, '' ನಮೋ ವಿಷ್ಣುಕಳತ್ರಾಯ '' ಇತಿ ವೀರಭದ್ರಾಷ್ಟೋತ್ತರಶತನಾಮಸ್ತೋತ್ರೇ ನರಹರಿವಾ

---

ನಾನು ಕುಣಿಯುವಂತೆ ಕುಣಿಯುವೆಯೋ ಆಗ ನಾನು ನಿನಗೆ ಮಡದಿಯಾಗುವೆನು. ಆದ್ದರಿಂದ ಜಾಗ್ರತೆ ಕುಣಿ'' ಎಂದು ಹೇಳಿದನು. ವೃಕನು-ಆ ಮಾತನ್ನು ಒಪ್ಪಿ ತನ್ನ ತಲೆಯಮೇಲೆ ತನ್ನ ಕೈಯನ್ನಿಟ್ಟು ಕುಣಿದವನಾಗಲು ಆ ಕ್ಷಣದಲ್ಲೇ ಸುಟ್ಟು ಬೂದಿಯಾದನು. ಬಳಿಕ ನಾರಾಯಣಿಯಿಂದ ನಡೆದ ಸಂಗತಿಯನ್ನು ತಿಳಿದ ಭೀರುರುದ್ರನು ನಾರಾಯಣಿಯನ್ನು ಅಪ್ಪಿಕೊಂಡು, ನೀನು ಒಳ್ಳೆಯದನ್ನು ಮಾಡಿದೆ. ಒಳ್ಳೆಯದನ್ನು ಮಾಡಿದೆ. ಎಂದು ಶ್ಲಾಘಿಸಿ, ಆಕೆಯಲ್ಲಿ ಕಾಪಾಲಿಕರಿಗೊಡೆಯನಾಗುವ ಭೈರವೇಶ್ವರನನ್ನು ಹುಟ್ಟಿಸಿದನು. ನಾರಾಯಣಿಯಲ್ಲಿ ಭೀರುರುದ್ರನದೆಸೆಯಿಂದ ಹುಟ್ಟಿದವನಾದ್ದರಿಂದ ಭೈರವನೆಂಬ ಹೆಸರನ್ನು ಹೊಂದಿದ ಭೈರವನು ಅವನ ತಾಯಿಯಾದ ನಾರಾಯಣಿಯು ಇಬ್ಬರೂ ಶ್ರೀಪತಿಯೆಂದು ಹೆಸರಿಡಲ್ಪಟ್ಟ ಶಿವಲಿಂಗವನ್ನು ಕೋಲಾಹಲಪುರದಲ್ಲೂ, ಸಿತಾದ್ರಿಯಲ್ಲೂ ಬೇರೆಬೇರೆ ಪ್ರತಿಷ್ಠಿಸಿ ಸದ್ಭಕ್ತಿಯಿಂದ ಪೂಜಿಸಿದರು,, ಎಂದು ಹೇಳಲ್ಪಟ್ಟಿದೆ. [ಇಲ್ಲಿ ''ಭೀರೋರಪತ್ಯಂ ಪುಮಾನ್ ಭೈರವಃ,, ಎಂದು ವಿಗ್ರಹವು ಪ್ರಸಿದ್ಧವಾಗಿದೆ. ''ತಸ್ಯಾಪತ್ಯಂ,, ಎಂಬ ಪಾಣಿನೀಯಸೂತ್ರದಿಂದ ಅಣ್‌ಪ್ರತ್ಯಯವು ಬಂದಿರುತ್ತದೆ] ''ಶಿವವಿಷ್ಣುಗಳೈಕ್ಯರೂಪನಾದ ಕಾಲಭೈರವನನ್ನು ನಮಿಸುವೆನು'' ಎಂದು ಕಾಶಿಕಾಖಂಡವಚನವಿರುವುದರಿಂದಲೂ, ''ಖಟ್ವಾಂಗಿಯಾದ ಶಿವನು ವಿಷ್ಣುವಲ್ಲಭನು,, ಎಂದು ಶಿವಾಷ್ಟೋತ್ತರಶತನಾಮಸ್ತೋತ್ರವಲ್ಲಿ ವಿಷ್ಣುವಾಕ್ಯವಿರುವುದರಿಂದಲೂ, ''ವಿಷ್ಣುವೇ ಮಡದಿಯಾಗುಳ್ಳವನಿಗೋಸ್ಕರ ನಮಸ್ಕಾರವು,, ಎಂದು ವೀರಭದ್ರಾಷ್ಟೋತ್ತರಶತನಾಮಸ್ತೋತ್ರದಲ್ಲಿ ನೃಸಿಂಹವಾ

ಕ್ಯಾತ್, ಹರಸ್ಯ ಸ್ಪರ್ಶದಾಸ್ಯಾ ನಾರಾಯಣ್ಯಾ ಬಾಣಾಸುರಬಾಹುಸಾಮರ್ಥ್ಯಂ ವೃಕಾಸುರಸಂಹಾರಂ ಚ ಕಾರಯಾಮಾಸೇತ್ಯರ್ಥಃ.

ಇತಿ ವೃಕಾಸುರವರಪ್ರದಾನವಿಚಾರ ಏಕಾದಶೋಪದೇಶೇ ಪಂಚಮಸ್ಸಂವಾದಃ.

ಶ್ರೀಃ.

## ರುದ್ರಸ್ಯಹನುಮದ್ವಾಹನವಿಚಾರಃ.

ಚೋ—"ಹರವೀರ್ಯಸಮುದ್ಭೂತೋ ಹನುಮಾನ್ ರಾಮಸೇವಕಃ|| ಅತೋ ಹರೇರ್ಹರಸ್ಯಾಪಿ ನಾಧಿಕ್ಯಂ ವರ್ತತೇ ಕ್ವಚಿತ್" ಇತ್ಯಭಿಯುಕ್ತವಾಕ್ಯಸ್ಯ ಹೇ ರೇಣುಕಗಣೇಶ! ಕಿಮುತ್ತರಂ?

ರೇ—ಹೇ ಚೋಳ! ತತ್ಪರಿಹಾರಶ್ಶ್ರೂಯತಾಂ, ಪ್ರಭಂಜನಾದಿಪರ್ಯಾಯ ಪುತ್ರೋ ಭೀಮೋಂಜನಾತ್ಮಜಃ" ಇತಿ. "ಕಪಿಪ್ರವೀರೋಹನುಮಾನಾಂಜನೇಯೋ ಮರುತ್ಸುತಃ"-"ಕೃಶಾನುರೇತಾಸ್ಸರ್ವಜ್ಞಃ" ಇತಿ ನೈಘಂಟುಕೋಕ್ತಿತಃ, "ಕೃಶಾನುರೇತಸೋ ರೇತೋ ನ ದಧುರ್ವಿಬುಧಾ ಹೃದಿ||ಕಥಂ ತದಂಜನಾಕುಕ್ಷೌ ಮರುತಃ

---

ಕ್ಯವಿರುವುದರಿಂದಲೂ ಶಿವನು ತನ್ನ ಸ್ಪರ್ಶದಾಸಿನಿಯಾದ ನಾರಾಯಣಿಯದೆಸೆಯಿಂದ ಬಾಣಾಸುರನ ಬಾಹುಗಳ ಸಾಮರ್ಥ್ಯವನ್ನೂ, ವೃಕಾಸುರನ ಸಂಹಾರವನ್ನೂ ಮಾಡಿಸಿದನೆಂಬುದರ್ಥವು.

ಎಂಬಲ್ಲಿಗೆ ವೃಕಾಸುರವರಪ್ರದಾನವಿಚಾರವನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.

## ರುದ್ರನ ಹನುಮದ್ವಾಹನವಿಚಾರವು.

ಚೋ—ಎಲೈ ರೇಣುಕನೇ! ಶಿವವೀರ್ಯದದೆಸೆಯಿಂದ ಜನಿಸಿದ ಹನೂಮಂತನು ರಾಮಸೇವಕನಾದ್ದರಿಂದ ವಿಷ್ಣುವಿಗಿಂತಲೂ ಶಿವನಿಗಾಧಿಕ್ಯವು ಎಲ್ಲಿಯೂ ಹೇಳಲ್ಪಟ್ಟಿರುವುದಿಲ್ಲ" ಎಂಬಿರುವ ಅಭಿಯುಕ್ತರ ವಚನಕ್ಕೆ ಉತ್ತರವೇನು?

ರೇ—ಎಲೈ ಚೋಳನೇ! ನಿನ್ನ ಪ್ರಶ್ನೆಗುತ್ತರವನ್ನು ಕೇಳು; "ಭೀಮನು ಆಂಜನೇಯನುಕೂಡ ವಾಯು ಮೊದಲಾದವರಿಗೆ ಸರದಿಪ್ರಕಾರವಾಗಿ ಪುತ್ರನಾಗಿರ್ಪನು,, ಎಂದೂ "ಹನುಮಂತನು ಅಂಜನಾದೇವಿಗೆ ಮಗನೂ, ವಾಯುವಿಗೆ ಮಗನೂ ಆಗಿರುತ್ತಾನೆ,, ಎಂದೂ, "ಶಿವನು ಅಗ್ನಿರೇತಸ್ಕನು,, ಎಂದೂ ನೈಘಂಟುಕೋಕ್ತಿಯಿರುವುದರದೆಸೆಯಿಂದಲೂ, ಶಿವನ ವೀರ್ಯವನ್ನು ದೇವತೆಗಳು ತಮ್ಮ ಹೃದಯದಲ್ಲಿ ಧರಿಸಲಶಕ್ತರಾದರು. ಹೀಗಿರುವಲ್ಲಿ ಆ ರೇತಸ್ಸನ್ನು ಅಂಜನಾದೇವಿಯು ತನ್ನ ಹೊಟ್ಟೆಯಲ್ಲಿ ಹ್ಯಾಗೆ ಧರಿಸಿದಳು? ಆ ರೇತಸ್ಸಿನಿಂದ ಹನೂಮಂತನು

ಸುರಜಾಯತ || ನಾರಾಯಣ್ಯಾಮಂಜನಾಯಾಂ ಭೈರವೋ ಹನುಮಾನುಭೌ || ಹರವೀರ್ಯಾದಜಾಯೇತಾಂ ನ ಪೂಜ್ಯಾಗುಹವೀರವತ್ ’’ ಇತ್ಯುಕ್ತೇಶ್ಚ ವ್ಯಭಿಚಾರ ಸಂಜಾತೌ ಭೈರವಾಂಜನೇಯೌ ದಾಸೀಸೂನುವನ್ನ ಪೂಜ್ಯೌ.

ಚೋ—ಹೇ ರೇಣುಕಗಣೇಶ! ತ್ರಿಮಕೂಟಾದಿಷು ಶಿವಕ್ಷೇತ್ರೇಷು ಸರ್ವಜನೈಃ ಶಿವಲಿಂಗಪೂಜಾಯಾ ಪ್ರಾಗೇವ ಕ್ಷೇತ್ರಪಾಲಪೂಜಾ ಕ್ರಿಯತೇ ಸಾ ಕಿಂ ನಿಂದ್ಯಾ ?

ರೇ—ಚೋಳಭೂಪತೇ! ಪ್ರಥಮಮೇವ ಭೃತ್ಯಪೂಜಾಯಾಂ ನ ಕಾಪಿ ವಿಡಂಬನಾಸ್ಮಾಕಂ, ಗುದಪ್ರಕ್ಷಾಳನಾತ್ಪೂರ್ವಂ ಮುಖಪ್ರಕ್ಷಾಳನಂ ನ ಕ್ರಿಯತಏವ. ಹನುಮಾಂಸ್ತು ರಾಮಚಂದ್ರಸ್ಯ ಕಾರ್ಯಕರ್ತಾಪಿ ಪರಶಿವಭಕ್ತಏವ. ಸ್ಕಾಂದೇ ವೈಷ್ಣವಸಂಹಿತಾಯಾಂ ಬ್ರಹ್ಮೋತ್ತರಖಂಡೇ, ಹನುಮದ್ವಚನಂ ಶ್ರೂಯತಾಂ, “ಸರ್ವೇ ಶೃಣುತ ಭದ್ರಂ ವೋ ರಾಜಾನೋ ಯೇ ಚ ದೇಹಿನಃ||ಶಿವಪೂಜಾಂ ವಿನಾ ನಾನ್ಯಾ ಗತಿರಸ್ತಿ ಶರೀರಿಣಾಂ || ಏಷ ಗೋಪಸುತೋ ದೃಷ್ಟ್ವಾ ಪ್ರದೋಷೇ ಮಂದವಾಸರೇ || ಅಮಂತ್ರೇಣಾಪಿ ಸಂಪೂಜ್ಯ ಶಿವಂ ಶಿವಮವಾಪ್ತವಾನ್’’ ಕಿಂಚ ಹೇ ಚೋ

---

ಹೇಗೆ ಹುಟ್ಟಿದನು? ರುದ್ರವೀರ್ಯದಿಂದ ಭೈರವನು ನಾರಾಯಣಿಯಲ್ಲೂ, ಹನೂಮಂತನು ಅಂಜನಾದೇವಿಯಲ್ಲೂ ಜನಿಸಿದನು. ಆದರೂ ಈ ಭೈರವ ಹನೂಮಂತರು ಷಣ್ಮುಖ ವೀರಭದ್ರರಂತೆ ಪೂಜ್ಯರಲ್ಲವು,, ಹೀಗೆಂಬ ವಾಕ್ಯವಿರುವುದರದೆಸೆಯಿಂದಲುಕೂಡ ವ್ಯಭಿಚಾರದಿಂದ ಹುಟ್ಟಿದ ಭೈರವಾಂಜನೇಯರು ದಾಸೀಪುತ್ರನು ಹೇಗೆ ಪೂಜ್ಯನಲ್ಲವೋ ಹಾಗೆ ಪೂಜ್ಯರಲ್ಲವು.

ಚೋ— ಎಲೈ ರೇಣುಕಗಣೇಶನೇ! ತ್ರಿಮಕೂಟ ಮೊದಲಾದ ಶಿವಕ್ಷೇತ್ರಗಳಲ್ಲಿ ಸರ್ವರೂ ಶಿವಲಿಂಗವನ್ನು ಪೂಜಿಸುವುದಕ್ಕಿಂತ ಮೊದಲೇ ಕ್ಷೇತ್ರಪಾಲಕರನ್ನು ಪೂಜಿಸುತ್ತಾರೆ. ಅದು ನಿಂದೆಗೆ ಯೋಗ್ಯವಾದುದೇನು?

ರೇ — ಎಲೈ ಚೋಳರಾಜನೇ! ಸ್ವಾಮಿಯನ್ನು ಪೂಜಿಸುವುದಕ್ಕಿಂತ ಮೊದಲೇ ಸೇವಕನನ್ನು ಪೂಜಿಸುವುದರಲ್ಲಿ ನಮ್ಮ ಅಭ್ಯಂತರವೇನೂ ಇಲ್ಲ. ಏತಕ್ಕೆಂದರೆ—ಗುದಪ್ರಕ್ಷಾಳನೆಗಿಂತ ಮೊದಲೇ ಮುಖಪ್ರಕ್ಷಾಳನೆಯನ್ನು ಯಾರೂ ಮಾಡುವುದಿಲ್ಲವಷ್ಟೆ? ಹನೂಮಂತನಾದರೋ ರಾಮಚಂದ್ರನ ಕೆಲಸಗಳನ್ನು ಮಾಡತಕ್ಕವನಾದರೂ ಪರಮಾತ್ಮನಾದ ಶಿವನಲ್ಲಿ ಭಕ್ತಿಯುಳ್ಳವನೇ ಆಗಿರುತ್ತಾನೆ. ಆ ವಿಷಯದಲ್ಲಿ ಸ್ಕಾಂದಪುರಾಣಾಂತರ್ಗತವಾದ ವೈಷ್ಣವಸಂಹಿತೆಯಲ್ಲಿರುವ ಬ್ರಹ್ಮೋತ್ತರಖಂಡದಲ್ಲಿರುವ ಹನೂಮಂತನ ಮಾತನ್ನು ಕೇಳು; ಎಲೈ ರಾಜರೇ! ಎಲೈ ಪ್ರಾಣಿಗಳೇ! ನಿಮಗೆ ಮಂಗಳವನ್ನುಂಟುಮಾಡುವುದನ್ನು ಹೇಳುವೆನು. ನೀವೆಲ್ಲರೂ ಕೇಳಿರಿ; ಶರೀರಧಾರಿಗಳು ಶಿವಪೂಜೆಯಿಂದಲೇ ಗತಿಯನ್ನು ಹೊಂದಬೇಕಲ್ಲದೆ ಬೇರೊಂದರಿಂದಲ್ಲವು. ಗೋಪಾಲಕರಿಗೆ ಪ್ರೇಮಪುತ್ರನಾದ ಕೃಷ್ಣನು ಶನಿಪ್ರದೋಷವುಂಟಾದ ದಿನದಲ್ಲಿ ಶಿವದರ್ಶನವ

ಳ । ರಾಮಸ್ಯ ಸೀತಾವಿಯೋಗಪ್ರಲಾಪವಚನಂ ತತ್ಪ್ರಾಣಸಖಹನುಮದ್ವಚನಮುಚ್ಯತಾಂ, "ಚಂದ್ರಶ್ಚಂಡಕರಾಯತೇ ಮೃದುಗತಿರ್ವಾತೋಽಪಿ ವಜ್ರಾಯತೇ ಮಾಲ್ಯಂ ಸೂಚಿಕುಲಾಯತೇ ಮಲಯಜಾಲೇಪಸ್ಸ್ಫುಲಿಂಗಾಯತೇ॥ಆಲೋಕಸ್ತಿಮಿರಾಯತೇ ವಿಧಿವಶಾತ್ಪ್ರಾಣೋಽಪಿ ಭಾರಾಯತೇ ಹಾ ಹಂತ ಪ್ರಮದಾವಿಯೋಗಸಮಯಸ್ಸಂಹಾರಕಾಲಾಯತೇ" ।ಇತ್ಯಾದಿರಾಮಚಂದ್ರಪ್ರಲಾಪವಚನಂ. "ಹಾರೋಽಪಿ ನಾರ್ಪಿತಃ ಕಂಠೇ ಮಯಾ ವಿರಹಭೀತಯಾ॥ಅದ್ಯಾವಯೋರಂತರಸ್ಥಾಸ್ಸರಿತ್ಸಾಗರಪರ್ವತಾಃ". ಇತ್ಯಾದಿಸೀತಾಪ್ರಲಾಪ ವಚನಂ. "ಸ್ವಭಾವಾದೇವ ತನ್ವಂಗಿ ತದ್ವಿಯೋಗಾದ್ವಿಶೇಷತಃ॥ಪ್ರತಿಪತ್ಪಾಠಶೀಲಸ್ಯ ವಿದ್ಯೇವ ತನುತಾಂಗತಾ" ಇತ್ಯಾದಿಹನುಮದ್ವಚನಂ. ತತ್ತಾವದಾಸ್ತಾಂ. ಹೇ ಚೋಳಿ! ಶ್ರೀರಾಮಸ್ಯ ಪರಮಸಖೋ ಹನೂಮಾನ್ಮಹೇಶ್ವರಸ್ಯ ವಾಹನೀಭೂತಏವ. ತದುಕ್ತಂ ಪದ್ಮಪುರಾಣೇ ಶಿವರಾಘವಸಂವಾದೇ,– "ಅಥಾಹ ಕಪಿಶಾರ್ದೂಲೋ ಭಗವಂತಂ ಮಹೇಶ್ವರಂ॥ಮಾಮೇವಾರೋಹ ದೇವೇಶ ಭವೇಯಂ ತವ ವಾಹನಂ॥ಅಥೇಶ್ವರೋ ಹನೂಮಂತಮನಾರುಹ್ಯ ವೃಷಂ ಯ

---

ನ್ನು ಮಾಡಿ ಆ ಶಿವನನ್ನು! ಮಂತ್ರವಿಲ್ಲದೇ ಬರೇ ಪೂಜೆಯನ್ನು ಮಾಡಿದಾಗ್ಯೂ ಮಂಗಳವನ್ನು ಹೊಂದಿದನು,, ಮತ್ತೂ ಎಲೈ ಚೋಳನೇ! ವಿರಹಪೀಡಿತರಾದ ರಾಮಸೀತೆಯರ ಪ್ರಲಾಪವಚನವನ್ನು ಅವರಿಗೆ ಪ್ರಾಣಸ್ನೇಹಿತನಾದ ಹನೂಮಂತನ ಮಾತನ್ನು ಕೂಡ ಕೇಳು; "ಚಂದ್ರನು ಸೂರ್ಯನಂತೆ ಆಚರಿಸುತ್ತಾನೆ. ಮಂದಮಾರುತನು ವಜ್ರಾಯುಧದಂತೆ ಆಚರಿಸುತ್ತಾನೆ. ಪುಷ್ಪಮಾಲಿಕೆಯು ಸೂಜಿಗಳ ಸಮೂಹದಂತೆ ಆಚರಿಸುತ್ತದೆ. ಶ್ರೀಗಂಧಲೇಪವು ಅಗ್ನಿಕಿಡಿಗಳಂತೆ ಆಚರಿಸುತ್ತದೆ. ಬೆಳಕು ಕತ್ತಲೆಯಂತೆ ಕಾಣುತ್ತದೆ. ಪ್ರಾಣವು ಭಾರವಾಗಿದೆ. ಪತ್ನೀವಿಯೋಗಸಮಯವು ಪ್ರಳಯಕಾಲದಂತೆ ಆಚರಿಸುತ್ತಿದೆ. ಅಯ್ಯೋ! ಕಷ್ಟವು,, (ಇದು ರಾಮಪ್ರಲಾಪವಚನವು) "ವಿರಹದದೆಸೆಯಿಂದ ಹೆದರಿದ ನಾನು ಕತ್ತಿನಲ್ಲಿ ಮುತ್ತಿನ ಹಾರವನ್ನೂ ಧರಿಸಿಕೊಳ್ಳಲಿಲ್ಲ. ಈಗ ನಮ್ಮಿಬ್ಬರ ಮಧ್ಯದಲ್ಲಿ ನದಿಗಳೂ, ಸಮುದ್ರಗಳೂ, ಪರ್ವತಗಳೂ ಇರುತ್ತವೆ, (ಇದು ಸೀತಾಪ್ರಲಾಪವಚನವು) "ಕೃಶಾಂಗಿಯಾದ ಎಲೈ ರಾಮಪತ್ನಿಯೇ! ಸ್ವಭಾವದಿಂದ ಕೃಶವಾದ ಅಂಗವುಳ್ಳವಳಾಗಿರುವ ನೀನು–ಪಾಡ್ಯಮಿಯಲ್ಲಿ ಓದತಕ್ಕವನ ವಿದ್ಯೆಯು ಹೇಗೆ ಕೃಶವಾಗುತ್ತದೋ ಹಾಗೆ ಆ ಶ್ರೀರಾಮನ ವಿಯೋಗದಿಂದ ಬಹಳವಾಗಿ ಕೃಶಾಂಗಿನಿಯಾಗಿರುತ್ತೀಯೆ,, (ಇದು ಹನುಮದ್ವಚನವು) ಅದಂತಿರಲಿ ಎಲೈ ಚೋಳನೇ! ಶ್ರೀರಾಮನಿಗೆ ಪರಮಸ್ನೇಹಿತನಾದ ಹನೂಮಂತನು ಶಿವನಿಗೆ ವಾಹನವಾಗಿರುತ್ತಾನೆ. ಆ ವಿಷಯವು ಪದ್ಮಪುರಾಣದ ಶಿವರಾಘವಸಂವಾದದಲ್ಲಿ—"ಕಪಿಶ್ರೇಷ್ಠನಾದ ಹನೂಮಂತನು ಭಗವಂತನಾದ ಶಿವನನ್ನು ಕುರಿತು ಎಲೈ ಶಿವನೇ! ನೀನು ನನ್ನ ಮೇಲೆ ಕುಳಿತುಕೋ ನಾನು ನಿನಗೆ ವಾಹನವಾಗುವೆನು,, ಎಂದು ಹೇಳಿದನಾದ್ದರಿಂದ ಶಿವನು ವೃಷಭನಮೇಲೆ ಕೂತುಕೊಳ್ಳುವಂತೆ ಹನೂಮಂತನಮೇಲೆ

ಥಾ||ಅಥ ವಿಷ್ಣುರ್ಮಹೇಶಾನಮಿದಂ ವಚನಮುಕ್ತವಾನ್|| ಹನೂಮತಾಸಮೋ ನಾಸ್ತಿ ಕೋಪಿ ಬ್ರಹ್ಮಾಂಡಮಂಡಲೇ||ತತ್ರೋಪನಿಷದಿ ವ್ಯಕ್ತಂ ತ್ವತ್ಪದಂ ತು ಕಥಾ ಸ್ಥಿತಂ|| ಮಹಾಯೋಗಿಹೃದಂಭೋಜೇ ಚಲಂ ಸ್ವಸ್ಥಂ ಹನೂಮತಿ || ಲೋಕವಾದೋಪಿ ಸುಮಹಾನ್ ಶಂಭುರ್ನಾರಾಯಣಪ್ರಿಯಃ|| ಹರಿಪ್ರಿಯ ಇತಿ ಸ್ವಾಮಿನ್ನಾಯಂ ದೃಗ್ಭಾಗ್ಯಮಸ್ತಿ ಮೇ||ಶಿರೋಗೃಹೀತ್ವಾತವಸಮುಹ್ಯ ಶಂಕರಃ ಪಸ್ಪರ್ಶ ಪೃಷ್ಠೇ ಚುಲುಕೇನ ಸಧ್ವನಿ|| ಹಾರಂ ಚ ಮುಕ್ತಾಪರಿಕಲ್ಪಿತಂ ಶಿವೋ ಹನೂಮತಃ ಕಂಠಗತಂ ಚಕಾರ" ಇತ್ಯಾದಿ ಪ್ರಸಿದ್ಧಂ. ಅನ್ಯತ್ರ,-" ತಂಡೋಶ್ವಾಯಾಸಮುದ್ಭೂತೋ ಹನೂಮಾನ್ಗಣಪುಂಗವಃ || ಸರ್ವಾಂಗಲಿಂಗೀ ವೀರೇಶಶಿಷ್ಯಸ್ಸರ್ವೇಶಭಕ್ತಿಮಾನ್ "

ಇತಿ ರುದ್ರಸ್ಯ ಹನುಮದ್ವಾಹನವಿಚಾರಏಕಾದಶೋಪದೇಶೇ
ಷಷ್ಠಸ್ಸಂವಾದಃ.



ಕುಳಿತುಕೊಂಡನು. ಅನಂತರದಲ್ಲಿ ವಿಷ್ಣುವು ಎಲೈ ಶಿವನೇ! ಹನೂಮಂತನಿಗೆ ಸಮಾನನು ಬ್ರಹ್ಮಾಂಡಮಂಡಲದಲ್ಲಿಲ್ಲವು. ಏತಕ್ಕೆಂದರೆ- ಉಪನಿಷತ್ತುಗಳಿಂದ ಸ್ಪಷ್ಟವಾಗಿ ನಿರೂಪಿತವಾಗಿರುವ ನಿನ್ನ ಪಾದವು ಹನೂಮಂತನಮೇಲೆ ಇಡಲ್ಪಟ್ಟಿತು. ಮಹಾತ್ಮರಾದ ಯೋಗಿಗಳ ಹೃದಯಕಮಲದಲ್ಲಿ ಸ್ಥಿರವಾಗಿ ನಿಲ್ಲದಿರುವ ನಿನ್ನ ಪಾದವು ಹನೂಮಂತನಮೇಲೆ ಸ್ಥಿರವಾಗಿ ನಿಲ್ಲುವದಾಯಿತು. ಎಲೈ ಸ್ವಾಮಿ! ಶಿವನು—ನಾರಾಯಣನಲ್ಲಿ ಪ್ರೇಮವುಳ್ಳವನು ಎಂಬ ಲೋಕವಾದವು ದೊಡ್ಡದಾಗಿದೆ. ನೀನು ನಾರಾಯಣನಲ್ಲಿ ಪ್ರೇಮವುಳ್ಳವನೆಂದು ಮಾತ್ರವೇ ಅಲ್ಲವು. ಏಕೆಂದರೆ—ನಿನ್ನ ಪ್ರೇಮಪಾತ್ರನಾದ ಈ ಹನೂಮಂತನು ನನ್ನ ಕಣ್ಣಿಗೆ ಭಾಗ್ಯಸ್ವರೂಪನಾಗಿರುತ್ತಾನೆ. ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿತು. ಅನಂತರದಲ್ಲಿ ಶಿವನು ಹನೂಮಂತನ ಮಸ್ತಕವನ್ನು ಮುಟ್ಟಿ ಬಗ್ಗಿಸಿಕೊಂಡು ಆತನ ಬೆನ್ನಿನಲ್ಲಿ ಅಂಗೈನಿಂದ ಶಬ್ದವಾಗುವಂತೆ ಬಡಿದು, ಆತನ ಕೊರಳಿಗೆ ಮುಕ್ತಾಹಾರವನ್ನು ಅಲಂಕರಿಸಿದನು. ಇತ್ಯಾದಿವಚನವು ಪ್ರಸಿದ್ಧವಾಗಿದೆ. ಗ್ರಂಥಾಂತರದಲ್ಲಿ—"ಹನೂಮಂತನು ನಂದೀಶ್ವರನಿಂದ ಜನಿಸಿದವನಾದ್ದರಿಂದ ಗಣಶ್ರೇಷ್ಠನಾಗಿರುತ್ತಾನೆ. ವೀರೇಶ್ವರನಿಗೆ ಶಿಷ್ಯನಾಗಿ ಸ್ಥೂಲಾದ್ಯಂಗತ್ರಯದಲ್ಲಿ ಇಷ್ಟಾದಿಲಿಂಗತ್ರಯವನ್ನು ಧರಿಸಿದವನಾಗಿ ಸಕಲ ಲೋಕಕ್ಕೆ ಒಡೆಯನಾದ ಶಿವನಲ್ಲಿ ಭಕ್ತಿಯುಳ್ಳವನಾಗಿರುತ್ತಾನೆ," ಎಂದು ಹೇಳಲ್ಪಟ್ಟದೆ.

ಎಂಬಲ್ಲಿಗೆ ರುದ್ರನ ಹನುಮದ್ವಾಹನವಿಚಾರವನ್ನು ಹೇಳುವ ಹನ್ನೊಂದನೆಯ
ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



ಶ್ರೀಃ.

## ರುದ್ರಸ್ಯಾಗ್ನಿಪ್ರಳಯಜಲಪ್ರಳಯಕರ್ತೃತ್ವವಿಚಾರಃ.

ಚೋ—"ಶ್ಮಶಾನವಾಸೀ ಶ್ರೀರುದ್ರಶ್ಶ್ಮಶಾನಂ ರುದ್ರಭೂರಿತಿ ॥ ಸದಾ ಶ್ಮಶಾನೇಷ್ವಾಕ್ರೀಡಾ ತದೇತನ್ಮಂಗಳಂ ಕಿಮು"

ರೇ—ಹೇ ಚೋಳ! ತ್ವದೀಯಪ್ರಶ್ನಸ್ಯೋತ್ತರಂ ಶ್ರೂಯತಾಂ, ಅಥರ್ವಶಿರಸಿ,— "ಓಂ ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ, ವ್ಯೋಮೇತಿ ಭಸ್ಮ, ಸರ್ವಂ ಹವಾ ಇದಂ ಭಸ್ಮ ಮನ ಇತ್ಯೇತಾನಿ ಚಕ್ಷೂಂಷಿ ಭಸ್ಮಾನಿ ಗ್ರಸತಿ ಸ್ವೇನ ತೇಜಸಾ | ತಸ್ಮಾದುಪಸಂಹರ್ತ್ರೇ ಮಹಾಗ್ರಾಸಾಯ ವೈ ನಮೋ ನಮಃ" ಬೋಧಾಯನಮುನಿಃ,—"ಪಾಣೌ ಬ್ರಹ್ಮ ಕಪಾಲಮುಜ್ವಲತರಂ ಸ್ಕಂಧೇ ಮುರಾರೇರ್ವಪುಸ್ಸರ್ವಾಂಗೇಷು ತುಷಾರಹಾರಧವಳಾದೇವಾಸ್ಥಿಬೃಂದಸ್ರಜಃ॥ ಬಿಭ್ರದ್ಬೀಜಮಿವ ಪ್ರಸಾಧನಧಿಯಾ ಭೂಯೋಪಿ ಸಂಭೂತಯೇ ಪಾಯಾದ್ವಃ ಪ್ರಳಯಾವಸಾನಸಮಯೇ ಕಾಪಾಲಿಕಶ್ಶಂಕರಃ" ತಥಾತ್ವದಾಸ್ತಾಂ. ಮಹಾಜಲಪ್ರಳಯೇ ಆದಿನಾರಾಯಣಸ್ಯ ವಟಪತ್ರಪುಟಶಯಿತ್ವಂ ಪ್ರಸಿದ್ಧಂ. ಸ್ಕಾಂದೇ ಕಾಶೀಕಾಖಂಡೇ,—"ತತ್ರಾಕ್ಷಯೋ ವಟೋಪ್ಯಸ್ತಿ ಸಪ್ತಪಾತಾಳಮೂಲಕಃ ॥ ಪ್ರಳ

---

### ರುದ್ರನಿಗೆ ಅಗ್ನಿಪ್ರಳಯ ಜಲಪ್ರಳಯಕರ್ತೃತ್ವವಿಚಾರವು.

ಚೋ—ಶ್ರೀರುದ್ರನು ಶ್ಮಶಾನದಲ್ಲಿ ವಾಸಮಾಡುತ್ತಾನೆ. ಆದ್ದರಿಂದಲೇ ಶ್ಮಶಾನವು ರುದ್ರಭೂಮಿಯೆಂದೆನಿಸಿರುತ್ತದೆ. ಆತನು ಯಾವಾಗಲೂ ಶ್ಮಶಾನಗಳಲ್ಲಿಯೇ ವಿಹರಿಸುತ್ತಾನೆ. ಆದ್ದರಿಂದ ಈ ನಡವಳಿಕೆಯು ಮಂಗಳಕರವಾಗಿರುತ್ತದೆಯೆ?

ರೇ—ಎಲೈ ಚೋಳನೇ! ನಿನ್ನ ಪ್ರಶ್ನೆಗುತ್ತರವನ್ನು ಕೇಳು; ಅಥರ್ವಶಿರಸ್ಸಿನಲ್ಲಿ—"ತನ್ನ ತೇಜಸ್ಸಿನಿಂದ ಪಂಚಭೂತಗಳನ್ನೂ, ಮನಸ್ಸು ಮೊದಲಾದವುಗಳನ್ನೂ, ಸಕಲವನ್ನೂ ಭಸ್ಮೀಭೂತಗಳನ್ನಾಗಿಮಾಡಿ, ಸಕಲವನ್ನೂ ತನ್ನಲ್ಲಿ ಲೀನಗೊಳಿಸಿಕೊಳ್ಳುವ ಶಿವನಿಗೋಸ್ಕರ ನಮಸ್ಕಾರವು,, ಎಂದೂ, ಬೋಧಾಯನಮುನಿಯಿಂದ,—"ಧಾನ್ಯವನ್ನು ಒಕ್ಕಿ ಪುನಃ ಅದನ್ನು ಬಿತ್ತುವದಕ್ಕಾಗಿ ಅದರಿಂದ ಬೀಜವನ್ನು ಸಂಗ್ರಹಿಸುವನೋಪಾದಿಯಲ್ಲಿ, ಕಲ್ಪಾಂತದಲ್ಲಿ ಬ್ರಹ್ಮವಿಷ್ಣ್ವಾದಿಗಳೆಲ್ಲರನ್ನೂ ಸಂಹರಿಸಿ, ಅವರನ್ನು ಪುನಃ ಸೃಷ್ಟಿಸುವುದಕ್ಕಾಗಿ ಕೈಯಲ್ಲಿ ಬ್ರಹ್ಮಕಪಾಲವನ್ನು ಹೆಗಲಿನಲ್ಲಿ ವಿಷ್ಣುವಿನ ಶರೀರವನ್ನು ಸರ್ವಾಂಗಗಳಲ್ಲಿ ದೇವತೆಗಳ ಅಸ್ಥಿಸಮೂಹಗಳ ಸರಗಳನ್ನು ಧರಿಸಿದ ಶಂಕರನು ನಿಮ್ಮನ್ನು ಕಾಪಾಡಲಿ,, ಎಂದೂ ಹೇಳಲ್ಪಟ್ಟಿದೆ. ಅದಂತಿರಲಿ, ಮಹಾಜಲಪ್ರಳಯದಲ್ಲಿ ಆದಿನಾರಾಯಣನು ವಟಪತ್ರಪುಟದಮೇಲೆ ಮಲಗಿದುದು ಪ್ರಸಿದ್ಧವಾಗಿದೆ. ಕಾಶಿಕಾಖಂಡದಲ್ಲಿ—"ಮಹಾಜಲಪ್ರಳಯಕಾಲದಲ್ಲಿ ಬ್ರಹ್ಮನು ಮಹಾವಟವೃಕ್ಷರೂಪವನ್ನು

ಯೇಪಿ ತಮಾರುಹ್ಯ ಮೃಕಂಡುತನಯೋಽವಸತ್ || ಹಿರಣ್ಯಗರ್ಭೋ ವಿಜ್ಞೇಯಸ್ತಾಸ್ತಾಕ್ಷ್ಟ ವಟರೂಪಧೃತ್ ||ಸ್ವಯಂ ಲಕ್ಷ್ಮೀಪತಿಸ್ತಾಸ್ತಾಕ್ಷ್ಟೇತೇ ತತ್ಪತ್ರಸಂಪುಟೇ ” ಅನ್ಯತ್ರ,—“ ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಂ|| ವಟಸ್ಯ ಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ ” ಇತ್ಯಾದಿವೈಷ್ಣವವಾಕ್ಯಾತ್, ಆದಿನಾರಾಯಣೋ ಜಲಪ್ರಳಯೇ ವಟಪತ್ರಪುಟೇ ಸ್ಥಿತ್ವಾ ವಹ್ನಿಪ್ರಳಯೇ ಲಯಂ ಜಗಾಮ, ತತ್ಪ್ರಳಯಕರ್ತಾ ಗಂಗಾಧರಶ್ಶಿವ ಏಕಏವ ನಿತ್ಯ ಇತ್ಯರ್ಥಃ, ತದುಕ್ತಂ ದಧೀಚಿಮುನಿನಾ,—“ ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾ ತ್ವಂ ವಿಶ್ವಭರ್ತಾ ತವ ನಾಸ್ತಿ ಭರ್ತಾ||ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾ ತ್ವಂ ವಿಶ್ವನಾಥಸ್ತವ ನಾಸ್ತಿ ನಾಥಃ ” ತಥಾ ಬೃಹಜ್ಜಾಬಾಲೋಪನಿಷದಿ,—“ ಜಗದುತ್ಪಾದನಸ್ಥಾಪನಸಂಹಾರಾವಿರ್ಭಾವತಿರೋಭಾವಾ ಇತಿ ಪಂಚಕೃತ್ಯಾನಿ ತತ್ಸಂಪನ್ನ ಈಶ್ವರಸ್ತ್ವವಿದ್ಯಾದಿಪಂಚಕ್ಲೇಶಾನಾಕುಲಸ್ಸರ್ವಾಗಮಪ್ರಣೇತಾ ” ಮೃಗೇಂದ್ರಾಗಮೇ,—“ ಜಗಜ್ಜನ್ಮಸ್ಥಿತಿಧ್ವಂಸತಿರೋಧಾನವಿಮುಕ್ತಯಃ || ಶಿವಸ್ಯೈತಾಃ

---

ಧರಿಸಿದನು. ಅದು ಸಪ್ತಪಾತಾಳಪರ್ಯಂತವಾಗಿ ಬೇರುಗಳನ್ನು ಬಿಟ್ಟಿತ್ತು. ಆ ಮರದಮೇಲೆ ಮಾರ್ಕಂಡೇಯನು ವಾಸವಾಗಿದ್ದನು. ಆ ವೃಕ್ಷದ ಪತ್ರಪುಟದಲ್ಲಿ ಆದಿನಾರಾಯಣನು ಶಯನ ಮಾಡಿದನು,, ಎಂದು ಹೇಳಲ್ಪಟ್ಟಿದೆ. ಮತ್ತೊಂದುಸ್ಥಳದಲ್ಲಿ—“ಕೈ ಕಾಲುಗಳನ್ನು ಮುಖದಲ್ಲಿ ಸೇರಿಸಿಕೊಂಡು ಆಲದೆಲೆಯ ದೊನ್ನೆಯಮೇಲೆ ಮಲಗಿದ ಬಾಲಕನಾದ ಮುಕುಂದನನ್ನು ಮನಸ್ಸಿನಿಂದ ಸ್ಮರಿಸುತ್ತೇನೆ,, ಇತ್ಯಾದಿಯಾಗಿ ವೈಷ್ಣವರ ವಾಕ್ಯವಿರುವುದರದೆಸೆಯಿಂದ ಆದಿನಾರಾಯಣನು ಜಲಪ್ರಳಯಕಾಲದಲ್ಲಿ ವಟಪತ್ರಪುಟದಲ್ಲಿದ್ದು, ಅಗ್ನಿಪ್ರಳಯಕಾಲದಲ್ಲಿ ನಾಶವನ್ನೈದಿದನು. ಆ ಪ್ರಳಯವನ್ನುಂಟುಮಾಡಿದ ಗಂಗಾಧರನಾದ ಶಿವನೊಬ್ಬನೇ ನಿತ್ಯನೆಂಬುದರ್ಥವು. ಆ ವಿಷಯವು ದಧೀಚಿಮುನಿಯಿಂದ—“ಎಲೈ ಶಿವನೇ! ನೀನು ಪ್ರಪಂಚವನ್ನು ಸೃಷ್ಟಿಸಿರುತ್ತೀಯೆ. ನಿನ್ನನ್ನು ಸೃಷ್ಟಿಸಿದವನಾವನೂ ಇಲ್ಲವು. ನೀನು ಪ್ರಪಂಚವನ್ನು ಪೋಷಿಸುತ್ತೀಯೆ. ನಿನ್ನನ್ನು ಪೋಷಿಸತಕ್ಕವನಾವನೂ ಇಲ್ಲವು. ನೀನು ಪ್ರಪಂಚವನ್ನು ಸಂಹರಿಸುತ್ತೀಯೆ. ನಿನ್ನನ್ನು ಸಂಹರಿಸತಕ್ಕವನಾವನೂ ಇಲ್ಲವು. ನೀನು ಪ್ರಪಂಚಕ್ಕೆ ಸ್ವಾಮಿಯಾಗಿರುತ್ತೀಯೆ. ನಿನಗೆ ಸ್ವಾಮಿಯಾವನೂ ಇಲ್ಲವು,, ಎಂದು ಹೇಳಲ್ಪಟ್ಟಿದೆ. ಬೃಹಜ್ಜಾಬಾಲೋಪನಿಷತ್ತಿನಲ್ಲಿ—“ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನಾನುಗ್ರಹಗಳೆಂಬ ಪಂಚಕೃತ್ಯಗಳಿಂದ ಕೂಡಿದ ಈಶ್ವರನಾದರೋ ಅವಿದ್ಯಾದಿ ಪಂಚಕ್ಲೇಶಗಳಿಲ್ಲದವನೂ, ಸಕಲಾಗಮಗಳನ್ನು ಮಾಡಿದವನೂ ಆಗಿರುತ್ತಾನೆ,, ಎಂದು ನಿರೂಪಿತವಾಗಿದೆ. ಮೃಗೇಂದ್ರಾಗಮದಲ್ಲಿ—“ಎಲೈ ಪಾರ್ವತಿಯೇ! ಸೃಷ್ಟಿ ಸ್ಥಿತಿ ಲಯ ತಿರೋಧಾನಾನುಗ್ರಹಗಳೆಂಬ ಪಂಚಕೃತ್ಯಗಳು ಶಿವನಾದ ನನಗೆ ಸೇರಿರು

ಕ್ರಿಯಾಃ ಪಂಚ ಮಮ ಸಂತಿ ನಗಾತ್ಮಜೇ'' ಇತಿ. ಇತ್ಯಾದಿಭಿಶ್ಶಿವಸ್ಯ ಪಂಚಕೃತ್ಯಾಧಿಪತಿತ್ವಂ ನಿತ್ಯಸಿದ್ಧತ್ವಂ ಚ ಪ್ರಸಿದ್ಧಂ.

ಇತಿ ರುದ್ರಸ್ಯಾಗ್ನಿಪ್ರಳಯಜಲಪ್ರಳಯಕರ್ತೃತ್ವವಿಚಾರಏಕಾದಶೋಪದೇಶೇ ಸಪ್ತಮಸ್ಸಂವಾದಃ.

ಶ್ರೀಃ.

## ರುದ್ರೇಣಾದಿನಾರಾಯಣಾವತಾರಸಂಹಾರವಿಧಿಃ.

ರೇ—ಭೋ ಚೋಳ! ಆದಿನಾರಾಯಣಾವತಾರಸಂಹಾರವಿಧಿಶ್ಶ್ರೂಯತಾಂ, ಅಥರ್ವಣೇ,—ತ್ರಿಯಂಬಕೋ ಬಕೋ ನಾಮ ರುದ್ರೋ ನಾರಾಯಣಶಿರಶ್ಚಂಚುನಾ ಚಕರ್ತ'' ಸ್ಕಾಂದೇ,—"ತ್ರಿಯಂಬಕೋ ಮಹಾರುದ್ರಃ ಬಕಪಕ್ಷಿಸ್ವರೂಪಭೃತ್ ‖ ಮತ್ಸ್ಯಕೂರ್ಮಾತ್ಮನೋ ವಿಷ್ಣೋಶ್ಶಿರಶ್ಚಿಚ್ಛೇದ ಚಂಚುನಾ'' ಕಾಳಿಕಾಖಂಡೇ,—"ತತಃ ಪ್ರಾಣ್ಯುಪಕಾರಾಯ ಕೂರ್ಮಂ ಸಂಹೃತ್ಯ ಗರ್ವಿತಂ ‖ ತದಂಗಭೂಷಣತ್ವೇನ ಧಾರಯಾಮಾಸ ಶಂಕರಃ'' ಇತ್ಯಾದಿಭಿರ್ಮತ್ಸ್ಯಕೂರ್ಮಾವತಾರಸಂಹಾರಸ್ತು ಶ್ರೂಯತಾಂ, ಯಜುರ್ವೇದೇ,—"ಆಖುಸ್ತೇ ರುದ್ರ ಪಶುಸ್ತಂ ಜುಷಸ್ವ

---

ತ್ತವೆ ಎಂದು ತಿಳಿಯತಕ್ಕದ್ದು'' ಎಂದು ಹೇಳಲ್ಪಟ್ಟಿದೆ. ಇತ್ಯಾದಿ ವಚನಪ್ರಮಾಣಗಳಿಂದ ಶಿವನಿಗೆ ಪಂಚಕೃತ್ಯಾಧಿಪತಿತ್ವವೂ ನಿತ್ಯತ್ವವೂ ಪ್ರಸಿದ್ಧವಾಗಿದೆ.

ಎಂಬಲ್ಲಿಗೆ ರುದ್ರನಿಗೆ ಅಗ್ನಿಪ್ರಳಯ ಜಲಪ್ರಳಯಕರ್ತೃತ್ವವಿಚಾರವನ್ನು ಹೇಳುವಹನ್ನೊಂದನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.

## ರುದ್ರನಿಂದ ಆದಿನಾರಾಯಣಾವತಾರಸಂಹಾರವಿಧಿಯು.

ರೇ—ಎಲೈ ಚೋಳನೇ! ಶಿವನು ಆದಿನಾರಾಯಣನ ಅವತಾರಗಳನ್ನು ಸಂಹರಿಸಿದುದನ್ನು ಕೇಳು; ಅಥರ್ವಣದಲ್ಲಿ—"ತ್ರಿಯಂಬಕನಾದ ರುದ್ರನು ಬಕಪಕ್ಷಿಯಾಗಿ ಮತ್ಸ್ಯಕೂರ್ಮಾವತಾರಿಯಾದ ನಾರಾಯಣನ ತಲೆಯನ್ನು ಕೊಕ್ಕಿನಿಂದ ಕತ್ತರಿಸಿದನು'' ಎಂದು ಹೇಳಲ್ಪಟ್ಟಿದೆ. ಅದೇ ರೀತಿಯಾಗಿ ಸ್ಕಾಂದದಲ್ಲಿ ಹೇಳಲ್ಪಟ್ಟಿದೆ. ಕಾಳಿಕಾಖಂಡದಲ್ಲಿ—"ಶಿವನು—ಅಹಂಕಾರವನ್ನು ಹೊಂದಿದ್ದ ಕೂರ್ಮಾವತಾರಿಯಾದ ವಿಷ್ಣುವನ್ನು ಸಂಹರಿಸಿ, ಲೋಕಕ್ಕೆ ಹಿತವನ್ನುಂಟುಮಾಡಿ, ಆ ಕೂರ್ಮದ ಕಪಾಲವನ್ನು ಒಡವೆಯನ್ನಾಗಿ ಧರಿಸಿದನು,, ಇತ್ಯಾದಿವಚನಪ್ರಮಾಣಗಳಿಂದ ಮತ್ಸ್ಯಕೂರ್ಮಾವತಾರಸಂಹಾರವಿಧಿಯನ್ನು ತಿಳಿಯತಕ್ಕದ್ದು. ಎಲೈ ಚೋಳನೇ! ವರಾಹಾವತಾರಸಂಹಾರವನ್ನು ಕೇಳು; ಯಜುರ್ವೇದದಲ್ಲಿ—"ಎಲೈ ರುದ್ರನೇ! ಭೂಮಿಯನ್ನು

ಷತೇ ರುದ್ರಭಾಗಸ್ಸಹಸ್ವಸ್ರಾಂಬಿಕಯಾ'' ಇತಿ. ಅಸ್ಯಾರ್ಥಃ,—[ಭೂಭೂಧರಾದೀನಾಂ ಸಮಂತಾತ್ಖನತೀತ್ಯಾಖುಃ—ಮಹಾವರಾಹಃ, ಭೋ ರುದ್ರ, ತೇ—ತವ, ಪಶುಃ-ಯಜ್ಞಪಶುಃ, ಭೋ ರುದ್ರ, ಏಷಭಾಗಃ, ತೇ-ತವ ಸಂಬಂಧೀ, ತಂ ಭಾಗಂ, ಸ್ವಸ್ರಾ—ನಿತ್ಯಸಮವೇತಯಾ, ಅಂಬಿಕಯಾಸಹ-ಪಾರ್ವತ್ಯಾಸಾಕಂ, ಜುಷಸ್ವ-ಸ್ವೀಕುರು.] ಲೈಂಗೇ,—''ದೃಷ್ಟ್ವೋತ್ಪಾಟ್ಯ ಚ ದಂಷ್ಟ್ರಾಂತಾಂ ವಿಷ್ಣೋರೇವ ಮಹಾತ್ಮನಃ || ಬಭಾರ ಚ ಮಹಾದೇವಃ ಕೂರ್ಮಪ್ರಾಂತೇಪಿ ಚೋರಸಿ || ಪುತ್ರಪೌತ್ರಾದಿಭಿರ್ಯುಕ್ತೋ ವರಾಹಸ್ತ್ವಪತದ್ಭುವಿ || ಅದ್ಯಾಪಿ ಸೂಕರಾರೋಹಂ ತೀರ್ಥಂ ಗಂಗಾತಟೇ ಸ್ಥಿತಂ'' ಇತ್ಯಾದಿಭಿರ್ವರಾಹಾವತಾರಸಂಹಾರೋ ವಿಜ್ಞೇಯಃ.

ಹೇ ಚೋಳ! ಯಜ್ಞನಾರಾಯಣಸಂಹಾರಸ್ತು ಶ್ರೂಯತಾಂ: ಯಜುರ್ವೇದಾರಣ್ಯೇ ಪುರುಷಸೂಕ್ತೇ,—''ದೇವಾ ಯದ್ಯಜ್ಞಂ ತನ್ವಾನಾಃ | ಅಬಧ್ನನ್ಪುರುಷಂ ಪಶುಂ''—'ಯತ್ಪುರುಷೇಣ ಹವಿಷಾ | ದೇವಾ ಯಜ್ಞ ಮತನ್ವತ'' ಇತಿ. ಋಗ್ವೇದೇ,—''ಸ ವೀರೋ ದಕ್ಷಸಾಧನೋ ವಿಯಸ್ತಂಭರೋದಸೀ'' ಯಜುರ್ವೇದೇ,—'ನಮಶ್ಶೂರಾಯ ಚಾವಭಿಂದತೇ ಚ | ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮಃ'' ವಾಯುವೀಯಸಂಹಿತಾಯಾಂ,—''ವೀರಭದ್ರೋ ಮಹಾತೇ

---

ಪರ್ವತ ಮೊದಲಾದವುಗಳನ್ನೂ ಕೊರೆಯುತಕ್ಕದಾದ್ದರಿಂದ ಆಖುವೆಂದು ಹೆಸರನ್ನು ಹೊಂದಿದ ಮಹಾವರಾಹವು ನಿನಗೆ ಯಜ್ಞಪಶುವೂ, ನಿನ್ನ ಸಂಬಂಧಿಯೂ ಆಗಿರುತ್ತದೆ. ಅದನ್ನು ನಿನ್ನ ನಿತ್ಯಸಮವೇತಶಕ್ತಿಯಾದ ಪಾರ್ವತಿಯೊಡನೆ ಸ್ವೀಕರಿಸಿಕೊಳ್ಳುವನಾಗು,, ಲಿಂಗಪುರಾಣದಲ್ಲಿ—''ಶಿವನು—ಮಹಾತ್ಮನಾದ ವಿಷ್ಣುವಿನ ಆ ಕೋರೆದಾಡೆಯನ್ನು ನೋಡಿ ಕಿತ್ತುಕೊಂಡು ಎದೆಯಲ್ಲಿ ಆ ಕೂರ್ಮನ ಹತ್ತಿರದಲ್ಲೇ ಧರಿಸಿದನೋ, ಮಕ್ಕಳಿಂದಲೂ ಮೊಮ್ಮಕ್ಕಳಿಂದಲೂ ಕೂಡಿದ ಆದಿವರಾಹವು ನೆಲದಮೇಲೆ ಬಿದ್ದಿತೋ, ಈಗಲೂ ವರಾಹತೀರ್ಥವು ಗಂಗಾತೀರದಲ್ಲಿ ಇರುತ್ತದೆಯೋ,, ಇತ್ಯಾದಿ ವಚನ ಪ್ರಮಾಣಗಳಿಂದ ವರಾಹಾವತಾರಸಂಹಾರವು ತಿಳಿಯತಕ್ಕದ್ದು. ಎಲೈ ಚೋಳನೇ! ಯಜ್ಞನಾರಾಯಣನ ಸಂಹಾರವನ್ನು ಕೇಳು, ಪುರುಷಸೂಕ್ತದಲ್ಲಿ—''ದೇವತೆಗಳು ಯಾವ ವಸ್ತುವನ್ನು ಕುರಿತು ಜ್ಞಾನಾಗ್ನಿಹೋಮವನ್ನು ಮಾಡುವವರಾಗಿ ಜ್ಞಾನಹೀನವಾದ ಜೀವಾತ್ಮನನ್ನು ಷಡಕ್ಷರಮಂತ್ರವೆಂಬ ಪಾಶದಿಂದ ಬಂಧಿಸಿದರೋ,.—''ಯಾವ ವಸ್ತುವನ್ನು ಕುರಿತು ಬ್ರಹ್ಮಾದಿ ದೇವತೆಗಳು ಸ್ವಾತ್ಮನೈವೇದ್ಯದಿಂದ ಜ್ಞಾನಾಗ್ನಿ ಹೋಮವನ್ನು ವಿಸ್ತರಿಸಿದರೋ,, ಎಂದು ಉಕ್ತವಾಗಿದೆ ಋಗ್ವೇದದಲ್ಲಿ—''ದಕ್ಷಧ್ವಂಸಕನಾದ ಆ ವೀರಭದ್ರನು ಭೂಮ್ಯಾಕಾಶಗಳನ್ನು ತಡೆದನೋ,, ಎಂದೂ. ಯಜುರ್ವೇದದಲ್ಲಿ—''ದಕ್ಷಾಧ್ವರದಲ್ಲಿ ದಕ್ಷಬ್ರಹ್ಮನ ಮತ್ತು ಯಜ್ಞನಾರಾಯಣಾದಿಗಳ ಮಸ್ತಕಗಳನ್ನು ಛೇದಿಸಿದ ವೀರಭದ್ರೇಶ್ವರನಿಗೋಸ್ಕರ ನಮಸ್ಕಾರವು,, ಎಂದೂ ಉಕ್ತವಾಗಿದೆ. ವಾಯವೀಯಸಂಹಿತೆಯಲ್ಲಿ—''ಮಹಾಪರಾಕ್ರ

ಜಾ ಹಿಮಕುಂದೇಂದುಸನ್ನಿಭಃ || ಭದ್ರಕಾಳೀಪ್ರಿಯೋ ನಿತ್ಯಂ ಮಾತೄಣಾಮಭಿರಕ್ಷಕಃ || ಯಜ್ಞಸ್ಯ ಚ ಶಿರೋಹರ್ತಾ ದಕ್ಷಸ್ಯ ಚ ದುರಾತ್ಮನಃ || ಉಪೇಂದ್ರೇಂದ್ರಾನಶಾದೀನಾಂ ದೇವಾನಾಮಂಗತಕ್ಷಕಃ'' [ತಕ್ಷ್ಣೋತ್ವಕ್ಷ್ಣೋ ತನೂಕರಣೇ,] ಇತ್ಯಾದಿಭಿರ್ಯಜ್ಞನಾರಾಯಣಸಂಹಾರೋ ವಿಜ್ಞೇಯಃ. ಹೇ ಚೋಳ! ನರಹರಿಸಂಹಾರಃ ಶ್ರೂಯತಾಂ, ಋಗ್ವೇದೇ,-" ಅಪಾವೃಣೋತ್ಶರಭಾಯ ಋಷಿಬಂಧವೇ'' ವಾಯವೀಯಸಂಹಿತಾಯಾಂ,—" ವಿಷ್ಣೋರಪಿ ನೃಸಿಂಹಸ್ಯ ಪ್ರಸಹ್ಯ ಶರಭಾಕೃತಿಃ || ಬಿಭೇದ ಪದ್ಭಿರಾಕ್ರಮ್ಯ ಹೃದಯಂ ನಖರೈಃ ಖರೈಃ'' ಲೈಂಗೇ—" ಅಪಹೃತ್ಯ ಹರೇಃ ಪ್ರಾಣಾನ್ ಶರಭಸ್ಸುರಪೂಜಿತಃ ||ತಚ್ಚರ್ಮವಸನೋ ಭೂತ್ವಾ ಜಗಾಮ ಸ ಯಥಾಗತಂ'' ಇತ್ಯಾದಿಭಿರ್ನರಹರಿಸಂಹಾರೋ ವಿಜ್ಞೇಯಃ, ಹೇ ಚೋಳ! ಅಥ ವಾಮನಾವತಾರಸಂಹಾರಶ್ಶ್ರೂಯತಾಂ, ಯಜುರ್ವೇದಾರಣ್ಯೇ.-" ಹರಿಗ್ಂ ಹರಂತಮನುಯಾಂತಿ ದೇವಾ ವಿಶ್ವಸ್ಯೇಶಾನಂ ವೃಷಭಂ ಮತೀನಾಂ'' ಸ್ಕಾಂದೇ,—" ಹರಿಂ ಹರಂತಂ ವೃಷಭಂ ವಿಶ್ವಸ್ಯೇಶಾನಮೀಶ್ವರಂ||ಅನುಯಾಂತಿ ಸುರಾಸ್ಸರ್ವೇ ನಮೋವಾಕ್ಯೈಸ್ಸಹಾದೃತಂ'' ಇತ್ಯಾದಿಶ್ರುತಿಪುರಾಣವಾಕ್ಯೈರ್ವಾಮನಾವತಾರಸಂಹಾರೋ ವಿಜ್ಞೇಯಃ.

---

ಮಶಾಲಿಯೂ, ಮಂಜು, ಮೊಲ್ಲೆ, ಚಂದ್ರರೊಡನೆ ಸಮಾನವಾದ ಕಾಂತಿಯುಳ್ಳವನೂ, ಭದ್ರಕಾಳೀರಮಣನೂ, ಸಪ್ತಮಾತೃಕಾರಕ್ಷಕನೂ ಆದ ವೀರಭದ್ರನು ಯಜ್ಞಪುರುಷ ಶಿರಶ್ಛೇದಕನು; ಮತ್ತೂ ದಕ್ಷ ಶಿರಶ್ಛೇದಕನು. ವಿಷ್ಣ್ವಿಂದ್ರಾದ್ಯಗ್ನ್ಯಾದಿದೇವತಾಂಗತಕ್ಷಕನು,, ಇತ್ಯಾದಿ ವಚನಗಳಿಂದ ಯಜ್ಞನಾರಾಯಣಸಂಹಾರವು ತಿಳಿಯಲ್ತಕ್ಕದ್ದು, ಎಲೈ ಚೋಳನೇ! ನರಹರಿಯ ಸಂಹಾರವನ್ನು ಕೇಳು; ಋಗ್ವೇದದಲ್ಲಿ— "ಋಷಿಗಳಿಗೆ ಬಂಧುವಾದ ಶರಭೇಶ್ವರನಿಗೋಸ್ಕರ ಓಲೈಸುವೆವು,, ವಾಯವೀಯಸಂಹಿತೆಯಲ್ಲಿ— "ಶರಭಾಕೃತಿಯನ್ನು ಹೊಂದಿದ ಶಿವನು ನೃಸಿಂಹಾವತಾರವನ್ನು ಹೊಂದಿದ ವಿಷ್ಣುವಿನ ಎದೆಯನ್ನು ಹರಿತವಾದ ಉಗುರುಗಳಿಂದ ಸೀಳಿದನೋ,, ಲಿಂಗಪುರಾಣದಲ್ಲಿ— "ದೇವಪೂಜಿತನಾದ ಆ ಶರಭೇಶ್ವರನು ನೃಸಿಂಹನಾದ ವಿಷ್ಣುವಿನ ಪ್ರಾಣಗಳನ್ನು ತೆಗೆದು ಆತನ ಚರ್ಮವನ್ನು ವಸ್ತ್ರವನ್ನಾಗುಪಯೋಗಿಸಿಕೊಂಡು ಹೋದನು,, ಇತ್ಯಾದಿ ವಾಕ್ಯಗಳಿಂದ ನರಹರಿಯ ಸಂಹಾರವು ತಿಳಿಯಲ್ತಕ್ಕದು. ಎಲೈ ಚೋಳನೇ! ವಾಮನಾವತಾರಸಂಹಾರವನ್ನು ಕೇಳು; ಯಜುರ್ವೇದಾರಣ್ಯದಲ್ಲಿ— "ಪ್ರಪಂಚಕ್ಕೊಡೆಯನೂ, ವಾಮನಾವತಾರಿಯಾದ ನಾರಾಯಣನನ್ನು ಸಂಹರಿಸಿದವನೂ ಆದ ಶಿವನನ್ನು ದೇವತೆಗಳು ಹಿಂಬಾಲಿಸಿ ಹೋಗುತ್ತಾರೆ,, ಎಂದೂ, ಸ್ಕಾಂದಪುರಾಣದಲ್ಲಿ— "ವಾಮನಸಂಹಾರಕನಾದ ಶಿವನನ್ನು ದೇವತೆಗಳು ನಮಸ್ಕಾರವು ನಮಸ್ಕಾರವು ಎಂದು ಹೇಳುತ್ತಾ ಹಿಂಬಾಲಿಸಿ ಹೋಗುತ್ತಾರೆ,, ಎಂದೂ ಹೇಳಲ್ಪಟ್ಟಿದೆ. ಇತ್ಯಾದಿ ಶ್ರುತಿಪುರಾಣವಾಕ್ಯಗಳಿಂದ ವಾಮನಾವತಾರಸಂಹಾರವನ್ನು ತಿಳಿಯತಕ್ಕದ್ದು.

ಇತಿ ರುದ್ರೇಣಾದಿನಾರಾಯಣಾವತಾರಸಂಹಾರವಿಧಿರೇಕಾದಶೋಪ
ದೇಶೇ ಅಷ್ಟಮಸ್ಸಂವಾದಃ.

ಶ್ರೀಃ.

## ಗಂಗೋತ್ಪತ್ತಿನಿರ್ಣಯಃ.

ಚೋ—ಭೋ ರೇಣುಕಗಣೇಂದ್ರ! "ಗಂಗಾಂ ವಿಷ್ಣುಪದಾಜ್ಜಾತಾಂ ದಧೌ ಶಂಭುಸ್ಸ್ವಮಸ್ತಕೇ || ಅತೋ ಗಂಗಾಧರ ಇತಿ ಖ್ಯಾತ ಇತ್ಯಾಹುರಾದರಾತ್" ಇತ್ಯಭಿಯುಕ್ತೋಕ್ತೇಃ ಕಿಮುತ್ತರಂ?

ರೇ—ಅಯೇ ಚೋಳ! ತ್ವತ್ಪ್ರಶ್ನಸ್ಯೋತ್ತರಂ ತಾವತ್ಸಾವಧಾನೇನ ಶ್ರೂಯತಾಂ, ಸ್ವಚ್ಛಂದಲಲಿತಭೈರವೀಯೇ,—"ಗಗನಂ ಗಮಿತಿ ಪ್ರೋಕ್ತಂ ಗಾಮಿನೀ ಗೇಹ ಕಥ್ಯತೇ || ಗಗನೇ ಗಮನಾದ್ಗಂಗಾ ನಿರುಕ್ತಾ ತತ್ವವೇದಿಭಿಃ || ವ್ಯೋಮಕೇಶಶ್ಶಿವಃ ಪ್ರೋಕ್ತೋ ಗಂಗಾ ವ್ಯೋಮ್ನಿ ಪ್ರವಾಹಿನೀ ||ಅತೋ ಗಂಗಾಧರ ಇತಿ ಶಿವಃ ಪ್ರೋಕ್ತೋ ಮನೀಷಿಭಿಃ || ವ್ಯೋಮಕೇಶೋ ಭವೋ ಭೀಮಃ ವಿಯದ್ವಿಷ್ಣುಪದಂ ತ್ವಿ

---

ಎಂಬಲ್ಲಿಗೆ ರುದ್ರನಿಂದ ಆದಿನಾರಾಯಣಾವತಾರಸಂಹಾರವಿಧಿಯನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.

### ಗಂಗೋತ್ಪತ್ತಿನಿರ್ಣಯವು.

ಚೋ—ಎಲೈ ರೇಣುಕಗಣೇಂದ್ರನೇ! "ಶಿವನು—ವಿಷ್ಣುಪಾದದಿಂದುದ್ಭವಿಸಿದ ಗಂಗೆಯನ್ನು ತನ್ನ ತಲೆಯಮೇಲೆ ಧರಿಸಿದನಾದ್ದರಿಂದ ಗಂಗಾಧರನೆಂದು ಪ್ರಸಿದ್ಧನಾದನೆಂದು ಪ್ರೀತಿಪೂರ್ವಕವಾಗಿ ಹೇಳುವರು,, ಎಂದಿರುವ ಅಭಿಯುಕ್ತವಚನಕ್ಕೆ ಉತ್ತರವೇನು?

ರೇ—ಎಲೈ ಚೋಳನೇ! ನಿನ್ನ ಪ್ರಶ್ನೆಗೆ ನಾವು ಹೇಳುವ ಉತ್ತರವನ್ನು ಚಿತ್ತೈಕಾಗ್ರತೆಯಿಂದ ಕೇಳು; ಸ್ವಚ್ಛಂದಲಲಿತಭೈರವೀಯದಲ್ಲಿ—"ಗಂ—ಎಂದರೆ ಆಕಾಶವೆಂದು, ಗಾ—ಎಂದರೆ ಹೋಗತಕ್ಕುದು ಎಂದು ಹೇಳಲ್ಪಡುವುದರಿಂದ ಯಥಾರ್ಥವನ್ನು ಬಲ್ಲವರಿಂದ ಗಂಗೆಯೆಂದು ಹೇಳಲ್ಪಟ್ಟಿತು. ಶಿವನು ಆಕಾಶಕೇಶನಾಗಿರುವುದರಿಂದಲೂ, ಗಂಗೆಯು ಆಕಾಶದಲ್ಲಿ ಹರಿಯುತಕ್ಕುದಾದ್ದರಿಂದಲೂ ಶಿವನು ಗಂಗಾಧರನೆಂದು ವಿದ್ವಾಂಸರಿಂದ ಹೇಳಲ್ಪಟ್ಟನು. ಶಿವನಿಗೆ ವ್ಯೋಮಕೇಶನೆಂಬ ಹೆಸರಿರುವುದೆಂದೂ, ಆಕಾಶವು ವಿಷ್ಣುಪದವೆಂಬ ಹೆಸರುಳ್ಳುದೆಂದೂ,

ತಿ || ಗಂಗಾವಿಷ್ಣುಪದೀವಾಕ್ಯಭೇದಾದ್ಗಂಗಾಧರೋ ಹರಃ ''

ಚೋ—ಭೋ ಆಚಾರ್ಯವರ್ಯ! '' ರೂಢಿರ್ಯೋಗಮಪಹರತಿ '' ಇತಿ ನ್ಯಾಯಾದ್ವಿಷ್ಣುಪದಶಬ್ದೋ ಹರೇರಂಘ್ರೌ ಪ್ರಸಿದ್ಧಃ. ನಾಕಾಶೇ,

ರೇ—ಹೇ ಚೋಳನೃಪತೇ! '' ಜಲಶಯನೋ ಹರಿಃ '' ಇತ್ಯತ್ರ ಹರಿಶಬ್ದೋ ಭೇಕೇ ಪ್ರಸಿದ್ಧಃ, ನತು ನಾರಾಯಣೇ, ಅತಶ್ಚೋಳ! ಕುಯುಕ್ತಿರ್ಮಾಸ್ತು, ಗಂಗೋತ್ಪತ್ತಿಸ್ಸಮ್ಯಗಾಕರ್ಣ್ಯತಾಂ, ಮಹಾಭಾರತೇ,—'' ಅಗ್ನಿಷ್ವತ್ತಾತ್ಮಜಾ ಮೇನಾಪಾವನೀ ಲೋಕವಿಶ್ರುತಾ || ಮೈನಾಕಂ ಪರ್ವತಶ್ರೇಷ್ಠಂ ಕ್ರೌಂಚಂ ತಸ್ಯಾನುಜಂ ತಥಾ || ಗಂಗಾಂ ಹೈಮವತೀಂ ಜಜ್ಞೇ ಭವಾಂಗಾಶ್ಲೇಷಪಾವನೀಂ '' ತತ್ರೈವ ಶಾಂತಿಪರ್ವಣಿ,—'' ಗಂಗಾ ಹಿಮವತೋ ಜ್ಯೇಷ್ಠಾ ದುಹಿತಾ ಪುರುಷರ್ಷಭ || ತಸ್ಯಾಂ ಕುರು ಮಹಾಬಾಹೋ ಪಿತೄಣಾಂ ಸಲಿಲಕ್ರಿಯಾಂ'' ಇತಿ. ಮಹಾರಾಮಾಯಣೇ,—ವಿಶ್ವಾಮಿತ್ರಃ, '' ಇಯಂ ಹೈಮವತೀ ಗಂಗಾ ಜ್ಯೇಷ್ಠಾ ಹಿಮವತಸ್ಸುತಾ || ತೇ ತತ್ರ ಋಷಿಗಂಧರ್ವಾ ವಸುಧಾತಲವಾಸಿನಃ || ಭವಾಂಗಾತ್ಪತಿತಂ ತೋ

---

ಗಂಗೆಯು ವಿಷ್ಣುಪದೀ ಎಂಬ ಹೆಸರುಳ್ಳುದೆಂದೂ ಅಮರಸಿಘಂಟುವಿನಲ್ಲಿ ಬೇರೆಬೇರೆ ವಾಕ್ಯಗಳಿಂದ ಪ್ರಸಿದ್ಧವಾಗಿರುವುದರಿಂದ ಶಿವನು ಗಂಗಾಧರನೆಂದು ಪ್ರಸಿದ್ಧನಾಗಿರುವನು,, ಎಂದು ಹೇಳಲ್ಪಟ್ಟಿದೆ. *

ಚೋ—ಎಲೈ ಆಚಾರ್ಯಶ್ರೇಷ್ಠನೇ! ''ರೂಢ್ಯರ್ಥವು ಯೋಗಾರ್ಥವನ್ನಪಹರಿಸುತ್ತದೆ,, ಎಂದು ನ್ಯಾಯವಿರುವುದರಿಂದ ''ವಿಷ್ಣುಪದಂ,, ಎಂಬ ಶಬ್ದವು ನಾರಾಯಣಪಾದದಲ್ಲಿ ಪ್ರಸಿದ್ಧವಾಗಿರುತ್ತದೆಯಲ್ಲದೆ ಆಕಾಶದಲ್ಲಿ ಪ್ರಸಿದ್ಧವಲ್ಲವು.

ರೇ—ಎಲೈ ಚೋಳರಾಜನೇ! ''ಹರಿಯು ಜಲಶಯನನಾಗಿರುತ್ತಾನೆ,, ಎಂಬಲ್ಲಿರುವ ಹರಿಶಬ್ದವು ಕಪ್ಪೆಯಲ್ಲಿ ಪ್ರಸಿದ್ಧವಾಗಿದೆಯಲ್ಲದೆ ನಾರಾಯಣನಲ್ಲಿ ಪ್ರಸಿದ್ಧವಲ್ಲವು. ಆದ್ದರಿಂದ ಎಲೈ ಚೋಳನೇ! ಕುಯುಕ್ತಿಯು ಬೇಡ, ಗಂಗೋತ್ಪತ್ತಿಕ್ರಮವನ್ನು ಚೆನ್ನಾಗಿ ಕೇಳು; ಮಹಾಭಾರತದಲ್ಲಿ—''ಅಗ್ನಿಷ್ವತ್ತನ ಮಗಳೆಂದೂ ಪರಿಶುದ್ಧಳೆಂದೂ ಲೋಕಪ್ರಸಿದ್ಧಳಾದ ಮೇನಾದೇವಿಯು ಹಿಮವಂತನಿಂದ ಮೈನಾಕನನ್ನೂ ಕ್ರೌಂಚನನ್ನೂ ಶಿವನ ಅಂಗಸಂಬಂಧದಿಂದ ಪವಿತ್ರಳೆನಿಸುವ ಗಂಗೆಯನ್ನೂ ಹಡೆದಳು,, ಆ ಮಹಾಭಾರತದಲ್ಲೇ ಶಾಂತಿಪರ್ವದಲ್ಲಿ—''ಎಲೈ ಪುರುಷಶ್ರೇಷ್ಠನಾದ ಮಹಾಬಾಹುವೇ! ಹಿಮವಂತನ ಹಿರಿಯಮಗಳಾದ ಗಂಗೆಯಲ್ಲಿ ನೀನು ನಿನ್ನ ಪಿತೃಗಳಿಗೋಸ್ಕರ ತರ್ಪಣವನ್ನು ಕೊಡು,, ಎಂದು ಹೇಳಲ್ಪಟ್ಟಿದೆ. ಮಹಾರಾಮಾಯಣದಲ್ಲಿ ವಿಶ್ವಾಮಿತ್ರನಿಂದ ''ಹಿಮವಂತನ ಹಿರಿಯ ಮಗಳಾದ ಈ ಗಂಗೆಯಲ್ಲಿ ಭೂಲೋಕವಾಸಿಗಳಾಗಿರುವ ಪ್ರಸಿದ್ಧರಾದ ಋಷಿಶ್ರೇಷ್ಠರು ಶಿವನ ಅಂಗದದೆಸೆಯಿಂದ ಬಿದ್ದುದಾದ ಈ ಗಂಗಾಜ

---

* ಈ ವಿಷಯವು ನಿರ್ಮಾಲ್ಯರತ್ನಾಕರದ ಉತ್ತರಾರ್ಧದಲ್ಲಿ ಸ್ಪಷ್ಟಗೊಳಿಸಲ್ಪಟ್ಟಿದೆ.

ಯಂ ಪವಿತ್ರಮಿತಿ ಪಸ್ಪೃಶುಃ" ಭಾಗವತಪುರಾಣೇ,—ಶುಕಃ, "ಶಂಭೋರ್ಜಟಾ
ಕಲಾಪಾತ್ತು ವಿನಿಷ್ಕ್ರಾಂತಾಸ್ಥಿಶರ್ಕರಾಃ || ಪ್ಲಾವಯಿತ್ವಾ ದಿವಂ ನಿನ್ಯೇ ಯಾ
ಪಾಪಾನ್ಸಗರಾತ್ಮಜಾನ್" ಆದಿತ್ಯಪುರಾಣೇ ಮಾನವೀಯಸಂಹಿತಾಯಾಂ,—"ಮೇ
ನಾ ಹಿಮವತಸ್ಸೂತೇ ಮೈನಾಕಂ ಕ್ರೌಂಚಮೇವ ಚ || ಗಂಗಾಂ ಚ ಗೌರೀಂ ಚ
ತತಃ ಕನ್ಯೇ ದ್ವೇ ಲೋಕಮಾತರೌ" ಲೈಂಗೇ,—ಪಾರ್ವತೀಂ ಪ್ರತಿ ಶಿವವಾಕ್ಯಂ,
"ಪೃಥಿವ್ಯಾಂ ಸರ್ವತೀರ್ಥಾನಿ ವಾರಾಣಸ್ಯಾಂ ತು ಜಾನ್ಹವೀಂ || ಉತ್ತರಪ್ರಭವಾಂ
ಪುಣ್ಯಾಂ ಮಮ ಮೌಳೇರ್ವಿನಿಸ್ಸೃತಾಂ || ಪಿತುಸ್ತೇ ಶೈಲರಾಜಸ್ಯ ಸುತಾಂ ತ್ವತ್ತೋ
ಧಿಕಾಂ ಶುಭಾಂ || ಭಜಂತೇ ಸರ್ವತೋಽಭ್ಯೇತ್ಯ ತಾಂ ಶೃಣುಷ್ವ ವರಾನನೇ" ಇ
ತ್ಯಾದಿವಚನಾತ್, ಗಂಗಾ ಗಿರಿರಾಜಪುತ್ರೀತಿ ವಿಜ್ಞೇಯಾ. ಶಿವಾನಂದರೂಪಿಣ್ಯಾ
ಸ್ತಸ್ಯಾಸ್ಸ್ವರೂಪಂ ಶ್ರೂಯತಾಂ, ಕಾಶೀಖಂಡೇ,—ಈಶ್ವರಃ, "ಪ್ರಪಿಪ್ಸಾಂ ಭಾವ
ಯೇದ್ಗಂಗಾಂ ಪಂಚಾಮೃತವದುತ್ಥಿತಾಂ || ಚತುರ್ಭುಜಾಂ ತ್ರಿನೇತ್ರಾಂ ಚ ನದೀ
ನದನಿಷೇವಿತಾಂ || ಪೂರ್ಣಕುಂಭಸಿತಾಂಭೋಜವರದಾಭಯಕೃತ್ಕರಾಂ" ಇತ್ಯಾ
ದಿಭಿರ್ಗಂಗಾಸ್ವರೂಪಂ ವಿಜ್ಞೇಯಂ. ತತ್ತಾವದಾಸ್ತಾಂ.

---

ವನ್ನು ಪವಿತ್ರವನ್ನಾಗಿ ಭಾವಿಸಿ ಸ್ನಾನಾದಿಗಳಿಗೆ ಉಪಯೋಗಿಸಿದರು,, ಎಂದೂ, ಭಾಗವತಪುರಾ
ಣದಲ್ಲಿ ಶುಕನಿಂದ "ಶಿವನ ಜಟಾಸಮೂಹವನ್ನು ಬಿಟ್ಟು ಹೊರಗೆಬಂದ ಆ ಗಂಗೆಯು ಕಪಿಲನ
ಕೋಪಾಗ್ನಿಯಿಂದ ಬೆಂದು ಬೂದಿಯಾದ ಸಗರಪುತ್ರರನ್ನು ಗತಿಯನ್ನು ಹೊಂದಿಸಿದಳು,,
ಎಂದೂ ಹೇಳಲ್ಪಟ್ಟದೆ. ಆದಿತ್ಯಪುರಾಣದಲ್ಲಿರುವ ಮಾನವೀಯಸಂಹಿತೆಯಲ್ಲಿ "ಮೇನೆಯು—
ಹಿಮವಂತನದೆಸೆಯಿಂದ ಮೈನಾಕನನ್ನೂ ಕ್ರೌಂಚನನ್ನೂ ಲೋಕಮಾತೆಯರಾದ ಗಂಗಾಗೌರಿಯ
ರನ್ನೂ ಹಡೆದಳು,, ಎಂದು ಹೇಳಲ್ಪಟ್ಟದೆ. ಲಿಂಗಪುರಾಣದಲ್ಲಿ—"ಎಲೈ ಪಾರ್ವತಿಯೇ! ಕೇ
ಳು; ಪೃಥಿವಿಯಲ್ಲಿ ಸಕಲ ತೀರ್ಥಗಳನ್ನೂ ಕಾಶಿಯ ಉತ್ತರದಲ್ಲಿ ಹರಿಯುತ್ತಿರುವ ಪವಿತ್ರವಾದ
ನನ್ನ ಮಸ್ತಕದದೆಸೆಯಿಂದ ಬಂದ ಶೈಲರಾಜನೆಂಬ ನಿನ್ನ ತಂದೆಯ ಮಗಳಾಗಿ ನಿನಗಿಂತ ಹಿರಿಯ
ಳೆನಿಸಿದ ಆ ಗಂಗೆಯನ್ನು ಜನರು ಎಲ್ಲಾಕಡೆಯಿಂದಲೂ ಬಂದು ಸೇವಿಸುತ್ತಾರೆ,, ಎಂದು ಪಾರ್ವ
ತಿಯನ್ನುಕುರಿತು ಶಿವನು ಹೇಳಿದ್ದಾನೆ. ಇತ್ಯಾದಿ ವಚನಪ್ರಮಾಣಗಳಿರುವುದರದೆಸೆಯಿಂದ ಗಂಗೆ
ಯು ಗಿರಿರಾಜನ ಮಗಳೆಂದು ತಿಳಿಯಬೇಕು. ಶಿವಾನಂದರೂಪಿಣಿಯಾದ ಆ ಗಂಗೆಯ ಸ್ವರೂಪ
ವನ್ನು ಕೇಳು; ಕಾಶೀಖಂಡದಲ್ಲಿ—"ಗಂಗೆಯನ್ನು—ನಾಲ್ಕುತೋಳುಗಳುಳ್ಳವಳನ್ನಾಗಿಯೂ,
ಮೂರುಕಣ್ಣುಗಳುಳ್ಳವಳನ್ನಾಗಿಯೂ, ನದಿಗಳಿಂದಲೂ ನದಗಳಿಂದಲೂ ಸೇವ್ಯಳನ್ನಾಗಿಯೂ,
ಪೂರ್ಣಕುಂಭವನ್ನು ಹಿಡಿದಿರುವ ಹಸ್ತವೊಂದು, ಬೆಳಿ ಕಮಲವನ್ನು ಹಿಡಿದಿರುವ ಒಂದುಹಸ್ತ,
ವರದಾನವಂ ಮಾಡುವ ಒಂದುಹಸ್ತ, ಅಭಯದಾನವಂ ಮಾಡುವ ಒಂದುಹಸ್ತ. ಹೀಗೆ ನಾಲ್ಕು
ಕೈಗಳುಳ್ಳವಳನ್ನಾಗಿಯೂ ಭಾವಿಸಬೇಕು,, ಎಂದು ಹೇಳಲ್ಪಟ್ಟದೆ. ಇತ್ಯಾದಿ ವಚನಗಳಿಂದ ಗಂ
ಗಾಸ್ವರೂಪವನ್ನು ತಿಳಿಯತಕ್ಕದ್ದು. ಅದು ಹಾಗಿರಲಿ.

ಹೇ ಚೋಳ! ಶಿವಸ್ಯ ಗಂಗಾಧಾರಣವಿಧಿಃ ಶ್ರೂಯತಾಂ, ಯಜುಸ್ಸಂಹಿತಾಯಾಂ,—"ಗಂಗಾ ಸಾಗರಪೂರಿಣೀ ದುಹಾನಾಮೃತಸ್ಯ ಧಾರಾಂ" ಇತಿ. ಸ್ಕಾಂದೇ,—"ಸ್ವರ್ಗಾರೋಹಣನಿಶ್ರೇಣಿಸ್ಸಾಸ್ವಂಭೋಭಿಃ ಪೂರಿತಾರ್ಣವಾ" ವ್ಯಾಸಾಷ್ಟಕೇ,—ವ್ಯಾಸಃ, "ಜಲೌಘಕಲ್ಲೋಲಶತರಂಗತುಂಗಾ ಗಂಗಾ ಧೃತಾ ಯೇನ ಜಟಾಗ್ರಭಾಗೇ || ಪಾದಾಂಬುಜಾಂಗುಷ್ಠನಿಪೀಡನೇನ ಪಪಾತ ಲಂಕಾಧಿಪತಿಸ್ಸಂಜ್ಞಃ" ಅಥರ್ವರುದ್ರೇ,—"ನಮೋ ಗಂಗಾಧರಾಯ ಚ ವೃಷಭಧ್ವಜಾಯ ಚ" ಬೋಧಾಯನವಾಕ್ಯೇ,—"ಮೌಳೌ ಕಿನ್ನು ಮಹೇಶ ಮಾನಿನಿ ಜಲಂ ಕಿಂ ವಕ್ತ್ರಮಂಭೋರುಹಂ ಕಿಂ ನೀಲಾಲಕವೇಣಿಕಾ ಮಧುಕರಾಃ ಕಿಂ ಭ್ರೂಲತೇ ವೀಚಿಕೇ|| ಕಿಂ ನೇತ್ರೇ ಶಫರೀ ಚ ಕಿಂ ಕುಚಯುಗಂ ಪ್ರೇಂಖದ್ರಥಾಂಗದ್ವಯಂ ಸಾಶಂಕಾಮಿತಿ ವಂಚಯನ್ಗಿರಿಸುತಾಂ ಗಂಗಾಧರಃ ಪಾತು ವಃ" ಸ್ಕಾಂದೇ ಕಾಶೀಖಂಡೇ ಗಂಗಾಸಹಸ್ರನಾಮಸ್ತೋತ್ರೇ,— ಕುಂಭಸಂಭವಂ ಪ್ರತಿ ಸ್ಕಂದವಾಕ್ಯಂ, "ಏತತ್ಸ್ತೋತ್ರವರಂ ಪುಣ್ಯಂ ಪುರಾ ಪ್ರೋಕ್ತಂ ಪಿನಾಕಿನಾ || ವಿಷ್ಣವೇ ನಿಜಭಕ್ತಾಯ

---

ಎಲೈ ಚೋಳನೇ! ಶಿವನು ಗಂಗೆಯನ್ನು ಧರಿಸಿದ ವಿಚಾರವನ್ನು ಕೇಳು; ಯಜುಸ್ಸಂಹಿತೆಯಲ್ಲಿ—"ತನ್ನ ಉದಕಗಳಿಂದ ಸಮುದ್ರವನ್ನು ತುಂಬುವ ಗಂಗೆಯು ಅಮೃತಧಾರೆಯನ್ನು ಕರೆಯುತಕ್ಕುದು" ಎಂದು ಹೇಳಲ್ಪಟ್ಟಿದೆ. ಸ್ಕಾಂದಪುರಾಣದಲ್ಲಿ—"ತನ್ನ ಜಲಗಳಿಂದ ತುಂಬಲ್ಪಟ್ಟ ಸಮುದ್ರವುಳ್ಳ ಗಂಗೆಯು ಸ್ವರ್ಗಾರೋಹಣವಿಷಯದಲ್ಲಿ ಏಣಿಯಾಗಿರುವಳು. ವ್ಯಾಸಾಷ್ಟಕದಲ್ಲಿ - "ಯಾವ ಶಿವನಿಂದ ಜಡೆಮುಡಿಯ ತುದಿಯಲ್ಲಿ ತೆರೆಗಳಿಂದುನ್ನತವಾದ ಗಂಗೆಯು ಧರಿಸಲ್ಪಟ್ಟಳೋ ಆ ಶಿವನಿಂದ ಪಾದದ ಹೆಬ್ಬೆರಳಿನಿಂದೊತ್ತುವಿಕೆಯಿಂದ ರಾವಣನು ಪ್ರಜ್ಞೆತಪ್ಪಿಬಿದ್ದನೋ" ಅಥರ್ವರುದ್ರದಲ್ಲಿ—"ಗಂಗೆಯನ್ನು ಧರಿಸಿದವನಿಗೋಸ್ಕರ ನಮಸ್ಕಾರವು" ಬೋಧಾಯನವಾಕ್ಯದಲ್ಲಿ—"ಪಾರ್ವತಿಯಿಂದ—ತಲೆಯಲ್ಲಿರುವುದೇನೆಂದು ಕೇಳಲ್ಪಟ್ಟುದಕ್ಕೆ ಜಲವೆಂದೂ, ಮುಖವಿರುತ್ತದೆಯೆಂದು ಕೇಳಲ್ಪಟ್ಟುದಕ್ಕೆ ಕಮಲವೆಂದೂ, ಕಪ್ಪಾದ ಮುಂಗುರುಳುಳ್ಳ ಜಡೆಯು ಕಾಣುತ್ತಿರುವುದೆಂದು ಕೇಳಲ್ಪಟ್ಟುದಕ್ಕೆ ತುಂಬಿಗಳೆಂದೂ, ಹುಬ್ಬುಗಳೇನೆಂದು ಕೇಳಲ್ಪಟ್ಟುದಕ್ಕೆ ತೆರೆಗಳೆಂದೂ, ನೇತ್ರಗಳೇನೆಂದು ಕೇಳಲ್ಪಟ್ಟುದಕ್ಕೆ ಮತ್ಸ್ಯಗಳೆಂದೂ, ಕುಚಯುಗ್ಮವೇನೆಂದು ಕೇಳಲ್ಪಟ್ಟುದಕ್ಕೆ ಚಕ್ರವಾಕಪಕ್ಷಿಯುಗ್ಮವೆಂದೂ ಈ ರೀತಿಯಾಗಿಹೇಳಿ ಪಾರ್ವತಿಯನ್ನು ವಂಚಿಸಿದ ಗಂಗಾಧರನಾದ ಶಿವನು ನಿಮ್ಮನ್ನು ಸಲಹಲಿ" ಎಂದು ಹೇಳಲ್ಪಟ್ಟಿದೆ. ಸ್ಕಾಂದಪುರಾಣದಲ್ಲಿರುವ ಕಾಶಿಕಾಖಂಡಾಂತರ್ಗತವಾದ ಗಂಗಾಸಹಸ್ರನಾಮಸ್ತೋತ್ರದಲ್ಲಿ—"ಪೂರ್ವದಲ್ಲಿ ಶಿವನು ತನ್ನ ಭಕ್ತನಾದ ವಿಷ್ಣುವಿಗೋಸ್ಕರ ಮುಕ್ತಿಗೆ ಕಾರಣವಾದ ಪುಣ್ಯಕರವಾದ ಈ ಶ್ರೇಷ್ಠವಾದ ಸ್ತೋತ್ರವನ್ನು ಹೇಳಿದನು" ಎಂದು ಅಗಸ್ತ್ಯನಿಗೆ ಷಣ್ಮುಖನಿಂದ ನಿರೂಪಿತವಾಗಿದೆ. ಇತ್ಯಾದಿವಚನವು ಬಹುಪ್ರಸಿದ್ಧವಾಗಿದೆ. ಈ ಕಾರಣದಿಂದ ಗಂಗೆಯೂ

ಮುಕ್ತಿಬೀಜಾಕ್ಷರಾಸ್ಪದಂ '' ಇತ್ಯಾದಿಬಹುಪ್ರಸಿದ್ಧಂ. ಅತಏವ ಗಂಗಾಗೌರ್ಯೋ ಶಿವಾನಂದರೂಪಿಣ್ಯೌ ನಿತ್ಯಸಿದ್ಧೇ. ತತ್ತಾವದಾಸ್ತಾಂ. ವಾಮನಾವತಾರಪ್ರಾಪ್ತೇಃ ಪ್ರಾಗೇವ ಗಂಗಾಸದ್ಭಾವಃ ಶ್ರೂಯತಾಂ, ಬೃಹನ್ನಾರದೀಯೇ,—ಬಲೀಂದ್ರಂ ಪ್ರತಿ ವಿಷ್ಣುವಾಕ್ಯಂ, '' ಸಕ್ತಸ್ಯ ದೇವಪೂಜಾಸು ವಿಪ್ರಸ್ಯಾಢಕಿಕಾಂ ಮಹೀಂ || ದತ್ವಾ ಲಭತಿ ಗಂಗಾಯಾಂ ತ್ರಿರಾತ್ರಸ್ನಾನಜಂ ಫಲಂ || ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ || ವಿಧಾಯ ಜಾಹ್ನವೀತೀರೇ ಯತ್ಫಲಂ ತದವಾಪ್ನುಯಾತ್'' ಇತಿ. ಅನ್ಯತ್ರ—'' ಪಾಣಿಗ್ರಹಸ್ಯ ಪಾರ್ವತ್ಯಾ ಆದಿನಾರಾಯಣಸ್ಯ ಚ || ಮತ್ಸ್ಯಕೂರ್ಮವರಾಹಾಪತಾರಾಣಾಂ ನೃಹರೇಸ್ತಥಾ || ವಾಮನಸ್ಯ ಹರೇಶ್ಚಾಪಿ ಧಾರಾರ್ಥಂ ತ್ರಿಪದಾವನೇಃ || ಬ್ರಹ್ಮಾದೀನಾಂ ಚ ಸರ್ವೇಷಾಂ ವಾಮದೇವಮುಖೋದ್ಭವಂ || ಗಂಗಾಜಲಂ ನಿದಾನಂ ಸ್ಯಾತ್ಸ್ನಾನಪಾನಾದಿಕರ್ಮಣಾಂ '' ಇತ್ಯಾದಿವಾಕ್ಯಾತ್ ವಾಮನಾವತಾರಪ್ರಾಪ್ತೇಃ ಪ್ರಾಗೇವ ಗಂಗಾಸದ್ಭಾವೋ ವಿಜ್ಞೇಯಃ.

ಚೋ—ಭೋ ರೇಣುಕ! '' ಗಂಗಾವಿಷ್ಣುಪದೀ '' ಇತ್ಯಮರೋಕ್ತೇಃ ವಿಷ್ಣುಪದೀತಿ ಶಬ್ದಸ್ಯ ಕಥಂ ವಿಗ್ರಹಃ ಕಥ್ಯತಾಂ?

---

ಶಿವಾನಂದಸ್ವರೂಪಿಣಿಯರಾಗಿ ನಿತ್ಯರಾಗಿರುತ್ತಾರೆ. ಅದಂತಿರಲಿ. ವಿಷ್ಣುವು ವಾಮನಾವತಾರವನ್ನು ಹೊಂದುವುದಕ್ಕಿಂತ ಮೊದಲೇ ಗಂಗೆಯು ಇದ್ದುದನ್ನು ಕೇಳು; ಬೃಹನ್ನಾರದೀಯದಲ್ಲಿ —''ಎಲೈ ಬಲೀಂದ್ರನೇ! ಈಶ್ವರಸೇವೆಯಲ್ಲಾಸಕ್ತನಾಗಿರುವ ಬ್ರಾಹ್ಮಣನಿಗೆ ಒಂದುಕೊಳಗ ಪರಿಮಿತಿಯುಳ್ಳ ಭೂಮಿಯನ್ನು ಮಾತ್ರ ದಾನಮಾಡಿ, ಗಂಗಾನದಿಯಲ್ಲಿ ಮೂರುರಾತ್ರಿ ಸ್ನಾನಮಾಡುವುದರಿಂದುಂಟಾಗುವ ಫಲವನ್ನೂ, ಗಂಗಾತೀರದಲ್ಲಿ ಸಾವಿರ ಅಶ್ವಮೇಧಯಾಗಗಳನ್ನೂ ನೂರು ವಾಜಪೇಯಯಾಗಗಳನ್ನೂ ಮಾಡುವುದರಿಂದುಂಟಾಗುವ ಫಲವನ್ನೂ ಹೊಂದತಕ್ಕದ್ದು,, ಎಂದು ವಿಷ್ಣುವಿನಿಂದ ಬಲೀಂದ್ರನಿಗೆ ಹೇಳಲ್ಪಟ್ಟದೆ. ಬೇರೊಂದುಗ್ರಂಥದಲ್ಲಿ—''ಪಾರ್ವತೀದೇವಿಯ ವಿವಾಹಕ್ಕೂ, ಆದಿನಾರಾಯಣನ ವಿವಾಹಕ್ಕೂ, ಮತ್ಸ್ಯ, ಕೂರ್ಮ, ವರಾಹ, ನೃಸಿಂಹರುಗಳಿಗೂ, ವಾಮನನಾದ ವಿಷ್ಣುವಿಗೆ ಮೂರುಹೆಜ್ಜೆ ಭೂಮಿಯನ್ನು ಕೊಡುವಾಗ್ಯೆ ಧಾರೆಯೆರೆವುದಕ್ಕೂ, ಬ್ರಹ್ಮಾದಿಗಳೆಲ್ಲರ ಸ್ನಾನಪಾನಾದಿ ಕರ್ಮಗಳಿಗೂ, ಶಿವನ ವಾಮದೇವಮುಖದಿಂದುದ್ಭವಿಸಿದ ಗಂಗೆಯ ಜಲವು ಮುಖ್ಯಕಾರಣವಾಗಿರುತ್ತದೆ,, ಎಂದು ಹೇಳಲ್ಪಟ್ಟದೆ. ಇವು ಮೊದಲಾದ ವಾಕ್ಯಗಳಿರುವುದರಿಂದ ವಾಮನಾವತಾರಕ್ಕಿಂತ ಮೊದಲೇ ಗಂಗೆಯು ಹುಟ್ಟಿತೆಂದು ತಿಳಿಯಬೇಕು.

ಚೋ —ಎಲೈ ರೇಣುಕನೇ! ''ಗಂಗಾವಿಷ್ಣುಪದೀ'' ಎಂದು ಅಮರವಚನವಿರುವುದರಿಂದ ''ವಿಷ್ಣುಪದೀ,, ಎಂಬ ಶಬ್ದದ ವಿಗ್ರಹವು ಹೇಗೆ ಹೇಳು?

ರೇ—ಹೇ ಚೋಳ! ತತ್ಪರಿಹಾರಃ ಶ್ರೂಯತಾಂ, "ತ ಇಷುಂ ನಮಸ್ಕುರ್ವ ತಾಮಗ್ನಿಮನೀಕಗ್ಂ ಸೋಮಗ್ಂ ಶಲ್ಯಂ ವಿಷ್ಣುಂ ತೇಜನಂ" ಇತಿ ಯಜುರ್ವೇದ ಮಂತ್ರೇ, "ನಮಃ ಪರಶವೇ ದೇವ ಶೂಲಾಯಾನಲರೋಚಿಷೇ॥ ವಿಷ್ಣ್ವಗ್ನೀಂದ್ರಾತ್ಮ ನೇ ಶುಭ್ಯಮುಕೋತ ಇಷವೇ ನಮಃ" ಇತಿ ವೇದಪಾದಸ್ತವವಾಕ್ಯೇ ಚ, ಪಠಿತಸ್ಯ ವಿಷ್ಣುಶಬ್ದಸ್ಯ "ಕ್ರಮದೇಶಸಾಮಾನ್ಯಾತ್" ಇತಿ ಜೈಮಿನಿಸೂತ್ರಾನುಸಾರೇಣ ಅ ಗ್ನಿಸೋಮಶಬ್ದಾತ್ಪರೋ ವಿಷ್ಣುಶಬ್ದಃ ದ್ವಾದಶಸೂರ್ಯವಾಚಕಃ, ನತು ಹರಿವಾಚ ಕಃ, ತದುಕ್ತಮಾದಿತ್ಯಪುರಾಣೇ,-"ಅಂಶೋ ದಾತಾ ಭಗಸ್ತ್ವಷ್ಟಾ ಮಿತ್ರೋಥ ವ ರುಣೋಽರ್ಯಮಾ॥ ವಿವಸ್ವಾನ್ಸವಿತಾ ಪೂಷಾ ಚಾಂಶುಮಾನ್ವಿಷ್ಣುರೇವ ಚ॥ ಅದಿತ್ಯಾ ಅದಿತೇಃ ಪುತ್ರಾಃ ಪ್ರೋಕ್ತಾ ವೈವಸ್ವತೋಂತರೇ॥ ರವೇಶ್ಶತಾನಿ ಚತ್ವಾರಿ ರಶ್ಮಯೋ ವೃಷ್ಟಿಸರ್ಜನೇ॥ ಶತತ್ರಯಂ ಹಿಮೋತ್ಸರ್ಗೇ ತಾವದ್ವೈ ಘರ್ಮಸರ್ಜನೇ" ಇತ್ಯಾದಿ ಸೂರ್ಯಸಿದ್ಧಾಂತವಾಕ್ಯಾತ್, "ಪಾದಾರಶ್ಮ್ಯಂಘ್ರಿತುರ್ಯಾಂಶಾಃ" ಇತ್ಯಮರವಾಕ್ಯಾ ಚ್ಚ ವಿಷ್ಣೋಃ-ಶಿವದಕ್ಷಿಣನಯನದ್ವಾದಶಸೂರ್ಯಸ್ಯ, ಪಾದಾಃ-ಕಿರಣಾಸ್ತೇಭ್ಯಃ ಜಾತಾ ಪ್ರಾದುರ್ಭೂತಾ ಇತಿ ವಿಗ್ರಹಃ ಶಿವಸ್ಯ ದಕ್ಷಿಣಾಗ್ನಿಸಂಭವಾ ಇತ್ಯರ್ಥಃ, ವಿಸ್ತರೇಣಾಲಂ. ತತ್ರಾತ್ಮಪದಾಸ್ತಾಂ.

---

ರೇ – ಎಲೈ ಚೋಳನೇ! ನಿನ್ನ ಪ್ರಶ್ನೆಗುತ್ತರವನ್ನು ಕೇಳು; "ತ ಇಷುಂ ನಮಸ್ಕುರ್ವ ತಾಂ" ಎಂಬ ಯಜುರ್ವೇದಮಂತ್ರದಲ್ಲೂ, "ನಮಃ ಪರಶವೇ" ಎಂಬ ವೇದಪಾದಸ್ತವವಾಕ್ಯ ದಲ್ಲೂ ಪಠಿಸಲ್ಪಟ್ಟಿರುವ ವಿಷ್ಣುಶಬ್ದಕ್ಕೆ "ಕ್ರಮದೇಶಸಾಮಾನ್ಯಾತ್" ಎಂದಿರುವ ಜೈಮಿನಿಸೂ ತ್ರಾನುಸಾರವಾಗಿ 'ಅಗ್ನಿ,—'ಸೋಮ, ಎಂಬ ಶಬ್ದಗಳ ಮುಂದುಗಡೆ ಪಾಠಮಾಡಲ್ಪಟ್ಟಿರುವ 'ವಿಷ್ಣು, ಎಂಬ ಶಬ್ದವು ಹನ್ನೆರಡನೆಯ ಸೂರ್ಯನನ್ನು ಹೇಳತಕ್ಕದಲ್ಲದೆ ಹರಿಯನ್ನು ಹೇಳತಕ್ಕು ದಲ್ಲವು. ಆ ವಿಷಯವು ಆದಿತ್ಯಪುರಾಣದಲ್ಲಿ—"(೧) ಅಂಶಃ, (೨) ಧಾತಾ, (೩) ಭಗಃ, (೪) ತ್ವಷ್ಟಾ, (೫) ಮಿತ್ರಃ, (೬) ವರುಣಃ, (೭) ಅರ್ಯಮಾ, (೮) ವಿವಸ್ವಾನ್, (೯) ಸವಿತಾ, (೧೦) ಪೂಷಾ, (೧೧) ಅಂಶುಮಾನ್, (೧೨) ವಿಷ್ಣುಃ" ಇವರು ವೈವಸ್ವತಮನ್ವಂ ತರದಲ್ಲಿ ಅದಿತಿಯ ಮಕ್ಕಳಾಗಿ ಜನಿಸಿದರಾದ್ದರಿಂದ ಆದಿತ್ಯರೆಂದು ಹೇಳಲ್ಪಟ್ಟರು. ಸೂರ್ಯಕಿರ ಣಸಹಸ್ರದಲ್ಲಿ ನಾಲ್ಕುನೂರು ಕಿರಣಗಳು ಮಳೆಯನ್ನು ಸುರಿಸುವುದರಲ್ಲೂ, ಮೂರುನೂರು ಕಿರ ಣಗಳು ಮಂಜನ್ನು ಸುರಿಸುವುದರಲ್ಲೂ, ಮೂರುನೂರು ಕಿರಣಗಳು ಬಿಸಿಲನ್ನು ಸುರಿಸುವುದರ ಲ್ಲೂ ಪ್ರವೃತ್ತಗಳಾದವು" ಇತ್ಯಾದಿ ಸೂರ್ಯಸಿದ್ಧಾಂತವಚನಗಳಿರುವುದರಿಂದ ಪಾದ, ರಶ್ಮಿ, ಅಂ ಘ್ರಿ ಶಬ್ದಗಳು "ಪಾದಾರಶ್ಮ್ಯಂಘ್ರಿತುರ್ಯಾಂಶಾಃ" ಎಂಬ ಅಮರೋಕ್ತಿಯಿಂದ ಕಿರಣವಾಚಕ ವಾಗಿ ಪಠಿತವಾಗಿರುವುದರಿಂದಲೂ ವಿಷ್ಣೋಃ – ಶಿವನ ದಕ್ಷಿಣಲೋಚನವಾದ ಸೂರ್ಯನ, ಪಾ ದಾಃ—ಕಿರಣಗಳು, ತೇಭ್ಯಃ—ಆ ಕಿರಣಗಳದೆಸೆಯಿಂದ, ಜಾತಾ—ಹುಟ್ಟಿದವಳು ಎಂದರ್ಥವಾಗು

ಹೇ ಚೋಳ! ಸತ್ಯಲೋಕೇ ತ್ರಿವಿಕ್ರಮಪಾದಭಂಗಃ ಶ್ರೂಯತಾಂ, ಬ್ರಹ್ಮಾಂಡಪುರಾಣೇ,—“ಸತ್ಯಲೋಕಹಿತಾರ್ಥಾಯ ಪದ್ಮಯೋನಿಃ ಪ್ರಜಾಪತಿಃ ‖ ಕಮಂಡಲುಜಲಾಸ್ತ್ರೇಣ ಹರೇಃ ಪಾದಮಭಂಜಯತ್” ಇತ್ಯಾದಿಬಹುಪ್ರಸಿದ್ಧಂ. ಹೇ ಚೋಳ! ಬಲಿನಾ ವಾಮನಕರಯೋಃ ಧಾರಾಪೂರ್ವಕಂ ತ್ರಿಪದಪರಿಮಿತಭೂಮಿದಾನಾತ್ಪ್ರಾಗೇವ ಗಂಗಾಸದ್ಭಾವಃ ಶ್ರೂಯತಾಂ, ಕೂರ್ಮಪುರಾಣೇ,—“ಕಾಲೇ ಪ್ರಾಪ್ತೇ ಮಹಾವಿಷ್ಣುಂ ದೇವಾನಾಂ ಹರ್ಷವರ್ಧನಂ ‖ ಅಸೂತ ಕಶ್ಯಪಾಚ್ಛ್ರೈನಂ ದೇವಮಾತಾದಿತಿಸ್ಸ್ವಯಂ ‖ ಬ್ರಾಹ್ಮಣೋ ಜಟಿಲೋ ವೇದಾನುದ್ಗಿರನ್ಭಸ್ಮಕುಂಠಿತಃ ‖ ಸಂಪ್ರಾಪ್ಯಾಸುರರಾಜಸ್ಯ ಸಮೀಪಂ ಭಿಕ್ಷುಕೋ ಹರಿಃ ‖ ಸ್ವಪದೈರ್ನಿರ್ಮಿತಂ ದೇಶಮಯಾಚತ ಬಲಿಂ ತ್ರಿಭಿಃ ‖ ಪ್ರಕ್ಷಾಳ್ಯ ಚರಣೌ ವಿಷ್ಣೋರ್ಬಲಿರ್ಭಕ್ತಿಸಮನ್ವಿತಃ ‖ ಸಗಾಂಗತೋಯಂ ಭೃಂಗಾರುಮಾದಾಯ ಸ್ವರ್ಣನಿರ್ಮಿತಂ ‖ ದದಾಮ್ಯಥೇದಂ ಭವತೇ ಪದತ್ರಯಂ ಪ್ರೀಣಾತು ದೇವೋ ಹರಿರವ್ಯಯಾಕೃತಿಃ ‖ ವಿಚಿಂತ್ಯ ವಿಪ್ರಸ್ಯ ಕರಾಗ್ರಪಲ್ಲವೇ ನಿಪಾತಯಾಮಾಸ ಸುರಾಪಗಾಜಲಂ ‖ ಆಕ್ರಮ್ಯ ಲೋಕತ್ರಯಮಸ್ಯ ಪಾದಃ ಪ್ರಾಜಾಪತ್ಯಂ ಸತ್ಯಲೋಕಂ ಜಗಾಮ ‖ ಭಿತ್ವಾ ತದಂಡಸ್ಯ ಕಪಾ

---

ತ್ತದೆ. ವಿಸ್ತಾರದಿಂದ ಸಾಕು. ಅದಂತಿರಲಿ; ಎಲೆ ಚೋಳನೇ! ಸತ್ಯಲೋಕದಲ್ಲಿ ವಾಮನಾವತಾರಿಯಾದ ವಿಷ್ಣುವಿನ ಪಾದಕ್ಕೆ ಭಂಗವುಂಟಾದ ಸಂಗತಿಯನ್ನು ಕೇಳು; ಬ್ರಹ್ಮಾಂಡಪುರಾಣದಲ್ಲಿ—“ನಾರಾಯಣನಾಭಿಕಮಲಜಾತನಾದ ಬ್ರಹ್ಮನು ಸತ್ಯಲೋಕವಾಸಿಗಳಿಗೆ ಹಿತವನ್ನುಂಟುಮಾಡುವುದಕ್ಕಾಗಿ ತನ್ನ ಕಮಂಡಲುವಿನಲ್ಲಿದ್ದ ಗಂಗಾಜಲವೆಂಬ ಅಸ್ತ್ರದಿಂದ ನಾರಾಯಣನ ಪಾದವನ್ನು ಮುರಿದನು,, ಇದು ಮೊದಲಾದ ವಚನವು ಅತಿಪ್ರಸಿದ್ಧವಾಗಿದೆ. ಎಲೈ ಚೋಳನೇ! ಬಲಿಯು ವಾಮನಾವತಾರಿಯಾದ ವಿಷ್ಣುವಿಗೆ ಮೂರುಹೆಜ್ಜೆ ಭೂಮಿಯನ್ನು ಜಲಧಾರಾಪೂರ್ವಕವಾಗಿ ಕೊಡುವುದಕ್ಕಿಂತ ಮೊದಲೇ ಗಂಗೆಯು ಇದ್ದಿತೆಂಬಂಶವನ್ನು ಕೇಳು; ಕೂರ್ಮಪುರಾಣದಲ್ಲಿ—“ಅದಿತಿಯು ತನ್ನ ಮಕ್ಕಳಾದ ದೇವತೆಗಳಿಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ಮಹಾವಿಷ್ಣುವನ್ನು ಹಡೆದಳು. ಆ ವಿಷ್ಣುವು ಭಿಕ್ಷುಕನಾದ ಬ್ರಾಹ್ಮಣನಾಗಿ ಜಟಾಧಾರಿಯಾಗಿ ಭಸ್ಮಧಾರಿಯಾಗಿ ವೇದವನ್ನು ಪಠಿಸುತ್ತಾ, ಬಲಿಚಕ್ರವರ್ತಿಯ ಹತ್ತಿರಕ್ಕೆ ಹೋಗಿ ತನ್ನ ಮೂರುಹೆಜ್ಜೆ ಪ್ರಮಾಣದಷ್ಟು ಭೂಮಿಯನ್ನು ಕೊಡಬೇಕೆಂದು ಯಾಚಿಸಿದನಾದ್ದರಿಂದ ಬಲಿಯು ಭಕ್ತಿಯಿಂದ ವಿಷ್ಣುವಿನ ಪಾದಗಳನ್ನು ಪ್ರಕ್ಷಾಳಿಸಿ ಚಿನ್ನದ ಗಿಂಡಿಯಲ್ಲಿ ಗಂಗಾಜಲವನ್ನು ತುಂಬಿಕೊಂಡು, ಎಲೈ ಬ್ರಾಹ್ಮಣನೇ! ನಿನಗೆ ಮೂರುಹೆಜ್ಜೆಯಷ್ಟು ಭೂಮಿಯನ್ನು ಕೊಡುವೆನು. ನಾಶರಹಿತವಾದ ಶಕ್ತಿಯ ಆಕಾರವುಳ್ಳ ವಿಷ್ಣುವು ಸಂತೋಷಪಡಲೆಂದು ಚಿಂತಿಸಿ ಬ್ರಾಹ್ಮಣನ ಕೈಗೆ ದೇವಗಂಗಾಜಲಧಾರೆಯನ್ನೆರೆದುಕೊಟ್ಟನು. ಬಳಿಕ ಈ ವಿಷ್ಣುವಿನ ಒಂದು ಪಾದವು ಮೂರುಲೋಕವನ್ನು, ಎರಡನೆಯ ಪಾದವು ಬ್ರಹ್ಮಲೋಕವನ್ನು, ಮೂರನೆಯಪಾದವು ಆ ಬ್ರಹ್ಮಾಂ

ಲಮೂರ್ಧ್ವಂ ಜಗಾಮ ದಿವ್ಯಂ ಭುವನಂ ಸ ಭೂಯಃ'' ಇತ್ಯಾದಿ ವಚನೈಃ ಹರೇ ರ್ವಾಮನಾವತಾರಪ್ರಾಪ್ತೇಃ ಪ್ರಾಗೇವ ಗಂಗಾಸದ್ಭಾವೋ ವಿಜ್ಞೇಯಃ. ವಾಮ ನಾವತಾರಸಂಹಾರೋಪಿ ಪ್ರಾಗೇವಾಸ್ಮಾಭಿಃ ಪ್ರತಿಪಾದಿತಂ.

ಇತಿ ಗಂಗೋತ್ಪತ್ತಿನಿರ್ಣಯಏಕಾದಶೋಪದೇಶೇ ನವಮಸ್ಸಂವಾದಃ.

ಇತಿ ಶ್ರೀ ಸೋಸಲಿ ರೇವಣಾರಾಧ್ಯನಾಮಾಚಾರ್ಯವಿರಚಿತೇ ಚೋಳರೇಣುಕಸಂವಾದ ರೂಪ ಶಿವಾಧಿಕ್ಯಶಿಖಾಮಣೌ ಯಕ್ಷರುದ್ರಾಜ್ಞಾಬಲಾದಿನವಸಂ ವಾದವಿಚಾರಏಕಾದಶೋಪದೇಶಃ.



ಶ್ರೀವೃಷಭವಾಹನಾಯನಮಃ.

## ದ್ವಾದಶೋಪದೇಶಃ ಪ್ರಾರಭ್ಯತೇ.

## ರಾಮತ್ರಯಾದ್ಯವತಾರಧಿಕ್ಕಾರವಿಧಿಃ.

ಚೋ—ಸ್ವಾಮಿನ್ ರೇಣುಕಗಣೇಶ! ''ಪರಾತ್ಪರತರಂ ಯಾಂತಿ ನಾರಾಯ ಣಪರಾಯಣಾಃ || ನ ತೇ ತತ್ರ ಗಮಿಷ್ಯಂತಿ ಯೇ ದ್ವಿಷಂತಿ ಮಹೇಶ್ವರಂ || ಜಪೋ

---

ದಕಪಾಲವನ್ನು ಒಡೆದು ಊರ್ಧ್ವಲೋಕವನ್ನು ಸೇರಿತು,, ಇತ್ಯಾದಿ ವಚನಗಳಿಂದ ನಾರಾಯ ಣನ ವಾಮನಾವತಾರಕ್ಕಿಂತ ಮೊದಲೇ ಗಂಗೆಯು ಇದ್ದಿತೆಂದು ತಿಳಿಯುವುದು. ಶಿವನಿಂದ ವಾ ಮನಾವತಾರವು ಸಂಹರಿಸಲ್ಪಟ್ಟ ಸಂಗತಿಯು ನಮ್ಮಿಂದ ಮೊದಲೇ ಹೇಳಲ್ಪಟ್ಟಿದೆ.

ಎಂಬಲ್ಲಿಗೆ ಗಂಗೋತ್ಪತ್ತಿನಿರ್ಣಯವನ್ನು ಹೇಳುವ ಹನ್ನೊಂದನೆಯ ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡ ಟಿಪ್ಪಣಿಯಲ್ಲಿ ಹನ್ನೊಂದನೆಯ ಉಪದೇಶವು ಸಂಪೂರ್ಣವಾಯಿತು.



## ಹನ್ನೆರಡನೆಯ ಉಪದೇಶ ಪ್ರಾರಂಭವು

ರಾಮತ್ರಯಾದ್ಯವತಾರಧಿಕ್ಕಾರವಿಧಿಯು.

ಚೋ—ಎಲೈ ಸ್ವಾಮಿಯಾದ ರೇಣುಕಗಣೇಶನೇ! ''ನಾರಾಯಣಭಕ್ತರು ಪರಕ್ಕಿಂತಲು ಪರವಾದುದನ್ನು ಹೊಂದುವರು. ಮಹೇಶ್ವರದ್ವೇಷಿಗಳು ಮಾಡುವ ಜಪ, ಹೋಮ, ತಪಸ್ಸು,

ಹೋಮಸ್ತಪೋ ಧ್ಯಾನಂ ಜ್ಞಾನಂ ಯಜ್ಞಾದಿಕೋ ವಿಧಿಃ || ತೇಷಾಂ ವಿನಶ್ಯತಿ ಕ್ಷಿಪ್ರಂ ಯೇ ನಿಂದಂತಿ ಪಿನಾಕಿನಂ'' ಇತಿ ನಾರಾಯಣೋಕ್ತಂ ಕೂರ್ಮಪುರಾಣೇ ದೃಷ್ಟತ್ವಾತ್ ಶಿವೋಽಸ್ಮಾಭಿರ್ನ ನಿಂದ್ಯಃ, ತಥಾಪಿ ರಾಮಮಂತ್ರರಹಸ್ಯಾರ್ಥರೂಪತಾರಕಬ್ರಹ್ಮೋಪದೇಶಕರ್ತಾ ರಾಮೋಽಸ್ಮಾಕಮಾಚಾರ್ಯಃ.

ಶೇ—ಹೇ ವಿಜಯೇಂದ್ರಚೋಳ! ಭವದುಕ್ತರಾಮಃ ಭಾರ್ಗವರಾಮಃ ರಾಘವರಾಮಃ ಯಾದವರಾಮೋ ವಾ ಏತೇಷು ಕೋ ವಾ ಭಣ್ಯತಾಂ?

ಚೋ—" ನಾಹರಿಃ ಪೃಥಿವೀಪತಿಃ '' ಇತಿ ಮನುಸ್ಮೃತಿವಾಕ್ಯಾತ್, ನಾರಾಯಣಾಂಶರೂಪಸರ್ವಕ್ಷತ್ರವಂಶಹಿಂಸಾಪರಃ ಪರಶುರಾಮಃ ಆತ್ಮಘಾತುಕಃ ಸ ನ ಮೇ ದೇವಃ. ಸುರಾಹಲಿಪ್ರಿಯಾಹಾಲೇತ್ಯಮರವಾಕ್ಯಾತ್ ಮಹಾದುರಿತನಿದಾನಮದಿರಾಸ್ವಾದಸಂಜಾತಮದೋನ್ಮತ್ತೋ ಬಲರಾಮಃ ಸ ನ ಮೇ ದೇವಃ. ಕಿಂತು ಮಧ್ಯಮಪಾಂಡವವತ್, ರಾಮತ್ರಯೇ ಮಧ್ಯಮಶ್ಶ್ರೀರಾಮಚಂದ್ರ ಏಕ ಏವ ರುದ್ರಸ್ತುತ್ಯಃ. ತದುಕ್ತಂ ಪದ್ಮಪುರಾಣೇ,—ಶಿವವಾಕ್ಯಂ, " ರಕಾರಾದೀನಿ ನಾಮಾನಿ ಶೃಣ್ವತೋ ಮಮ ಪಾರ್ವತಿ! || ಮನಃ ಪ್ರಸನ್ನತಾಮೇತಿ ರಾಮನಾಮಾಭಿಶಂಕ

---

ಧ್ಯಾನ, ಜ್ಞಾನ, ಯಜ್ಞ ಮೊದಲಾದ ಅನುಷ್ಠಾನವು ಆ ಕ್ಷಣದಲ್ಲೇ ವಿಫಲವನ್ನು ಹೊಂದುವುದು" ಎಂದು ನಾರಾಯಣನಿಂದ ಹೇಳಲ್ಪಟ್ಟಿರುವ ಮಾತು ಕೂರ್ಮಪುರಾಣದಲ್ಲಿರುವುದನ್ನು ನೋಡಿರುವುದರಿಂದ ಶಿವನನ್ನು ಯಾರೂ ನಿಂದಿಸಬಾರದು. ಹಾಗಾದರೂ ಎಲೈ ರೇಣುಕಗಣೇಂದ್ರನೇ! ರಾಮಮಂತ್ರದ ರಹಸ್ಯಾರ್ಥರೂಪವಾದ ತಾರಕಬ್ರಹ್ಮಸ್ವರೂಪವನ್ನು ಉಪದೇಶಮಾಡುವದರಲ್ಲಿ ಅಧಿಕಾರಿಯಾದ ರಾಮನು ನಮಗೆ ಆಚಾರ್ಯನು.

ರೇ.-ಎಲೈ ಚೋಳನೇ! ನಿನ್ನಿಂದ ಹೇಳಲ್ಪಟ್ಟವನಾದ ರಾಮನು ಭಾರ್ಗವರಾಮನೋ? ರಾಘವರಾಮನೋ? ಯಾದವರಾಮನೋ? ಇವರಲ್ಲಿ ಯಾವನು ಹೇಳು?

ಚೋ—"ವಿಷ್ಣುವಿನ ಅಂಶವಿಲ್ಲದವನು ರಾಜನಾಗುವುದಿಲ್ಲವು" ಎಂದು ಮನುಸ್ಮೃತಿವಾಕ್ಯವಿರುವುದರಿಂದ ನಾರಾಯಣಾಂಶರೂಪರಾದ ಸಕಲ ಕ್ಷತ್ರಿಯರ ವಂಶವನ್ನು ನಾಶಮಾಡುವದರಲ್ಲಾಸಕ್ತನಾದ ಪರಶುರಾಮನು ಆತ್ಮಘಾತುಕನಾದುದರಿಂದ ಆತನು ನನಗೆ ದೇವನಲ್ಲ. "ಮದ್ಯವು ಬಲರಾಮನಿಗೆ ಇಷ್ಟವಾದದ್ದು" ಎಂದು ಅಮರವಾಕ್ಯವಿರುವುದರಿಂದ ಅತಿಪಾಪಿಯೂ, ಮದ್ಯಪಾನಮದೋನ್ಮತ್ತನೂ ಆದ ಬಲರಾಮನು ನನಗೆ ದೇವನಲ್ಲ. ಮತ್ತೇನೆಂದರೆ— ರಾಮಮಧ್ಯವರ್ತಿಯಾದ ಶ್ರೀ ರಾಮಚಂದ್ರನೊಬ್ಬನೇ ರುದ್ರಸ್ತೋತ್ರಾರ್ಹನು. ಆ ವಿಷಯವು ಪಾದ್ಮಪುರಾಣದಲ್ಲಿ—"ಎಲೈ ಪಾರ್ವತಿಯೇ! 'ರ' ಎಂಬ ಅಕ್ಷರವೇ ಆದಿಯಾಗುಳ್ಳ ಹೆಸರುಗಳನ್ನು ಕೇಳುತ್ತಿರುವ ನನ್ನ ಮನಸ್ಸು ರಾಮನಾಮಾಭಿಶಂಕೆಯಿಂದ ನೈರ್ಮಲ್ಯವನ್ನು ಹೊಂದು

ಯಾ || ಮುಮುಕ್ಷೋರ್ಮಣಿಕರ್ಣಿಕಾಯಾಂ ಅರ್ಧೋದಕನಿವಾಸಿನಃ || ಅಹಂ ದಿಶಾಮಿ ತನ್ಮಂತ್ರಂ ತಾರಕಂ ಬ್ರಹ್ಮಸಂಜ್ಞಿತಂ || ಶ್ರೀರಾಮರಾಮರಾಮೇತಿ ಹ್ಯೇತತ್ತಾರಕಮುಚ್ಯತೇ || ಅತಸ್ತ್ವಂ ಜಾನಕೀನಾಥಂ ಪರಂಬ್ರಹ್ಮೇತಿ ನಿಶ್ಚಿನು '' ಇತ್ಯಾದಿಶಿವವಾಕ್ಯಸ್ಯ ಕಿಮುತ್ತರಂ ?

ರೇ—ಅಯೇ ಚೋಳ! ತ್ವತ್ಕೃತಶಂಕಾಪರಿಹಾರಃ ಶ್ರೂಯತಾಂ, ಜಾಬಾಲೋಪನಿಷದಿ,—'' ದೇವಾನಾಂ ದೇವಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಂ ''—'' ಅತ್ರ ಹಿ ಜಂತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮ ವ್ಯಾಚಷ್ಟೇ ಯೇನಾಸಾವಮೃತೀಭೂತ್ವಾ ಮೋಕ್ಷೀಭವತಿ '' ಇತಿ. ವಾಮನಪುರಾಣೇ,—ವಿಷ್ಣುವಾಕ್ಯಂ, '' ಅತ್ರಾಸ್ತಿ ನಗರೀ ಪುಣ್ಯಾ ಖ್ಯಾತಾ ವಾರಾಣಸೀ ಶುಭಾ || ತಸ್ಯಾಂ ಹಿ ಯೋಗಿನಶ್ಶಂಭುಂ ಪ್ರಯಾಂತಿ ಭವದಾಹಕಂ '' ಇತಿ. ಇತ್ಯಾದಿಶ್ರುತಿಪುರಾಣವಾಕ್ಯಾತ್, '' ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ '' ಇತಿ ಗೀತಾಯಾಂ ಶ್ರೀಕೃಷ್ಣವಾಕ್ಯಾಚ್ಚ, ಕಾಶ್ಯಾಂ ರಾಮತಾರಕೋಪದೇಶಂ ಪ್ರಾಪ್ಯ ಮುಕ್ತಾನಾಂ ಶಿವಲಿಂಗಸ್ವರೂಪತ್ವಂ ನಿಶ್ಚಿತಂ, ನ ತು

---

ತ್ತದೆ. ಮೋಕ್ಷವನ್ನು ಹೊಂದಲಿಚ್ಛೆಯಿಂದ ಮಣಿಕರ್ಣಿಕೆಯಲ್ಲಿ ಅರ್ಧೋದಕವಾಸಿಯಾಗಿರುವ ಪುರುಷನಿಗೆ ಭವತಾರಕವೂ ಬ್ರಹ್ಮಸಂಜ್ಞಿತವೂ ಆದ ಆ ಮಂತ್ರವನ್ನು ನಾನು ಉಪದೇಶಮಾಡುವೆನು. ''ಶ್ರೀ ರಾಮರಾಮ'' ಎಂಬ ಇದೇ ತಾರಕಮಂತ್ರವೆಂದು ಹೇಳಲ್ಪಡುತ್ತದೆ. ಈ ಕಾರಣದಿಂದ ಸೀತಾಪತಿಯನ್ನೇ ಪರಬ್ರಹ್ಮವೆಂದು ನಿಶ್ಚೈಸಿಕೊಳ್ಳುವವಳಾಗು'' ಹೀಗೆಂದು ಶಿವನಿಂದ ಹೇಳಲ್ಪಟ್ಟಿರುವ ವಾಕ್ಯಕ್ಕೆ ಉತ್ತರವೇನು?

ರೇ—ಎಲೆ ಚೋಳನೇ! ನಿನ್ನ ಪ್ರಶ್ನೆಗುತ್ತರವನ್ನು ಕೇಳು, ಜಾಬಾಲೋಪನಿಷತ್ತಿನಲ್ಲಿ— ''ದೇವತೆಗಳನ್ನು ಪೂಜಿಸತಕ್ಕವರು ಆ ದೇವತೆಗಳನ್ನೇ ಹೊಂದುವರು. ಸಕಲ ಪ್ರಾಣಿಗಳಿಗೆ ಪರಬ್ರಹ್ಮವಾದ ರುದ್ರನು ಪ್ರಾಪ್ಯಸ್ಥಾನನಾಗಿರುತ್ತಾನೆ. ರುದ್ರನು ಪ್ರಾಣಿಗಳಿಗೆ ಪ್ರಾಣೋತ್ಕ್ರಮಣಸಮಯದಲ್ಲಿ ತಾರಕಬ್ರಹ್ಮರೂಪನಾಗುವನು'' ಎಂದು ನಿರೂಪಿತವಾಗಿದೆ. ವಾಮನಪುರಾಣದಲ್ಲಿ—''ಈ ಭೂಲೋಕದಲ್ಲಿ ಯಾವ ಕಾಶೀಪಟ್ಟಣವು ಪುಣ್ಯಪ್ರದವೆಂದೂ, ಮಂಗಳಕರವೆಂದೂ ಪ್ರಸಿದ್ಧವಾಗಿರುತ್ತದೆಯೋ, ಅಲ್ಲಿ ಯೋಗಿಗಳು ಭವಹರನಾದ ಶಿವನನ್ನು ಹೊಂದುತ್ತಾರೆ,, ಎಂದು ವಿಷ್ಣುವಿನಿಂದ ನಿರೂಪಿತವಾಗಿದೆ. ಇತ್ಯಾದಿ ಶ್ರುತಿಪುರಾಣವಾಕ್ಯಗಳಿರುವುದರಿಂದಲೂ, ''ದೇವತೆಗಳನ್ನು ಪೂಜಿಸತಕ್ಕವರು ದೇವತೆಗಳನ್ನೇ ಹೊಂದುವರು. ನನ್ನ ಭಕ್ತರು ನನ್ನನ್ನೇ ಹೊಂದುವರು,, ಎಂದು ಗೀತೆಯಲ್ಲಿ ಶ್ರೀಕೃಷ್ಣನ ವಾಕ್ಯವಿರುವುದರದೆಸೆಯಿಂದಲೂ, ಕಾಶಿಯಲ್ಲಿ ರಾಮತಾರಕೋಪದೇಶವನ್ನು ಹೊಂದಿ ಮುಕ್ತರಾದವರು ಶಿವಲಿಂಗ ಸ್ವರೂಪವನ್ನೇ ಹೊಂದುವರಲ್ಲದೆ ರಾಮಸ್ವರೂಪರಾಗುವುದಿಲ್ಲವು. ಈ ಕಾರಣದಿಂದಲೇ, ರಾಮಶಬ್ದವಾಚ್ಯನು

ರಾಮಸ್ವರೂಪತ್ವಂ. ಅತಏವ ರಾಮಶಬ್ದವಾಚ್ಯೋ ರುದ್ರ ಏಕಏವ. ತದುಕ್ತಮಾದಿತ್ಯಪುರಾಣೇ ಮಾನವೀಯಸಂಹಿತಾಯಾಂ ವಿಷ್ಣುಕೃತಶಿವಸಹಸ್ರನಾಮಸ್ತೋತ್ರೇ,—"ಅಭಿರಾಮಸ್ಸುಶರಣೋ ವಿರಾಮೋ ವಿದ್ರುಮಚ್ಛವಿಃ" ಇತಿ. ಅತ್ರ ರಾಮಶಬ್ದಃ ರಮುಕ್ರೀಡಾಯಾಮಿತಿ ಧಾತುನಿಷ್ಪನ್ನಃ, ತಸ್ಯ ವಿಗ್ರಹಃ ಶ್ರೂಯತಾಂ, ಸ್ಕಾಂದೇ,—"ರಮಂತೇ ಯೋಗಿನೋಽನಂತೇ ಸತ್ಯಾನಂದೇ ಚಿದಾತ್ಮನಿ ॥ ಇತಿ ರಾಮಪದೇನಾಪಿ ಪರಬ್ರಹ್ಮಾಭಿಧೀಯತೇ" ರಾಮಾಯಣೇ,—ವಿಶ್ವಾಮಿತ್ರಃ, "ರಮಂತಿ ಯಮಿನೋ ಯತ್ರ ಸ ರಾಮ ಇತಿ ಸಂಜ್ಞಿಕಃ ॥ ತನ್ನಾಮಾಯಂ ದಾಶರಥೀರಾಮೋ ಜನಕ ಪಶ್ಯ ತಂ" ಇತಿ. ಅತಏವ ರಾಮಶಬ್ದವಾಚ್ಯೋ ರುದ್ರ ಏಕಏವ ತಾರಕಬ್ರಹ್ಮಸ್ವರೂಪ ಇತಿ ವಿಜ್ಞೇಯಃ. ತತ್ತಾವದಾಸ್ತಾಂ. "ತ್ರೇತಾಯುಗೇ ಮಹಾಭಾಗಂ ಕೌಸಲ್ಯಾಽಸೂತ ತಂ ಸುತಂ" ಇತಿ ರಾಮಾಯಣವಾಕ್ಯಾತ್, ಕೃತಯುಗೇ ಕಾಶೀಕ್ಷೇತ್ರೇ ರಾಮತಾರಕೋಪದೇಶೋ ನ ವಿದ್ಯೇತೇತಿ ವಕ್ತವ್ಯಂ ಚೇತ್ತರ್ಹಿ, ತಥಾ ಚತುರ್ದಶಸಹಸ್ರಂ ತು ಶತಾಧ್ಯಾಯಸಮನ್ವಿತಂ" ಇತಿ ಪ್ರಮಾಣಿತಸಂಖ್ಯಾಯುಕ್ತಕಾಶೀಖಂಡಪ್ರತಿಪಾದಿತಕಾಶೀಕ್ಷೇತ್ರಮಹತ್ವಂ ವ್ಯರ್ಥೀಕೃತಂ,

---

ರುದ್ರನಲ್ಲದೆ ತದಿತರನಲ್ಲವು. ಈ ವಿಷಯವು ಆದಿತ್ಯಪುರಾಣಾಂತರ್ಗತವಾದ ವಿಷ್ಣುಕೃತಶಿವಸಹಸ್ರನಾಮಸ್ತೋತ್ರದಲ್ಲಿ—"ರಾಮಶಬ್ದವಾಚ್ಯನೂ, ರಕ್ಷಕನೂ, ಸರ್ವಪ್ರಾಪ್ಯಸ್ಥಾನನೂ ಹವಳದಕಾಂತಿಯಂತೆ ಕಾಂತಿಯುಳ್ಳವನೂ" ಎಂದು ಹೇಳಲ್ಪಟ್ಟದೆ. ಇಲ್ಲಿರುವ ರಾಮಶಬ್ದವು ಕ್ರೀಡಾರ್ಥಕವಾದ 'ರಮು' ಎಂಬ ಧಾತುವಿನಿಂದ ಉಂಟಾದದ್ದು. ಆ ರಾಮಶಬ್ದದ ವಿಗ್ರಹವನ್ನು ಕೇಳು; ಸ್ಕಾಂದಪುರಾಣದಲ್ಲಿ—"ನಾಶರಹಿತನೂ, ಸಚ್ಚಿದಾನಂದಸ್ವರೂಪನೂ ಆದ ಪರಬ್ರಹ್ಮವಾದ ಶಿವನಲ್ಲಿ ಯೋಗಿಗಳು ಕ್ರೀಡಿಸುತ್ತಾರೆ. ಆದ್ದರಿಂದ ಈ ಪರಬ್ರಹ್ಮವು ರಾಮಪದದಿಂದಲೂ ಹೇಳಲ್ಪಡುತ್ತದೆ," ರಾಮಾಯಣದಲ್ಲಿ—"ಯೋಗಿಗಳು ಯಾವ ಪರಬ್ರಹ್ಮಶಿವನಲ್ಲಿ ರಮಿಸುತ್ತಾರೋ ಆತನೇ ರಾಮನೆಂಬ ಹೆಸರುಳ್ಳವನಾಗಿರುತ್ತಾನೆ. ಎಲೈ ಜನಕಮಹಾರಾಜನೇ! ಈ ದಶರಥಪುತ್ರನಾದ ರಾಮನು ಆ ಪರಬ್ರಹ್ಮದ ಹೆಸರುಳ್ಳವನಾಗಿರುತ್ತಾನೆ. ಆದ್ದರಿಂದ ಅವನನ್ನು ನೋಡು" ಎಂದು ವಿಶ್ವಾಮಿತ್ರನಿಂದ ಹೇಳಲ್ಪಟ್ಟದೆ. ಈ ಕಾರಣದಿಂದ ರಾಮಶಬ್ದವಾಚ್ಯನಾದ ರುದ್ರನೊಬ್ಬನೇ ತಾರಕಬ್ರಹ್ಮಸ್ವರೂಪನೆಂದು ತಿಳಿಯತಕ್ಕದು. ಅದಂತಿರಲಿ. "ತ್ರೇತಾಯುಗದಲ್ಲಿ ಕೌಸಲ್ಯೆಯು ಆ ಶ್ರೀರಾಮನನ್ನು ಹಡೆದಳು" ಎಂದು ರಾಮಾಯಣವಾಕ್ಯವಿರುವುದರಿಂದ ಕೃತಯುಗದಲ್ಲಿ ಕಾಶೀಕ್ಷೇತ್ರದಲ್ಲಿ ಪ್ರಾಣಿಗಳಿಗೆ ರಾಮತಾರಕೋಪದೇಶವು ಇರಲೇ ಇಲ್ಲವೆಂದು ಹೇಳುವುದಾದರೆ "ಹದಿನಾಲ್ಕು ಸಾವಿರ ಶ್ಲೋಕಗಳುಳ್ಳ ನೂರಧ್ಯಾಯಗಳಿಂದ ಕೂಡಿದುದು" ಎಂದು ಹೇಳಲ್ಪಟ್ಟಿರುವ ಸಂಖ್ಯೆಯಿಂದ ಪರಿಮಿತವಾಗಿ ಕಾಶೀಖಂಡದಲ್ಲಿ ಪ್ರತಿಪಾದಿತವಾಗಿರುವ ಕಾಶೀಕ್ಷೇತ್ರಮಹಿಮೆಯು ವ್ಯರ್ಥವಾಗುವುದು. ಅದಂತಿರಲಿ.

ತತ್ರಿಷ್ಟ್ವತು. ಅಯೀ ಚೋಳ! ರಾಘವರಾಮಪರಿಭವಃ ಶ್ರೂಯತಾಂ, ರಾಮಾಯಣೇ,—"ಲೋಕನಾಥಃ ಪುರಾ ರಾಮಸ್ಸುಗ್ರೀವಂ ಶರಣಂ ಗತಃ ॥ ಅಪೂಜಯದ್ವಿವಸ್ವಂತಂ ಭಾಸ್ವರಂ ದೇವರೂಪಿಣಂ" ಲೈಂಗೇಚ,—"ನಾರದಃ ಪರ್ವತಶ್ಚೈವ ಚಿರಾದ್ಜ್ಞಾತ್ವಾ ವಿಚೇಷ್ಟಿತಾಂ ॥ ವಿಷ್ಣೋರ್ಮಾಯಾಂ ವಿನಿಂದ್ಯೈವ ರುದ್ರಭಕ್ತೌ ಬಭೂವತುಃ ॥ ಶಾಪತಶ್ಚಾಂಬರೀಷಸ್ಯ ತಥೈವ ಮುನಿಸಿಂಹಯೋಃ ॥ ರಾಮೋ ದಾಶರಥಿರ್ಭೂತ್ವಾ ವಿಯುಕ್ತಸ್ಸೀತಯಾಽಭವತ್" ಇತಿ. ಭೋ ಚೋಳ! ತಸ್ಯ ರಾಘವರಾಮಸ್ಯ ಕುಂಭಸಂಭವೋಪಮನ್ಯುಭ್ಯಾಮುಪದೇಶವಿಧಿಃ ಶ್ರೂಯತಾಂ, ಪದ್ಮಪುರಾಣೇ ಪರಾಶರಸಂಹಿತಾಯಾಂ ಶಿವಗೀತೋಪನಿಷದಿ,—ಸೂತಃ, "ರಾವಣೇನ ಯದಾ ಸೀತಾ ವಿಹೃತಾ ಜನಕಾತ್ಮಜಾ ॥ ತದಾ ವಿಯೋಗದುಃಖೇನ ವಿಲಪನ್ನಾಸ ರಾಘವಃ ॥ ನಿರ್ನಿದ್ರೋ ನಿರಹಂಕಾರೋ ನಿರಾಹಾರೋ ದಿವಾನಿಶಂ ॥ ಮೋಕ್ತುಮೈಚ್ಛತ್ತತಃ ಪ್ರಾಣಾನ್ಸಾನುಜೋ ರಘುನಂದನಃ ॥ ಲೋಪಾಮುದ್ರಾಪತಿರ್ಜ್ಞಾತ್ವಾ ತತ್ಸನ್ನಿಧಿಮುಪಾಗಮತ್" ತತ್ರೈವ ತೃತೀಯಾಧ್ಯಾಯೇ,—"ಅಥ ಪ್ರಣಮ್ಯ ರಾಮಸ್ತಂ ದಂಡವನ್ಮುನಿಸತ್ತಮಂ ॥ ಉವಾಚ ದುಃಖನಿರ್ಮುಕ್ತಃ ಪ್ರಹೃಷ್ಟೇ

---

ಎಲೈ ಚೋಳನೇ! ರಘುವಂಶೋತ್ಪನ್ನನಾದ ರಾಮನಿಗೆ ಉಂಟಾದ ಪರಿಭವವನ್ನು ಕೇಳು; ರಾಮಾಯಣದಲ್ಲಿ—"ಪೂರ್ವದಲ್ಲಿ ಲೋಕನಾಥನೆಂದೆನಿಸಿಕೊಂಡಿದ್ದ ರಾಮನು ಸುಗ್ರೀವನನ್ನು ಮರೆಹೊಕ್ಕನು. ದೇವತಾಸ್ವರೂಪಿಯೂ, ಪ್ರಕಾಶಮಾನನೂ ಆದ ಸೂರ್ಯನನ್ನು ಪೂಜಿಸಿದನು," ಮತ್ತು ಲಿಂಗಪುರಾಣದಲ್ಲಿ "ನಾರದ ಪರ್ವತರಿಬ್ಬರೂ ವಿಷ್ಣುಮಾಯೆಯನ್ನು ಬಹುಕಾಲದಿಂದ ಚೇಷ್ಟೆಯೇ ಸ್ವಭಾವವಾಗುಳ್ಳುದನ್ನಾಗರಿತು ನಿಂದಿಸಿ, ಶಿವಭಕ್ತರಾದರು. ಮತ್ತು ದಶರಥನ ಮಗನಾದ ರಾಮನು ಅಂಬರೀಷನ ಶಾಪದಿಂದಲೂ, ಇಬ್ಬರು ಮುನಿಶ್ರೇಷ್ಠರ ಶಾಪದಿಂದಲೂ ಸೀತಾವಿಯೋಗವನ್ನು ಹೊಂದಿದನು," ಹೀಗೆಂದು ಹೇಳಲ್ಪಟ್ಟಿದೆ.

ಎಲೈ ಚೋಳನೇ! ಆ ರಾಮನು ಅಗಸ್ತ್ಯನಿಂದಲೂ, ಉಪಮನ್ಯುವಿನಿಂದಲೂ ಉಪದೇಶವನ್ನು ಹೊಂದಿದ ಸಂಗತಿಯನ್ನು ಕೇಳು; ಪದ್ಮಪುರಾಣಾಂತರ್ಗತವಾದ ಪರಾಶರಸಂಹಿತೆಯಲ್ಲಿರುವ ಶಿವಗೀತೆಯಲ್ಲಿ—"ಜನಕರಾಜನ ಮಗಳಾದ ಸೀತೆಯು ಯಾವಾಗ ರಾವಣನಿಂದ ಒಯ್ಯಲ್ಪಟ್ಟಳೋ ಆಗ ರಾಮನು ಆಕೆಯ ವಿಯೋಗದಿಂದ ದುಃಖಪಡುತ್ತಾ, ತಮ್ಮನಾದ ಲಕ್ಷ್ಮಣನೊಡನೆ ಹಗಲು ರಾತ್ರಿಗಳಲ್ಲೂ ನಿದ್ರೆಯಿಲ್ಲದವನೂ, ನಿರಹಂಕಾರನೂ, ಆಹಾರವಿಲ್ಲದವನೂ ಆಗಿ ಕಡೆಗೆ ಪ್ರಾಣವನ್ನು ಬಿಡುವುದಕ್ಕಿಚ್ಛೈಸಿದನು. ಈ ಸಂಗತಿಯನ್ನು ಅಗಸ್ತ್ಯಮಹಾಮುನಿಯು ತಿಳಿದು, ಆತನ ಹತ್ತಿರಕ್ಕೆ ಸಮಾಧಾನವನ್ನುಂಟುಮಾಡುವುದಕ್ಕಾಗಿ ಬಂದನು," ಬಳಿಕ ಶ್ರೀರಾಮನು ತನ್ನ ಹತ್ತಿರಕ್ಕೆ ಬಂದ ಆ ಅಗಸ್ತ್ಯನಿಗೆ ನಮಸ್ಕಾರವನ್ನು ಮಾಡಿ, ಆತನ ದರ್ಶನಲಾಭದಿಂದುಂಟಾದ ಸಂತೋಷದಿಂದ ದುಃಖಪಡದೆ, ಎಲೈ ಮುನಿಯೇ! ನಾನು ಕೃತಾ

ನಾಂತರಾತ್ಮನಾ ‖ (ರಾಮಃ) ಕೃತಾರ್ಥೋಽಸ್ಮಿ ಮುನೇ ಜಾತೋ ವಾಞ್ಛಿತಾರ್ಥೋ ಮಮಾಗತಃ ‖ ಅತಸ್ತ್ವಂ ವಿರಜಾಂ ದೀಕ್ಷಾಂ ಕುರು ಮೇ ಮುನಿಸತ್ತಮ‖ (ಅಗಸ್ತ್ಯಃ) ರಾಮ ತ್ವಾಂ ದೀಕ್ಷಯಿಷ್ಯಾಮಿ ವಿರಜಾಮಾರ್ಗಮಾಶ್ರಯ ‖ ತೇನ ಮಾರ್ಗೇಣ ಮರ್ತ್ಯತ್ವಂ ಹಿತ್ವಾ ತೇಜೋಮಯೋ ಭವ ‖ ತತಃ ಪ್ರಸನ್ನೋ ಭಗವಾನ್ಮಹಾಪಾಶುಪತಾಸ್ತ್ರಕಂ ‖ ತುಭ್ಯಂ ದಾಸ್ಯತಿ ತೇನ ತ್ವಂ ಶತ್ರೂನ್ ಹತ್ವಾಽಪ್ಸ್ಯಸಿ ಪ್ರಿಯಾಂ'' ತತ್ರೈವ ಚತುರ್ಥಾಧ್ಯಾಯೇ,—'' ಏವಮುಕ್ತ್ವಾ ಮುನಿಶ್ರೇಷ್ಠೇ ಗತೇ ತಸ್ಮಿನ್ನಿಜಾಶ್ರಮಂ ‖ ಅಥ ರಾಮಗಿರೌ ರಾಮಃ ಪುಣ್ಯೇ ಗೋದಾವರೀತಟೇ ‖ ಧೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣೈರ್ಯುತಃ ‖ ಶಿವಲಿಂಗಂ ಪ್ರತಿಷ್ಠಾಪ್ಯ ಪೂಜಯೇಚ್ಚ ಯಥಾವಿಧಿ'' ತತ್ರ ಪಂಚಮಾಧ್ಯಾಯೇ,—'' ಅಥ ದಿವ್ಯಂ ಧನುಸ್ತಸ್ಮೈ ದದೌ ತೂಣೀರಮಕ್ಷಯಂ ‖ ಮಹಾಪಾಶುಪತಂ ನಾಮ ದಿವ್ಯಮಸ್ತ್ರಂ ದದೌ ಶಿವಃ'' ತತ್ರ ಚತುರ್ಥಾಧ್ಯಾಯೇ,-ಶಿವಃ '' ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ‖ ಯದ್ಯತ್ಪಶ್ಯಸಿ ರಾಮ ತ್ವಂ ತತ್ಕುರುಷ್ವ ಮದರ್ಪಣಂ'' ಇತ್ಯಾದಿಭಿರ್ವಚನೈಃ ರಾಮಸ್ಯ ಕುಂಭಸಂಭವಾದ್ವಿರಜಾದೀಕ್ಷಾಲಾಭಃ, ಶಿವಾತ್ಪಾಶುಪತಾಸ್ತ್ರಲಾಭಶ್ಚ ವಿಜ್ಞೇಯಃ. ಕಿಂಚ ಭೋ ಚೋಳ! ರಾಮಸ್ಯ ಸ್ವ

---

ರ್ಥಸಾದೆನು, ಇಷ್ಟಾರ್ಥವು ಕೈಗೂಡಿತು. ನನಗೆ ವಿರಜಾದೀಕ್ಷೆಯನ್ನು ಮಾಡು. ಎಂದು ಹೇಳಿಕೊಂಡನಾದ್ದರಿಂದ, ಅಗಸ್ತ್ಯನು—ಎಲೈ ಶ್ರೀರಾಮನೇ! ನಿನಗೆ ವಿರಜಾದೀಕ್ಷೆಯನ್ನು ಮಾಡುವೆನು, ಆ ಮಾರ್ಗವನ್ನು ಆಶ್ರಯಿಸುವವನಾಗು. ನೀನು ಅದರಿಂದ ಮನುಷ್ಯತ್ವವನ್ನು ಬಿಟ್ಟು ತೇಜೋಮಯನಾಗು. ಆ ಮಾರ್ಗವನ್ನು ನೀನು ಅನುಸರಿಸುವುದರಿಂದ ಭಗವಂತನಾದ ಪರಮೇಶ್ವರನು ಪ್ರಸನ್ನನಾಗಿ ಮಹಾಪಾಶುಪತಾಸ್ತ್ರವನ್ನು ನಿನಗೆ ಕೊಡುವನು. ಆ ಪಾಶುಪತಾಸ್ತ್ರದಿಂದ ನೀನು ವೈರಿಗಳನ್ನು ಕೊಂದು ನಿನ್ನ ಮಡದಿಯನ್ನು ಹೊಂದುವೆ,, ಎಂದು ಹೇಳಿ ತನ್ನಾಶ್ರಮವನ್ನು ಕುರಿತು ತೆರಳುವವನಾಗಲು; ರಾಮನು ರಾಮಗಿರಿಯಲ್ಲಿ ಪವಿತ್ರವಾದ ಗೋದಾವರೀತೀರದಲ್ಲಿ ಭಸ್ಮರುದ್ರಾಕ್ಷಧಾರಣಸಂಪನ್ನನಾಗಿ ಶಿವಲಿಂಗವನ್ನು ವಿಧ್ಯನುಸಾರವಾಗಿ ಸ್ಥಾಪಿಸಿ, ಪೂಜಿಸಿದನು. ಅನಂತರದಲ್ಲಿ ಶಿವನು ಪ್ರಸನ್ನನಾಗಿ ಆ ರಾಮನಿಗೆ ಧನುಸ್ಸನ್ನೂ, ಸಾಟಿಹಿತವಾದ ಬತ್ತಳಿಕೆಯನ್ನೂ, ಶ್ರೇಷ್ಠವಾದ ಪಾಶುಪತಾಸ್ತ್ರವನ್ನೂ ಕೊಟ್ಟನು,, ''ಎಲೈ ರಾಮನೇ! ನೀನು ಯಾವುದನ್ನು ಮಾಡಬೇಕಾದರೂ, ಭುಂಜಿಸಬೇಕಾದರೂ, ಹೋಮಮಾಡಬೇಕಾದರೂ, ಕೊಡಬೇಕಾದರೂ, ಯಾವಯಾವುದನ್ನು ನೋಡಬೇಕಾದರೂ ಅದನ್ನೆಲ್ಲವನ್ನೂ ನನಗೆ ಸಮರ್ಪಿಸಿ ಉಪಯೋಗಿಸು,, ಎಂದು ಹೇಳಿದನೆಂದು ಉಕ್ತವಾಗಿದೆ. ಇವು ಮೊದಲಾದ ವಚನಪ್ರಮಾಣಗಳಿಂದ ರಾಮನಿಗೆ ಅಗಸ್ತ್ಯನಿಂದ ವಿರಜಾದೀಕ್ಷೆಯೂ, ಶಿವನಿಂದ ಪಾಶುಪತಾಸ್ತ್ರಲಾಭವೂ ದೊರಕಿತೆಂದು ತಿಳಿಯತಕ್ಕದ್ದು. ಮತ್ತೂ ಎಲೈ ಚೋಳನೇ! ರಾಮನಿಗೆ ತನ್ನ ಕುಲಗು

ಕುಲಗುರುವಸಿಷ್ಠಾದುಪದೇಶವಿಧಿಃ ಶ್ರೂಯತಾಂ, ಜ್ಞಾನವಾಸಿಷ್ಠೇ,—" ಯೇನ ಶಬ್ದಸ್ಪರ್ಶರೂಪರಸಾನ್ಜ್ಞಾನಾಸಿ ರಾಘವ || ತಮಾತ್ಮಾನಂ ಪರಬ್ರಹ್ಮ ಜಾನೀಹಿ ಪರಮೇಶ್ವರಂ || ಮುಷ್ಟಯೋ ಮೋಹಬೀಜಾನಾಂ ದೃಷ್ಟಯೋ ವಿವಿಧಾಪದಾಂ|| ಕುದೃಷ್ಟಯಃ ಕ್ಷಯಂ ಯಾನ್ತಿ ತಸ್ಮಿನ್ದೃಷ್ಟೇ ಪರಾಪರೇ || ಬಹಿಃ ಕೃತ್ರಿಮಸಂರಂಭೋ ಹೃದಿ ಸಂರಂಭವರ್ಜಿತಃ || ಅಂತಸ್ತ್ಯಾಗೀ ಬಹಿರ್ಲೋಭೀ ಲೋಕೇ ವಿಹರ ರಾಘವ " ಇತ್ಯಾದಿವಚನೈಶ್ಶ್ರೀರಾಮಸ್ಯ ವಸಿಷ್ಠಮುನ್ಯುಪದೇಶಃ ಪ್ರಸಿದ್ಧಃ.

ಅಪಿಚ, ಭೋ ಚೋಳ! ಶಂಭುನಾ ಶ್ರೀರಾಮಸ್ಯ ತಾರಕಬ್ರಹ್ಮೋಪದೇಶವಿಧಿಃ ಶ್ರೂಯತಾಂ, ಪಾದ್ಮೇ ಶಿವರಾಘವಸಂವಾದೇ,—" ಯೋಗಿನಸ್ಸನಕಾದ್ಯಾಸ್ತು ಯೋಗಮಾಸ್ಥಾಯ ಯತ್ನತಃ || ಧ್ಯಾಯಂತಿ ಯತ್ಪರಂ ತೇಜಸ್ತದಿದಂ ಪಶ್ಯ ರಾಘವ || ಚತುರಃ ಪಶ್ಯ ವೇದಾಂಶ್ಚ ಸ್ತುವತೋ ಮಾಂ ಪರಂ ಶಿವಂ " ಇತಿ.

ಚೋ—ಭೋ ರೇಣುಕಗಣೇಶ! ಭವದುಕ್ತಂ ಸರ್ವಮಪಿ ಜ್ಞಾತಂ ಮಯಾ, ತಥಾಪ್ಯಪರಂ ಪ್ರಶ್ನಂ ಕರ್ತುಕಾಮೋಽಸ್ಮಿ ಶ್ರೂಯತಾಂ, ಶ್ರೀದಾಶರಥಿರಾಮಹೃದ

---

ರುವಾದ ವಸಿಷ್ಠಮುನಿಗಳಿಂದುಂಟಾದ ಉಪದೇಶವಿಚಾರವನ್ನು ಕೇಳು; ಜ್ಞಾನವಾಸಿಷ್ಠದಲ್ಲಿ—"ಎಲೈ ರಘುರಾಮನೇ! ಯಾವ ಚೈತನ್ಯಬಲದಿಂದ ಶಬ್ದಸ್ಪರ್ಶರೂಪಾದಿಗಳನ್ನು ತಿಳಿಯುತ್ತೀಯೋ ಆ ಚೈತನ್ಯವನ್ನೇ ಪರಮಾತ್ಮನನ್ನಾಗಿಯೂ, ಪರಬ್ರಹ್ಮವನ್ನಾಗಿಯೂ, ಪರಮೇಶ್ವರನನ್ನಾಗಿಯೂ ತಿಳಿಯುವವನಾಗು. ಪರಾತ್ಪರನಾದ ಆ ಪರಮಾತ್ಮನನ್ನು ನೀನು ಜ್ಞಾನನೇತ್ರದಿಂದ ನೋಡಿದರೆ, ಅಜ್ಞಾನವೆಂಬ ಬೀಜಗಳನ್ನು ಸಂಗ್ರಹಿಸತಕ್ಕವುಗಳೂ, ನಾನಾಬಗೆಯಾದ ವಿಪತ್ತುಗಳನ್ನುಂಟುಮಾಡಿ ತೋರಿಸತಕ್ಕವುಗಳೂ ಆದ ನಿನ್ನ ಕೆಟ್ಟ ಕಣ್ಣುಗಳು ಬಲಹೀನಗಳಾಗುವವು. ಎಲೈ ರಾಘವನೇ! ನೀನು ಹೊರಗೆ ನಿಜವಲ್ಲದ ಸಡಗರಗಳನ್ನು ತೋರಿಸುತ್ತಾ, ಮನಸ್ಸಿನಲ್ಲಿ ಸಂರಂಭವಿಲ್ಲದವನಾಗಿ ಮನಸ್ಸಿನಲ್ಲಿ ವಿಷಯಸಂಗವಿಲ್ಲದವನೂ, ಬಾಹ್ಯದಲ್ಲಿ ವಿಷಯಸಂಗವುಳ್ಳವನೂ ಆಗಿ ವಿಹರಿಸುವವನಾಗು,, ಎಂದು ವಸಿಷ್ಠನಿಂದ ಉಪದೇಶಿಸಲ್ಪಟ್ಟನೆಂದು ಹೇಳಲ್ಪಟ್ಟಿದೆ. ಇತ್ಯಾದಿವಚನಗಳಿಂದ ಶ್ರೀರಾಮನಿಗೆ ವಸಿಷ್ಠೋಪದೇಶವುಂಟಾದುದು ಪ್ರಸಿದ್ಧವಾಗಿದೆ. ಮತ್ತೂ ಎಲೈ ಚೋಳನೇ! ಶಿವನಿಂದ ಶ್ರೀರಾಮನಿಗೆ ತಾರಕಬ್ರಹ್ಮೋಪದೇಶವಾದುದನ್ನು ಕೇಳು; ಪದ್ಮಪುರಾಣದ ಶಿವರಾಘವಸಂವಾದದಲ್ಲಿ—"ಎಲೈ ರಾಮನೇ! ಸನಕ, ಸನಂದನ ಮೊದಲಾದ ಯೋಗಿಗಳು ಪ್ರಯತ್ನದಿಂದ ಯೋಗವನ್ನು ಹೊಂದಿ ಯಾವ ತೇಜೋಲಿಂಗವನ್ನು ಧ್ಯಾನಿಸುತ್ತಾರೋ ಆ ತೇಜಸ್ಸೇ ಇದು, ನೋಡು. ಪರಮಶಿವನಾದ ನನ್ನನ್ನು ಸ್ತೋತ್ರಮಾಡುತ್ತಿರುವ ನಾಲ್ಕು ವೇದಗಳನ್ನೂ ನೋಡು,, ಎಂದು ಹೇಳಲ್ಪಟ್ಟಿದೆ.

ಚೋ – ಎಲೈ ರೇಣುಕಗಣೇಶನೇ ! ನಿನ್ನಿಂದ ನಿರೂಪಿತವಾದುದನ್ನೆಲ್ಲವನ್ನೂ ತಿಳಿದುಕೊಂಡೆನು. ಆದರೂ ಬೇರೊಂದು ಪ್ರಶ್ನೆಯನ್ನು ಮಾಡಲಿಚ್ಛೈಸಿದ್ದೇನೆ. ಕೇಳು; ದಶರಥಪುತ್ರ

ಯಕಮಲಮಧ್ಯಸ್ಥಿತ ಆದಿನಾರಾಯಣಸ್ತಾರಕಬ್ರಹ್ಮಸ್ವರೂಪವಾನ್, ನ ತು ರುದ್ರಃ.

ರೇ—ಹೇ ಚೋಳ ! ತತ್ಪರಿಹಾರಃ ಶ್ರೂಯತಾಂ, ಬೃಹಜ್ಜಾಬಾಲೋಪನಿಷದಿ,—“ ತಥಾ ಹೃದಿ ಧ್ಯಾಯಸ್ವೇತಿ ಹರಿಮುಕ್ತೇ ಶಿವೇ ” ಇತ್ಯಾದಿ ಪ್ರಾಗೇವಾಸ್ಮಾಭಿರುಕ್ತಮಿದಂ ವಚನಮತೀವ ಪ್ರಸಿದ್ಧಂ. ತಥಾ ಪಾದ್ಮೇ ಶಿವರಾಘವಸಂವಾದೇ,—ಶಂಭುಃ, “ ಧ್ಯಾಯಸ್ವ ಕಿಂ ತೇ ಹೃದಯೇ ಸ ಚ ಧ್ಯಾನಪರೋಽಭವತ್ ‖ ಅಪಶ್ಯದ್ಧೃದಯೇ ದೀಪಂ ದೀರ್ಘಾಕಾರಮತಿಪ್ರಭಂ ‖ ಹರಿರಾಹ ಶಿವಂ ಸಾಕ್ಷಾದ್ದೀಪೋ ದೃಷ್ಟೋ ಮಹೇಶ್ವರಂ ” ಇತಿ. ಇತ್ಯಾದಿಶ್ರುತಿಪುರಾಣವಾಕ್ಯಾತ್, ಶ್ರೀಮದ್ರಾಮಹೃದಯಾರವಿಂದಾಂತರ್ವರ್ತ್ಯಾದಿನಾರಾಯಣಸ್ಯಾಪಿ ಶಂಭುನಾ ತಾರಕಬ್ರಹ್ಮೋಪದೇಶವಿಧಿಃ ಕೃತ ಇತಿ ವಿಜ್ಞೇಯಃ ಅತಏವ ನಾರಾಯಣರಾಮಾವುಪಮನ್ಯುವಸಿಷ್ಠಯೋಶ್ಶಿಷ್ಯಾವಿತಿ ಭಾರತರಾಮಾಯಣಯೋಃ ಪ್ರಸಿದ್ಧೌ. ತೌ ತಾವದ್ರುದ್ರಭಕ್ತೌ ರುದ್ರೇಣೋಪದಿಷ್ಟಾವಾಸಾತಾಂ, ಹೇ ಚೋಳ! ಕಿಂಚಾವೈದಿಕಬೌದ್ಧಾವತಾರವತೋ ಹರೇರ್ನಿರಾಸಃ ಶ್ರೂಯತಾಂ, ಲೈಂಗೇ,—“ ವಿಷ್ಣುರ್ಮಾಯಾಮಯಂ ಚಕ್ರೇ ಬೌದ್ಧಂ ಷೋಡಶಲಕ್ಷಕಂ ‖ ವೇದಮಾರ್ಗವಿರುದ್ಧಂ ಚ ಸರ್ವಕರ್ಮ

---

ನಾದ ಶ್ರೀರಾಮನ ಹೃದಯಕಮಲಮಧ್ಯದಲ್ಲಿ ವಾಸಿಸುವ ಆದಿನಾರಾಯಣನೇ ತಾರಕಬ್ರಹ್ಮಸ್ವರೂಪವುಳ್ಳವನಲ್ಲದೆ, ರುದ್ರನಲ್ಲವು.

ರೇ—ಎಲೈ ಚೋಳನೇ! ಅದಕ್ಕೂ ಪರಿಹಾರವನ್ನು ಕೇಳು; ಬೃಹಜ್ಜಾಬಾಲೋಪನಿಷತ್ತಿನಲ್ಲಿ—“ಶಿವನು ಹರಿಯನ್ನು ಕುರಿತು ಆ ಪ್ರಕಾರವಾಗಿ ಧ್ಯಾನಮಾಡೆಂದು ಹೇಳಲು, ಬಳಿಕ ಹರಿಯು ಧ್ಯಾನಮಾಡಿ ಹೃದಯದಲ್ಲಿ ತೇಜಸ್ಸನ್ನು ಕಂಡೆನು ಎಂದು ಶಿವನನ್ನು ಕುರಿತು ಹೇಳಿದನು,, ಎಂದು ಮೊದಲಾಗಿ ನಮ್ಮಿಂದ ಮೊದಲೇ ಹೇಳಲ್ಪಟ್ಟ ಈ ವಚನವು ಅತ್ಯಂತ ಪ್ರಸಿದ್ಧವಾಗಿದೆ. ಹಾಗೆಯೇ ಪದ್ಮಪುರಾಣದಲ್ಲಿ ಶಿವರಾಘವಸಂವಾದದಲ್ಲಿ—“ನಿನ್ನ ಮನಸ್ಸಿನಲ್ಲಿ ಧ್ಯಾನಮಾಡೆಂದು ಶಿವನು ಹೇಳಲು, ಆ ರಾಮನು ಧ್ಯಾನದಲ್ಲಾಸಕ್ತನಾಗಿ ಮನಸ್ಸಿನಲ್ಲಿ ಅತ್ಯಂತ ಕಾಂತಿಯುಳ್ಳ ದೀರ್ಘಾಕಾರವಾದ ದೀಪವನ್ನು ನೋಡಿ, ಶಿವನನ್ನು ಕುರಿತು ಪ್ರತ್ಯಕ್ಷವಾಗಿ ದೀಪವನ್ನು ನೋಡಿದೆನು,, ಎಂದು ಹೇಳಲ್ಪಟ್ಟಿದೆ. ಇತ್ಯಾದಿ ಶ್ರುತಿಪುರಾಣವಾಕ್ಯಗಳಿರುವುದರದೆಸೆಯಿಂದ ಶ್ರೀರಾಮನಿಂದ ಹೃದಯದಲ್ಲಿ ಚಿಂತಿಸಲ್ಪಡುವನಾದ ಆದಿನಾರಾಯಣನಿಗುಕೂಡ ಶಿವನಿಂದ ತಾರಕಬ್ರಹ್ಮೋಪದೇಶವು ಮಾಡಲ್ಪಟ್ಟಿತೆಂದು ತಿಳಿಯತಕ್ಕದ್ದು. ಈ ಕಾರಣದಿಂದಲೇ ನಾರಾಯಣ ರಾಮರಿಬ್ಬರೂ ಉಪಮನ್ಯು ವಸಿಷ್ಠರಿಗೆ ಶಿಷ್ಯರೆಂದು ಭಾರತರಾಮಾಯಣಗಳಲ್ಲಿ ಪ್ರಸಿದ್ಧವಾಗಿದೆ. ಆ ಉಪಮನ್ಯು ವಸಿಷ್ಠರಾದರೋ ಶಿವಭಕ್ತರಾಗಿ ಶಿವನಿಂದುಪದೇಶವನ್ನು ಹೊಂದಿದರು. ಮತ್ತೂ ಎಲೈ ಚೋಳನೇ ! ವೈದಿಕವಲ್ಲದ ಬೌದ್ಧಾವತಾರವನ್ನೆತ್ತಿದ ವಿಷ್ಣುವಿನ ನಿರಾಸವನ್ನು ಕೇಳು; ಲಿಂಗಪುರಾಣದಲ್ಲಿ—“ವಿಷ್ಣುವು—ಮಾಯಾಮಯವೂ,

ಬಹಿಷ್ಕೃತಂ'' ಇತ್ಯಾದಿ. ಪುರಾ ತ್ರಿಪುರಸಂಹಾರಸಮಯೇ ಹರೇಸ್ಸ್ವರೂಪಂ ಪಂಚವಿಧಂ, ತತ್ಕಥಮಿತಿ ಚೇತ್, ಹರಿಸ್ತು ತ್ರಿಪುರೇ ತಾರಕಾಕ್ಷಕಮಲಾಕ್ಷವಿದ್ಯುನ್ಮಾಲಿನಾಂ ಪತ್ನೀನಾಂ ಪಾತಿವ್ರತ್ಯವಿನಾಶಾರ್ಥಂ ಮಹಾನ್ ಬುದ್ಧೋ ಬಭೂವ, ಶಿವಸ್ಯ ರಥಮುದ್ಧರ್ತುಂ ಪಾತಾಳೇ ಮಹಾನ್ ವೃಷಭೋ ಬಭೂವ, ಹರಹಸ್ತೇ ಮಹಾನ್ ಶರೋ ಬಭೂವ, ಮಧ್ಯೇ ರಾಕ್ಷಸಸೃಷ್ಟಾಂ ರಕ್ತವಿಷಧಾರಾಂ ಪಾತುಂ ಮಹಾನ್ ವಹ್ನಿರ್ಬಭೂವ. ಸವತ್ಸಾ ಮಹತೀ ಗೌರ್ಭೂತ್ವಾ ತ್ರಿಪುರೋದ್ಯಾನೇ ಪೀಯೂಷಕುಂಭಂ ಪಪಾವಿತಿ ಕಥಾ ಪ್ರಸಿದ್ಧಾ. ಅಪಿಚ ಕಲ್ಯಂತೇ ಸರ್ವಸಂಹಾರಾರ್ಥಂ ಭವಿಷ್ಯತ್ಕಲ್ಕ್ಯವತಾರೋಽಪ್ಯವೈದಿಕಬೌದ್ಧಾವತಾರವತ್ಸರ್ವೈರ್ನಿರಸನೀಯ ಇತ್ಯಲಂ ವಿಸ್ತರೇಣ. ಇತಿ ರಾಮತ್ರಯಾದ್ಯವತಾರಧಿಕ್ಕಾರವಿಧಿರ್ದ್ವಾದಶೋಪದೇಶೇ ಪ್ರಥಮಸ್ಸಂವಾದಃ.



ಶ್ರೀಃ.

## ಹರೇರಾಚಾರಧಿಕ್ಕಾರನಿರ್ಣಯಃ.

ರೇ—ಭೋ ಚೋಳ ! ಭವದಿಷ್ಟದೇವಸ್ಯ ಹರೇರ್ಜನ್ಮಮರಣಾದಿಭಿಃ ಪಂಥವ

---

ಷೋಡಶಲಕ್ಷಗ್ರಂಥಗಳುಳ್ಳುದೂ, ವೇದಮಾರ್ಗವಿರುದ್ಧವೂ, ವೇದೋಕ್ತಸರ್ವಕರ್ಮಬಹಿಷ್ಕೃತವೂ ಆದ ಬೌದ್ಧಶಾಸ್ತ್ರವನ್ನು ಮಾಡಿದನು,, ಇದು ಮೊದಲಾಗಿ ಹೇಳಲ್ಪಟ್ಟದೆ. ಪೂರ್ವದಲ್ಲಿ ತ್ರಿಪುರಸಂಹಾರಕಾಲದಲ್ಲಿ ವಿಷ್ಣುವು ಐದು ಪ್ರಕಾರವಾದ ರೂಪನ್ನು ಹೊಂದಿದನು. ಹೇಗೆಂದರೆ—,,ವಿಷ್ಣುವು ತ್ರಿಪುರಸಂಹಾರಸಮಯದಲ್ಲಿ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಗಳ ಹೆಂಡಿಯರ ಪಾತಿವ್ರತ್ಯವನ್ನು ಕೆಡಿಸುವುದಕ್ಕಾಗಿ ಮಹಾಬುದ್ಧನಾದನು. ಪಾತಾಳಕ್ಕಿಳಿದುಹೋದ ಶಿವನ ರಥವನ್ನೆತ್ತುವುದಕ್ಕಾಗಿ ಮಹಾವೃಷಭರೂಪವನ್ನು ಹೊಂದಿದನು. ಶಿವನ ಕೈಯಲ್ಲಿ ಬಾಣವಾದನು. ರಾಕ್ಷಸರಿಂದ ಮಾಡಲ್ಪಟ್ಟ ರಕ್ತವಿಷಪ್ರವಾಹವನ್ನು ಪಾನಮಾಡುವುದಕ್ಕಾಗಿ ಅಗ್ನಿಯಾದನು. ಕರುವಿನಿಂದ ಕೂಡಿದ ದೊಡ್ಡ ಆಕಳಾಗಿ ತ್ರಿಪುರೋದ್ಯಾನದಲ್ಲಿ ಅಮೃತವನ್ನು ಪಾನಮಾಡಿದನು,, ಹೀಗೆಂಬ ಕಥೆಯು ಪ್ರಸಿದ್ಧವಾಗಿದೆ. ಮತ್ತೂ ಕಲಿಯುಗದ ಕಡೆಯಲ್ಲಿ ಸರ್ವನಾಶಕ್ಕೋಸ್ಕರ ಆಗುವ ಕಲ್ಕ್ಯವತಾರವಾದರೋ ಅವೈದಿಕಬೌದ್ಧಾವತಾರದಂತೆ ಸರ್ವರಿಂದಲೂ ನಿರಾಕರಿಸಲ್ಪತಕ್ಕದಾಗಿದೆ. ವಿಸ್ತಾರದಿಂದ ಸಾಕು.

ಎಂಬಿಲ್ಲಿಗೆ ರಾಮತ್ರಯಾದ್ಯವತಾರಧಿಕ್ಕಾರವಿಧಿಯನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಮೊದಲನೆಯ ಸಂವಾದವು ಮುಗಿದುದು.



### ಹರಿಯ ಆಚಾರಧಿಕ್ಕಾರನಿರ್ಣಯವು.

ರೇ—ಎಲೈ ಚೋಳನೇ ! ನಿನ್ನಿಷ್ಟದೈವವಾದ ವಿಷ್ಣುವಿಗೆ ಜನನ ಮರಣಾದಿಗಳಿಂದೂ

ಸ್ತ್ರ ಸಾವಧಾನೇನ ಶ್ರೂಯತಾಂ, " ತ್ವನ್ಮತಾಧಿಪತೇರ್ವಿಷ್ಣೋಶ್ಶೃಣು ದೈವತ್ವಮ ದ್ಯ ತತ್ ॥ ಅನೇಕಭವದುಃಖಾನಾಂ ಸಮೂಹೈರತಿಮೋಹಿತಃ ॥ ತಿರ್ಯಗ್ಯೋನಿಷು ಸಂಭೂಯ ತದ್ದುಃಖಂ ಪ್ರಾಪ ಸಃ ಕ್ರಮಾತ್ ॥ ತೇಷು ತೇಷ್ವವತಾರೇಷು ಶಿವ ಮೂರ್ತಿಂ ಮಹೇಶ್ವರಂ ॥ ಉಪಾಸ್ಯ ಧನ್ಯತಾಮಾಪ ವಿಧಿವದ್ಭಕ್ತಿ ಪೂರ್ವಕಂ ॥ ಪ್ರಜಾಪತೇರೇಕವಾರಮುತ್ಪತ್ತಿಂ ಪ್ರಾಪ್ಯ ಭೂತಲೇ ॥ ಆಖ್ಯಯಾಧೋಕ್ಷಜ ಇತಿ ಪ್ರಸಿದ್ಧಿವಹನಕ್ರಮಃ ॥ ಇಂದ್ರಾನುಜಾಭಿಧಾನೇನ ದಿತೇರ್ಗರ್ಭಸಮುದ್ಭವಂ ॥ ಸಂ ಪ್ರಾಪ್ಯ ವೈ ರಾಕ್ಷಸೇಭ್ಯಃ ಪರಾಜಯವಿಧಿಕ್ರಮಃ ॥ ಬಾದರಾಯಣನಾಮ್ನಾ ಚ ಶಬರ್ಯಾಂ ಜನನಕ್ರಮಃ ॥ ಕೃಷ್ಣ ಇತ್ಯಾಖ್ಯಯೋತ್ಪದ್ಯ ದೇವಕೀಜಠರಾತ್ಪುನಃ ॥ ಪಾಂಡವಾನಾಂ ಸದಾ ಲೋಕೇ ಕೃತಸೇವಾವಿಧಿಕ್ರಮಃ ॥ ಕಿಂಚ ದ್ವೈತ್ಯಾರಿರಿತ್ಯು ರ್ವ್ಯಾಂ ಸಂಸ್ತುತಿಂ ಪ್ರಾಪ್ಯ ಸನ್ನುತಃ ॥ ಪ್ರಾಪ್ತಾ ಪರಾಜಯವಿಧಾ ಜಲಂಧರ ಮ ಹಾಸುರಾತ್ ॥ ಸಪ್ತಸಪ್ತತಿದುರ್ಗಾಣಿ ತ್ಯಕ್ತ್ವಾಸುರಭಯಾದ್ಧರಿಃ ॥ ಸಮುದ್ರ ಮಧ್ಯೇ ಪ್ರಥಿತದ್ವಾರಾವತ್ಯಾಂ ಸ್ಥಿತಿಕ್ರಮಃ ॥ಶಿವೇ ಚಕ್ರೇಣ ದೈತ್ಯಸ್ಯ ಸಂಹಾರಂ ಕೃತವತ್ಯಥ ॥ ಜನ್ಮನಾದೌ ಪ್ರಪೂಜ್ಯೇಶಂ ತಚ್ಚಕ್ರಾವಾಪ್ತಿರೀಶ್ವರಾತ್ ॥ ಕಿಂಚ

---

ಟಾದ ಪರಿಭವವನ್ನು ಸಾವಧಾನದಿಂದ ಕೇಳು; "ನಿನ್ನ ಮತದವರಿಂದ ಉಪಾಸಿಸಲ್ಪಡುತ್ತಿರುವ ವಿಷ್ಣುವಿನ ಆ ದೈವತ್ವವನ್ನು ಈಗ ಕೇಳು; ಆ ವಿಷ್ಣುವು ಬಹಳವಾದ ಸಂಸಾರದುಃಖಸಮೂ ಹಗಳಿಂದ ಅತ್ಯಂತ ಮೋಹವನ್ನು ಹೊಂದಿ, ತಿರ್ಯಗ್ಜಂತುಗಳ ಯೋನಿಗಳಲ್ಲಿ ಹುಟ್ಟಿ ಆ ದುಃಖವನ್ನು ಕ್ರಮದಿಂದ ಅನುಭವಿಸಿದನು. ಆಯಾ ಅವತಾರಗಳಲ್ಲಿ ಮಂಗಳಾಂಗನಾದ ಮಹೇ ಶ್ವರನನ್ನೇ ಭಕ್ತಿಯಿಂದ ವಿಧ್ಯನುಸಾರವಾಗಿ ಉಪಾಸಿಸಿ ಧನ್ಯನಾದನು. ಬ್ರಹ್ಮನದೆಸೆಯಿಂದ ಒಂ ದಾವೃತ್ತಿ ಜನಿಸಿ 'ಅಧೋಕ್ಷಜ, ನೆಂದು ಪ್ರಸಿದ್ಧನಾದನು. ಒಂದಾವೃತ್ತಿ ದಿತಿಯ ಹೊಟ್ಟೆಯ ಲ್ಲಿ ಹುಟ್ಟಿ 'ಇಂದ್ರಾನುಜ, ನೆಂಬ ಹೆಸರನ್ನಾಂತು ರಾಕ್ಷಸರದೆಸೆಯಿಂದ ಪರಾಜಯವನ್ನು ಹೊಂ ದಿದನು. ಒಂದಾವೃತ್ತಿ ಬೇಡತಿಯ ಗರ್ಭದಲ್ಲಿ ಜನಿಸಿ, 'ಬಾದರಾಯಣ, ನೆಂಬ ನಾಮವನ್ನು ಪಡೆದನು. ಒಂದಾವೃತ್ತಿ ದೇವಕಿಯ ಗರ್ಭದಲ್ಲಿ ಜನಿಸಿ 'ಕೃಷ್ಣ, ನೆಂಬ ಹೆಸರನ್ನು ಹೊಂದಿ, ಪಾಂಡವರ ಸೇವೆಯಲ್ಲಿ ಯಾವಾಗಲೂ ಆಸಕ್ತನಾದನು. ಒಂದಾವೃತ್ತಿ ಭೂಲೋಕದಲ್ಲಿ 'ದೈ ತ್ಯಾರಿ, ಯೆಂಬ ಹೆಸರನ್ನಾಂತು ಜಲಂಧರಾಸುರನದೆಸೆಯಿಂದ ಪರಾಜಯವನ್ನು ಪಡೆದನು. ಆ ರಾಕ್ಷಸನದೆಸೆಯಿಂದಂಜಿದವನಾಗಿ ಎಪ್ಪತ್ತೇಳು ದುರ್ಗಗಳನ್ನೂ ಬಿಟ್ಟು, ಸಮುದ್ರಮಧ್ಯದಲ್ಲಿ ದ್ವಾರಕಾಪಟ್ಟಣದಲ್ಲಿ ವಾಸಮಾಡಿದನು. ಅನಂತರದಲ್ಲಿ ಶಿವನು ತನ್ನ ಪಾದಾಂಗುಷ್ಠದಿಂದ ಬರೆಯಲ್ಪಟ್ಟುದಾದ ಚಕ್ರದಿಂದ ಆ ಜಲಂಧರನನ್ನು ಸಂಹರಿಸಲು, ವಿಷ್ಣುವು ಜನಿಸಿದಕೂಡಲೆ ಶಿವ ನನ್ನು ಪೂಜಿಸಿ ಆ ಶಿವನದೆಸೆಯಿಂದ ಆ ಚಕ್ರವನ್ನು ಹೊಂದಿದನು. ಯುದ್ಧರಂಗದಲ್ಲಿ ಆ ಚಕ್ರ

ಚೂರ್ಣೀಕೃತೇ ತಸ್ಮಿನ್ ಚಕ್ರೇ ಸಂಗ್ರಾಮರಂಗಕೇ || ಪ್ರಾಪ್ತಾ ಪರಾಜಯವಿಧಾ ದಧೀಚೇರ್ಮುನಿಪುಂಗವಾತ್ || ಭೂತ್ವೋಪಮನ್ಯೋಸ್ಸಚ್ಛಿಷ್ಯಶ್ಚಂದ್ರಮೌಳೇರ್ಮ ಹೇಶಿತುಃ|| ಸಮರ್ಚನವಿಧಾ ಸಮ್ಯಗನುರಾಗಪುರಸ್ಸರಂ || ಶಿವಪೂಜಾರ್ಥಮಾನೀತೇ ಕಮಲಾನಾಂ ಸಹಸ್ರಕೇ || ನ್ಯೂನೇ ಸತ್ಯೇಕಕಮಲೇ ಸ್ವನೇತ್ರೇಣಾರ್ಚನಕ್ರಮಃ || ಚಕ್ರಾರ್ಥಂ ಚ ಪುನರ್ಭಕ್ತ್ಯಾ ಶಿವಮಾರಾಧ್ಯ ಯತ್ನತಃ || ಚಕ್ರಪ್ರಾಪ್ತಿವಿಧಾ ತಸ್ಮಾತ್ಸಂತುಷ್ಟಾತ್ಪರಮೇಶ್ವರಾತ್ || ಮೇಘರೂಪೇಣ ಧೃತ್ವೇಶಂ ಪರಿತುಷ್ಟಂ ವಿಧಾಯ ಚ || ಸಾಂಬಾಹ್ವಯಸ್ಯ ಪುತ್ರಸ್ಯ ವರಲಾಭವಿಧಾ ತತಃ || ದೂರ್ವಾಸಸಃ ಪದೇನೋಚ್ಚೈರ್ನಿಹತಸ್ಯ ಸ್ಥಲಸ್ಯ ಹಿ|| ವಕ್ಷಸಿ ಶ್ರೀವತ್ಸ ಇತಿ ನಾಮತೋ ಧಾರಣಕ್ರಮಃ || ರುಕ್ಮಿಣ್ಯಾ ಸಹ ಬದ್ಧ್ವೈನಂ ಶಕಟೇಽಸ್ಮಿನ್ಮಹಾಮುನೌ||ಪುರಂ ಪರಿಭ್ರಮಯತಿ ಪರಿತೋ ಭ್ರಮಣಕ್ರಮಃ || ಉಚ್ಛಿಷ್ಟಪರಮಾನ್ನಸ್ಯ ತನ್ಮುನೀಂದ್ರಸ್ಯ ಲೇಪತಃ || ವಜ್ರಾಂಗತ್ವಂ ಪರಿಪ್ರಾಪ್ಯ ಪ್ರವರ್ತನವಿಧಾಽವನೌ || ತತ್ಪಾಯಸೋಪಲೇಪೇನ ವಿಹೀನೇ ಚರಣಸ್ಥಲೇ || ವ್ಯಾಧಸ್ಯ ಬಾಣೋಪಹತ್ಯಾಸಂಪ್ರಾಪ್ತಮರಣಕ್ರಮಃ || ಮುನಿಶಾಪಾನ್ಮುಸಲತಃ ಕುಲಕ್ಷಯವಿಧಾ ತತಃ || ಕಿರೀಟಿನಾ ಕೃತಶ್ರಾದ್ಧೇ ನಾರಾಯಣಬಲಿಕ್ರಮಃ || ಕಿಂಚ ವಿಪ್ರೇಷು ನಿಖಿಲಾಂ ಹೃತವತ್ಸು ವಸುಂಧ

---

ವು ದಧೀಚಿಮುನಿಯದೆಸೆಯಿಂದ ಚೂರುಚೂರಾಗಿ ಮಾಡಲ್ಪಡಲು ಪರಾಜಯವನ್ನು ಹೊಂದಿದನು. ಮತ್ತು ಉಪಮನ್ಯು ಮಹಾಮುನಿಯ ಶಿಷ್ಯನಾಗಿ ಶಿವನನ್ನು ಭಕ್ತಿಯಿಂದ ಶಿವಪೂಜೆಗಾಗಿ ತಂದ ಸಾವಿರ ಕಮಲಗಳಲ್ಲಿ ಒಂದು ಕಮಲವು ಮಾಯವಾದುದರಿಂದ ತನ್ನ ನೇತ್ರವೆಂಬ ಕಮಲದಿಂದ ಪೂಜಿಸಿ, ಆ ಶಿವನನ್ನು ಸಂತೋಷಪಡಿಸಿ ಆತನಿಂದ ಪುನಃ ಚಕ್ರವನ್ನು ಪಡೆದನು. ಮತ್ತೊಂದಾವೃತ್ತಿ ಮೇಘರೂಪನಾಗಿ ಶಿವನನ್ನು ಹೊತ್ತುಕೊಂಡು ಆತನನ್ನು ಸಂತೋಷಪಡಿಸಿ 'ಸಾಂಬ, ನೆಂಬ ಹೆಸರುಳ್ಳ ಮಗನನ್ನು ಪಡೆದನು. ಒಂದಾವೃತ್ತಿ ದೂರ್ವಾಸನೆಂಬ ವೀರಮಾಹೇಶ್ವರಮುನಿಯಿಂದ ಪಾದದಿಂದೆದೆಯಮೇಲೆ ಒದಿಸಿಕೊಂಡು, ಆ ಎದೆಯಲ್ಲಿ 'ಶ್ರೀವತ್ಸ, ವೆಂಬ ಗುರುತನ್ನು ಹೊಂದಿದನು. ರುಕ್ಮಿಣಿಯೊಡನೆ ಈ ದೂರ್ವಾಸಮುನಿಯಿಂದ ಬಂಡಿಗೆ ಕಟ್ಟಲ್ಪಟ್ಟು ಪಟ್ಟಣದಲ್ಲಿ ಸುತ್ತಿಸಲ್ಪಟ್ಟನು. ಆ ದೂರ್ವಾಸಮುನಿಯ ಉಚ್ಛಿಷ್ಟವಾದ ಪಾಯಸವನ್ನು ಪಾದವನ್ನು ಹೊರತು ಶರೀರಕ್ಕೆಲ್ಲಾ ಲೇಪನಮಾಡಿಕೊಂಡು, ವಜ್ರಕಾಯನಾದನು. ಆ ಪಾಯಸವನ್ನು ಪಾದಕ್ಕೆ ಲೇಪನಮಾಡಿಕೊಳ್ಳದೇ ಬಿಟ್ಟನಾದ್ದರಿಂದ ಬ್ಯಾಡನ ಬಾಣದಿಂದ ಘಾತವಾದ ಪಾದವುಳ್ಳವನಾಗಿ ಪ್ರಾಣವನ್ನು ಬಿಟ್ಟನು. ಮುನಿಶಾಪವನ್ನು ಹೊಂದಿ ಮುಸಲದಿಂದ ಕುಲಕ್ಷಯವನ್ನು ಹೊಂದಿದನು. ಅರ್ಜುನನಿಂದ ಶ್ರಾದ್ಧಕರ್ಮವನ್ನು ಮಾಡಿಸಿಕೊಂಡನು. ಮತ್ತು ಪರಶುರಾಮನಾಗಿದ್ದಾಗ್ಯೆ ಬ್ರಾಹ್ಮಣರು ಸಮಸ್ತ ಭೂಮಿಯನ್ನೂ ತೆಗೆದುಕೊಂಡರಾದ್ದರಿಂದ ಸಮುದ್ರದಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನು. ದಶರಥನಿಗೆ ಮಗನಾಗಿ ರಾಮನೆಂದೆನಿಸಿ

ರಾಂ ॥ ಅಬ್ಧೌ ಪತಿತ್ವಾ ಪರಶುರಾಮಸ್ಯ ಮರಣಕ್ರಮಃ ॥ ವನವಾಸವಿಧಾ ಶ್ರೀರಾ ಮಸ್ಯ ದಾಶರಥೇಸ್ತತಃ ॥ ತತ್ಪ್ರಿಯಾಯಾ ರಾವಣೇನ ಬಂದೀಕೃತವಿಧಾ ಪುನಃ ॥ ತದಾತ್ಮಜೇನೇಂದ್ರಜಿತಾ ರಚಿತೋ ಬಂಧನಕ್ರಮಃ ॥ ಕಿಂಚೋಪೇತ್ಯ ಬ್ರಹ್ಮಹತ್ಯಾಂ ವಾಲಿರಾವಣಯೋರ್ವಧಾತ್ ॥ ಧರಾಪ್ರದಕ್ಷಿಣವಿಧಾ ರಚಿತಾನೇನ ಸಂತತಂ ॥ ತ ದ್ಬ್ರಹ್ಮಹತ್ಯಾಹೃತಯೇ ಪ್ರತಿಷ್ಠಾಪ್ಯಾತಿಭಕ್ತಿತಃ ॥ ರಾಮೇಶ್ವರಂ ಮುದಾ ನಿತ್ಯಂ ಕೃತಾ ಪೂಜಾ ವಿಧಾತ್ಮನಾ ॥ ತ್ಯಕ್ತ್ವಾ ಭಾರ್ಯಾಮವಿಶ್ವಾಸಾದ್ಧಿತ್ವಾನುಜಮಪಿ ಸ್ವಯಂ ॥ ಪತಿತ್ವಾ ಸರಯೂನದ್ಯಾಂ ಸಂಪ್ರಾಪ್ತಮರಣಕ್ರಮಃ ॥ ಮತ್ಸ್ಯಾವತಾ ರಂ ಸಂಹೃತ್ಯ ತದೀಯಮತಿಗರ್ವಿತಂ ॥ ಗಂಗಾಧರೇಣ ರಚಿತಮಸ್ತಕಾವೇಷ್ಟನಕ್ರ ಮಃ ॥ ಕಿಂಚ ಕೂರ್ಮಾವತಾರಸ್ಯ ತದೀಯಸ್ಯ ಹತಸ್ಯ ಚ ॥ ಹರಹಾರಲತಾಮಧ್ಯೇ ಸದಾ ಸೇವಾವಿಧಾ ಪುನಃ ॥ ಮಹಾವರಾಹದಂಷ್ಟ್ರಾಯಾಸ್ತದೀಯಾಯಾ ವಿ ಮರ್ಶಿತಃ ॥ ಉತ್ಪಾಟಿತಾಯಾ ಗಿರಿಶಪ್ರಕೋಷ್ಠೇ ಸಂಸ್ಥಿತಕ್ರಮಃ ॥ ನೃಸಿಂಹಕೃತ್ತಿ ಮುತ್ಕೃತ್ಯ ಪರಮೇಶೇನ ಲೀಲಯಾ ॥ ತಯಾ ಕೃತ್ತ್ಯಾ ವಿರಚಿತಾ ವಸನತ್ವವಿಧಾಪಿ ಚ ॥ ತ್ರಿವಿಕ್ರಮಾವತಾರಸ್ಯ ಕಂಕಾಳಂ ತು ಮಹೀಯಸಃ ॥ ಖಟ್ವಾಂಗರೂಪತಸ್ತ್ಯಂ ಭೋರ್ಹಸ್ತೇ ಸ್ಥಿತಿವಿಧಾನಿಶಂ॥ ವಿಷ್ವಕ್ಸೇನಶರೀರಸ್ಯ ಶಿವಶೂಲಸ್ಥಿತಿಕ್ರಮಃ ॥ ಕಪಾ ಲಂ ಶಿವಹಸ್ತಸ್ಥಂ ನಿರ್ಭಿದ್ಯಾತ್ಮೀಯಮಾತ್ಮನಃ॥ ರಕ್ತಧಾರಾಭಿರಾಪೂರ್ಯ ಮೂರ್ಛನಾ

---

ದಾಗ್ಯೆ ವನವಾಸವನ್ನನುಭವಿಸಿದನು. ತನ್ನ ಹೆಂಡತಿಯನ್ನು ರಾವಣನು ಕದ್ದುಕೊಂಡುಹೋಗಿ ಸೆರೆಯಲ್ಲಿಟ್ಟನು. ಆ ರಾವಣನ ತಮ್ಮನಾದ ಇಂದ್ರಜಿತುವಿನಿಂದ ಬಂಧನವನ್ನು ಹೊಂದಿದನು ವಾಲಿಯನ್ನೂ ರಾವಣನನ್ನೂ ಕೊಂದುದರಿಂದುಂಟಾದ ಬ್ರಹ್ಮಹತ್ಯೆಯನ್ನು ಹೋಗಲಾಡಿಸಿಕೊ ಳ್ಳುವುದಕ್ಕಾಗಿ ಭೂಪ್ರದಕ್ಷಿಣೆಯನ್ನು ಮಾಡಿದನು. ಮತ್ತೂ ರಾಮೇಶ್ವರವೆಂಬ ಹೆಸರಿನಿಂದ ಲಿಂಗವನ್ನು ಪ್ರತಿಷ್ಠಿಸಿ ಭಕ್ತಿಯಿಂದ ಪೂಜಿಸಿದನು. ಅಪನಂಬಿಕೆಯಿಂದ ಮಡದಿಯನ್ನೂ ತಮ್ಮ ನಾದ ಲಕ್ಷ್ಮಣನನ್ನೂ ಬಿಟ್ಟು, ತಾನು ಸರಯೂನದಿಯಲ್ಲಿ ಬಿದ್ದು ಪ್ರಾಣಬಿಟ್ಟನು. ಮತ್ಸ್ಯಾ ವತಾರದಿಂದ ಕೊಬ್ಬಿದವನಾದುದರಿಂದ ಶಿವನಿಂದ ಸಂಹರಿಸಲ್ಪಟ್ಟವನಾಗಿ ತನ್ನ ಅವಯವಗಳಿಂದ ಶಿವನ ಮಸ್ತಕಕ್ಕೆ ಆಭರಣವಾದನು. ಮತ್ತೂ ಕೂರ್ಮಾವತಾರವನ್ನು ಹೊಂದಿದ್ದ ಸಮಯ ದಲ್ಲಿ ಶಿವನಿಂದ ಸಂಹೃತನಾಗಿ ಶಿವನ ಕಂಠಕ್ಕೆ ಆಭರಣವಾದನು. ಮಹಾವರಾಹದ ಕೋರೆ ದಾಡೆಯು ಶಿವನ ಕರಕ್ಕೆ ಆಭರಣವಾಯಿತು. ನರಸಿಂಹನ ಚರ್ಮವು ಶಿವನಿಗೆ ವಸ್ತ್ರವಾಯಿತು. ವಾಮನಾವತಾರಿಯಾದ ವಿಷ್ಣುವಿನ ಬೆನ್ನುಮೂಳೆಯನ್ನು ಶಿವನು ಖಟ್ವಾಂಗವನ್ನಾಗಿ ಕೈಯಲ್ಲಿ ಹಿಡಿದುಕೊಂಡನು. ಶಿವನಿಂದ ವಿಷ್ವಕ್ಸೇನನ ಶರೀರವು ಶೂಲದಲ್ಲಿರಿಸಲ್ಪಟ್ಟಿತು. ತನ್ನ ಹಣೆ ಯನ್ನು ಸೀಳಿ ರಕ್ತಧಾರೆಯನ್ನು ಶಿವನ ಕೈಯಲ್ಲಿದ್ದ ಬ್ರಹ್ಮಕಪಾಲವನ್ನು ತುಂಬಿ ಮೂರ್ಛೆ

ಪತನಕ್ರಮಃ || ಉರುಲಿಂಗಸ್ಯ ಚರಣಾವವಲೋಕಯಿತುಂ ಜವಾತ್ || ಪರಿಪ್ರಾಪ್ತ ವರಾಹತ್ವವಿಧಾ ಸ್ವೇನೈವ ಭೂತಲೇ || ಪ್ರತ್ಯಬ್ದಂ ಚ ಪ್ರತಿಗ್ರಾಮಂ ಕಾಮದಾಹೇ ಕೃತೇ ಸತಿ || ತದ್ವಾರಣಾಸಮರ್ಥಸ್ಯ ಕ್ಲೇಶಪ್ರಾಪ್ತಿವಿಧಾ ತಥಾ|| ಜ್ವಲಿತೇ ವ್ಯಾಸಹಸ್ತೇಽಭ್ರೇ ಲಂಬಮಾನೇ ನಿರಂತರಂ || ತದ್ರಕ್ಷಣಂ ವಿರಚಿತುಮಸಾಮರ್ಥ್ಯವಿಧಾ ತಥಾ|| ತದ್ರಕ್ಷಣಂ ವಿರಚಿತುಮಸಾಮರ್ಥ್ಯವಿಧಾ ತಥಾ|| ಅವಮಾನೈರ್ಮಹೇಶೇನ ರಚಿತೈರೇವಮಾದಿಭಿಃ || ಅಹಂಕಾರಕ್ಷಯವಿಧಾ ವಿಷ್ಣೋರಸ್ಮಿನ್ಮಹೀತಲೇ|| ವಾರಾಣಸ್ಯಾಂ ಚ ವಿಶ್ವೇಶಂ ಪ್ರತಿಷ್ಠಾಪ್ಯ ಸ್ವನಾಮತಃ ||ಕ್ರಿಯಮಾಣಾ ಚ ಸದ್ಭಕ್ತ್ಯಾ ಮಹೇಶಸ್ಯಾರ್ಚನಾ ವಿಧಾ|| ಇಂದ್ರನೀಲಮಯಂ ಲಿಂಗಂ ಭಕ್ತ್ಯಾ ಪರಮಯಾ ಸಹ|| ಸಜ್ಜಿಕಾಯಾಂ ವಿನಿಕ್ಷಿಪ್ಯ ತಸ್ಯಮಾನಾರ್ಚನಾವಿಧಾ || ಕಿಂ ಸಹಸ್ರೇಣ ವಚಸಾ ಶಿವಭಕ್ತೇನ ವಿಷ್ಣುನಾ || ಸರ್ವೇಶ್ವರಸ್ಯ ಸದ್ಭಕ್ತ್ಯಾ ರಚಿತಾ ಭಜನಾವಿಧಾ || ನಿಗ್ರಹಾನುಗ್ರಹವತಾ ಶಂಕರೇಣೈವ ಶಾರ್ಙ್ಗಿಣಃ|| ಪ್ರಾಪ್ತಭಂಗಸ್ಯಾಪಗತಗರ್ವಸ್ಯ ಪರಮೇಶ್ವರೇ || ಸದ್ಭಕ್ತ್ಯಾ ಸಾಂಗಯಾ ಜಾತದಿವ್ಯಶೋಭಾವಿಧಾಪಿ ಚ || ಮಹಿಮ್ನಃ ಪರಮೇಶಸ್ಯ ವಿಷ್ಣೋರ್ಹೀನಸ್ಥಿತೇರಪಿ|| ಅಯಮೇವ ಹಿ ದೃಷ್ಟಾಂತೋ ನ ಕಿಂ ಸಮ್ಯಗ್ವಿಚಾರತಃ ,, ಇತ್ಯಾದಿಸಕಲಪುರಾಣೇತಿಹಾಸಸಂಗ್ರಹವಾಕ್ಯೈರ್ಹರಿಪರಾಭವಶ್ಚಿ

---

ಹೊಂದಿ ಬಿದ್ದನು. ಮಹಾಲಿಂಗದ ಪಾದವನ್ನು ನೋಡುವುದಕ್ಕಾಗಿ ಹಂದಿಯಾಗಿ ಭೂಮಿಯನ್ನು ಕೊರೆದು ಹೋದನು. ಶಿವನಿಂದ ಕಾಮದಹನವಾದುದನ್ನು ಪ್ರತಿಯೊಂದು ಗ್ರಾಮದಲ್ಲೂ ಪ್ರತಿವರ್ಷದಲ್ಲೂ ಆಚರಿಸುತ್ತಿರುವುದನ್ನು ನಿಲ್ಲಿಸಲಾರದೆ ಕ್ಲೇಶವನ್ನನುಭವಿಸಿದನು. ವ್ಯಾಸಮಹರ್ಷಿಯ ತೋಳು ಆಕಾಶದಲ್ಲಿ ನೇತಾಡುತ್ತಿದ್ದುದನ್ನು ತಪ್ಪಿಸಲಶಕ್ತನಾದನು. ಶಿವನಿಂದ ಮಾಡಲ್ಪಟ್ಟ ಇವು ಮೊದಲಾದ ಅಪಮಾನಗಳಿಂದ ವಿಷ್ಣುವಿನ ಗರ್ವವು ನಾಶಮಾಡಲ್ಪಟ್ಟಿತು. ವಿಷ್ಣುವು ಭಕ್ತಿಯಿಂದ ಕಾಶೀನಗರದಲ್ಲಿ ವಿಶ್ವೇಶ್ವರಲಿಂಗವನ್ನು ಪ್ರತಿಷ್ಠಿಸಿ ಪೂಜಿಸಿದನು. ಅತಿಶಯ ಶಿವಭಕ್ತಿಯಿಂದ ಇಂದ್ರನೀಲ ರತ್ನವಿಕಾರವಾದ ಶಿವಲಿಂಗವನ್ನು ಯಾವಾಗಲೂ ಧಾರಣೆಮಾಡಿಕೊಂಡು ಕರಡಿಗೆಯಲ್ಲಿಟ್ಟು ಪೂಜಿಸುತ್ತಾನೆ. ಬಹುಮಾತುಗಳಿಂದೇನು. ಶಿವಭಕ್ತನಾದ ವಿಷ್ಣುವು ವಿಶ್ವೇಶ್ವರನಾದ ಶಿವನ ಸೇವೆಯನ್ನು ಭಕ್ತಿಯಿಂದ ಮಾಡಿದನು. ನಿಗ್ರಹಾನುಗ್ರಹಶಕ್ತನಾದ ಶಿವನಿಂದಲೇ ಪರಾಜಯವನ್ನು ಹೊಂದಿದವನೂ, ನಾಶಮಾಡಲ್ಪಟ್ಟ ಗರ್ವವುಳ್ಳವನೂ ಆದ ವಿಷ್ಣುವಿಗೆ ಶಿವನ ವಿಷಯದಲ್ಲಿ ಶ್ರವಣ ಕೀರ್ತನ ಮೊದಲಾದ ಸಾಂಗಭಕ್ತಿಯುಂಟಾಗಿ ಅದರಿಂದಲೇ ಅವನಿಗೆ ಶೈವತೇಜಸ್ಸುಂಟಾಯಿತು. ಚೆನ್ನಾಗಿ ವಿಚಾರಮಾಡಿದರೆ ಶಿವನ ಮಹಿಮೆಗೂ, ವಿಷ್ಣುವಿನ ಹೀನತೆಗೂ ಇದೇ ದೃಷ್ಟಾಂತವು ಸಾಕಾಗಿರುತ್ತದೆ. ಬೇರೊಂದು ದೃಷ್ಟಾಂತವು ಬೇಕಾಗಿರುವುದಿಲ್ಲವು,, ಇವು ಮೊದಲಾದ ಸಕಲ ಪುರಾಣೇತಿಹಾಸಗಳ ಸಂಗ್ರಹ

ಪ್ರೋತ್ಕರ್ಷಶ್ಚ ಸಾರಾಸಾರವಿಚಾರತತ್ಪರೈರ್ವಿದ್ವದ್ಭಿರ್ವಿಜ್ಞೇಯಃ.

ಇತಿ ಹರೇರಾಚಾರಧಿಕ್ಕಾರನಿರ್ಣಯೋ ದ್ವಾದಶೋಪದೇಶೇ ದ್ವಿತೀಯಸ್ಸಂವಾದಃ.



ಶ್ರೀಃ.

## ಊರ್ಧ್ವಪುಂಡ್ರನಿರಸನನಿರ್ಣಯಃ.

ರೇ-ಭೋ ವಿಜಯೇಂದ್ರಚೋಳ ! ಊರ್ಧ್ವಪುಂಡ್ರನಿರಸನವಿಧಿಶ್ಶ್ರೂಯತಾಂ;
ಪರಾಶರಪುರಾಣೇ –"ಊರ್ಧ್ವಪುಂಡ್ರಂ ತ್ರಿಶೂಲಂ ಚ ವರ್ತುಲಂ ಚಾರ್ಧಚಂದ್ರಕಂ॥
ತಂತ್ರನಿಷ್ಠೈರ್ನಧಾರ್ಯಂ ಚ ನ ಧಾರ್ಯಂ ವೈದಿಕೈರ್ಜನೈಃ" ಸೂತಸಂಹಿತಾಯಾಂ –
ಅಶ್ರೌತಂ ಚೋರ್ಧ್ವಪುಂಡ್ರಾದಿ ಲಲಾಟೇ ಶ್ರದ್ಧಯಾನ್ವಿತಾಃ॥ ಧಾರಯಿಷ್ಯಂತಿ ಮೋ
ಹೇನ ಪಾಷಂಡೋಪಹತಾ ಜನಾಃ ॥ ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾಲ್ಲೀಲಯಾಪಿ
ಕದಾಚನ ॥ ತದಾಕಾರೇಣ ಶಸ್ತ್ರೇಣ ಪೀಡ್ಯತೇ ಯಮಕಿಂಕರೈಃ" ಬೃಹನ್ನಾರ
ದೀಯೇ,–"ಊರ್ಧ್ವಪುಂಡ್ರಂ ತ್ರಿಶೂಲಂ ಚ ಶ್ರದ್ಧಯಾ ಶ್ರುತ್ಯಚೋದಿತಂ ॥ ಲ
ಲಾಟೇ ಧಾರಯಿಷ್ಯಂತಿ ಮನುಷ್ಯಾಃ ಪಾಪಕರ್ಮಿಣಃ" ಆದಿತ್ಯಪುರಾಣೇ,–"ವೇ.

---

ವಾಕ್ಯಗಳಿಂದ ವಿಷ್ಣು ಪರಾಭವವನ್ನೂ ಶಿವೋತ್ಕರ್ಷವನ್ನೂ ಸಾರಾಸಾರವಿಚಾರಾಸಕ್ತರಾದ
ವಿದ್ವಾಂಸರು ತಿಳಿಯತಕ್ಕದ್ದು.

ಎಂಬಲ್ಲಿಗೆ ವಿಷ್ಣುವಿನ ಆಚಾರಧಿಕ್ಕಾರನಿರ್ಣಯವನ್ನು ಹೇಳುವ ಹನ್ನೆರಡನೆಯ
ಉಪದೇಶದಲ್ಲಿ ಎರಡನೆಯ ಸಂವಾದವು ಮುಗಿದುದು.



## ಊರ್ಧ್ವಪುಂಡ್ರನಿರಸನನಿರ್ಣಯವು.

ರೇ – ಎಲೈ ವಿಜಯೇಂದ್ರಚೋಳನೇ ! ಊರ್ಧ್ವಪುಂಡ್ರನಿರಸನವಿಧಾನವನ್ನು ಕೇಳು;
ಪರಾಶರಪುರಾಣದಲ್ಲಿ –"ಊರ್ಧ್ವಪುಂಡ್ರಗಳೂ, ತ್ರಿಶೂಲವೂ, ಬೊಟ್ಟೂ, ಅರ್ಧಚಂದ್ರಾಕಾರ
ವಾದ ಗೆರೆಯೂ ತಾಂತ್ರಿಕರಿಂದಲೂ, ವೈದಿಕರಿಂದಲೂ ಧರಿಸಲ್ಪಡಲಾಗದು," ಸೂತಸಂಹಿತೆಯ
ಲ್ಲಿ –"ವೇದಾಗಮಗಳಲ್ಲಿ ಹೇಳಲ್ಪಟ್ಟಿರುವ ಧರ್ಮಗಳನ್ನು ಖಂಡಿಸತಕ್ಕವರಾದ್ದರಿಂದ ತಿರಸ್ಕೃ
ತರಾದ ಜನರು ಅಜ್ಞಾನದಿಂದ ವೇದೋಕ್ತಗಳಲ್ಲದಿರುವ ಊರ್ಧ್ವಪುಂಡ್ರ ಮೊದಲಾದವುಗಳನ್ನು
ವಿಶ್ವಾಸದಿಂದ ಹಣೆಯಲ್ಲಿ ಧರಿಸುತ್ತಾರೆ. ಬ್ರಾಹ್ಮಣನು ಊರ್ಧ್ವಪುಂಡ್ರ ಮೊದಲಾದವುಗಳನ್ನು
ವಿಲಾಸಕ್ಕಾದರೂ ಯಾವಾಗಲೂ ಧರಿಸಬಾರದು. ಧರಿಸಿದರೆ ಆಯಾಯ ಆಕಾರವುಳ್ಳ ಆಯುಧಗ
ಳಿಂದ ಯಮದೂತರಿಂದ ಹಿಂಸಿಸಲ್ಪಡುವರು," ಬೃಹನ್ನಾರದೀಯದಲ್ಲಿ "ಪಾಪಿಗಳಾದ ಮನು
ಷ್ಯರು ಶ್ರುತಿವಿಹಿತವಲ್ಲದ ಊರ್ಧ್ವಪುಂಡ್ರಗಳನ್ನೂ ತ್ರಿಶೂಲವನ್ನೂ ಶ್ರದ್ಧೆಯಿಂದ ಹಣೆಯಲ್ಲಿ
ಧರಿಸುತ್ತಾರೆ," ಆದಿತ್ಯಪುರಾಣದಲ್ಲಿ –"ಪಾಪಿಗಳಾದ ಮನುಷ್ಯರು ಅಜ್ಞಾನಿಗಳಾಗಿ ವೇದ

ದಸಿದ್ಧೇನ ಮಂತ್ರೇಣ ತ್ರಿಪುಂಡ್ರಂ ಭಸ್ಮಕುಂಠನಂ|| ನೈವ ಕುರ್ವಂತಿ ಮೋಹೇನ ಮನುಷ್ಯಾಃ ಪಾಪಕರ್ಮಿಣಃ '' ಗಾರುಡಪುರಾಣೇ,—'' ಗೋಪೀಮಲಿನಧಾರೀ ತು ಶಿವಂ ಸ್ಪೃಶತಿ ಯೋ ದ್ವಿಜಃ || ಸತ್ವೇಕವಿಂಶತಿಕುಲಂ ಪ್ರಾಪಯೇನ್ನರಕಂ ವ್ರಜೇತ್ '' ಮನುಸ್ಮೃತೌ,—'' ಸೋರ್ಧ್ವಪುಂಡ್ರಂ ಮುಖಂ ದೃಷ್ಟ್ವಾ ವ್ರತಂ ಚಾಂದ್ರಾಯಣಂ ಚರೇತ್ '' ಇತ್ಯಾದಿಪ್ರತಿಷೇಧಮುಖೇನ ಭಸ್ಮಧಾರಣಂ ಕರಣೀಯಮಿತಿ ಪ್ರಸಿದ್ಧಂ. ವಿಸ್ತರೇಣಾಲಂ.

ಇತ್ಯೂರ್ಧ್ವಪುಂಡ್ರನಿರಸನನಿರ್ಣಯೋ ದ್ವಾದಶೋಪದೇಶೇ ತೃತೀಯಸ್ಸಂವಾದಃ



ಶ್ರೀಃ.

## ಶಂಖಚಕ್ರಮುದ್ರಾಧಾರಣನಿಷೇಧನಿರ್ಣಯಃ.

ರೇ—ಹೇ ಚೋಳ! ಶಂಖಚಕ್ರಮುದ್ರಾಧಾರಣನಿಷೇಧಃ ಶ್ರೂಯತಾಂ, ಮಾನವಪುರಾಣೇ,—'' ಆಯುಧೈಶ್ಶಂಖಚಕ್ರಾದ್ಯೈರ್ನದಹೇಚ್ಚ ಕದಾಚನ || ಮನುಷ್ಯಾಣಾಂ ಶರೀರಾಣಿ ನ ಲಿಖೇಚ್ಚೋರಸಿ ಭ್ರಮಾತ್ || ದಗ್ಧಾಂಗಶ್ಚಾಯುಧೈ

---

ಮಂತ್ರಗಳಿಂದ ಭಸ್ಮತ್ರಿಪುಂಡ್ರಗಳನ್ನು ಧರಿಸುವುದಿಲ್ಲವು. ಭಸ್ಮಸ್ನಾನಾದಿಗಳನ್ನಾಚರಿಸುವುದಿಲ್ಲವು,, ಗಾರುಡಪುರಾಣದಲ್ಲಿ — ''ಯಾವ ದ್ವಿಜನು ಗೋಪಿಯನ್ನೂ ದೀಪದ ಕಪ್ಪನ್ನೂ ಧರಿಸಿದವನಾಗಿ ಶಿವನನ್ನು ಮುಟ್ಟುವನೋ ಆತನು ತನ್ನ ಇಪ್ಪತ್ತೊಂದು ಕುಲವನ್ನು ನರಕವನ್ನೈದಿಸುವನು. ತಾನೂ ನರಕವನ್ನು ಹೊಂದುವನು,, ಮನುಸ್ಮೃತಿಯಲ್ಲಿ — ''ಊರ್ಧ್ವಪುಂಡ್ರಗಳಿಂದ ಕೂಡಿದ ಮೋರೆಯನ್ನು ನೋಡಿದರೆ ಚಾಂದ್ರಾಯಣವ್ರತವನ್ನಾಚರಿಸಬೇಕು,, ಇತ್ಯಾದಿಯಾದ ಊರ್ಧ್ವಪುಂಡ್ರಾದಿಧಾರಣಪ್ರತಿಷೇಧಕವಚನಮುಖದಿಂದ ಭಸ್ಮಧಾರಣೆಯು ಅವಶ್ಯಕರ್ತವ್ಯವೆಂಬಂಶವು ಪ್ರಸಿದ್ಧವಾಗಿದೆ. ವಿಸ್ತಾರದಿಂದ ಸಾಕು.

ಎಂಬಲ್ಲಿಗೆ ಊರ್ಧ್ವಪುಂಡ್ರನಿರಸನನಿರ್ಣಯವನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಮೂರನೆಯ ಸಂವಾದವು ಮುಗಿದುದು.



### ಶಂಖಚಕ್ರಮುದ್ರಾಧಾರಣನಿಷೇಧನಿರ್ಣಯವು.

ರೇ—ಎಲೈ ಚೋಳನೇ! ಶಂಖಚಕ್ರಮುದ್ರಾಧಾರಣನಿಷೇಧವನ್ನು ಕೇಳು; ಮಾನವಪುರಾಣದಲ್ಲಿ — ''ಮನುಷ್ಯರ ದೇಹಗಳನ್ನು ಯಾವಾಗಲೂ ಶಂಖಚಕ್ರ ಮೊದಲಾದ ಆಯುಧಗಳಿಂದ ಸುಡಕೂಡದು. ಮನುಷ್ಯರ ಎದೆಯಲ್ಲಿ ಶಂಖಚಕ್ರಾದ್ಯಾಯುಧಗಳಿಂದ ಯಾವಾಗಲೂ ಭ್ರಮೆಯಿಂದಾದರೂ ಬರೆಯಲಾಗದು. ದೇವತೆಗಳ ಆಯುಧಗಳಾದ ಶಂಖಚಕ್ರಾದಿಗಳಿಂದ [illegible]

ರ್ವೈರ್ಲಿಖಿತೋರಸಿ ಮಾನವಃ ‖ ಶ್ರೌತಸ್ಮಾರ್ತಸದಾಚಾರೇ ನಾಧಿಕಾರೀ ಕದಾ ಚನ ‖ ದಗ್ಧಾಂಗಾ ಲಿಖಿತಾಂಗಾಶ್ಚ ನ ಸಂಭಾಷ್ಯಾಃ ದ್ವಿಜಾತಯಃ ‖ ನ ದರ್ಶನೀಯಾಸ್ತಾಸ್ತ್ರ ರಾಜಾ ದೇಶಾಚ್ಛೀಘ್ರಂ ಪ್ರವಾಸಯೇತ್ '' ಸೂತಸಂಹಿತಾಯಾಂ,— „ಸ್ವದೇಹೇ ಪರದೇಹೇ ವಾ ನ ಕುರ್ಯಾದಂಕನಂ ನರಃ ‖ ಯದಿ ಕುರ್ಯಾಚ್ಚ ಚಕ್ರಾದ್ಯೈಃ ಪತತ್ಯೇವ ನ ಸಂಶಯಃ '' ಬೋಧಾಯನಸ್ಮೃತೌ,— „ನಾಂಕಯೇನ್ನದಹೇದ್ದೇಹಂ ದಹೇಚ್ಚೇತ್ಕಾಮಕಾರತಃ ‖ ನಾಧಿಕುರ್ವಂತಿ ದಗ್ಧಾಂಗಾಶ್ಶ್ರೌತಸ್ಮಾರ್ತೇಷು ಕರ್ಮಸು '' ಶಾತಾತಪಸ್ಮೃತೌ,— „ಅಂಗೇಷು ನಾಂಕಯೇದ್ವಿಪ್ರೋ ದೇವತಾಯುಧಲಾಂಛನೈಃ ‖ದಹನಾಲ್ಲೇಖನಾದ್ವಿಪ್ರಃ ಪಾತಿತ್ಯಂ ಯಾತಿ ತತ್ಕ್ಷಣಾತ್'' ತತ್ರೈವ „ ಅಂಗೇಷು ನಾಂಕಯೇದ್ವಿಪ್ರೋ ದೇವತಾಯುಧಲಾಂಛನೈಃ ‖ ಅಂಕಯೇದ್ಯದಿ ಮೋಹಾದ್ವೈ ಪತತ್ಯೇವ ನ ಸಂಶಯಃ'' ಯಮಸ್ಮೃತೌ,— „ನಾಂಕಯೇನ್ನದಹೇದ್ಗಾತ್ರಂ ದೇವತಾಯುಧಲಾಂಛನೈಃ ‖ ದಹನಾಲ್ಲೇಖನಾದ್ವಿಪ್ರಃ ಪಾತಿತ್ಯಂ ಯಾತಿ ತತ್ಕ್ಷಣಾತ್ '' ಇತ್ಯಾದಿಭಿರ್ವೇದಾರ್ಥಪ್ರಕಾಶಕಪುರಾಣಸ್ಮೃತಿವಾಕ್ಯೈಶ್ಶಂಖಚಕ್ರಮುದ್ರಾದಿಧಾರಣನಿಷೇಧಃ ಪ್ರತಿಪಾದಿತಃ, ಅತಏವ ಶಿವಲಿಂಗಧಾರಣಂ ಚಾವಶ್ಯಂ ಕರಣೀಯಮಿತಿ ಪ್ರಸಿದ್ಧಂ. ವಿಸ್ತರೇಣಾಲಂ.

---

ಯಲ್ಲಿ ಸುಡಲ್ಪಟ್ಟ ಮಾನವನು ವೈದಿಕಾಚಾರಗಳಲ್ಲೂ ಸ್ಮಾರ್ತಾಚಾರಗಳಲ್ಲೂ ಯಾವಾಗಲೂ ಅಧಿಕಾರಿಯಲ್ಲವು. ಶಂಖಚಕ್ರಾದಿಗಳಿಂದ ಸುಡಲ್ಪಟ್ಟ ಅಂಗಗಳುಳ್ಳವರೂ, ಬರೆಯಲ್ಪಟ್ಟ ಅಂಗಗಳುಳ್ಳವರೂ ಆದ ದ್ವಿಜರು ಸಂಭಾಷಣೆಗೆ ಯೋಗ್ಯರಲ್ಲವು. ಮತ್ತೂ ನೋಡಲ್ಪಡಲಿಕ್ಕೆ ಯೋಗ್ಯರೂ ಅಲ್ಲವು. ಅವರನ್ನು ಅವರ ದೊರೆಯು ತನ್ನ ದೇಶದಿಂದ ಜಾಗ್ರತೆಯಾಗಿ ಹೊರಡಿಸಬೇಕು,, ಸೂತಸಂಹಿತೆಯಲ್ಲಿ — „ಮಾನವನು ಚಕ್ರಾದ್ಯಾಯುಧಗಳಿಂದ ತನ್ನ ದೇಹದಲ್ಲಾದರೂ ಅನ್ಯರ ದೇಹದಲ್ಲಾದರೂ ಗುರುತನ್ನು ಮಾಡಲಾಗದು. ಮಾಡಿದರೆ ಪತಿತನಾಗುವನು, ಸಂದೇಹವಿಲ್ಲವು,, ಬೋಧಾಯನಸ್ಮೃತಿಯಲ್ಲಿ — „ಯಾವನೂ ದ್ರವ್ಯಾಸೆಯಿಂದ ತನ್ನ ದೇಹವನ್ನಾಗಲಿ ಅನ್ಯರ ದೇಹವನ್ನಾಗಲಿ ಶಂಖಚಕ್ರಾದಿಗಳಿಂದ ಗುರುತನ್ನು ಮಾಡಲಾಗದು ಆಯುಧಗಳಿಂದ ಸುಡಲ್ಪಟ್ಟ ಶರೀರವುಳ್ಳವನು ಶ್ರೌತಸ್ಮಾರ್ತಕರ್ಮಗಳಲ್ಲಿ ಅಧಿಕಾರಿಗಳಾಗರು,, ಶಾತಾತಪಸ್ಮೃತಿಯಲ್ಲಿ — „ವಿಪ್ರನು ಅಂಗಗಳಲ್ಲಿ ದೇವತಾಯುಧಗಳಿಂದ ಗುರುತುಗಳನ್ನು ಮಾಡಲಾಗದು. ಸುಟ್ಟರೆ ಬರೆದರೆ ಆ ಕ್ಷಣದಲ್ಲೇ ಪಾಪಿಯಾಗುವನು,, ಆ ಸ್ಮೃತಿಯಲ್ಲಿಯೇ — „ಬ್ರಾಹ್ಮಣನು ಅಜ್ಞಾನದಿಂದ ಅಂಗಗಳಲ್ಲಿ ದೇವತಾಯುಧಗಳಿಂದ ಗುರುತನ್ನು ಮಾಡಿದರೆ ದುರ್ಗತಿಯನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲವು,, ಇತ್ಯಾದಿಗಳಾದ ವೇದಾರ್ಥಗಳನ್ನು ಪ್ರಕಾಶಪಡಿಸುವ ಪುರಾಣ ಸ್ಮೃತಿವಾಕ್ಯಗಳಿಂದ ಶಂಖಚಕ್ರಮುದ್ರಾದಿಧಾರಣನಿಷೇಧವು ಪ್ರತಿಪಾದಿಸಲ್ಪಟ್ಟಿತು. ಈ ಕಾರಣದಿಂದಲೇ ಶಿವಲಿಂಗಧಾರಣವು ಅವಶ್ಯಕರಣೀಯವೆಂದು ಪ್ರಸಿದ್ಧವಾಗಿದೆ. ವಿಸ್ತಾರದಿಂದ ಸಾಕು.

ಇತಿ ಶಂಖಚಕ್ರಮುದ್ರಾಧಾರಣನಿಷೇಧನಿರ್ಣಯೋ ದ್ವಾದಶೋಪದೇಶೇ ಚತುರ್ಥಸ್ಸಂವಾದಃ.

## ಪ್ರದೋಷಕಾಲೇ ಹರಿದರ್ಶನಾದಿನಿಷೇಧಪೂರ್ವಕಂ ಶಿವಲಿಂಗದರ್ಶನಾದಿನಿರ್ಣಯವಿಧಿಃ.

ರೇ—ಹೇ ಚೋಳ! ಪ್ರದೋಷಕಾಲೇ ಹರಿದರ್ಶನನಿಷೇಧಃ ಶ್ರೂಯತಾಂ, ಲೈಂಗೇ,—"ನ ಪ್ರದೋಷೇ ಹರಿಂ ಪಶ್ಯೇದ್ಯದಿ ಪಶ್ಯೇತ್ಪ್ರಮಾದತಃ ‖ ದ್ವಾದಶಾಬ್ದಕೃತಂ ಪುಣ್ಯಂ ತತ್ಕ್ಷಣಾದೇವ ನಶ್ಯತಿ ‖ ಹರಿಂ ಪ್ರದೋಷೇ ನೇಕ್ಷೇತ ಭೃಗುಪತ್ನೀಶಿರೋಹರಂ ‖ಪ್ರಮಾದಾದ್ಯದಿ ವೀಕ್ಷೇತ ದ್ವಾದಶಾಬ್ದವೃಷಕ್ಷಯಃ" ಇತ್ಯಾದಿಭಿಃ ಪ್ರದೋಷೇ ಹರಿದರ್ಶನನಿಷೇಧೋ ವಿಜ್ಞೇಯಃ.

ಹೇ ಚೋಳ! ಪ್ರದೋಷೇ ಶಿವದರ್ಶನವಿಧಿಃ ಶ್ರೂಯತಾಂ, ಲೈಂಗೇ,—"ಯಾನಿ ಪುಣ್ಯಾನಿ ತೀರ್ಥಾನಿ ಸಮುದ್ರಾಂತಾನಿ ತಾನಿ ತು ‖ ಅಂಡಮಾಶ್ರಿತ್ಯ ತಿಷ್ಠಂತಿ ಪ್ರದೋಷೇ ತು ವೃಷಸ್ಯ ವೈ ‖ ತಸ್ಮಾದ್ವೃಷಸ್ಯ ವೃಷಣಂ ಸ್ಪೃಷ್ಟ್ವಾ ಶಂಕರಸ್ಯಾ

---

ಎಂಬಿಲ್ಲಿಗೆ ಶಂಖಚಕ್ರಮುದ್ರಾಧಾರಣನಿಷೇಧನಿರ್ಣಯವನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ನಾಲ್ಕನೆಯ ಸಂವಾದವು ಮುಗಿದುದು.

## ಪ್ರದೋಷಕಾಲದಲ್ಲಿ ವಿಷ್ಣುದರ್ಶನಾದಿ ನಿಷೇಧಪೂರ್ವಕ ಶಿವಲಿಂಗದರ್ಶನಾದಿ ನಿರ್ಣಯವಿಧಿಯು.

ರೇ—ಎಲೈ ಚೋಳನೇ! ಪ್ರದೋಷಕಾಲದಲ್ಲಿ ವಿಷ್ಣುದರ್ಶನ ನಿಷೇಧವನ್ನು ಕೇಳು; ಲಿಂಗಪುರಾಣದಲ್ಲಿ—"ಪ್ರದೋಷಸಮಯದಲ್ಲಿ ವಿಷ್ಣುವನ್ನು ನೋಡಬಾರದು. ಪ್ರಮಾದದಿಂದ ನೋಡಿದರೆ ಹನ್ನೆರಡುವರ್ಷಗಳಿಂದ ಸಂಪಾದಿಸಲ್ಪಟ್ಟದ್ದ ಪುಣ್ಯವು ಆಗಲೇ ನಾಶವನ್ನು ಹೊಂದುವುದು. ಭೃಗುಮುನಿಯ ಮಡದಿಯ ತಲೆಯನ್ನು ಕತ್ತರಿಸಿದ ವಿಷ್ಣುವನ್ನು ಪ್ರದೋಷಸಮಯದಲ್ಲಿ ನೋಡಬಾರದು. ಪ್ರಮಾದದಿಂದ ನೋಡಿದರೆ ಹನ್ನೆರಡು ವರ್ಷಗಳಿಂದ ಸಂಪಾದಿಸಲ್ಪಟ್ಟ ಪುಣ್ಯವು ನಾಶವಾಗುವುದು. ಇವು ಮೊದಲಾದ ಪ್ರಮಾಣವಾಕ್ಯಗಳಿಂದ ಪ್ರದೋಷಸಮಯದಲ್ಲಿ ವಿಷ್ಣುದರ್ಶನನಿಷೇಧವು ಉಕ್ತವಾಗಿರುವುದನ್ನು ತಿಳಿಯುವನಾಗು.

ಎಲೆ ಚೋಳನೇ! ಪ್ರದೋಷಸಮಯದಲ್ಲಿ ಶಿವದರ್ಶನವಿಧಿಯನ್ನು ಕೇಳು; ಲಿಂಗಪುರಾಣದಲ್ಲಿ—"ಸಮುದ್ರವೇ ಕಡೆಯಾಗುಳ್ಳ ಪುಣ್ಯತೀರ್ಥಗಳೆಲ್ಲವೂ ಪ್ರದೋಷಕಾಲದಲ್ಲಿ ವೃಷಭನ ಅಂಡವನ್ನಾಶ್ರಯಿಸಿರುವುದರಿಂದ ವೃಷಭನ ವೃಷಣವನ್ನು ಮುಟ್ಟಿ ಬಳಿಕ ಶಿವನನ್ನು ದರ್ಶನ ಮಾ

ವರೋಕನಾತ್ ॥ ಸಪ್ತಜನ್ಮಕೃತಂ ಪಾಪಂ ಭಸ್ಮೀಭವತಿ ತತ್ಕ್ಷಣಾತ್ " ಭೋ ಚೋಳ! ಶನಿಪ್ರದೋಷೇ ಶಿವಲಿಂಗದರ್ಶನಫಲಂ ಶ್ರೂಯತಾಂ, ಸ್ಕಾಂದೇ ವೈಷ್ಣವೀಯಸಂಹಿತಾಯಾಂ ಬ್ರಹ್ಮೋತ್ತರಖಂಡೇ,—" ಮಂದವಾರೇ ಪ್ರದೋಷೋಯಂ ದುರ್ಲಭಸ್ಸರ್ವದೇಹಿನಾಂ ॥ ತತ್ರಾಪಿ ದುರ್ಲಭತರಃ ಕೃಷ್ಣಪಕ್ಷೇ ಸಮಾಗತೇ ॥ ಏಷ ಗೋಪಸುತೋ ದೃಷ್ಟ್ವಾ ಪ್ರದೋಷೇ ಮಂದವಾಸರೇ ॥ ಅಮಂತ್ರೇಣಾಪಿ ಸಂಪೂಜ್ಯ ಶಿವಂ ಶಿವಮವಾಪ್ತವಾನ್ " ಇತಿ ವಿಧಿರಿಯಂ ಕಥಾ ಬಹುಪ್ರಸಿದ್ಧಾ. ವಿಷ್ಣುಪುರಾಣೇ,—ವಿಷ್ಣುವಾಕ್ಯಂ, " ಅಹ್ನೋಂಽತ್ಯಾಂಶೇನ ಯುಕ್ತಂ ಪ್ರಥಮಪರಿಗತಂ ಯಾಮಿನೀ ಯಾಮಮೇಕಂ ಮುಖ್ಯಂ ಪ್ರಾಹುಃ ಪ್ರದೋಷಂ ಸ್ಮರತಿಥಿಸಮಯೇ ಮಂದವಾರೇಂತ್ಯಪಕ್ಷೇ ॥ ಅಭ್ಯಂಗಂ ವಿಪ್ರಮಿತ್ರಕ್ಷಿತಿಪಸುನಯನಾಲೋಕನಂ ಭಾಷಣಂ ಚ ವಿಷ್ಣೋಃ ಪೂಜಾಂ ಚ ಹಿತ್ವಾ ಪರಿಣತಮನಸಾ ಪೂಜಯೇತ್ಪಾರ್ವತೀಶಂ" ಇತಿ. ಹೇ ಚೋಳ! ಅಪಿಚ ಸೋಮವಾರಪ್ರದೋಷೇ ಸೋಮವಾರಾಮಾವಾಸ್ಯಾಯಾಂ ಚ ಶಿವಲಿಂಗದರ್ಶನಪೂಜಾಫಲಂ ಶ್ರೂಯತಾಂ, ಸ್ಕಾಂದೇ ಬ್ರಹ್ಮೋತ್ತರಖಂಡೇ,—" ಶಿವಪೂಜಾ ಸದಾ ಕಾರ್ಯಾ ಹೇತುಸ್ಸ್ವರ್ಗಾಪವರ್ಗಯೋಃ ॥ ಸೋಮವಾ

---

ದುವುದರಿಂದ ಏಳುಜನ್ಮಗಳಲ್ಲಿ ಮಾಡಲ್ಪಟ್ಟ ಪಾಪವೆಲ್ಲವೂ ಆ ಕ್ಷಣದಲ್ಲೇ ನಾಶವಾಗುವುದು. ಎಲೈ ಚೋಳನೇ! ಶನಿಪ್ರದೋಷದಲ್ಲಿ ಶಿವಲಿಂಗದರ್ಶನಫಲವನ್ನು ಕೇಳು; ಸ್ಕಾಂದಪುರಾಣದಲ್ಲಿ ವೈಷ್ಣವೀಯಸಂಹಿತೆಯಲ್ಲಿರುವ ಬ್ರಹ್ಮೋತ್ತರಖಂಡದಲ್ಲಿ—"ಶನಿಪ್ರದೋಷವುಂಟಾಗತಕ್ಕುದು ಕಷ್ಟವು. ಕೃಷ್ಣಪಕ್ಷದಲ್ಲಿ ಶನಿಪ್ರದೋಷವುಂಟಾಗುವುದಾದರೋ ಅತಿ ದುರ್ಲಭವು. ಈ ಗೋಪಾಲಕರ ಮಗನಾದ ಕೃಷ್ಣನು ಕೃಷ್ಣಪಕ್ಷದಲ್ಲುಂಟಾದ ಶನಿಪ್ರದೋಷಸಮಯದಲ್ಲಿ ಶಿವಲಿಂಗವನ್ನು ನೋಡಿ, ಆಕ್ಷಣದಲ್ಲೇ ಮಂತ್ರಕಲಾಪವಿಲ್ಲದೆ ಆ ಶಿವಲಿಂಗವನ್ನು ಪೂಜಿಸಿ ಮಂಗಳವನ್ನು ಪಡೆದನು,, ಇತ್ಯಾದಿ ವಚನಗಳಿಂದ ಈ ಕಥೆಯು ಬಹು ಪ್ರಸಿದ್ಧವಾಗಿದೆ. ವಿಷ್ಣುಪುರಾಣದಲ್ಲಿ—"ರಾತ್ರಿಯ ಮೊದಲನೆಯ ಯಾಮವನ್ನು ಅಂದರೆ ಸಾಯಂಕಾಲವನ್ನೇ ಮುಖ್ಯವಾಗಿ ಪ್ರದೋಷವನ್ನಾಗಿ ಹೇಳುವರಾದ್ದರಿಂದ ಕೃಷ್ಣಪಕ್ಷ ಶನಿಪ್ರದೋಷದಲ್ಲಿ ಅಭ್ಯಂಜನ, ಬ್ರಾಹ್ಮಣರೊಡನೆಯೂ ಮಿತ್ರರೊಡನೆಯೂ ರಾಜನೊಡನೆಯೂ ಪತ್ನಿಯೊಡನೆಯೂ ಸಲ್ಲಾಪ, ವಿಷ್ಣುವಾದ ನನ್ನ ಪೂಜೆ ಇವುಗಳನ್ನು ಬಿಟ್ಟು ಶುದ್ಧವಾದ ಮನಸ್ಸಿನಿಂದ ಪಾರ್ವತೀಪತಿಯಾದ ಶಿವನನ್ನು ಪೂಜಿಸಬೇಕು,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ಎಲೈ ಚೋಳನೇ! ಮತ್ತೂ ಸೋಮವಾರದಿಂದ ಕೂಡಿದ ಪ್ರದೋಷದಲ್ಲಾದರೂ ಸೋಮವಾರದಿಂದ ಕೂಡಿದ ಅಮಾವಾಸ್ಯೆಯಲ್ಲಾದರೂ ಶಿವಲಿಂಗದ ದರ್ಶನದಿಂದಲೂ ಉಂಟಾಗುವ ಫಲವನ್ನು ಕೇಳು; ಸ್ಕಾಂದಪುರಾಣದಲ್ಲಿರುವ ಬ್ರಹ್ಮೋತ್ತರಖಂಡದಲ್ಲಿ—"ಸ್ವರ್ಗಸೌಖ್ಯವನ್ನೂ ಮೋಕ್ಷಸುಖವನ್ನೂ ಉಂಟುಮಾಡುವ ಶಿವಲಿಂಗಪೂಜೆಯನ್ನು ಯಾವಾಗಲೂ ಮಾಡಬೇಕು. ಪ್ರದೋಷ

ರೇ ವಿಶೇಷೇಣ ಪ್ರದೋಷಾದಿಗುಣಾನ್ವಿತೇ || ಕೇವಲೇ ಸೋಮವಾರೇ ವಾ ಯೇ ಕುರ್ಯುಶ್ಶಂಕರಾರ್ಚನಂ||ನ ತೇಷಾಂ ವಿದ್ಯತೇ ಕಿಂಚಿದಿಹಾಮುತ್ರ ಚ ದುರ್ಲಭಂ'' ಇತಿ. ಸ್ಕಾಂದೇ ಉಮಾಮಹೇಶ್ವರಸಂಹಿತಾಯಾಂ,—ಶಿವಃ, "ಕನ್ಯಾದಾನಶತಾತ್ಫಲಂ ಗಜಘಟಾಗೋಕೋಟಿದಾನಾತ್ಫಲಂ ಶ್ರೀರುದ್ರಪ್ರತಿರೂಪದಾನಶತಕಾದ್ಧೇಮಾದ್ರಿದಾನಾತ್ಫಲಂ ||ರುದ್ರೈಕಾದಶಲಕ್ಷವಾರಪಠನಾದ್ಯಜ್ಜಾಯತೇ ಧೂರ್ಜಟೇಸ್ತತ್ತತ್ಕರ್ಮಫಲಾಧಿಕಂ ಗಿರಿಸುತೇ । ಸೋಮಪ್ರದೋಷೇಽರ್ಚಯಾ || ಸೋಮವಾರೇಽಪ್ಯಮಾವಸ್ಯಾಂ ಚತುರ್ದಶ್ಯಾನ್ವಿತಾ ಯದಿ||ತ್ರಿಕೋಟಿಶಿವರಾತ್ರೀಷ್ಟ ಫಲಮೀಶಾರ್ಚನಾದ್ಭವೇತ್'' ಇತಿ. ಬ್ರಹ್ಮೋತ್ತರಖಂಡೇ,—"ವಾಗ್ದೇವೀ ದೃತವಲ್ಲಕೀ ಶತಮಖೋ ವೇಣುಂ ಕ್ವಣನ್ಪದ್ಮಭೂಸ್ತಾಲೋನ್ನಿದ್ರಕರೋ ರಮಾ ಭಗವತೀ ಗೇಯಪ್ರಯೋಗಾನ್ವಿತಾ || ವಿಷ್ಣುಸ್ಸಾಂದ್ರಮೃದಂಗಲಂಘನಪಟುರ್ದೇವಾಸ್ಸಮಂತಾತ್ಸ್ಥಿತಾಸ್ಸೇವಂತೇ ತಮನುಪ್ರದೋಷಸಮಯೇ ದೇವಂ ಮೃಡಾಣೀಪತಿಂ || ಗಂಧರ್ವಯಕ್ಷಪತಗೋರಗಸಿದ್ಧಸಾಧ್ಯವಿದ್ಯಾಧರಾಮರವರಾಪ್ಸರಸಾಂಗಣಾಶ್ಚ || ಯೇಽನ್ಯೇ ತ್ರಿಲೋಕನಿಲಯಾಸ್ಸಹಭೂತವರ್ಗೈಃ ಪ್ರಾಪ್ತೇ ಪ್ರದೋಷಸಮಯೇ ಹರಪಾರ್ಶ್ವಸಂಸ್ಥಾಃ || ಅತಃ ಪ್ರದೋಷೇ ಶಿವ ಏಕಏವ ಪೂಜ್ಯೋಽಥ ನಾನ್ಯೇ ಹರಿಪದ್ಮಜಾದ್ಯಾಃ || ತಸ್ಮಿ

---

ಮೊದಲಾದ ಗುಣಗಳಿಂದ ಕೂಡಿದ ಸೋಮವಾರದಲ್ಲಿ ಅಥವಾ ಕೇವಲ ಸೋಮವಾರದಲ್ಲಿ ಶಿವಲಿಂಗಪೂಜೆಯನ್ನು ಮಾಡುವವರಿಗೆ ಈ ಲೋಕದಲ್ಲೂ ಪರಲೋಕದಲ್ಲೂ ಹೊಂದಲಶಕ್ಯವಾದುದು ಯಾವುದೂ ಇಲ್ಲವು,, ಎಂದೂ, ಸ್ಕಾಂದಪುರಾಣದಲ್ಲಿರುವ ಉಮಾಮಹೇಶ್ವರಸಂಹಿತೆಯಲ್ಲಿ— "ಎಲೈ ಪಾರ್ವತಿಯೇ! ನೂರುಮಂದಿ ಕನ್ಯೆಯರನ್ನು ದಾನಮಾಡುವುದರಿಂದಲೂ, ಗಜಸಮೂಹದಾನದಿಂದಲೂ, ಕೋಟಿಗೋದಾನದಿಂದಲೂ, ಶತರುದ್ರಪ್ರತಿಮಾದಾನದಿಂದಲೂ, ಮೇರುದಾನದಿಂದಲೂ, ಹನ್ನೊಂದುಲಕ್ಷವೇಳೆ ಶ್ರೀರುದ್ರಪಠನದಿಂದಲೂ ಉಂಟಾಗುವ ಫಲಕ್ಕಿಂತ ಮಿಗಿಲಾದ ಫಲವು ಸೋಮಪ್ರದೋಷದಲ್ಲಿ ಶಿವಲಿಂಗಪೂಜೆಯನ್ನು ಮಾಡುವುದರಿಂದ ಉಂಟಾಗುವುದು,, ಎಂದೂ ಶಿವನಿಂದ ಉಕ್ತವಾಗಿದೆ. ಬ್ರಹ್ಮೋತ್ತರಖಂಡದಲ್ಲಿ—"ಸರಸ್ವತಿಯು ವಲ್ಲಕಿಯೆಂಬ ವೀಣೆಯನ್ನು ನುಡಿಸುತ್ತಾ, ಇಂದ್ರನು ಕೊಳಲನ್ನೂದುತ್ತಾ, ಬ್ರಹ್ಮನು ತಾಳವನ್ನು ಹಾಕುತ್ತಾ, ಲಕ್ಷ್ಮಿಯು ಗಾನಮಾಡುತ್ತಾ, ವಿಷ್ಣುವು ಮದ್ದಳೆಯನ್ನು ಬಾರಿಸುತ್ತಾ ಹೀಗೆ ಸಕಲ ದೇವತೆಗಳೂ ಪ್ರದೋಷಕಾಲದಲ್ಲಿ ಆ ಶಿವನನ್ನು ಸುತ್ತುವರೆದವರಾಗಿ ಸೇವಿಸುತ್ತಾರೆ, ಗಂಧರ್ವರೂ, ಯಕ್ಷರೂ, ಪಕ್ಷಿಗಳೂ, ಸರ್ಪಗಳೂ, ಸಿದ್ಧರೂ, ಸಾಧ್ಯರೂ, ವಿದ್ಯಾಧರರೂ, ಅಮರಶ್ರೇಷ್ಠರೂ, ಅಪ್ಸರಸ್ಸುಗಳ ಸಮೂಹಗಳೂ, ಇನ್ನೂ ಉಳಿದ ಲೋಕಗಳಲ್ಲಿರುವವರೂ ಪ್ರಾಣಿಸಮೂಹಗಳೊಡನೆ ಕೂಡಿದವರಾಗಿ ಪ್ರದೋಷಸಮಯದಲ್ಲಿ ಶಿವನನ್ನು ಸೇವಿಸುತ್ತಾರೆ. ಈ ಕಾರಣದಿಂದ ಪ್ರದೋಷಕಾಲದಲ್ಲಿ ಶಿವನೊಬ್ಬನೇ ಸಕಲರಿಂದ ಪೂಜ್ಯನು. ಮಿಕ್ಕ ವಿಷ್ಣುಬ್ರ

ನ್ಮಹೇಶೇ ವಿಧಿನೇಜ್ಯಮಾನೇ ಸರ್ವೇ ಪ್ರಸೀದಂತಿ ಸುರಾಧಿನಾಥಾಃ” ಇತಿ.

ಹೇ ಚೋಳ! ಅಥ ಮಾಘೇ ಕೃಷ್ಣಚತುರ್ದಶೀಮುಪಾನಿಶಿ ಹರಿವಿರಿಂಚ್ಯಾದೀನಾಂ ಶಿವಲಿಂಗಪೂಜಾವಿಧಿಃ ಶ್ರೂಯತಾಂ, ಸ್ಕಾಂದೇ ಬ್ರಹ್ಮೋತ್ತರಖಂಡೇ,— “ಯಾನಿ ಯಾನಿ ತು ಪುಣ್ಯಾನಿ ದಿನಾನಿ ಚ ಯುಗೇ ಯುಗೇ ॥ ಮಾಘಾಸಿತಚತುರ್ದಶ್ಯಾಂ ತಾನಿ ತಿಷ್ಠಂತಿ ಕೃತ್ಸ್ನಶಃ ॥ ಮಾಘೇ ಕೃಷ್ಣಚತುರ್ದಶ್ಯಾಮುಪವಾಸೋऽತಿದುರ್ಲಭಃ ॥ ತತ್ರಾಪಿ ದುರ್ಲಭಂ ಮನ್ಯೇ ರಾತ್ರೌ ಜಾಗರಣಂ ನೃಣಾಂ ॥ ಅತೀವ ದುರ್ಲಭಂ ಮನ್ಯೇ ಶಿವಲಿಂಗಸ್ಯ ದರ್ಶನಂ ॥ ಸುದುರ್ಲಭತರಂ ತತ್ರ ಪೂಜನಂ ಪರಮೇಶಿತುಃ ॥ ಭವಕೋಟಿಶತೋಪಾತ್ತಪುಣ್ಯರಾಶಿಸಮೃದ್ಧಿತಃ ॥ ಲಭ್ಯತೇ ವಾ ಪುನಸ್ತತ್ರ ಬಿಲ್ವಪತ್ರಾರ್ಚನಂ ವಿಭೋಃ ॥ ಏಕೇನ ಬಿಲ್ವಪತ್ರೇಣ ಶಿವಲಿಂಗಾರ್ಚನಂ ಕೃತಂ ॥ ತ್ರೈಲೋಕ್ಯೇ ತೇನ ಪುಣ್ಯೇನ ಕಿಂ ವಾ ಸಾದೃಶ್ಯಮಿಚ್ಛತಿ” ಲೈಂಗೇ,— “ಪುಷ್ಪದ್ವಾದಶಕೋಟಿಭ್ಯಸ್ಸ್ವರ್ಣಪುಷ್ಪಂ ವಿಶಿಷ್ಯತೇ ॥ ತತ್ಫಲಂ ಕೋಟಿಗುಣಿತಮೇಕಬಿಲ್ವದಳಾರ್ಚನಾತ್ ॥ ಪೂಜಾಕೋಟಿ ಸಮಂ ಸ್ತೋತ್ರಂ

---

ಹ್ಮಾದಿ ದೇವತೆಗಳು ಪೂಜ್ಯರಲ್ಲವು. ಆದ್ದರಿಂದ ಶಿವನನ್ನು ವಿಧ್ಯುಕ್ತಕ್ರಮಾನುಸಾರವಾಗಿ ಪೂಜಿಸತಕ್ಕವರಿಗೆ ಸಮಸ್ತ ದೇವಾಧಿಪತಿಗಳು ಪ್ರಸನ್ನರಾಗುವರು,, ಎಂದು ಹೇಳಲ್ಪಟ್ಟದೆ ಎಲೈ ಚೋಳನೇ! ಮಹಾಶಿವರಾತ್ರಿಯಲ್ಲಿ ವಿಷ್ಣುಬ್ರಹ್ಮ ಮೊದಲಾದವರು ಶಿವಲಿಂಗಪೂಜೆಯನ್ನು ಮಾಡಿದ ವಿಧಾನವನ್ನು ಕೇಳು; ಸ್ಕಾಂದಪುರಾಣದಲ್ಲಿರುವ ಬ್ರಹ್ಮೋತ್ತರಖಂಡದಲ್ಲಿ— “ಪ್ರತಿಯೊಂದು ಯುಗದಲ್ಲೂ ಇರುವ ಪುಣ್ಯದಿವಸಗಳೆಲ್ಲವೂ ಮಾಘಕೃಷ್ಣ ಚತುರ್ದಶಿಯಲ್ಲಿರುತ್ತವೆ. ಆ ದಿನದಲ್ಲಿ ಉಪವಾಸವ್ರತವನ್ನಾಚರಿಸತಕ್ಕುದು ಕಷ್ಟವು. ಆ ರಾತ್ರಿಯಲ್ಲಿ ಜಾಗರಣಮಾಡುವದಾದರೋ ಬಹು ಕಷ್ಟಕರವಾದದ್ದು. ಆ ದಿನದಲ್ಲಿ ಶಿವಲಿಂಗದರ್ಶನವಾದರೋ ಅತಿಪ್ರಯಾಸಜನಕವಾದದ್ದು. ಶಿವಲಿಂಗಪೂಜೆಯನ್ನಾದರೋ ಪ್ರತಿಯಾಮದಲ್ಲೂ ಮಾಡತಕ್ಕದು ಅತ್ಯಂತ ಪ್ರಯಾಸಕರವಾದದ್ದು. ಶಿವಲಿಂಗವನ್ನು ಬಿಲ್ವಪತ್ರಗಳಿಂದ ಪೂಜಿಸತಕ್ಕುದು ಅನೇಕಕೋಟಿ ಜನ್ಮಾರ್ಜಿತ ಪುಣ್ಯರಾಶಿಸಮೃದ್ಧಿಬಲದಿಂದ ದೊರಕುವುದೋ ಇಲ್ಲವೋ. ಒಂದು ಬಿಲ್ವಪತ್ರದಿಂದ ಶಿವಲಿಂಗವು ಪೂಜಿಸಲ್ಪಡುವುದರಿಂದುಂಟಾಗುವ ಪುಣ್ಯಫಲದೊಡನೆ ತ್ರಿಲೋಕದಲ್ಲಿ ಯಾವದು ತಾನೇ ಸಮಾನವಾಗುವುದು? ಲಿಂಗಪುರಾಣದಲ್ಲಿ — “ಶಿವಲಿಂಗವನ್ನು ಹನ್ನೆರಡುಕೋಟಿ ಪುಷ್ಪಗಳಿಂದ ಪೂಜಿಸುವುದರಿಂದುಂಟಾಗುವ ಫಲಕ್ಕಿಂತಲೂ ಮಿಗಿಲಾದ ಫಲವು ಒಂದು ಸುವರ್ಣಪುಷ್ಪದಿಂದ ಪೂಜಿಸುವುದರಿಂದ ಉಂಟಾಗುವುದು. ಅದಕ್ಕಿಂತಲೂ ಕೋಟಿಪಾಲು ಫಲವು ಒಂದು ಬಿಲ್ವದಳದಿಂದ ಪೂಜಿಸುವುದರಿಂದ ಉಂಟಾಗುವುದು. ಕೋಟಿಬಾರಿ ಲಿಂಗವನ್ನು ಪೂಜಿಸುವುದರಿಂದುಂಟಾಗುವ ಫಲಕ್ಕೆ ಸಮಾನವಾದುದು ಶಿವಸ್ತೋತ್ರವು. ಸ್ತೋತ್ರಕೋಟಿಗೆ ಸಮಾನವಾದುದು ಶಿವಮಂತ್ರಜಪವು. ಜಪಕೋಟಿಗೆ ಸಮಾನವಾದುದು ಶಿವಧ್ಯಾನವು. ಧ್ಯಾನಕೋಟಿಗೆ

ಸ್ತೋತ್ರಕೋಟಿಸಮೋ ಜಪಃ || ಜಪಕೋಟಿಸಮಂ ಧ್ಯಾನಂ ಧ್ಯಾನಕೋಟಿಸಮೋ ಲಯಃ || ಅಸಂಪೂಜ್ಯ ಶಿವಂ ಸ್ತೋತ್ರಜಪಾತ್ಫಲಮುದೀರಿತಂ || ಸಂಪೂಜ್ಯ ಚ ಸ್ತೋತ್ರಜಪಾತ್ಫಲಂ ವಕ್ತುಂ ನ ಶಕ್ಯತೇ'' ಇತ್ಯಾದಿ. ಅಲಂವಿಸ್ತರೇಣ.

ಇತಿ ಪ್ರದೋಷಕಾಲೇ ಹರಿದರ್ಶನಾದಿನಿಷೇಧಪೂರ್ವಕಂ ಶಿವಲಿಂಗದರ್ಶನಾದಿನಿರ್ಣಯವಿಧಿದ್ವಾದಶೋಪದೇಶೇ ಪಂಚಮಸ್ಸಂವಾದಃ.

ಶ್ರೀಃ.

## ಸರ್ವಶಾಸ್ತ್ರೇಷು ಶಿವಾಧಿಕ್ಯನಿರ್ಣಯಃ.

ಶ್ಲೋ—''ಅಷ್ಟಾದಶಸು ವಿದ್ಯಾಸು ಮೀಮಾಂಸಾತಿಗರೀಯಸೀ || ತತೋಪಿ ತರ್ಕಶಾಸ್ತ್ರಂ ತು ಪುರಾಣಂ ತತಏವ ಚ || ತತೋಪಿ ಧರ್ಮಶಾಸ್ತ್ರಂ ತು ತಸ್ಮಾದ್ಗುರ್ವೀ ಶ್ರುತಿರ್ದ್ವಿಜ || ತತೋಪ್ಯುಪನಿಷಚ್ಛ್ರೇಷ್ಠಾ ಗಾಯತ್ರೀ ಚ ತತೋಧಿಕಾ || ನ ಗಾಯತ್ರ್ಯಾಧಿಕಂ ಕಿಂಚಿದಸ್ತೀತಿ ನತು ಕಥ್ಯತೇ'' ಇತಿ ಕಾಶೀಖಂಡೇ ಶುಕವಾಕ್ಯಾತ್, ಭೋ ರೇಣುಕಗಣೇಶ! ಮೀಮಾಂಸಾದಿಷು ಕ್ರಮೇಣ ಶಿವಾಧಿಕ್ಯಂ ಕಥ್ಯತಾಂ.

---

ಸಮಾನವಾದುದು ಮನೋಲಯವು. ಶಿವಲಿಂಗವನ್ನು ಪೂಜಿಸದಿದ್ದರೂ ಶಿವಸ್ತೋತ್ರ ಶಿವಮಂತ್ರ ಜಪಗಳಿಂದಲೇ ಮಿಗಿಲಾದ ಫಲವು ಹೇಳಲ್ಪಟ್ಟುದರಿಂದ ಶಿವನನ್ನು ಪೂಜಿಸಿ ಅಂದರೆ ಕರ್ಮಯಜ್ಞವನ್ನು ಮಾಡಿ ಸ್ತುತಿಸಿ ಮತ್ತು ಜಪಯಜ್ಞವನ್ನೂ ಮಾಡುವುದರಿಂದುಂಟಾಗುವ ಫಲವೆಷ್ಟೆಂಬುದನ್ನು ಹೇಳುವುದಕ್ಕಾಗುವುದಿಲ್ಲವು. ಇದು ಮೊದಲಾದವಚನವು ಈ ವಿಷಯದಲ್ಲಿ ಪ್ರಸಿದ್ಧವಾಗಿದೆ. ವಿಸ್ತಾರದಿಂದ ಸಾಕು.

ಎಂಬಲ್ಲಿಗೆ ಪ್ರದೋಷಕಾಲದಲ್ಲಿ ವಿಷ್ಣುದರ್ಶನಾದಿನಿಷೇಧಪೂರ್ವಕ ಶಿವಲಿಂಗದರ್ಶನಾದಿನಿರ್ಣಯ ವಿಧಿಯನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಐದನೆಯ ಸಂವಾದವು ಮುಗಿದುದು.



## ಸಮಸ್ತಶಾಸ್ತ್ರಗಳಲ್ಲಿ ಶಿವಾಧಿಕ್ಯನಿರ್ಣಯವು.

ಶ್ಲೋ—''ಹದಿನೆಂಟುವಿದ್ಯೆಗಳಲ್ಲಿ ಮೀಮಾಂಸೆಯು ಶ್ರೇಷ್ಠವಾದದ್ದು. ಅದಕ್ಕಿಂತ ತರ್ಕಶಾಸ್ತ್ರವು, ಅದಕ್ಕಿಂತ ಪುರಾಣವು, ಅದಕ್ಕಿಂತ ಧರ್ಮಶಾಸ್ತ್ರವು, ಅದಕ್ಕಿಂತ ವೇದವು, ಅದಕ್ಕಿಂತ ಉಪನಿಷತ್ತು ಶ್ರೇಷ್ಠವಾದದ್ದು. ಅದಕ್ಕಿಂತ ಗಾಯತ್ರಿಯು ಶ್ರೇಷ್ಠವಾದದ್ದು. ಗಾಯತ್ರಿಗಿಂತ ಶ್ರೇಷ್ಠವಾದುದು ಯಾವುದಾದರೂ ಇರುತ್ತದೆಯೆಂದು ಹೇಳಲ್ಪಟ್ಟಿಲ್ಲವು,, ಎಂದು ಕಾಶೀಖಂಡದಲ್ಲಿ ಶುಕಮುನಿಯ ವಚನವಿರುವುದರಿಂದ, ಎಲೈ ರೇಣುಕಗಣೇಶನೇ! ಮೀಮಾಂಸೆ ಮೊದಲಾದವುಗಳಲ್ಲಿ ಕ್ರಮದಿಂದ ಶಿವಾಧಿಕ್ಯವನ್ನು ನಿರೂಪಿಸು.

ರೇ—ಹೇ ಚೋಳ ! ಸರ್ವಶಾಸ್ತ್ರೇಷು ಕ್ರಮೇಣ ಸಂಕ್ಷೇಪತಶ್ಶಿವಾಧಿಕ್ಯಂ ಶ್ರಾಯತಾಂ, ಉತ್ತರಮೀಮಾಂಸಾಯಾಂ,—"ಅಥಾತೋ ಬ್ರಹ್ಮಜಿಜ್ಞಾಸಾ"—"ಜನ್ಮಾದ್ಯಸ್ಯ ಯತಃ" ತಥಾ ತೈತ್ತರೀಯಶ್ರುತೌ,—"ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ಬ್ರಹ್ಮೇತಿ ವಿಜಿಜ್ಞಾಸಸ್ವ" ಇತಿ. ಇತ್ಯುತ್ತರಮೀಮಾಂಸಾಯಾಂ ಶಿವಾಧಿಕ್ಯಂ. ಅಥ ನ್ಯಾಯಶಾಸ್ತ್ರೇ ಗೌತಮಸೂತ್ರೇ,—"ತತ್ವಜ್ಞಾನಾನ್ನಿಶ್ರೇಯಸಾಧಿಗಮಃ" ಇತಿ ನ್ಯಾಯಶಾಸ್ತ್ರಸ್ಯಾದಿಮಂ ಸೂತ್ರಂ, ತಥಾ ವೃದ್ಧಜಾಬಾಲೋಪನಿಷದಿ,—"ತತ್ವಂ ಪಶುಪತಿರಿತಿ" ತಥಾಖಂಡನೇ,—"ಅವಿಕಲ್ಪವಿಷಯ ಏಕಸ್ಸ್ಥಾಣುಃ ಪುರುಷಶ್ಶೃತೋಸ್ತ್ರಯೀಷುಶ್ರುತಿಷು || ಈಶ್ವರಮುಮಯಾ ಸಹಿತಂ ವಂದೇ ತಂ ಸತತಂ ಭುವನಾಧಿಪಂ" ನ್ಯಾಯಕುಸುಮಾಂಜಲೌ,—"ಈಶಸ್ಯೈವ ನಿವೇಶಿತಂ ಪದಯುಗೇ ಭೃಂಗಾಯಮಾನಂ ಭ್ರಮಚ್ಚೇತೋ ಮೇ ರಮಯತ್ವವಿಘ್ನಮನಘಾ ನ್ಯಾಯಪ್ರಸೂನಾಂಜಲಿಃ" ಇತಿ ನ್ಯಾಯಶಾಸ್ತ್ರೇ ಶಿವಾಧಿಕ್ಯಂ. ಸ್ಕಾಂದೇ ವ್ಯಾಸವಿಷ್ಣುಸಂವಾದೇ,—ವಿಷ್ಣುವಾಕ್ಯಂ, "ಯಜ್ಞಕರ್ತಾ ಚ ದೇವೇಂದ್ರೋ ವೇದಕರ್ತಾ ಚ

---

ರೇ—ಎಲೈ ಚೋಳನೇ! ಸರ್ವಶಾಸ್ತ್ರಗಳಲ್ಲಿ ಕ್ರಮದಿಂದ ಸಂಕ್ಷೇಪವಾಗಿ ಶಿವಾಧಿಕ್ಯವನ್ನು ಹೇಳುತ್ತೇನೆ ಕೇಳು; ಉತ್ತರಮೀಮಾಂಸೆಯಲ್ಲಿ—"ಧರ್ಮಜಿಜ್ಞಾಸಾನಂತರದಲ್ಲಿ ಪರಬ್ರಹ್ಮ ಶಿವತತ್ವಜಿಜ್ಞಾಸೆಯು,,—"ಯಾವ ಶಿವನದೆಸೆಯಿಂದ ಈ ಜೀವನಿಗೆ ಜನನಮರಣಗಳುಂಟಾಗುವವೋ,, ಹಾಗೆಯೇ ತೈತ್ತರೀಯೋಪನಿಷತ್ತಿನಲ್ಲಿ—"ಯಾವ ಶಿವನದೆಸೆಯಿಂದ ಈ ಪ್ರಾಣಿಗಳು ಹುಟ್ಟುತ್ತವೋ, ಹುಟ್ಟಿದ ಪ್ರಾಣಿಗಳು ಜೀವಿಸುತ್ತವೋ, ಯಾವ ಶಿವನನ್ನು ತಿಳಿಯುತ್ತವೋ, ಯಾವ ಶಿವನಲ್ಲಿ ಲಯವನ್ನು ಹೊಂದುತ್ತವೋ ಆ ಶಿವನನ್ನೇ ಬ್ರಹ್ಮವೆಂದು ತಿಳಿ,, ಎಂದು ಹೇಳಲ್ಪಟ್ಟಿದೆ. ಇಲ್ಲಿಗೆ ಉತ್ತರಮೀಮಾಂಸೆಯಲ್ಲಿ ಶಿವಾಧಿಕ್ಯವು ಮುಗಿದುದು.

ಬಳಿಕ ನ್ಯಾಯಶಾಸ್ತ್ರದ ಗೌತಮಸೂತ್ರದಲ್ಲಿ—"ಶಿವತತ್ವಜ್ಞಾನದಿಂದ ಮೋಕ್ಷಪ್ರಾಪ್ತಿಯು,, ಎಂದು ನ್ಯಾಯಶಾಸ್ತ್ರದಲ್ಲಿ ಮೊದಲನೆಯ ಸೂತ್ರವು. ವೃದ್ಧಜಾಬಾಲೋಪನಿಷತ್ತಿನಲ್ಲಿ—"ತತ್ವಶಬ್ದಕ್ಕೆ ಶಿವನೆಂಬುದರ್ಥವು,, ಹಾಗೆಯೇ ಖಂಡನಗ್ರಂಥದಲ್ಲಿ—"ಅವಿಕಲ್ಪವಿಷಯನೂ, ಅದ್ವಿತೀಯನೂ, ಸ್ಥಿರನೂ, ಪುರುಷಶಬ್ದವಾಚ್ಯನೂ, ಎಂದು ಮೂರುವೇದಗಳಲ್ಲೂ ಹೇಳಲ್ಪಟ್ಟಿದೆ. ಆದ್ದರಿಂದ ಸಕಲಲೋಕಕ್ಕೊಡೆಯನಾದ ಪಾರ್ವತಿಯೊಡನೆ ಕೂಡಿದವನಾದ ಆ ಶಿವನನ್ನು ಯಾವಾಗಲೂ ನಮಸ್ಕರಿಸುತ್ತೇನೆ,, ನ್ಯಾಯಕುಸುಮಾಂಜಲಿಯಲ್ಲಿ—"ಚಂಚಲವಾದ ನನ್ನ ಮನಸ್ಸು ತುಂಬಿಯಂತಾಚರಿಸುತ್ತಾ ಶಿವಪಾದಕಮಲಯುಗ್ಮದಲ್ಲೇ ಇರಿಸಲ್ಪಟ್ಟಿತು. ಆದ್ದರಿಂದ ದೋಷರಹಿತವಾದ ನನ್ನ ಈ ನ್ಯಾಯಪುಷ್ಪಾಂಜಲಿಯು ಶಿವನ ಪಾದಯುಗ್ಮದಲ್ಲಿ ತಡೆಯಿಲ್ಲದೆ ವಿಹರಿಸುವುದಾಗಲಿ,, ಇಲ್ಲಿಗೆ ನ್ಯಾಯಶಾಸ್ತ್ರದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಸ್ಕಾಂದದಲ್ಲಿರುವ ವ್ಯಾಸವಿಷ್ಣುಸಂವಾದದಲ್ಲಿ—"ದೇವೇಂದ್ರನು ಯಜ್ಞಾಧಿಪನಾಗಿ

ಪಾಕ್ಪತಿಃ ‖ ಅಹಮೇವ ಜಗತ್ಕರ್ತಾ ಮಮ ಕರ್ತಾ ಮಹೇಶ್ವರಃ ‖ ತಸ್ಯ ದೇವಾಧಿ ದೇವಸ್ಯ ಕರ್ತಾ ಕೋಪಿ ನ ವಿದ್ಯತೇ ‖ ಅತ್ರ ಮೇ ವಚನಂ ವ್ಯಾಸ ಶೃತ್ವಾ ಮೂಢ ಯಥಾರ್ಥವಿತ್'' ಇತಿ ಸರ್ವಪುರಾಣೇಷು ಶಿವಾಧಿಕ್ಯಂ. ಶಾತಾತಪಸ್ಮೃತೌ,— “ಸ್ತೇಯಂ ಕೃತ್ವಾ ಗುರುದಾರಾಂಶ್ಚ ಗತ್ವಾ ಸುರಾಂ ಪೀತ್ವಾ ಬ್ರಹ್ಮಹತ್ಯಾಂ ಚ ಕೃತ್ವಾ । ಭಸ್ಮಚ್ಛನ್ನೋ ಭಸ್ಮಶಯ್ಯಾ ಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ'' ಇತ್ಯಾದಿ ಸರ್ವಸ್ಮೃತಿಷು ಶಿವಾಧಿಕ್ಯಂ. ಛಂದಸಿ,—ಪಿಂಗಳಾಚಾರ್ಯಃ, “ಸಗುರುಸ್ತ್ರ್ಯಂಬಕಃ ಪ್ರೋಕ್ತೋ ಲಘುರೇವ ಮುರಾಂತಕಃ ‖ ಮ್ಯರಸ್ತಜಭ್ನಗೈರ್ಲೈಶ್ಚ ಛಂದೋಭಿಃ ವೂರಿತೋಽಕ್ಷರೈಃ'' ಇತಿ ಛಂದಶ್ಶಾಸ್ತ್ರೇ ಶಿವಾಧಿಕ್ಯಂ. ಜ್ಯೋತಿಶ್ಶಾಸ್ತ್ರೇ ಸೂರ್ಯಸಿದ್ಧಾಂತೇ,—“ಚತುರ್ಯುಗಸಹಸ್ರಂ ತು ಬ್ರಹ್ಮಣೋ ದಿನಮುಚ್ಯತೇ ‖ ಪಿತಾಮಹಸಹಸ್ರಂ ತು ವಿಷ್ಣೋಶ್ಚ ಘಟಿಕಾ ಭವೇತ್ ‖ ವಿಷ್ಣೋರ್ದ್ವಾದಶ ಲಕ್ಷಂ ತು ರುದ್ರಸ್ಯೈಕಃ ಕ್ಷಣೋ ಭವೇತ್ ‖ ರುದ್ರಸ್ಯ ಶತಕೋಟಿಸ್ತು ಪರಮಾಣುಶ್ಶಿವೇ ಭವೇತ್'' ಇತಿ. ವಾಯುವೀಯಸಂಹಿತಾಯಾಂ,—“ಶಿವಸ್ಯ ತು ವಶೇ ಕಾ

---

ರುತ್ತಾನೆ. ಬ್ರಹ್ಮನು ವೇದಕರ್ತನಾಗಿರುತ್ತಾನೆ. ನಾನು ಜಗತ್ಕರ್ತನಾಗಿರುತ್ತೇನೆ. ಮಹೇಶ್ವರನಾದ ಶಿವನು ನನಗೆ ಕರ್ತನಾಗಿರುತ್ತಾನೆ. ದೇವಾಧಿದೇವನಾದ ಆ ಶಿವನಿಗೆ ಕರ್ತನಾವನೂ ಇಲ್ಲವು. ಎಲೈ ಮೂಢನಾದ ವ್ಯಾಸನೇ! ಈ ವಿಷಯದಲ್ಲಿ ನನ್ನ ಮಾತನ್ನು ಕೇಳಿ, ಯಥಾರ್ಥವನ್ನು ತಿಳಿ,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ಇಲ್ಲಿಗೆ ಸರ್ವಪುರಾಣಗಳಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಶಾತಾತಪಸ್ಮೃತಿಯಲ್ಲಿ—“ಕಳ್ಳನೂ, ಗುರುತಲ್ಪಗಾಮಿಯೂ, ಮದ್ಯಪಾನಿಯೂ, ಬ್ರಹ್ಮಘಾತುಕನೂ, ಭಸ್ಮಸ್ನಾನ ಭಸ್ಮೋದ್ಧೂಳನಂಗೈದರೆ, ಭಸ್ಮಮಯವಾದ ಶಯ್ಯೆಯಲ್ಲಿ ಶಯನಮಾಡಿದರೆ, ರುದ್ರಾಧ್ಯಯನಮಾಡಿದರೆ ಸಕಲ ಪಾಪಗಳಿಂದ ಬಿಡಲ್ಪಡುವನು. ಇತ್ಯಾದಿ ಸಕಲ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಶಿವಾಧಿಕ್ಯವು ಮುಗಿದುದು. ಛಂದಶ್ಶಾಸ್ತ್ರದಲ್ಲಿ—“ಗುರುಸಂಜ್ಞೆಯುಳ್ಳ ಅಕ್ಷರಕ್ಕೆ ಶಿವನೇ ಅಧಿದೇವತೆಯು. ಲಘುಸಂಜ್ಞೆಯುಳ್ಳ ಅಕ್ಷರಕ್ಕೆ ವಿಷ್ಣುವೇ ಅಧಿದೇವತೆಯೆಂದು ಪಿಂಗಳಾಚಾರ್ಯನು ಹೇಳಿರುವುದರಿಂದ ಶಿವನಿಗೇ ಆಧಿಕ್ಯವನ್ನು ಹೇಳಿದ್ದಾಯಿತು,, ಇಲ್ಲಿಗೆ ಛಂದಶ್ಶಾಸ್ತ್ರದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಜ್ಯೋತಿಶ್ಶಾಸ್ತ್ರದಲ್ಲಿರುವ ಸೂರ್ಯಸಿದ್ಧಾಂತದಲ್ಲಿ— “ನಾಲ್ಕು ಯುಗಗಳು ಒಂದುಸಾವಿರಬಾರಿ ಆದರೆ ಬ್ರಹ್ಮನಿಗೊಂದುದಿನವು. ಬ್ರಹ್ಮನ ಒಂದುಸಾವಿರದಿನಗಳು ವಿಷ್ಣುವಿಗೆ ಒಂದುಘಳಿಗೆಯು. ವಿಷ್ಣುವಿನ ಹನ್ನೆರಡುಲಕ್ಷ ಘಳಿಗೆಗಳು ರುದ್ರನಿಗೊಂದುಕ್ಷಣವು. ರುದ್ರನ ನೂರುಕೋಟಿಕ್ಷಣಗಳು ಶಿವನಿಗೊಂದುಪರಮಾಣುವು ಆಗುವುದು,, ಎಂದೂ, ವಾಯುವೀಯಸಂಹಿತೆಯಲ್ಲಿ— “ಕಾಲವು ಶಿವನಿಗಧೀನವಾಗಿದೆ. ಶಿವನು ಕಾಲಕ್ಕಧೀನನಲ್ಲವು,, ಎಂದೂ ಹೇಳಲ್ಪಟ್ಟಿದೆ. ಇಲ್ಲಿಗೆ ಜ್ಯೋತಿಶ್ಶಾಸ್ತ್ರದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು.

ಲೋ ನ ಕಾಲಸ್ಯ ವಶೇಶಿವಃ '' ಇತಿ ಜ್ಯೋತಿಶ್ಶಾಸ್ತ್ರೇ ಶಿವಾಧಿಕ್ಯಂ. ಧನುರ್ವೇದೇ,-,,ತ ಇಷುಂ ನಮಸ್ಕುರ್ವಂತ್ಯಗ್ನಿಮನೀಕಂ ಸೋಮಂ ಶಲ್ಯಂ ವಿಷ್ಣುಂ ತೇಜನಂ'' ಇತಿ. ವೇದಪಾದಸ್ತವೇ,-''ನಮಃ ಪರಶವೇ ದೇವ ಶೂಲಾಯಾನಲರೋಚಿಷೇ || ಹರ್ಯಗ್ನೀಂದ್ವಾತ್ಮನೇ ತುಭ್ಯಮುತಿಲೋತ ಇಷವೇ ನಮಃ'' ಇತಿ ಧನುರ್ವೇದೇ ಶಿವಾಧಿಕ್ಯಂ. ಋಗ್ವೇದೇ,-''ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ'' ಇತಿ. ಯಜುರ್ವೇದೇ,—'' ಯಾ ತೇ ರುದ್ರ ಶಿವಾ ತನೂಶ್ಶಿವಾ ವಿಶ್ವಾಹ ಭೇಷಜೀ | ಶಿವಾ ರುದ್ರಸ್ಯ ಭೇಷಜೀ || ತಯಾ ನೋ ಮೃಡ ಜೀವಸೇ '' ಸಾಮವೇದೇ,—'' ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ '' ವೇದಪಾದಸ್ತವೇ,—'' ರಾಗಾದಿಕಾಪಥ್ಯಸಮುದ್ಭವೇನ ಯುಕ್ತಂ ಭವಾಖ್ಯೇನ ಮಹಾಗದೇನ || ವಿಲೋಕ್ಯ ಮಾಂ ಪಾಲಯ ಚಂದ್ರಮೌಳೇ ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ '' ವೈದ್ಯಶಾಸ್ತ್ರೇ,—'' ನಿರ್ಮಾಲ್ಯಂ ಸಲಿಲಂ ಪ್ರಾಶ್ಯ ದೇವದೇವಸ್ಯ ಶೂಲಿನಃ || ಕ್ಷಯಾಪಸ್ಮಾರಕುಷ್ಠಾದ್ಯೈರ್ಮುಚ್ಯತೇ ಕಿಲ್ಬಿಷೈರಪಿ '' ಇತ್ಯಾಯುರ್ವೇದೇ ಶಿವಾಧಿಕ್ಯಂ. ಕಠವಲ್ಲ್ಯುಪನಿಷದಿ,-

---

ಧನುರ್ವೇದದಲ್ಲಿ—''ತ ಇಷುಂ.............ಎಂಬುದಕ್ಕೂ, ''ನಮಃ ಪರಶವೇ,, ಎಂಬ ವೇದಪಾದಸ್ತವವಚನಕ್ಕೂ [ಟಿಪ್ಪಣಿಯನ್ನು ೧೧ನೇ ಉಪದೇಶದ ೯ನೇ ಸಂವಾದದಲ್ಲಿ ನೋಡಿಕೊಳ್ಳತಕ್ಕದ್ದು.] ಇಲ್ಲಿಗೆ ಧನುರ್ವೇದದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಋಗ್ವೇದದಲ್ಲಿ—''ಈ ನನ್ನ ಹಸ್ತವು ಮಾಯಾಪ್ರಪಂಚವೆಂಬ ರೋಗಕ್ಕೆ ವೈದ್ಯಸ್ವರೂಪವು. ಈ ಹಸ್ತವು ತನ್ನ ಬೆರಳುಗಳಿಂದ ಅಂಗೈಯಲ್ಲಿ ಒಪ್ಪುವ ಶಿವಲಿಂಗಮೂರ್ತಿಯ ಸರ್ವಾಂಗವನ್ನು ಮುಟ್ಟುತ್ತಿಹುದು,, ಎಂದೂ, ಯಜುರ್ವೇದದಲ್ಲಿ—''ಯಾ ತೇ ರುದ್ರ ಶಿವಾ ತನೂಃ.........ಎಂಬ ಮಂತ್ರಕ್ಕೆ [೬ನೇ ಉಪದೇಶದ ೨ನೇ ಸಂವಾದದಲ್ಲಿ ಟಿಪ್ಪಣಿಯು ಬರೆಯಲ್ಪಟ್ಟದೆ.] ಸಾಮವೇದದಲ್ಲಿ—''ಎಲೈ ರುದ್ರನೇ! ನಿನ್ನನ್ನು ವೈದ್ಯರೊಳಗೆ ಶ್ರೇಷ್ಠನಾದ ವೈದ್ಯನನ್ನಾಗಿ ಕೇಳುತ್ತೇನೆ,, ವೇದಪಾದಸ್ತವದಲ್ಲಿ—''ಎಲೈ ಚಂದ್ರಶೇಖರನೇ! ವಿಷಯಾಭಿಲಾಷೆ ಮೊದಲಾದ ಅಪಥ್ಯ ಪದಾರ್ಥಗಳನ್ನು ಸೇವಿಸುವುದರಿಂದುಂಟಾಗುವ ಜನನ ಮರಣರೂಪವಾದ ಮಹಾರೋಗಗಳನ್ನನುಭವಿಸುತ್ತಿರುವ ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ಸಲಹು. ಏಕೆಂದರೆ– ನಿನ್ನನ್ನು ವೈದ್ಯರೊಳಗೆ ಶ್ರೇಷ್ಠನಾದ ವೈದ್ಯನನ್ನಾಗಿ ಕೇಳಿರುವೆನೆಂದು ಸಾಮವೇದವು ಹೇಳುತ್ತಿದೆ,, ವೈದ್ಯಶಾಸ್ತ್ರದಲ್ಲಿ—''ಶಿವನಿಗೆ ಸಮರ್ಪಿಸಲ್ಪಡುವುದರಿಂದ ನಿರ್ಮಾಲ್ಯವೆಂದೆನಿಸಿಕೊಳ್ಳುವ ಪ್ರಸಾದೋದಕವನ್ನು ಸೇವಿಸುವವನು ಕ್ಷಯ, ಅಪಸ್ಮಾರ, ಕುಷ್ಠ ಮೊದಲಾದ ರೋಗಗಳಿಂದಲೂ ಪಾಪಗಳಿಂದಲೂ ಬಿಡಲ್ಪಡುವನು,, ಇಲ್ಲಿಗೆ ವೈದ್ಯಶಾಸ್ತ್ರದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಕಠವಲ್ಲ್ಯುಪನಿಷತ್ತಿನಲ್ಲಿ—''ಸಕಲ ದೇವತೆಗಳು ಯಾವ ಶಿವಾಖ್ಯವಾದ ಪರಬ್ರಹ್ಮವನ್ನು ಸಕಲ ಜೀವಪ್ರಾಪ್ಯಸ್ಥಾನವನ್ನಾಗಿ ತಿಳಿಯುತ್ತಾರೋ, ಸಕಲ ವಿಧವಾದ ತಪಸ್ಸುಗಳು

“ ಸರ್ವೇ ದೇವಾ ಯತ್ಪದಮಾಮನಂತಿ | ತಪಾಂಸಿ ಸರ್ವಾಣಿ ಚ ಯದ್ವದಂತಿ | ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ |ತತ್ತೇ ಪದಂ ಸಂಗ್ರಹೇಣ ಬ್ರವೀಮಿ ” ಶಿವಸಂಕಲ್ಪೋಪನಿಷದಿ,—“ಯೋ ವೇದ ಉದಕಾತ್ತ್ರಾಯತೇ ಸರ್ವಲೋಕಮಹೇಶ್ವರಃ| ಋಗ್ಯಜುಸ್ಸಾಮಾಥರ್ವೈಶ್ಚ ತನ್ಮೇ ಮನಶ್ಶಿವಸಂಕಲ್ಪಮಸ್ತು” ಪಾದ್ಮೇ ಶಿವರಾಘವಸಂವಾದೇ.—ಶಂಭುಃ, “ ಯೋಗಿನಸ್ಸನಕಾದ್ಯಾಸ್ತು ಯೋಗಮಾಸ್ಥಾಯ ಯತ್ನತಃ || ಧ್ಯಾಯಂತಿ ಯತ್ಪರಂ ತೇಜಸ್ತದಿದಂ ಪಶ್ಯ ರಾಘವ||ಚತುರಃ ಪಶ್ಯ ವೇದಾಂಶ್ಚ ಸ್ತುವತಃ ಪರಮಂ ಶಿವಂ ” ಶ್ವೇತಾಶ್ವತರೋಪನಿಷದಿ,—“ ತದ್ವೇದ ಗುಹ್ಯೋಪನಿಷತ್ಸು ಗೂಢಂ ತದ್ಬ್ರಹ್ಮಾ ವೇದತೇ ಬ್ರಹ್ಮಯೋನಿಂ | ಯೇ ಪೂರ್ವಂ ದೇವಾ ಋಷಯಶ್ಚ ತತ್ವಿದುಸ್ತೇ ತನ್ಮಯಾ ಅಮೃತಾ ವೈ ಬಭೂವುಃ” ಮಾನವಪುರಾಣೇ,—ಮನುಃ, “ ಸರ್ವೋಪನಿಷದಾಮರ್ಥಶ್ಶಿವಏವ ನ ಚಾಪರಃ || ಏಕಏವ ಹಿ ತದ್ಜ್ಞಾನಂ ತಥಾ ಜ್ಞಾನಸ್ಯ ಶಾಸನಂ ” ಇತಿ. ಋಗ್ವೇದಮಂತ್ರೇ,—“ ತಮುಷ್ಟುಹಿ ಯಸ್ಸ್ವಿಷುಸ್ಸುಧನ್ವಾಯೋ ವಿಶ್ವಸ್ಯ ಕ್ಷಯತಿ ಭೇಷಜಸ್ಯ | ಯಕ್ಷ್ವಾಮಹೇ ಸೌಮನಸಾಯ ರುದ್ರಂ ನಮೋಭಿರ್ದೇವಮಸುರಂ ದುವಸ್ಯ” ಇತಿ. ನಾರಾಯಣೋಪನಿಷದಿ,—“ ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಂ ” ಇತಿ

---

ಯಾವ ಶಿವನನ್ನು ತಮಗೆ ವಿಷಯವನ್ನಾಗಿ ಹೇಳುತ್ತವೆಯೋ, ಯಾವ ಶಿವನನ್ನು ತಿಳಿಯಬೇಕೆಂದಿಚ್ಛೈಸುವವರು ಬ್ರಹ್ಮಚರ್ಯವ್ರತವನ್ನಾಚರಿಸುತ್ತಾರೋ, ಆ ಶಿವಾಖ್ಯವಾದ ಪ್ರಾಪ್ಯಸ್ಥಾನವಿಚಾರವನ್ನು ಸಂಕ್ಷೇಪವಾಗಿ ನಿನಗೆ ಹೇಳುವೆನು,, ಮತ್ತಂ. ಶಿವಸಂಕಲ್ಪೋಪನಿಷತ್ತಿಗೂ ಪದ್ಮಪುರಾಣದ ಶಿವರಾಘವಸಂವಾದಕ್ಕೂ, ಶ್ವೇತಾಶ್ವತರೋಪನಿಷತ್ತಿಗೂ [೨ನೇ ಉಪದೇಶದ ೫ನೇ ಸಂವಾದದಲ್ಲಿ ಟಿಪ್ಪಣಿಯು ಬರೆಯಲ್ಪಟ್ಟಿದೆ.] ಮಾನವಪುರಾಣದಲ್ಲಿ—“ಸಕಲೋಪನಿಷದ್ವಚನಗಳ ಅರ್ಥವು ಶಿವನಲ್ಲದೆ ಬೇರೊಬ್ಬನಲ್ಲವು ಆ ಅದ್ವಿತೀಯಶಿವಜ್ಞಾನವು ಅಜ್ಞಾನವನ್ನು ಹೋಗಲಾಡಿಸತಕ್ಕದ್ದು” ಎಂದು ಮನುವಿನಿಂದ ಹೇಳಲ್ಪಟ್ಟಿದೆ. ಋಗ್ವೇದದಲ್ಲಿರುವ ಒಂದಾನೊಂದು ಮಂತ್ರದಲ್ಲಿ—“ಯಾವ ಪ್ರಸಿದ್ಧನಾದ ಶಿವನು ವಿಷ್ಣುವೇ ಬಾಣವಾಗುಳ್ಳವನೋ, ಮೇರುಪರ್ವತವೇ ಬಿಲ್ಲಾಗುಳ್ಳವನೋ, ಸಕಲ ಔಷಧವನ್ನು ನಾಶಮಾಡುತ್ತಾನೋ ಆ ಶಿವನನ್ನೇ ಸ್ತುತಿಸು. ಮತ್ತು ಲೀಲಾವಿಗ್ರಹಧಾರಿಯಾದ ಭಕ್ತಾಪನ್ನಿವಾರಕನಾದ ಶಿವನನ್ನು ಮುಕ್ತಿಯನ್ನು ಹೊಂದುವುದಕ್ಕಾಗಿ ನಮಸ್ಕಾರಗಳಿಂದ ಸೇವಿಸು. ಪ್ರಾಣದಾಯಕನಾದ ಆ ಪ್ರಾಣಲಿಂಗರೂಪನಾದ ಶಿವನನ್ನು ಇಷ್ಟಲಿಂಗನೆಂದು ಪೂಜಿಸುತ್ತೇವೆ,, ಎಂದು ಉಕ್ತವಾಗಿದೆ. ನಾರಾಯಣೋಪನಿಷತ್ತಿನಲ್ಲಿ—“ಸಕಲ ಪ್ರಪಂಚಕ್ಕೆ ಸ್ವಾಮಿಯೂ, ಜೀವರುಗಳಿಗೆ ಸ್ವಾಮಿಯೂ, ಶಾಶ್ವತನೂ, ನಾಶರಹಿತನೂ ಆದ ಶಿವನನ್ನು ಪೂಜಿಸುತ್ತೇನೆ,, ಇಲ್ಲಿಗೆ ಸಕಲವೇದೋಪನಿಷತ್ತುಗಳಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ನಾಲ್ಕುವೇದಗಳಿಗೂ ಮೂವ

ರ್ಸ್ವವೇದೋಪನಿಷತ್ಸು ಶಿವಾಧಿಕ್ಯಂ. ಚತುರ್ವೇದದದ್ವಾತ್ರಿಂಶದುಪನಿಷಜ್ಜನಯಿತ್ರ್ಯಾಂ ಮಹಾಗಾಯತ್ರ್ಯಾಂ,—"ಓಂಭೂಃ ಓಂಭುವಃ ಓಂಸುವಃ ಓಂಮಹಃ ಓಂಜನಃ ಓಂತಪಃ ಓಂಸತ್ಯಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ | ಓಮಾಪೋ ಜ್ಯೋತಿರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಂ" ಆದಿತ್ಯಪುರಾಣೇ ಶಿವಸಹಸ್ರನಾಮಸ್ತೋತ್ರೇ,—ವಿಷ್ಣುಃ, "ಗಾಯತ್ರೀವಲ್ಲಭಃ ಪ್ರಾಂಶುರ್ವಿಶ್ವಾವಾಸೋ ದಿಗಂಬರಃ" ಇತಿ ಗಾಯತ್ರೀಮಂತ್ರೇ ಶಿವಾಧಿಕ್ಯಂ. ಹೇ ಚೋಳ! ಇತ್ಥಂ ವೇದೋಪವೇದವೇದಾಂಗೋಪಾಂಗರೂಪಾಸ್ವಷ್ಟಾದಶವಿದ್ಯಾಸು ಶಿವಾಧಿಕ್ಯಂ ವಿಜ್ಞೇಯಂ. ವಿಸ್ತರೇಣಾಲಂ.

ಇತಿ ಸರ್ವಶಾಸ್ತ್ರೇಷು ಶಿವಾಧಿಕ್ಯನಿರ್ಣಯೋ ದ್ವಾದಶೋಪದೇಶೇ ಷಷ್ಠಸ್ಸಂವಾದಃ.



ಶ್ರೀಃ.

## ಗಾಯತ್ರೀಮಂತ್ರಮಧ್ಯಸ್ಥಭರ್ಗಸ್‌ಶಬ್ದೇನ ಭರ್ಗಶಬ್ದೇ—ನಾಪಿ ಶಿವಾಧಿಕ್ಯನಿರ್ಣಯಃ.

ಚೋ—"ಯೋ ದೇವಸ್ಸವಿತಾಸ್ಮಾಕಂ ಧಿಯೋ ಧರ್ಮಾದಿಗೋಚರಃ || ಪ್ರೇರಯೇತ್ತಸ್ಯ ಯದ್ಭರ್ಗಸ್ತದ್ವರೇಣ್ಯಮುಪಾಸ್ಮಹೇ" ಇತಿ ಸ್ಮೃತಿವಾಕ್ಯಾತ್, "ಭ್ರ

---

ತ್ತೆರಡು ಉಪನಿಷತ್ತುಗಳಿಗೂ ಮಾತೃಸ್ವರೂಪವಾದ ಗಾಯತ್ರೀಮಂತ್ರದಲ್ಲಿ—"ಓಂಭೂಃ........ ಎಂದು ಉಕ್ತವಾಗಿದೆ. ಆದಿತ್ಯಪುರಾಣದಲ್ಲಿರುವ ಶಿವಸಹಸ್ರನಾಮಸ್ತೋತ್ರದಲ್ಲಿ—"ಶಿವನು ಗಾಯತ್ರೀಮಂತ್ರಾಧಿದೇವತೆಯು,, ಎಂದು ವಿಷ್ಣುವಿನಿಂದ ಹೇಳಲ್ಪಟ್ಟಿದೆ. ಇಲ್ಲಿಗೆ ಗಾಯತ್ರೀಮಂತ್ರದಲ್ಲುಕ್ತವಾಗಿರುವ ಶಿವಾಧಿಕ್ಯವು ಸಂಪೂರ್ಣವಾದುದು. ಎಲೈ ಚೋಳನೇ! ಈ ಪ್ರಕಾರವಾಗಿ ವೇದೋಪವೇದವೇದಾಂಗೋಪಾಂಗಸ್ವರೂಪಗಳಾದ ಅಷ್ಟಾದಶವಿದ್ಯೆಗಳಲ್ಲೂ ಶಿವಾಧಿಕ್ಯವನ್ನು ತಿಳಿಯತಕ್ಕದ್ದು. ಬಹಳ ಮಾತಿನಿಂದೇನು?

ಎಂಬಲ್ಲಿಗೆ ಸಮಸ್ತಶಾಸ್ತ್ರಗಳಲ್ಲಿ ಶಿವಾಧಿಕ್ಯನಿರ್ಣಯವನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಆರನೆಯ ಸಂವಾದವು ಮುಗಿದುದು.



### ಗಾಯತ್ರೀಮಂತ್ರಮಧ್ಯದಲ್ಲಿರುವ ಭರ್ಗಶ್ಶಬ್ದದಿಂದಲೂ ಭರ್ಗಶಬ್ದದಿಂದಲೂ ಶಿವಾಧಿಕ್ಯನಿರ್ಣಯವು.

ಚೋ—ಎಲೈ ರೇಣುಕಗಣೇಶನೇ! ಧರ್ಮಾದಿಗಳಿಗೆ ಪ್ರತ್ಯಕ್ಷನಾದ ಯಾವ ಸೂರ್ಯನು ನಮ್ಮ ಬುದ್ಧಿಯನ್ನು ಪ್ರೇರಿಸತಕ್ಕವನಾಗಿರುವನೋ, ಅವನಿಗೆ ಯಾವ ಕಾರಣದಿಂದ ಭರ್ಗನೆಂಬ

ಸ್ತೋಪಾಕೇ'' ಇತಿ ಧಾತುನಿಷ್ಪನ್ನೋ ಗಾಯತ್ರೀಮಂತ್ರಮಧ್ಯಸ್ಥಿತಭರ್ಗಸ್‌ಶಬ್ದಸ್ಸಕಾರಾಂತಸ್ಸೂರ್ಯನಾರಾಯಣತೇಜಃ ಪರಃ. ನತು ಶಿವಪರಃ.

ರೇ—ಹೇ ಚೋಳ! ತ್ವತ್ಕೃತಶಂಕಾಯಾಃ ಪರಿಹಾರಸ್ಸಮ್ಯಕ್ಛ್ರೂಯತಾಂ, ಭೃಜ್ಯಂತೇ ಸರ್ವಕರ್ಮಾಣಿ ಅನೇನೇತಿ ಭರ್ಗಃ, ಅಯಂ ಭರ್ಗಸ್‌ಶಬ್ದಃ ಸಕಾರಾಂತೋಪಿ ಸೂರ್ಯಮಂಡಲಮಧ್ಯವರ್ತಿಪರಶಿವತೇಜಃ ಪರಃ, ತದುಕ್ತಂ ಶ್ವೇತಾಶ್ವತರೋಪನಿಷದಿ,—"ಯದಾ ತಮಸ್ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸಚ್ಛಿವ ಏವ ಕೇವಲಃ | ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ" ಮಾನವಪುರಾಣೇ,—ಮನುಃ, "ಋತಂ ಸತ್ಯಂ ಪರಂಬ್ರಹ್ಮ ಪುರುಷಂ ಸೋಮಮೀಶ್ವರಂ || ಊರ್ಧ್ವರೇತಸ್ಕಮುತ್ಪತ್ತಿಸ್ಥಿತಿಸಂಹಾರಕಾರಣಂ || ನಮಸ್ಕಾರ್ಯಂ ಸದಾ ಸರ್ವೈರ್ಮಂಡಲಸ್ಥಂ ರವೇರಪಿ || ಪರತತ್ವಸಮಾಖ್ಯಂ ಚ ಶಿವಂ ಧ್ಯಾಯಂತಿ

---

ಹೆಸರಿರುತ್ತದೆಯೋ, ಆ ಕಾರಣದಿಂದ ಆ ಸೂರ್ಯನನ್ನು ಶ್ರೇಷ್ಠನನ್ನಾಗಿ ಭಾವಿಸಿ ಸೇವಿಸುತ್ತೇವೆ,, ಎಂದು ಸ್ಮೃತಿವಾಕ್ಯವು ಹೇಳುತ್ತಿರುವುದರಿಂದ ಪಾಕಾರ್ಥಕವಾದ "ಭ್ರಸ್ಜೋ" ಎಂಬ ಧಾತುವಿನಿಂದ ನಿಷ್ಪನ್ನವಾದ ಗಾಯತ್ರೀಮಂತ್ರಮಧ್ಯದಲ್ಲಿರುವ "ಭರ್ಗಸ್, ಶಬ್ದವು ಸಕಾರಾಂತವಾಗಿ ಸೂರ್ಯನಾರಾಯಣನೆಂಬ ತೇಜೋಮೂರ್ತಿಯನ್ನು ಹೇಳತಕ್ಕುದಲ್ಲದೆ, ಶಿವನನ್ನು ಹೇಳತಕ್ಕುದಲ್ಲವು.

ರೇ—ಎಲೆ ಚೋಳನೇ! ನಿನ್ನ ಪ್ರಶ್ನೆಗೆ ಸಮಾಚೀನವಾದ ಉತ್ತರವನ್ನು ಕೇಳು; ಭೃಜ್ಯಂತೇ ಸರ್ವಕರ್ಮಾಣಿ ಅನೇನ. (ಇದರಿಂದ ಸಮಸ್ತ ಕರ್ಮಗಳು ನಾಶಗೊಳಿಸಲ್ಪಡುತ್ತವೆ.) ಎಂಬ ವ್ಯುತ್ಪತ್ತಿಯಿಂದ ನಿಷ್ಪನ್ನವಾಗಿರುವ ಭರ್ಗಸ್ ಶಬ್ದವು ಸಾಂತವಾದರೂ ಸೂರ್ಯಮಂಡಲ ಮಧ್ಯವರ್ತಿಯಾದ ಪರಶಿವರೂಪವಾದ ತೇಜಸ್ಸನ್ನು ಹೇಳತಕ್ಕುದಾಗಿದೆ *ಆ ವಿಷಯವು ಶ್ವೇತಾಶ್ವತರೋಪನಿಷತ್ತಿನಲ್ಲಿ—"ಯಾವಾಗ ತಮಸ್ಸೂ ಇರಲಿಲ್ಲವೋ, ಹಗಲೂ ರಾತ್ರಿಯೂ ಇರಲಿಲ್ಲವೋ, ಸತ್ತೂ ಅಸತ್ತೂ ಇರಲಿಲ್ಲವೋ, ಶಿವನೊಬ್ಬನೇ ಮಾಯಾರಹಿತನಾಗಿದ್ದನೋ, ಆ ಶಿವಾಖ್ಯವಾದ ಪರಬ್ರಹ್ಮವು ನಾಶರಹಿತವೂ ಚಿತ್ಸೂರ್ಯನಿಗಿಂತ ಶ್ರೇಷ್ಠವೂ ಆದುದೋ, ಅದರದೆಸೆಯಿಂದ ಪ್ರಾಚೀನವಾದ ಪ್ರಜ್ಞೆಯು ಪ್ರಸಾರವನ್ನು ಹೊಂದಿತೋ,, ಎಂದು ಹೇಳಲ್ಪಟ್ಟಿದೆ. ಮಾನವಪುರಾಣದಲ್ಲಿ—"ವ್ಯಾವಹಾರಿಕಸತ್ಯತ್ವ, ಪಾರಮಾರ್ಥಿಕಸತ್ಯತ್ವಗಳೆರಡರಿಂದ ಕೂಡಿದವನೂ, ಪರಬ್ರಹ್ಮಪದವಾಚ್ಯನೂ, ಪುರುಷಶಬ್ದಾಭಿಧೇಯನೂ. ಉಮಾಖ್ಯವಾದ ಶಕ್ತಿಯಿಂದೊಡಗೂಡಿದವನೂ, ಸಕಲಲೋಕಾಧಿಪತಿಯೂ, ಊರ್ಧ್ವರೇತಸ್ಕನೂ, ಸೃಷ್ಟಿಸ್ಥಿತಿಸಂಹಾರಕಾರಣನೂ, ಯಾವಾಗಲೂ ಎಲ್ಲರಿಂದಲೂ ನಮಸ್ಕಾರಮಾಡಿಸಿಕೊಳ್ಳಲಿಕ್ಕೆ ಯೋಗ್ಯನೂ, ಸೂರ್ಯಮಂಡಲಾಂತರ್ವ

---

*ಇದರ ವಿವರವನ್ನು ಸೂತಗೀತೆಗೆ ವಿದ್ಯಾರಣ್ಯರಿಂದ ಬರೆಯಲ್ಪಟ್ಟಿರುವ ವ್ಯಾಖ್ಯಾನದಲ್ಲಿ ನೋಡಿರಿ.

ನರತಂ'' ಇತಿ. ಹೇ ಚೋಳ! ಇತ್ಥಂ ಭರ್ಗಶ್ಶಬ್ದಸ್ಸಕಾರಾಂತಸ್ಸೂರ್ಯಮಂಡಲಮಧ್ಯಸ್ಥಶಿವತೇಜಃಪರ ಇತಿ ನಿಶ್ಚೇತವ್ಯಃ. ಅಥವಾ "ಹರಸ್ಸ್ಮರಹರೋಭರ್ಗಃ'' ಇತ್ಯಮರವಾಕ್ಯಾತ್, ಭೃಞ್ಭರಣ ಇತಿ ಧಾತುನಿಷ್ಪನ್ನಃ. ಅಕಾರಾಂತೋ ಭರ್ಗಶಬ್ದೋಽಪಿ ರುದ್ರವಾಚಕಃ, ತದುಕ್ತಮಾದಿತ್ಯಪುರಾಣೇ,—"ಭರ್ಗೋ ವಿಶ್ವಸ್ಯ ಭರಣಾದ್ಭಾಜ್ಯತೇ ಸ ಉಮಾಪತಿಃ ‖ ತಸ್ಯ ಜ್ಞಾನಮಯೀ ಶಕ್ತಿರನನ್ಯಾ ಗಿರಿಜಾ ಶಿವಾ ‖ ತಯಾ ಸಹ ಮಹಾದೇವಸ್ಸೃಜತ್ಯವತಿ ಹಂತಿ ಚ'' ಇತಿ. ಮೈತ್ರಾಯಣ ಶ್ರುತೌ,—"ಭರ್ಗಂ ಭವಂತಂ ವಿಚಿಂತಯಾಮಿ | ಏಷ ರುದ್ರೋ ಭರ್ಗಾಖ್ಯೋ ಬ್ರಹ್ಮವಾದಿನಃ'' ಇತಿ. ವೇದಪಾದಸ್ತವೇ,—"ಭೂತಿಭೂಷಾಯ ಭಕ್ತಾನಾಂ ಭೀತಿಭಂಗರತಾಯ ತೇ ‖ ನಮೋ ಭವಾಯ ಭರ್ಗಾಯ ನಮೋ ರುದ್ರಾಯ ಮೀಢುಷೇ'' ಇತ್ಯಕಾರಾಂತೋ ಭರ್ಗಶಬ್ದೋಽಪಿ ರುದ್ರಪರ ಇತಿ ನಿಶ್ಚೇತವ್ಯಃ.

ಇತಿ ಗಾಯತ್ರೀಮಂತ್ರಮಧ್ಯಸ್ಥಭರ್ಗಸ್ಶಬ್ದೇನ ಭರ್ಗಶಬ್ದೇನಾಪಿ ಶಿವಾಧಿಕ್ಯನಿರ್ಣಯೋ ದ್ವಾದಶೋಪದೇಶೇ ಸಪ್ತಮಸ್ಸಂವಾದಃ.

---

ಣಿಯೂ. ಪರತತ್ವವೆಂಬ ಹೆಸರನ್ನು ಪಡೆದವನೂ ಆದ ಶಿವನನ್ನು ಯೋಗಿಗಳು ಯಾವಾಗಲೂ ಧ್ಯಾನಿಸುತ್ತಾರೆ,, ಎಂದು ಮನುವಿನಿಂದ ಹೇಳಲ್ಪಟ್ಟಿದೆ. ಎಲೆ ಚೋಳನೇ ! ಈ ರೀತಿಯಾಗಿ ಸಕಾರಾಂತವಾದ ಭರ್ಗಶ್ಶಬ್ದವು ಸೂರ್ಯಮಂಡಲಮಧ್ಯಾಂತರ್ವರ್ತಿ ಶಿವಾಖ್ಯತೇಜಃಪರವಾದ್ದೆಂದು ನಿಶ್ಚೈಸುವುದು. ಅಥವಾ "ಹರಸ್ಮರಹರೋಭರ್ಗಃ,, ಎಂದು ಅಮರವಾಕ್ಯವಿರುವುದರಿಂದ ಭರಣಾರ್ಥಕವಾದ ಭೃ ಧಾತುವಿನಿಂದ ನಿಷ್ಪನ್ನವಾದ ಅಕಾರಾಂತವಾದ ಭರ್ಗಶಬ್ದವೂ ರುದ್ರನನ್ನೇ ಹೇಳುತ್ತದೆ. ಅದೇ ವಿಷಯವು ಆದಿತ್ಯಪುರಾಣದಲ್ಲಿ—"ಆ ಉಮಾಪತಿಯಾದ ಶಿವನು ಪ್ರಪಂಚವನ್ನು ಪೋಷಿಸತಕ್ಕವನಾದುದರಿಂದ ಭರ್ಗನೆಂದು ತಿಳಿಯಲ್ಪಡುತ್ತಾನೆ. ಆತನ ಜ್ಞಾನಸ್ವರೂಪಿಣಿಯಾದ ಶಕ್ತಿಯು ಅಸಮಾನಳೂ ಆದ ಪಾರ್ವತಿಯೊಡನೆ ಮಹಾದೇವನು ಜಗತ್ತನ್ನು ಸೃಷ್ಟಿಸುತ್ತಾನೆ, ಪಾಲಿಸುತ್ತಾನೆ, ಸಂಹರಿಸುತ್ತಾನೆ,, ಎಂದು ಉಕ್ತವಾಗಿದೆ. ಮೈತ್ರಾಯಣಶ್ರುತಿಯಲ್ಲಿ—"ಭರ್ಗಶಬ್ದವಾಚ್ಯನಾದ ನಿನ್ನನ್ನು ಧ್ಯಾನಿಸುತ್ತೇನೆ. ಬ್ರಹ್ಮವಾದಿಗಳು ಈ ರುದ್ರನು ಭರ್ಗ ಎಂಬ ಹೆಸರುಳ್ಳವನೆಂದು ಹೇಳುತ್ತಾರೆ,, ಎಂದು ಉಕ್ತವಾಗಿದೆ. ವೇದಪಾದಸ್ತವದಲ್ಲಿ—"ಎಲೈ ಶಿವನೇ ! ಭಸ್ಮವೇ ಅಲಂಕಾರವಾಗುಳ್ಳವನೂ, ಭಕ್ತರಿಗುಂಟಾದ ಸಂಸಾರಭಯವನ್ನು ಪರಿಹರಿಸುವುದರಲ್ಲಾಸಕ್ತನೂ, ಸಕಲ ಜಗದುತ್ಪತ್ತಿಗೆ ಮೂಲಕಾರಣನೂ, ಭರ್ಗಶಬ್ದವಾಚ್ಯನೂ, ರುದ್ರನೂ ಆದ ನಿನಗೋಸ್ಕರ ನಮಸ್ಕಾರವು,, ಎಂದು ಉಕ್ತವಾಗಿದೆ. ಈ ಕಾರಣದಿಂದ ಅಕಾರಾಂತವಾದ ಭರ್ಗಶಬ್ದವೂ ಶಿವಪರವಾದುದೆಂದು ನಿಶ್ಚೈಸತಕ್ಕದ್ದು.

ಎಂಬಲ್ಲಿಗೆ ಗಾಯತ್ರೀಮಂತ್ರಮಧ್ಯದಲ್ಲಿರುವ ಭರ್ಗಸ್ಶಬ್ದದಿಂದಲೂ ಭರ್ಗಶಬ್ದದಿಂದಲೂ ಶಿವಾಧಿಕ್ಯನಿರ್ಣಯವನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಏಳನೆಯ ಸಂವಾದವು ಮುಗಿದುದು.

ಶ್ರೀಃ

# ವ್ಯಾಸವಿರಚಿತಶಿವಾಧಿಕ್ಯವಿಧಿಃ.

ಟೀ—ಭೋ ವಿಜಯೇಂದ್ರಚೋಳ! ನಾರಾಯಣಾವತಾರೇಣ ಕೃಷ್ಣದ್ವೈಪಾಯನೇನ ಮುನಿನಾ ಸ್ವಸ್ಯ ವೀರಮಾಹೇಶ್ವರದೂರ್ವಾಸಭಗವತ್ಪಾದಶಾಪಸಂಜಾತಭುಜಸ್ತಂಭವಿಮೋಚನಾಯ ಪ್ರಣೀತಂ ರುದ್ರಾಧಿಕ್ಯಬೋಧಕಸ್ತುತಿರೂಪಮಷ್ಟಕಂ ತ್ವಯಾ ಸಮ್ಯಕ್ ಶ್ರೂಯತಾಂ, ಸ್ಕಾಂದೇ ಕಾಶೀಖಂಡೇ,-ವ್ಯಾಸಃ, "ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ ತದ್ಬ್ರಹ್ಮೈಕಂ ನೇಹ ನಾನಾಸ್ತಿ ಕಿಂಚಿತ್ ॥ ಯದ್ಯಸ್ತ್ಯನ್ಯಃ ಕೋಪಿ ವಾ ಕುತ್ರಚಿದ್ವಾ ವ್ಯಾಚಕ್ಷ್ವಾಂತರ್ಯಸ್ಯ ಶಕ್ತಿಸ್ಸಮಗ್ರಾ ॥೧॥ ಯಃ ಕ್ಷೀರಾಬ್ಧೇರ್ಮಂದರಾಘಾತಜಾತೋ ಜ್ವಾಲಾಮಾಲಃ ಕಾಲಕೂಟೋಽತಿಭೀಮಃ ॥ ತಂ ಸೋಢುಂ ವಾ ಕಸ್ಸಮರ್ಥೋ ಮಹೇಶಾದ್ಯಜ್ಜ್ವಾಲಾಭಿಃ ಕೃಷ್ಣತಾಮಾಪ ವಿಷ್ಣುಃ ॥ ೨ ॥ ಯದ್ಬಾಣೋಽಭೂಚ್ಛ್ರೀಪತಿರ್ಯಸ್ಯ ಯಂತಾ ಲೋಕೇಶಸ್ಸ್ಯಾತ್ಸ್ಯಂದನಂ ಭೂಸ್ಸಮಸ್ತಾ ॥ ವಾಹಾ ವೇದಾ ಯಸ್ಯ ಚೈಕೇಷುಪಾತಾದ್ದಗ್ಧಾ ಗ್ರಾಮಾಸ್ತ್ರೈಪುರಾಸ್ತೇ ಸಮಸ್ತಾಃ ॥ ೩ ॥ ಯಃ ಕಂದರ್ಪೋ ವೀಕ್ಷ್ಯ

---

## ವ್ಯಾಸವಿರಚಿತ ಶಿವಾಧಿಕ್ಯವಿಧಿಯು.

ಟೀ—ಎಲೈ ವಿಜಯೇಂದ್ರಚೋಳನೇ ! ಬಹುಮಾತುಗಳಿಂದೇನು? ನಾರಾಯಣಾವತಾರಿಯೆನಿಸಿದ ವ್ಯಾಸಮುನಿಯು ತನಗೆ ವೀರಮಾಹೇಶ್ವರನಾದ ದೂರ್ವಾಸ ಮಹಾಮುನಿಯ ಶಾಪದಿಂದುಂಟಾದ ಭುಜಸ್ತಂಭವನ್ನು ಬಿಡಿಸಿಕೊಳ್ಳುವುದಕ್ಕಾಗಿ ಮಾಡಿದ ರುದ್ರಾಧಿಕ್ಯವನ್ನು ಹೇಳುವ ಸ್ತುತಿರೂಪವಾದ ಅಷ್ಟಕವನ್ನು ನೀನು ಚೆನ್ನಾಗಿ ಕೇಳು; ಸ್ಕಾಂದಪುರಾಣದಲ್ಲಿರುವ ಕಾಶೀಖಂಡದಲ್ಲಿ—"ರುದ್ರನು ಅದ್ವಿತೀಯನು. ಅವನೇ ಬ್ರಹ್ಮವು. ಈ ಲೋಕದಲ್ಲಿ ಸಕಲವೂ ಅವನ ಸ್ವರೂಪವೇ ಆಗಿದೆ. ಅದನ್ನು ಹೊರತು ಅನೇಕಪ್ರಕಾರವಾದುದಿಲ್ಲವು. ಆ ಪರಬ್ರಹ್ಮಕ್ಕಿಂತ ಬೇರೆಯಾಗಿ ಯಾವುದಾದರೂ ಎಲ್ಲಾದರೂ ಇದ್ದರೆ ಅದನ್ನು ಹೇಳಿ. ಯಾವ ಬ್ರಹ್ಮದೊಳಗೆ ನಿತ್ಯಸಮವೇತವಾಗಿರುವ ಶಕ್ತಿಯು ಸಕಲ ವಸ್ತುಗಳಲ್ಲೂ ಪರಿಪೂರ್ಣವಾದದ್ದೋ, ಕ್ಷೀರಸಮುದ್ರದಲ್ಲಿ ಮಂದರಪರ್ವತದ ಹೊಡತದಿಂದ ಹುಟ್ಟಿ ಉರಿಯನ್ನು ಕಾರುತ್ತಿದ್ದ ಭಯಂಕರವಾದ ಕಾಲಕೂಟವನ್ನು ಮಹೇಶ್ವರನಾದ ಆದಿರುದ್ರನು ಸಹಿಸಿದನಲ್ಲದೆ ಬೇರೆ ಯಾವನು ಸಹಿಸುವುದರಲ್ಲಿ ಶಕ್ತನಾದನು? ವಿಷ್ಣುವು ಆ ಕಾಲಕೂಟಜ್ವಾಲೆಯಿಂದ ಕಪ್ಪಾದನು. ಯಾವ ಆದಿರುದ್ರನಿಗೆ ಲಕ್ಷ್ಮೀಪತಿಯಾದ ವಿಷ್ಣುವು ಬಾಣವಾದನೋ, ಲೋಕನಾಯಕನಾದ ಬ್ರಹ್ಮನು ಸಾರಥಿಯಾದನೋ, ಸಕಲ ಭೂಮಿಯು ರಥವಾಯಿತೋ, ನಾಲ್ಕು ವೇದಗಳು ಕುದುರೆಗಳಾದವೋ, ಯಾವನ ಒಂದೇ ಬಾಣದಿಂದ ತ್ರಿಪುರಸಂಬಂಧಗಳಾದ ಸಮಸ್ತ ಗ್ರಾಮಗಳು ಸುಡಲ್ಪಟ್ಟವೋ,

ಮಾಣಸ್ಸಮಸ್ತೈರ್ದೇವೈರಸ್ಯೈರ್ಭಸ್ಮ ಜಾತಸ್ಸ್ವಯಂ ಹಿ || ಪೌಷ್ಪೈರ್ಬಾಣೈಸ್ತ್ರೋ
ಪಿ ವಿಶ್ವೈಕಜೇತುಃ ಕೋ ವಾ ಸ್ತುತ್ಯಃ ಕಾಮಜೇತುಸ್ತತೋಽನ್ಯಃ ||೪|| ಯಂ ವೈ
ವೇದೋ ವೇದನೋ ನೈವ ವಿಷ್ಣುರ್ನೋ ವೈ ವೇಧಾ ನೋ ಮನೋ ನೈವ ವಾಣೀ||
ತಂ ದೇವೇಶಂ ಮಾದೃಶಃ ಕೋಽಲ್ಪಮೇಧಾ ಯಾಥಾರ್ಥ್ಯೆನ್ನೋ ವೇತ್ತ್ಯಹೋ ವಿ
ಶ್ವನಾಥಂ||೫||ಯಸ್ಮಿನ್ಸರ್ವಂ ಯಸ್ತು ಸರ್ವತ್ರ ಸರ್ವೋ ಯೋ ವೈ ಹರ್ತಾ ಯೋಽ
ವಿತಾ ಯೋ ವಿಧಾತಾ|| ನೋ ಯಸ್ಯಾದಿರ್ಯಸ್ಸಮಸ್ತಾದಿರೇಕೋ ನೋ ಯಸ್ಯಾಂ
ತೋ ಯೋಂತಕೃತ್ತಂ ನತೋಽಸ್ಮಿ ||೬|| ಯಸ್ಯೈಕಾಖ್ಯಾ ವಾಜಿಮೇಧೇನ ಸಾಮ್ಯಾ
ಯಸ್ಯಾಽನತ್ಯಾ ಚೈಕಯಾಪೀಂದ್ರಲಕ್ಷ್ಮೀಃ || ಯಸ್ಯ ಸ್ತುತ್ಯಾ ಲಭ್ಯತೇ ಸತ್ಯ
ಲೋಕಸ್ತಸ್ಯಾರ್ಚಾಂತೇ ಮೋಕ್ಷಲಕ್ಷ್ಮೀರದೂರಾ ||೭|| ನಾನ್ಯಂ ದೇವಂ ವೇದ್ಮ್ಯ
ಹಂ ಶ್ರೀಮಹೇಶಾನ್ನಾನ್ಯಂ ದೇವಂ ಸ್ತೌಮಿ ಶಂಭೋ ಋತೇಽಹಂ|| ನಾನ್ಯಂ ದೇವಂ
ವಾ ನಮಾಮಿ ತ್ರಿನೇತ್ರಾತ್ಸತ್ಯಂ ಸತ್ಯಂ ಸತ್ಯಮೇತನ್ಮೃಷಾ ನ||೮||(ಶ್ರೀಸೂತಃ) ಇ
ತ್ಥಂ ಯಾವತ್ಸ್ತೌತಿ ಶಂಭುಂ ಮಹರ್ಷಿಸ್ತಾವನ್ನಂದೀಶಸ್ಯ ಚಕ್ಷುಃ ಪ್ರಸಾದಾತ್ ||

ಪ್ರಪಂಚವನ್ನೇ ಪುಷ್ಪಬಾಣಗಳಿಂದ ಜೈಸಿದವನಾಗಿದ್ದ ಮನ್ಮಥನು ಸಕಲ ದೇವತೆಗಳೂ ಇತರರೂ ನೋಡುತ್ತಿರುವಾಗಲೇ ಯಾವ ರುದ್ರನ ಹಣೆಗಣ್ಣಿನ ಒಂದು ಕಿಡಿಯಿಂದ ಸುಡಲ್ಪಟ್ಟು ಬೂದಿಯಾದನೋ, ಮನ್ಮಥನಂ ಜೈಸಿದ ಆ ರುದ್ರನಲ್ಲದೆ ಮತ್ತಾವನು ಸ್ತುತ್ಯನು? ಯಾವ ರುದ್ರನ ಸ್ವರೂಪವನ್ನು ವೇದವು ತಿಳಿಯದುದಾಯಿತೋ, ವಿಷ್ಣುಬ್ರಹ್ಮರೂ ತಿಳಿಯದವರಾದರೋ, ಮನೋವಾಕ್ಕುಗಳೂ ತಿಳಿಯದವುಗಳಾದವೋ, ದೇವತೆಗಳಿಗೊಡೆಯನೂ ಸಕಲ ಜಗತ್ಪ್ರಾಥನೂ ಆಶ್ಚರ್ಯಕರನೂ ಆಗಿರುವ ಆ ಆದಿರುದ್ರನನ್ನು ನನ್ನಂಥ ಅಲ್ಪಮತಿಯು ಯಥಾರ್ಥವಾಗಿ ತಿಳಿಯಲಾರನು. ಯಾವನಲ್ಲಿ ಸಕಲ ಪ್ರಪಂಚವು ಅಡಗಿರುತ್ತದೆಯೋ, ಯಾವನು ಸರ್ವವ್ಯಾಪಕನೋ, ಯಾವನು ಸರ್ವರೂಪನೋ, ಯಾವನು ಲೋಕೋತ್ಪಾದಕನೂ ಲೋಕಪಾಲಕನೂ ಲೋಕನಾಶಕನೂ ಆಗಿರುತ್ತಾನೆಯೋ, ಯಾವನಿಗೆ ಆದಿಯಿಲ್ಲವೋ, ಯಾವನು ಸಕಲಕ್ಕೂ ಆದಿಯಾಗಿ ಒಬ್ಬನೇ ಆಗಿರುತ್ತಾನೆಯೋ, ಯಾವನಿಗೆ ನಾಶವಿಲ್ಲವೋ, ಯಾವನು ಸಕಲ ಪ್ರಪಂಚವನ್ನೂ ನಾಶಮಾಡತಕ್ಕವನೋ, ಆತನನ್ನು ನಮಿಸುತ್ತೇನೆ. ಯಾವನ ಒಂದು ನಾಮವಾದರೂ ಉಚ್ಚರಿಸಲ್ಪಟ್ಟಮಾತ್ರದಿಂದ ಅಶ್ವಮೇಧಫಲವನ್ನು ಕೊಡತಕ್ಕುದೋ, ಯಾವನನ್ನು ಒಂದಾವೃತ್ತಿ ನಮಿಸಿದವನಿಗೆ ಇಂದ್ರಸಂಪತ್ತುಂಟಾಗುವುದೋ, ಯಾವನನ್ನು ಸ್ತೋತ್ರಮಾಡಿದವನಿಗೆ ಸತ್ಯಲೋಕಪ್ರಾಪ್ತಿಯುಂಟಾಗುವುದೋ, ಯಾವನನ್ನು ಪೂಜಿಸುವವನಿಗೆ ಮೋಕ್ಷಸಂಪತ್ತು ಸನ್ನಿಹಿತವಾಗುವುದೋ ಅದ್ದರಿಂದ ನಾನು ಮಹೇಶ್ವರನಾದ ರುದ್ರನನ್ನು ಹೊರತು ಅನ್ಯನನ್ನು ತಿಳಿಯುವುದಿಲ್ಲ. ಸ್ತೋತ್ರಮಾಡುವುದಿಲ್ಲ. ನಮಸ್ಕರಿಸುವುದಿಲ್ಲ. ಇದು ಸತ್ಯವು! ಸತ್ಯವು!! ಸತ್ಯವು!!! ಸುಳ್ಳಲ್ಲವು. ಈ ರೀತಿಯಾಗಿ ಶ್ಲೋಕಗಳಿಂದ ವ್ಯಾಸನಿಂದ ಸ್ತೋತ್ರಮಾಡಲ್ಪಟ್ಟದೆ. ಎಂದೀ ಪ್ರಕಾರವಾಗಿ ವ್ಯಾಸನು ಎಷ್ಟರಲ್ಲಿ ಶಿವನನ್ನು ಸ್ತುತಿಸಿದನೋ ಅಷ್ಟರಲ್ಲಿ ನಂದೀಶ್ವರನ ನೇತ್ರಾನುಗ್ರಹದಿಂದ ಬಿಡಲ್ಪ

ತದ್ದೋಸ್ತಂಭಂ ತ್ಯಕ್ತ್ವಾಂಶ್ಚಾ ಬಭಾಷೇ ಸ್ಮಾರಂ ಸ್ಮಾರಂ ಬ್ರಹ್ಮವಿದ್ಭ್ಯೋ ನಮೋ ವಃ || ಇಮಂ ಸ್ತವಂ ಮಹಾಪುಣ್ಯಂ ವ್ಯಾಸೇನ ಪರಿಕೀರ್ತಿತಂ || ಯಃ ಪಠೇದ್ಭುವಿ ಮೇಧಾವೀ ತಸ್ಮೈ ತುಷ್ಯತಿ ಶಂಕರಃ || ವ್ಯಾಸಾಷ್ಟಕಮಿದಂ ಪ್ರಾತಃ ಪಠಿತವ್ಯಂ ಪ್ರಯತ್ನತಃ || ದುಸ್ಸ್ವಪ್ನದೋಷಶಮನಂ ಶಿವಸಾಮೀಪ್ಯಕಾರಣಂ|| ಮಾತೃಹಾ ಪಿತೃಹಾ ವಾಪಿ ಬ್ರಹ್ಮಘ್ನೋ ಗುರುತಲ್ಪಗಃ ||ಸುರಾಪಾಸ್ಸ್ವರ್ಣಹೃದ್ವಾಪಿ ನಿಷ್ಪಾಪೀ ಸ್ಯಾತ್ಸ್ತುತೇರ್ಜಪಾತ್ '' ಆದಿತ್ಯಪುರಾಣೇ,—ವ್ಯಾಸಃ, ''ಭಗವನ್ನ್ಕೃತಕೃತ್ಯೋಽಸ್ಮಿ ದರ್ಶನಾತ್ತವ ಶಂಕರ || ಜ್ಞಾತಂ ತ್ವದ್ವಿಷಯಂ ಜ್ಞಾನಂ ದೇವಾನಾಮಪಿ ದುರ್ಲಭಂ || ಭಕ್ತಿಂ ಪರೇ ಭಗವತಿ ತ್ವಯ್ಯೇವಾವ್ಯಭಿಚಾರಿಣೀಂ || ದೇಹಿ ಮೇ ದೇವದೇವೇಶ ನಾನ್ಯದಿಷ್ಟಂ ವರಂ ಮಮ || ಏವಮುಕ್ತ್ವೇತಿ ವಿಶ್ವೇಶೋ ವ್ಯಾಸಾಯಾಮಿತತೇಜಸೇ || ವರಂ ದತ್ವಾ ಮುನೀಂದ್ರಾಯ ಕ್ಷಣಾದಂತರ್ಹಿತೋಽಭವತ್ || ತಸ್ಮಾದ್ವ್ಯಾಸಾತ್ಪರೋ ನಾನ್ಯಶ್ಶಿವಭಕ್ತೋ ಜಗತ್ತ್ರಯೇ || ಕೃಷ್ಣೋ ವಾ ದೇವಕೀಸೂನುರರ್ಜುನೋ ವಾ ಮಹಾದ್ಯುತಿಃ || ಏವಂ ಶಿವಾಲ್ಲಬ್ಧವರಃ ಕೃಷ್ಣದ್ವೈಪಾಯ

---

ಟ್ಟ ಬಾಹುಸ್ತಂಭವುಳ್ಳವನಾಗಿ ನೆನೆ ನೆನೆದು, ಬ್ರಹ್ಮವನ್ನು ತಿಳಿದ ನಿಮಗೋಸ್ಕರ ನಮಸ್ಕಾರವೆಂದು ಹೇಳಿದನು. ವ್ಯಾಸನಿಂದ ಹೇಳಲ್ಪಟ್ಟದಾದ ಅತಿಶಯ ಪುಣ್ಯವನ್ನುಂಟುಮಾಡುವ ಈ ಸ್ತೋತ್ರವನ್ನು ಭೂಲೋಕದಲ್ಲಿ ಪಠಿಸುವ ಬುದ್ಧಿಶಾಲಿಗೋಸ್ಕರ ಶಿವನು ಸಂತೋಷಪಡುವನು. ಈ ವ್ಯಾಸೋಕ್ತವಾದ ಅಷ್ಟಕವನ್ನು ಪ್ರಾತಃಕಾಲದಲ್ಲಿ ಪ್ರಯತ್ನದಿಂದ ಪಠಿಸಬೇಕು. ಈ ಅಷ್ಟಕವು ದುಸ್ವಪ್ನದೋಷಗಳನ್ನು ವಿನಾಶಗೊಳಿಸತಕ್ಕದ್ದು. ಸಾಮೀಪ್ಯಮುಕ್ತಿಪ್ರದವಾದದ್ದು. ತಾಯನ್ನು ಕೊಂದವನೂ, ತಂದೆಯನ್ನು ಕೊಂದವನೂ, ಬ್ರಾಹ್ಮಣನನ್ನು ಕೊಂದವನೂ, ಗುರುಪತ್ನಿಗಳುಪಿದವನೂ, ಮದ್ಯಪಾಯಿಯೂ, ಸ್ವರ್ಣವನ್ನು ಕದ್ದವನೂ ಈ ಸ್ತೋತ್ರವನ್ನು ಜಪಿಸುವುದರಿಂದ ಪಾಪರಹಿತನಾಗುವನು,, ಎಂದು ಸೂತನಿಂದ ಹೇಳಲ್ಪಟ್ಟಿದೆ. ಆದಿತ್ಯಪುರಾಣದಲ್ಲಿ— ''ಭಗವಂತನಾದೆಲೈ ಶಂಕರನೇ! ನಿನ್ನ ದರ್ಶನದಿಂದ ನಾನು ಧನ್ಯನಾದೆನು. ದೇವತೆಗಳಿಂದಲೂ ಹೊಂದಲ್ಪಡಲಿಕ್ಕೆ ಶಕ್ಯವಾದ ನಿನ್ನ ವಿಷಯವಾದ ಜ್ಞಾನವನ್ನರಿತೆನು. ಎಲೈ ದೇವದೇವೇಶನೇ! ಪರಮಾತ್ಮನೂ ಷಡ್ಗುಣೈಶ್ವರ್ಯಸಂಪನ್ನನೂ ಆಗಿರುವ ನಿನ್ನಲ್ಲೇ ಅವ್ಯಭಿಚಾರಿಣಿಯಾಗುವ ಭಕ್ತಿಯನ್ನು ನನಗೆ ಕೊಡು, ಇದಕ್ಕಿಂತ ಬೇರೆಯಾದವರಲ್ಲಿ ನನಗೆ ಅಭಿಲಾಷೆಯಿಲ್ಲವು, ಎಂದು ಪ್ರಾರ್ಥಿಸಿದ ಅಮಿತತೇಜಸ್ವಿಯಾದ ಮುನಿಶ್ರೇಷ್ಠನಾದ ವ್ಯಾಸಮಹರ್ಷಿಗೆ ವಿಶ್ವೇಶ್ವರನಾದ ಶಿವನು ಆ ವರವನ್ನೇ ಕೊಟ್ಟು ಆ ಕ್ಷಣದಲ್ಲಿ ಮರೆಯಾದನು. ಆ ವ್ಯಾಸಮುನಿಗಿಂತ ಅನ್ಯನಾದ ಶಿವಭಕ್ತನು ಮೂರುಲೋಕದಲ್ಲೂ ಇಲ್ಲ. ದೇವಕೀಪುತ್ರನಾದ ಕೃಷ್ಣನಾದರೂ, ಮಹಾತೇಜಸ್ವಿಯಾದ ಅರ್ಜುನನಾದರೂ ಆ ವ್ಯಾಸನಿಂದನ್ಯನಾದ ಶಿವಭಕ್ತನಲ್ಲವು. ಈ ಪ್ರಕಾರವಾಗಿ ಶಿವನದೆಸೆಯಿಂದ ವರವನ್ನು ಪಡೆದ ವ್ಯಾಸಮಹರ್ಷಿಯು ಆ ಕಾಶಿಯಲ್ಲಿರುವ ಲಿಂಗಗಳನ್ನು ನೋಡುವುದಕ್ಕಾಗಿ

ಸೋ ಮುನಿಃ || ತತ್ರ ಯಾನಿ ಚ ಲಿಂಗಾನಿ ತಾನಿ ದ್ರಷ್ಟುಂ ಯಯೌ ಮುದಾ ''
ಇತ್ಯಾದಿಪುರಾಣವಾಕ್ಯಾತ್, ಪುರಾಣೇತಿಹಾಸಕರ್ತಾ ಶ್ರೀಮಾನ್ವ್ಯಾಸೋ ಮಹಾ
ಮುನಿಃ ಶಿವಭಕ್ತ ಏವೇತಿ ವಿಜ್ಞೇಯಃ.

ಭೋ ಚೋಳ ! ಸರ್ವದೇಶೇಷು ಸರ್ವದಾ ಸರ್ವಜಾತಿಯುವತೀಗರ್ಭಸ್ಥಿತಾ ಅರ್ಭ
ಕಾ ಅಪಿ ಶಿವಾಧಿಕ್ಯಪರಾಃ, ತದುಕ್ತಂ ಗರ್ಭೋಪನಿಷದಿ,—" ಯದಿ ಯೋನ್ಯಾಃ
ಪ್ರಮುಂಚ್ಯೇಽಹಂ ತತ್ಪ್ರಪದ್ಯೇ ಮಹೇಶ್ವರಂ|| ಅಶುಭಕ್ಷಯಕರ್ತಾರಂ ಫಲಮುಕ್ತಿ
ಪ್ರದಾಯಕಂ '' ಇತಿ. ಲೈಂಗೇ,—" ಯದಿ ಯೋನ್ಯಾಂ ಪ್ರಮುಂಚಾಮಿ ತಂ
ಪ್ರಪದ್ಯೇ ಮಹೇಶ್ವರಂ || ಯಾವತ್ತು ವೈಷ್ಣವೋ ವಾಯುರ್ಜಾತಮಾತ್ರಂ ನ ಸಂ
ಸ್ಪೃಶೇತ್ || ತಾವತ್ಕಾಲಂ ಮಹಾದೇವಮರ್ಚಯಾಮೀತಿ ಚಿಂತಯನ್ '' ಇತ್ಯಾ
ದಿಶ್ರುತಿಪುರಾಣವಾಕ್ಯಾತ್, ಭೋ ಚೋಳ ! ಶಿವಾಧಿಕ್ಯಜ್ಞಾನವಿಹೀನೋ ಭವಾನ್ವ
ಯೋವೃದ್ಧಶ್ಶಾಸ್ತ್ರವೃದ್ಧೋಽಪಿ ತಸ್ಮಾದರ್ಭಕಾದಧಮ ಏವೇತಿ ಜಾನೀಮಹೇ. ತತ್ತಾ
ವದಾಸ್ತಾಂ. ಹೇ ಚೋಳ ! ನಿಖಿಲಲೋಕಸ್ಥಿತನಿಖಿಲದೇಹಿನಾಂ ಭ್ರೂಮಧ್ಯಸ್ಥಾ
ಜ್ಞಾಚಕ್ರಂ ಶಿವಕ್ಷೇತ್ರಮಿತಿ ಜಾನೀಹಿ, ತಚ್ಛ್ರುತಿವಾಕ್ಯಂ ಶ್ರೂಯತಾಂ, ಧ್ಯಾನ
ಬಿಂದೂಪನಿಷದಿ,—" ಭ್ರುವೋರ್ಮಧ್ಯೇ ಲಲಾಟಸ್ಯ ನಾಸಿಕಾಯಾಸ್ತು ಮೂಲತಃ||

---

ಸಂತೋಷದಿಂದ ತೆರಳಿದನು,, ಎಂದು ಹೇಳಲ್ಪಟ್ಟಿದೆ. ಇತ್ಯಾದಿ ಪುರಾಣವಾಕ್ಯಗಳಿರುವುದರದೆಸೆ
ಯಿಂದ ಪುರಾಣೇತಿಹಾಸಕರ್ತನಾದ ಶ್ರೀವ್ಯಾಸಮಹರ್ಷಿಯು ಪರಮ ಶಿವಭಕ್ತನೇ ಹೌದೆಂದು
ತಿಳಿಯಲ್ತಕ್ಕವನು. ಎಲೈ ಚೋಳನೇ ! ಸಕಲದೇಶಗಳಲ್ಲಿ ಸಕಲಸ್ತ್ರೀಯರ ಬಸುರಲ್ಲಿರುವ
ಶಿಶುಗಳು ಯಾವಾಗಲೂ ಶಿವನ ಉತ್ಕರ್ಷತೆಯನ್ನರಿತವುಗಳೇ ಆಗಿರುತ್ತವೆ. ಆ ವಿಷಯವು
ಗರ್ಭೋಪನಿಷತ್ತಿನಲ್ಲಿ— "ಯೋನಿದ್ವಾರದಿಂದ ಹೊರಗೆ ಬಂದರೂ ನಾನು ಅಮಂಗಳನಿವಾರಕ
ನೂ, ಪುರುಷಾರ್ಥದಾಯಕನೂ ಆಗಿರುವ ಆ ಮಹೇಶ್ವರನನ್ನೇ ಮರೆಹೋಗುವೆನು,, ಎಂದು
ಶಿಶುವಿನಿಂದ ಕೋರಲ್ಪಡುತ್ತದೆ. ಎಂದು ನಿರೂಪಿತವಾಗಿದೆ. ಲಿಂಗಪುರಾಣದಲ್ಲಿ —"ಯೋನಿಯ
ನ್ನು ಬಿಟ್ಟು ಹೊರಗೆ ಬಂದರೂ ಆ ಶಿವನನ್ನೇ ಹೊಂದುವೆನು. ಹುಟ್ಟಿದ ನನ್ನನ್ನು ವೈಷ್ಣವವಾ
ಯುವು ಮುಟ್ಟದಿರುವವರೆಗೆ ಮಹಾದೇವನನ್ನು ಪೂಜಿಸುವೆನು,, ಎಂದು ಹೇಳಲ್ಪಟ್ಟಿದೆ. ಇತ್ಯಾ
ದಿಶ್ರುತಿಪುರಾಣವಾಕ್ಯಗಳಿರುವುದರದೆಸೆಯಿಂದ ಎಲೈ ಚೋಳನೇ ! ಶಿವೋತ್ಕರ್ಷತೆಯನ್ನರಿಯದಿ
ರುವ ನೀನು ವಯಸ್ಸಿನಿಂದ ವೃದ್ಧನೂ, ಶಾಸ್ತ್ರದಿಂದ ವೃದ್ಧನೂ ಆಗಿದ್ದರೂ ಗರ್ಭವಾಸಿ ಶಿಶುವಿ
ಗಿಂತ ಅಧಮನಾಗಿರುತ್ತೀಯೆಂದರಿಯುತ್ತೇವೆ. ಅದಂತಿರಲಿ. ಎಲೈ ಚೋಳನೇ ! ಸರ್ವಲೋಕದ
ಲ್ಲಿರುವ ಸರ್ವಪ್ರಾಣಿಗಳ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವನ್ನು ಶಿವಕ್ಷೇತ್ರವನ್ನಾಗಿ ತಿಳಿಯು
ವನಾಗು. ಆ ವಿಷಯದಲ್ಲಿರುವ ಶ್ರುತಿವಾಕ್ಯವನ್ನು ಕೇಳು; ಧ್ಯಾನಬಿಂದೂಪನಿಷತ್ತಿನಲ್ಲಿ—

ಚಾನೀಯಾದಮೃತಸ್ಥಾನಂ ತದ್ಬ್ರಹ್ಮಾಯತನಂ ಮಹತ್'' ಇತಿ. ಜಾಬಾಲೋಪನಿಷದಿ,—"ಭ್ರುವೋರ್ಘ್ರಾಣಸ್ಯ ಚ ಯಸ್ಸಂಧಿಸ್ಸ ಏಷ ದ್ಯೌರ್ಲೋಕಸ್ಯ ಪರಸ್ಯ ಚ ಸಂಧಿರ್ಭವತಿ'' ಇತಿ. ತಥಾ ಮಾನವಪುರಾಣೇ,—ಮನುಃ, "ಭ್ರುವೋರ್ಘ್ರಾಣಸ್ಯ ಯಾ ಸಂಧಿಸ್ತತ್ರ ವಾರಾಣಸೀ ಸ್ಥಿತಾ|| ತತ್ರಾವಿಮುಕ್ತಕಂ ಕ್ಷೇತ್ರಂ ತಸ್ಮಿನ್ರುದ್ರಸ್ಸದಾ ಸ್ಥಿತಃ || ಲಿಂಗಂ ಜ್ಯೋತಿಸ್ಸ್ವರೂಪೇಣ ಸಾಕ್ಷಾದ್ವಿಶ್ವೇಶ್ವರಾಭಿಧಂ'' ಸ್ಕಾಂದೇ ಶಾಂಕರಸಂಹಿತಾಯಾಂ,—"ಭ್ರೂಘ್ರಾಣಮಧ್ಯೇ ತ್ವವಿಮುಕ್ತದೇಶೇ ವಿಶ್ವೇಶ್ವರಾಖ್ಯಂ ಪರಮಾತ್ಮಲಿಂಗಂ || ಧ್ಯಾನಾಮೃತಾಸಕ್ತಧಿಯೋ ಮಹಾಂತೋ ಧ್ಯಾತ್ವಾ ಪರಾಂ ಮುಕ್ತಿಮವಾಪುರನ್ಯೇ'' ಇತ್ಯಾದಿಶ್ರುತಿಪುರಾಣವಾಕ್ಯಾತ್, ಸರ್ವದೇಹಿಭ್ರೂಮಧ್ಯಸ್ಥಾನಂ ಭವದಿಷ್ಟದೇವತಾಭ್ರೂಮಧ್ಯಸ್ಥಾನಂ ಭವತಃ ಭ್ರೂಮಧ್ಯಸ್ಥಾನಂ ಚ ಶಿವಕ್ಷೇತ್ರಮತಏವ ಭವಾನಪ್ಯಂತಶ್ಶಿವಲಿಂಗಧಾರಕಶ್ಶಿವಭಕ್ತಶ್ಚೈವ. ಅಪಿಚ, ಹೇ ರಾಜನ್! ಸರ್ವೇ ಪ್ರಾಣಿನಶ್ಶಿವಪ್ರಸಾದಸ್ವೀಕಾರತತ್ಪರಾ ಏವ. ತದುಕ್ತಂ ಶಿವರಹಸ್ಯೇ,—"ಜಗದಪ್ಯಖಿಲಂ ಶಂಭೋರ್ನಿರ್ಮಾಲ್ಯಂ ಪರಮಾರ್ಥತಃ,, ಇತಿ. ಇತಿಸ್ಥಿತೇಃ ಸರ್ವೇ ಜೀವಾ ರುದ್ರಪ್ರಸಾದಜೀವಿನ ಏವೇತಿ ತ್ವಯಾ ಜ್ಞಾತವ್ಯಂ. ಅತಏವ ಹೇ ಚೋಳ! ತ್ವಮಿತಃಪರಂ ರುದ್ರಭಕ್ತಸ್ಸನ್ ರುದ್ರಾನುಗ್ರಹಪಾತ್ರಂ ಭವೇತ್ಯಲಂ ವಿಸ್ತರೇಣ.

---

"ಹಣೆಗೂ ಮೂಗಿಗೂ ಬುಡವಾದ ಹುಬ್ಬುಗಳ ಮಧ್ಯದಲ್ಲಿ ಪರಬ್ರಹ್ಮಸ್ಥಾನವಿರುವುದನ್ನಾಗಿ ತಿಳಿ,, ಎಂದು ನಿರೂಪಿತವಾಗಿದೆ. [ಈ ಸಂಗತಿಯನ್ನೇ ಹೇಳತಕ್ಕ ಜಾಬಾಲೋಪನಿಷದ್ವಾಕ್ಯ ಕ್ಕೂ, ಮಾನವಪುರಾಣ, ಶಾಂಕರಸಂಹಿತಾವಚನಗಳಿಗೂ ೮ನೇ ಉಪದೇಶದ ೩ನೆಯ ಸಂವಾದದಲ್ಲಿ ಟಿಪ್ಪಣಿವು ಬರೆಯಲ್ಪಟ್ಟಿದೆ.] ಇತ್ಯಾದಿ ಶ್ರುತಿಪುರಾಣವಾಕ್ಯಗಳಿರುವುದರದೆಸೆಯಿಂದ ಸಮಸ್ತ ಪ್ರಾಣಿಗಳ ಭ್ರೂಮಧ್ಯಸ್ಥಾನವೂ, ನಿನ್ನಿಷ್ಟದೇವತೆಯ ಭ್ರೂಮಧ್ಯಸ್ಥಾನವೂ, ನಿನ್ನ ಭ್ರೂಮಧ್ಯಸ್ಥಾನವೂ ಶಿವಕ್ಷೇತ್ರವಾಗಿರುತ್ತದೆ. ಈ ಕಾರಣದಿಂದ ನೀನೂ ಅಂತರಂಗದಲ್ಲಿ ಶಿವಲಿಂಗಧಾರಿಯೂ, ಶಿವಭಕ್ತನೂ ಆಗಿರುತ್ತೀಯೆ. ಮತ್ತೂ ಎಲೈ ದೊರೆಯಾಗಿರುವ ಚೋಳನೇ! ಸಕಲ ಪ್ರಾಣಿಗಳು ಶಿವಪ್ರಸಾದವನ್ನು ಸ್ವೀಕರಿಸುವುದರಲ್ಲಿ ಆಸಕ್ತಗಳೇ ಆಗಿವೆ. ಆ ವಿಷಯವು ಶಿವರಹಸ್ಯದಲ್ಲಿ—"ಪರಮಾರ್ಥವಿಚಾರದಿಂದ ಸಕಲ ಲೋಕವು ಶಿವನಿರ್ಮಾಲ್ಯವೇ ಆಗಿರುತ್ತದೆ,, ಎಂದು ನಿರೂಪಿಸಲ್ಪಟ್ಟಿದೆ. ಹೀಗಿರುವುದರದೆಸೆಯಿಂದ ಸಕಲಪ್ರಾಣಿಗಳು ರುದ್ರಪ್ರಸಾದವನ್ನೇ ತಿನ್ನುತ್ತಾ ಬದುಕಿರುತ್ತವೆ. ಎಂದು ತಿಳಿಯುವವನಾಗು. ಈ ಕಾರಣದಿಂದ ಎಲೆ ಚೋಳನೇ! ನೀನು ಇನ್ನು ಮುಂದೆ ಶಿವಭಕ್ತನಾಗಿ ಶಿವಾನುಗ್ರಹಕ್ಕೆ ಪಾತ್ರನಾಗು. ವಿಸ್ತಾರವಾಗಿ ಹೇಳುವುದರಿಂದ ಪ್ರಯೋಜನವಿಲ್ಲವು.

ಇತಿ ವ್ಯಾಸವಿರಚಿತಶಿವಾಧಿಕ್ಯವಿಧಿದ್ವಾದಶೋಪದೇಶೇ ಅಷ್ಟಮಸ್ಸಂವಾದಃ.

ಶ್ರೀಃ.

## ಶ್ರೀಭಸ್ಮಧಾರಣಾದಿವೀರಶೈವಾಚಾರನಿರ್ಣಯಃ.

ರೇ—ಭೋ ಚೋಳ! ಭಸ್ಮರುದ್ರಾಕ್ಷಧಾರಣಲಿಂಗಧಾರಣಪಂಚಾಕ್ಷರಜಪ ಗುರುಲಿಂಗಜಂಗಮಪೂಜಾತತ್ಪಾದೋದಕಪ್ರಸಾದಸ್ವೀಕಾರರೂಪೋ ವೀರಶೈವಾಚಾರವಿಧಿಃ ಕ್ರಮೇಣ ಶ್ರೂಯತಾಂ, ತತ್ರ ಭಸ್ಮಧಾರಣಮಹತ್ವಂ, ಋಗ್ವೇದೇ ಭಸ್ಮಜಾಬಾಲೋಪನಿಷದಿ,—"ವಿಭೂತಿಧಾರಣಾದ್ಬ್ರಹ್ಮೈಕತ್ವಂ ಗಚ್ಛತಿ. ಸ ಏಷ ಭಸ್ಮಜ್ಯೋತಿಸ್ಸ ಏಷ ಭಸ್ಮಜ್ಯೋತಿಃ ವಿಭೂತಿಧಾರಣಾತ್ಕೈವಲ್ಯಮಶ್ನುತೇ | ಸ ಏಷ ಭಸ್ಮಜ್ಯೋತಿಸ್ಸ ಏಷ ಭಸ್ಮಜ್ಯೋತಿಃ ವಿಭೂತಿಧಾರಣಾದೇವಾಮೃತತ್ವಂ ಗಚ್ಛತಿ | ಸ ಏಷ ಭಸ್ಮಜ್ಯೋತಿಸ್ಸ ಏಷ ಭಸ್ಮಜ್ಯೋತಿಃ,, ಮಾನವಪುರಾಣೇ,—ಮನುಃ, "ಭಸ್ಮಜ್ಯೋತಿರ್ಭವತ್ಯೇವ ಶಿವಾಖ್ಯಂ ನ ಹಿ ಸಂಶಯಃ || ಜಾಬಾಲೋಪನಿಷತ್ಸರ್ವಂ ಪ್ರಾಹೇದಂ ಪರಯಾ ಮುದಾ || ತ್ರಿಪುಂಡ್ರಧಾರಣಂ ತಿರ್ಯಕ್ಛ್ರೀಮದ್ರುದ್ರಾಕ್ಷಧಾರಣಂ || ನಿತ್ಯಂ ಲಿಂಗೇ ಮಹಾದೇವಪೂಜನಂ ಭಕ್ತಿಮುಕ್ತಿದಂ,, ಇತಿ. ಯಜುರ್ವೇದೇ,—"ಭೂತ್ಯೈ ನ ಪ್ರಮದಿತವ್ಯಮಿತೀದಂ ಯಜುಷೋ ವಚಃ || ಪ್ರಮಾದರಹಿತೈ

---

ಎಂಬಲ್ಲಿಗೆ ವ್ಯಾಸನಿಂದ ವಿರಚಿತಮಾದ ಶಿವಾಧಿಕ್ಯವಿಧಿಯನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಎಂಟನೆಯ ಸಂವಾದವು ಮುಗಿದುದು.



### ಶ್ರೀಭಸ್ಮಧಾರಣಾದಿ ವೀರಶೈವಾಚಾರನಿರ್ಣಯವು.

ರೇ—ಎಲೈ ಚೋಳನೇ! ಭಸ್ಮಧಾರಣ, ರುದ್ರಾಕ್ಷಧಾರಣ, ಲಿಂಗಧಾರಣ ಪಂಚಾಕ್ಷರ ಮಂತ್ರಜಪ, ಗುರು, ಲಿಂಗ, ಜಂಗಮ, ಪೂಜಾ ತತ್ಪಾದೋದಕ, ಪ್ರಸಾದ ಸ್ವೀಕಾರರೂಪವಾಗಿರುವ ವೀರಶೈವ ಮಹಾಚಾರಗಳ ವಿಧಿಯನ್ನು ಕ್ರಮದಿಂದ ಕೇಳು; ಅವುಗಳಲ್ಲಿ ಮೊದಲು ಭಸ್ಮಧಾರಣಮಾಹಾತ್ಮ್ಯವು— [ಈ ವಿಷಯದಲ್ಲಿರುವ ಭಸ್ಮಜಾಬಾಲೋಪನಿಷದ್ವಾಕ್ಯಕ್ಕೆ ೧ನೆಯ ಉಪದೇಶದ ೧ನೆಯ ಸಂವಾದದಲ್ಲಿ ಬರೆದಿರುವ ಟಿಪ್ಪಣಿಯನ್ನು ನೋಡಬೇಕು.] ಮಾನವಪುರಾಣದಲ್ಲಿ—"ಭಸ್ಮವು ಶಿವಾಖ್ಯವಾದುದೇ ಆಗಿರುತ್ತದೆ. ಸಂದೇಹವಿಲ್ಲ. ಭಸ್ಮತ್ರಿಪುಂಡ್ರಧಾರಣೆಯನ್ನೂ, ರುದ್ರಾಕ್ಷಧಾರಣೆಯನ್ನೂ, ಲಿಂಗದಲ್ಲಿ ಶಿವಪೂಜೆಯನ್ನೂ ನಿತ್ಯದಲ್ಲೂ ಮಾಡಬೇಕೆಂದು ಜಾಬಾಲೋಪನಿಷತ್ತು ಬಹು ಸಂತೋಷದಿಂದ ಹೇಳಿತು,, ಎಂದೂ, ಯಜುರ್ವೇದದಲ್ಲಿ—"ಪ್ರಮಾದವು ಸಂಭವಿಸಿದರೂ ವಿಭೂತಿಯನ್ನು ಧರಿಸದಿರಕೂಡದು,, ಎಂದೂ

ರ್ವಿಪ್ರೈರ್ಧಾರ್ಯಂ ಭಸ್ಮೇತಿ ಚಾಹ ಹಿ ,, ನಾರಾಯಣೋಪನಿಷದಿ,-" ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ,, ಇತಿ. ತದುಕ್ತಮಭಿಯುಕ್ತೈಃ,— " ನಾರಾಯಣೋಪನಿಷದೋ ವಾಕ್ಯಮೇತತ್ಪ್ರವಿಶ್ರುತಂ||ಭಸ್ಮ ಜ್ಯೋತಿರಹಂ ಯಸ್ಮಾ ದ್ವಿಪಾಪ್ಮಾ ವಿರಜಾಸ್ತತಃ ,, ಅಥರ್ವಶಿರಸಿ,—" ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್ | ತಸ್ಮಾದ್ವ್ರತಮೇತತ್ಪಾಶುಪತಂ ಪಶುಪಾಶವಿ ಮೋಕ್ಷಾಯ ,, ಇತಿ. ಬೃಹಜ್ಜಾಬಾಲೋಪನಿಷದಿ,—" ಭಕ್ಷಯಿಷ್ಯೇ ಶಿವಂ ಭಸ್ಮ ಸ್ನಾತ್ವಾಹಂ ಭಸ್ಮನಾ ಪುರಾ || ದೃಷ್ಟ್ವೇಶ್ವರಂ ಭಕ್ತಿಗಮ್ಯಂ ಭಸ್ಮಾಭಕ್ಷ್ಯಯದ ಚ್ಯುತಃ ,, ಇತಿ. ವೃದ್ಧಜಾಬಾಲೋಪನಿಷದಿ,—" ಯ ಇದಂ ತ್ರಿಪುಂಡ್ರಂ ಧರತಿ ಸ ವೇದತ್ರಯಧಾರೀ ಭವತಿ | ಯ ಇದಂ ತ್ರಿಪುಂಡ್ರಂ ಧೃತವಂತಂ ಪುರುಷಂ ಪಶ್ಯ ತಿ ಸ ಸರ್ವಪಾಪೇಭ್ಯೋ ವಿನಿರ್ಮುಕ್ತೋ ಭವತಿ | ಸ ಸರ್ವವೇದಾಧ್ಯಯನಜನ್ಮಫಲ ವಾನ್ಭವತಿ | ಸರ್ವಪುರುಷಯಜ್ಞಯಜನಜನ್ಮಫಲವಾನ್ಭವತಿ | ಯ ಇದಂ ಭಸ್ಮ ಹಸ್ತೇನ ಸ್ಪೃಶತಿ ಸ ಸಂಸಾರಾತೀತಃ ಸ ಸಂಸಾರಾತೀತಃ ,, ಇತಿ. ಶಾತಾತಪ ಸ್ಮೃತೌ,—" ಯದಾ ಯದಾ ಯತ್ರ ಚ ಕುತ್ರ ಸಂಭವಂ ಭಸ್ಮೋದ್ಧೃತಂ ಸ್ಯಾ ದಿಹ ಯೇನ ಕೇನ ವಾ || ನ ಕೇನ ಸಾಮ್ಯೋ ಭಗವಾನಜೋಪಿ ಶ್ರೀಭೂತಿಧಾರೀ ಸ ಶಿವಸ್ತಥಾಪಿ ,, ತಥಾ ಮಾನವಪುರಾಣೇ,—ಮನುಃ, " ಶ್ರುತಯಸ್ಸ್ಮೃತಯಸ್ಸ

ಉಕ್ತವಾಗಿದೆ. ಆ ವಿಷಯವು ಅಭಿಯುಕ್ತರಿಂದ "ಭೂತ್ಯೈ ನ ಪ್ರಮದಿತವ್ಯಂ" ಎಂಬ ವಚನ ವನ್ನು ಯಜುರ್ವೇದವು ಹೇಳಿರುವುದರಿಂದ, ಬ್ರಾಹ್ಮಣರು ಸ್ಥಿರಚಿತ್ತರಾಗಿ ಭಸ್ಮಧಾರಣವುಳ್ಳ ವರಾಗಬೇಕು. ನಾರಾಯಣೋಪನಿಷತ್ತಿನಲ್ಲಿ—"ನಾನು ಶಿವತೇಜಸ್ಸ್ವರೂಪವಾದ ಭಸ್ಮವ ನ್ನು ಧರಿಸಿದವನಾದ್ದರಿಂದಲೇ ತೇಜೋರೂಪನಾಗಿ ರಜೋಗುಣರಹಿತನೂ ಪಾಪರಹಿತನೂ ಆಗಿರು ತ್ತೇನೆ,, ಎಂದು ಹೇಳಲ್ಪಟ್ಟಿದೆ. ಅದು ಅಭಿಯುಕ್ತರಿಂದ "ಭಸ್ಮ ಜ್ಯೋತಿರಹಂ,, ಎಂದು ನಾ ರಾಯಣೋಪನಿಷತ್ತಿನ ವಾಕ್ಯವು ಪ್ರಸಿದ್ಧವಾಗಿರುವುದರಿಂದ ನಾನು ರಜೋಗುಣರಹಿತನೂ, ಪಾಪರಹಿತನೂ ಆಗಿರುತ್ತೇನೆ" ಎಂದು ಹೇಳಲ್ಪಟ್ಟಿದೆ. [ಈ ವಿಷಯದಲ್ಲಿರುವ ಅಥರ್ವಶಿರೋ ವಾಕ್ಯಕ್ಕೆ ಟಿಪ್ಪಣಿಯನ್ನು ೯ನೆಯ ಉಪದೇಶದ ೯ನೆಯ ಸಂವಾದದಲ್ಲಿ ನೋಡಿರಿ.] [ಬೃಹ ಜ್ಜಾಬಾಲೋಪನಿಷತ್ತಿಗೂ ಹಿಂದೆಯೇ ಟಿಪ್ಪಣಿಯು ಬರೆಯಲ್ಪಟ್ಟಿದೆ] ವೃದ್ಧಜಾಬಾಲೋ ಪನಿಷತ್ತಿನಲ್ಲಿ— "ಭಸ್ಮತ್ರಿಪುಂಡ್ರಧಾರಿಯು ವೇದತ್ರಯವನ್ನು ಬಲ್ಲವನಾಗುವನು. ಭಸ್ಮತ್ರಿ ಪುಂಡ್ರಧಾರಿಯನ್ನು ನೋಡುವವನು ಸಕಲ ಪಾಪಗಳಿಂದ ಬಿಡಲ್ಪಡುವನು. ಮತ್ತಮಾತನು ನಾಲ್ಕುವೇದಗಳನ್ನಭ್ಯಾಸಮಾಡಿದುದರಿಂದುಂಟಾಗುವ ಫಲವನ್ನು ಹೊಂದುವನು. ಮತ್ತೂ ಆತ ನು—ಸಕಲರಿಂದ ಮಾಡಲ್ಪಡುವ ಯಜ್ಞಗಳಿಂದುಂಟಾಗುವ ಫಲವನ್ನು ಹೊಂದುವನು. ಭಸ್ಮವ ನ್ನು ಕೈಯಿಂದ ಮುಟ್ಟುವವನು ಸಂಸಾರದಿಂದ ಬಿಡಲ್ಪಡುವನು" ಎಂದುಕ್ತವಾಗಿದೆ. [ಈ ವಿಷ

ರ್ವಾಃ ಪುರಾಣಾನ್ಯಖಿಲಾನಿ ಚ || ವದಂತಿ ಭಸ್ಮಮಹಾತ್ಮ್ಯಂ ತತಸ್ತದ್ಧಾರಯೇದ್ದ್ವಿಜಃ,, ತಥಾ ಕೂರ್ಮಪುರಾಣೇ,—"ತ್ರಿಪುಂಡ್ರಂ ಬ್ರಾಹ್ಮಣೋ ವಿದ್ವಾನ್ಮನಸಾಪಿ ನ ಲಂಘಯೇತ್||ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್,, ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವಖಂಡೇ,—"ಭಸ್ಮವಿಜ್ಞಾನಲಾಭಾಯ ಖಲು ವೇದಾಸ್ಸನಾತನಾಃ || ಪ್ರವೃತ್ತಾಸ್ಸ್ಮೃತಯಸ್ಸರ್ವಾಃ ಪುರಾಣಂ ಭಾರತಾದಿ ಚ || ಶಿವೇನ ವಿಷ್ಣುನಾ ಚೈವ ಬ್ರಹ್ಮಣಾ ವಜ್ರಿಣಾ ತಥಾ || ದೇವತಾಭಿರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಳನಾತ್ಮನಾ||ಉಮಾದೇವ್ಯಾ ಚ ಲಕ್ಷ್ಮ್ಯಾ ಚ ವಾಚಾ ಚಾನ್ಯಾಭಿರಾಸ್ತಿಕಾಃ || ಸರ್ವಸ್ತ್ರೀಭಿರ್ಧೃತಂ ಭಸ್ಮ ತ್ರಿಪುಂಡ್ರೋದ್ಧೂಳನಾತ್ಮನಾ || ಉದ್ಧೂಳನಂ ತ್ರಿಪುಂಡ್ರಂ ಚ ಶ್ರದ್ಧಯಾ ನಾಚರಂತಿ ಯೇ || ತೇ ಮಹಾಪಾತಕಸಂಯುಕ್ತಾ ಇತಿ ಶಾಸ್ತ್ರಸ್ಯ ನಿಶ್ಚಯಃ" ಇತಿ. -ಇತಿ ಭಸ್ಮಧಾರಣಮಹತ್ತ್ವಂ.

ಭೋ ಚೋಳ ! ಅಥ ರುದ್ರಾಕ್ಷಮಹತ್ತ್ವಂ ಶ್ರೂಯತಾಂ, ಯಜುರ್ವೇದೇ ಬೋಧಾಯನಶಾಖಾಯಾಂ,—"ತಾನಿ ಹವಾ ಏತಾನಿ ರುದ್ರಾಕ್ಷಾಣಿ ಯತ್ರ ಯೇ ದೇವಾ ಧಾರಯಂತಿ | ಯಸ್ತಾನಿ ಧಾರಯನ್ ಗಚ್ಛನ್ ತಿಷ್ಠನ್ ಜಾಗ್ರದುನ್ಮಿಷನ್ನಿಮಿಷನ್ಸ್ವಪನ್ | ಸರ್ವಾಣ್ಯೇನಾಂಸಿ ತರತಿ ರುದ್ರೀಭೂತ್ವಾ ರುದ್ರೋ ಭವತಿ"

---

ಯದಲ್ಲಿರುವ ಶಾತಾತಪಸ್ಮೃತಿ, ಮಾನವಪುರಾಣ, ಕೂರ್ಮಪುರಾಣವಾಕ್ಯಗಳಿಗೆ ೧ನೆಯ ಉಪದೇಶದ ೧ನೆಯ ಸಂವಾದದಲ್ಲಿ ಇರುವ ಟಿಪ್ಪಣಿಯಂ ನೋಡಿ.] ಸ್ಕಾಂದಪುರಾಣದಲ್ಲಿರುವ ಸೂತಸಂಹಿತೆಯ ಯಜ್ಞವೈಭವಖಂಡದಲ್ಲಿ—"ವೇದಗಳೂ, ಸ್ಮೃತಿಗಳೂ, ಪುರಾಣಗಳೂ, ಇತಿಹಾಸಗಳೂ ಭಸ್ಮಮಾಹಾತ್ಮ್ಯವನ್ನರಿಯುವುದಕ್ಕಾಗಿ ಪ್ರವರ್ತಿಸಿರುತ್ತವೆ. ಭಸ್ಮಸ್ನಾನ ಭಸ್ಮೋದ್ಧೂಳನ ಭಸ್ಮತ್ರಿಪುಂಡ್ರಧಾರಣಗಳು—ಶಿವನಿಂದಲೂ, ವಿಷ್ಣುಬ್ರಹ್ಮರಿಂದಲೂ, ಇಂದ್ರಾದಿದೇವತೆಗಳಿಂದಲೂ, ಪಾರ್ವತಿ, ಲಕ್ಷ್ಮಿ, ಸರಸ್ವತಿ ಮೊದಲಾದ ಸ್ತ್ರೀಯರಿಂದಲೂ ಅಂಗೀಕರಿಸಲ್ಪಟ್ಟಿವೆ. ಆದ್ದರಿಂದ ಭಕ್ತಿಯಿಂದ ಭಸ್ಮಸ್ನಾನೋದ್ಧೂಳನಗಳನ್ನೂ, ಭಸ್ಮತ್ರಿಪುಂಡ್ರಧಾರಣವನ್ನೂ ಮಾಡದವರು ಮಹಾಪಾಪಿಗಳಾಗುವರು ಎಂದು ಶಾಸ್ತ್ರದ ನಿಶ್ಚಯಾರ್ಥವು,, ಎಂದು ಉಕ್ತವಾಗಿದೆ. ಭಸ್ಮಧಾರಣಮಾಹಾತ್ಮ್ಯವು ಸಂಪೂರ್ಣವು.

ಎಲೈ ಚೋಳನೇ! ರುದ್ರಾಕ್ಷಮಾಹಾತ್ಮ್ಯವನ್ನು ಕೇಳು; ಯಜುರ್ವೇದದ ಬೋಧಾಯನಶಾಖೆಯಲ್ಲಿ—"ಸಕಲ ದೇವತೆಗಳು ಆ ಈ ರುದ್ರಾಕ್ಷಿಗಳನ್ನು ಧರಿಸಿರುತ್ತಾರೆ. ಆ ರುದ್ರಾಕ್ಷಿಗಳನ್ನು ನಡೆಯುವಾಗ, ಕುಳಿತಿರುವಾಗ, ಜಾಗ್ರದವಸ್ಥೆಯಲ್ಲಿರುವಾಗ, ಉನ್ಮೇಷ ನಿಮೇಷಗಳಲ್ಲಿರುವಾಗ, ವಾಸಮಾಡುತ್ತಿರುವಾಗ ಹೀಗೆ ಯಾವಾಗಲೂ ಧರಿಸಿದವನು ಸಕಲ ಪಾಪಸಮೂಹಗಳನ್ನು ದಾಟಿದವನಾಗಿ ರುದ್ರಸ್ವರೂಪನಾಗಿ ರುದ್ರನೇ ಆಗುವನು. ಆ ವಿಷಯವು ಅಭಿಯು

ತದುಕ್ತಮಭಿಯುಕ್ತೈಃ,—"ಬೋಧಾಯನಸ್ಯ ಶಾಖಾಯಾಂ ಖ್ಯಾತಾಯಾಂ ಭುವನತ್ರಯೇ ‖ ಯದ್ವಿದ್ಯತೇ ತಾನಿ ಹವೇತ್ಯಾದಿಕಂ ವಚನಂ ತು ತತ್ ‖ ಸರ್ವೇ ದೇವಾ ಧಾರಯಂತಿ ರುದ್ರಾಕ್ಷಾಣೀ ತ್ಯಸಂಶಯಃ" ಅಥರ್ವಣೇ ರುದ್ರಾಕ್ಷಜಾಬಾಲೋಪನಿಷದಿ,—"ತದ್ರುದ್ರಾಕ್ಷೇ ಕಂಠೇ ಧಾರ್ಯಮಾಣೇ ತ್ರಿಸಹಸ್ರಗೋಪ್ರದಾನಫಲಂ ಭವತಿ | ಕರ್ಣಯೋರ್ಧಾರ್ಯಮಾಣೇ ಏಕಾದಶಸಹಸ್ರಗೋಪ್ರದಾನಫಲಂ ಭವತಿ | ಏಕಾದಶರುದ್ರತ್ವಂ ಚ ಗಚ್ಛತಿ | ಶಿರಸಿ ಧಾರ್ಯಮಾಣೇ ಕೋಟಿಗೋಪ್ರದಾನಫಲಂ ಭವತಿ | ಏತೇಷಾಂ ಸ್ಥಾನಾನಾಂ ಕರ್ಣಯೋಃ ಫಲಂ ವಕ್ತುಂ ನ ಶಕ್ಯಮಿತಿ ಹೋವಾಚ" ವೃದ್ಧಜಾಬಾಲೋಪನಿಷದಿ,—"ಯ ಇದಂ ರುದ್ರಾಕ್ಷಂ ಧತ್ತೇ ಸ ಸರ್ವಪುಣ್ಯತೀರ್ಥೇ ಸ್ನಾತೋ ಭವತಿ | ಸ ಸರ್ವವೇದಧಾರೀ ಭವತಿ | ಸ ಸರ್ವಕ್ರತುಕೃದ್ಭವತಿ ಸ ಸರ್ವದೇವಾತ್ಮಕೋ ಭವತಿ | ಸ ಸತ್ಯಂ ಪರಮುಶ್ಶಿವಃ | ಸ ಸತ್ಯಂ ಪರಮುಶ್ಶಿವಃ" ಮಾನವಪುರಾಣೇ,—"ರುದ್ರಾಕ್ಷಂ ಧಾರಯನ್ಪಾಪಂ ಕುರ್ವನ್ನಪಿ ಚ ಮಾನವಃ ‖ ಸರ್ವಂ ತರತಿ ಪಾಪ್ಮಾನಂ ಜಾಬಾಲಶ್ರುತಿರಾಹ ಹಿ ‖ ಕಂಠೇ ರುದ್ರಾಕ್ಷಮಾಶ್ರಿತ್ಯ ಶ್ವಾಪಿ ವಾ ಮ್ರಿಯತೇ ಯದಿ ‖ ಸೋಽಪಿ ರುದ್ರತ್ವಮಾಪ್ನೋತಿ

---

ಕ್ತರಿಂದ—"ಮೂರುಲೋಕದಲ್ಲಿ ಪ್ರಸಿದ್ಧವಾದ ಬೋಧಾಯನಶಾಖೆಯಲ್ಲಿ "ತಾನಿಹವಾ" ಇತ್ಯಾದಿ ವಚನವು ಯಾವಕಾರಣದಿಂದ ಇರುತ್ತದೆಯೋ ಆ ಕಾರಣದಿಂದ ಸಕಲ ದೇವತೆಗಳು ರುದ್ರಾಕ್ಷಗಳನ್ನು ಧರಿಸಿರುತ್ತಾರೆ. ಸಂದೇಹವಿಲ್ಲ,, ಎಂದು ಹೇಳಲ್ಪಟ್ಟದೆ. ಅಥರ್ವಣವೇದದಲ್ಲಿರುವ ರುದ್ರಾಕ್ಷಜಾಬಾಲೋಪನಿಷತ್ತಿನಲ್ಲಿ—"ಕೊರಳಲ್ಲಿ ಒಂದು ರುದ್ರಾಕ್ಷವು ಧರಿಸಲ್ಪಡಲು ಮೂರುಸಾವಿರ ಗೋವುಗಳನ್ನು ದಾನಮಾಡಿದುದರಿಂದುಂಟಾಗುವ ಫಲವುಂಟಾಗುವುದು. ಕರ್ಣಗಳಲ್ಲಿ ರುದ್ರಾಕ್ಷಗಳು ಧರಿಸಲ್ಪಡಲು ಹನ್ನೊಂದುಸಾವಿರ ಗೋದಾನದಿಂದುಂಟಾಗುವ ಫಲವುಂಟಾಗುವುದು. ಅವನು ಏಕಾದಶರುದ್ರಸ್ವರೂಪವನ್ನು ಹೊಂದುವನು. ಶಿರಸ್ಸಿನಲ್ಲಿ ಧರಿಸಲ್ಪಡಲು ಕೋಟಿ ಗೋದಾನ ಫಲವುಂಟಾಗುವುದು. ಈ ಸ್ಥಾನಗಳಲ್ಲೂ ಕಿವಿಗಳಲ್ಲೂ ರುದ್ರಾಕ್ಷಗಳನ್ನು ಧರಿಸಿಕೊಳ್ಳುವುದರಿಂದುಂಟಾಗುವ ಫಲವನ್ನು ಇಷ್ಟೆಂದು ಹೇಳುವುದು ಶಕ್ಯವಲ್ಲವು,, ವೃದ್ಧಜಾಬಾಲೋಪನಿಷತ್ತಿನಲ್ಲಿ—"ರುದ್ರಾಕ್ಷಗಳನ್ನು ಧರಿಸಿದವನು ಸಕಲ ಪುಣ್ಯತೀರ್ಥಸ್ನಾನಮಾಡಿದವನೂ, ಸಕಲ ವೇದಗಳನ್ನೋದಿದವನೂ, ಸಕಲ ಯಜ್ಞಗಳನ್ನು ಮಾಡಿದವನೂ, ಸಕಲ ದೇವತಾಸ್ವರೂಪನೂ ಆಗುವನು. ಸತ್ಯವಾಗಿಯೂ ಶಿವತ್ವವನ್ನು ಹೊಂದುವನು,, ಮಾನವಪುರಾಣದಲ್ಲಿ—"ಪಾಪಿಯಾದವನೂ ರುದ್ರಾಕ್ಷಗಳನ್ನು ಧರಿಸಿದರೆ ಸಕಲ ಪಾಪರಹಿತನಾಗುವನು,, ಎಂದು ಜಾಬಾಲಶ್ರುತಿಯು ಹೇಳಿರುವುದರಿಂದ ಕಂಠದಲ್ಲಿ ರುದ್ರಾಕ್ಷವನ್ನು ಧರಿಸಿ ಮರಣವನ್ನು ಹೊಂದಿದ ನಾಯಿಯೂ ರುದ್ರತ್ವವನ್ನು ಹೊಂದುವುದು. ಹೀಗಿರುವಲ್ಲಿ ಮನುಷ್ಯಾದಿಗಳಿಗೆ

ಕಿಂ ಪುನರ್ಮಾನುಷಾದಯಃ '' ಕಾತ್ಯಾಯನಶಾಖಾಯಾಂ,—'' ಸರ್ವಾನುಗ್ರಹಾ ರ್ಥಾಯ ತೇಷಾಂ ನಾಮೋಚ್ಚಾರಣೇನ ದಶಶತಗೋದಾನಫಲಂ ಭವತಿ | ದರ್ಶನಸ್ಪ ರ್ಶನಾಭ್ಯಾಂ ದ್ವಿಗುಣತ್ರಿಗುಣಫಲಂ ಭವತಿ | ಅತ ಊರ್ಧ್ವಂ ವಕ್ತುಂ ನ ಶಕ್ಯಂ ''. ಇತಿ. ಸ್ಕಾಂದೇ,—'' ಮೃಣ್ಮಯಂ ವಾಪಿ ರುದ್ರಾಕ್ಷಂ ಕೃತ್ವಾ ಯತ್ನೇನ ಧಾರ ಯೇತ್||ಯೋಪಿ ದುಷ್ಕೃತಕರ್ಮಾ ಚ ಸ ಯಾತಿ ಪರಮಾಂ ಗತಿಂ'' ಇತಿ ರುದ್ರಾ ಕ್ಷಧಾರಣಮಹತ್ತ್ವಂ.

ಭೋ ಚೋಳ ! ಅಥ ಸಪ್ರಣವಪಂಚಾಕ್ಷರೋಚ್ಚಾರಣಮಹತ್ತ್ವಂ ಶೃಯ ತಾಂ, ಅಥರ್ವಶಿರಸಿ,—'' ಯೋ ವೈ ರುದ್ರಸ್ಸಭಗವಾನಿತ್ಯುಪಕ್ರಮ್ಯ, ಸ ಓಂಕಾ ರೋ ಯ ಓಂಕಾರಸ್ಸಪ್ರಣವೋ ಯಃ ಪ್ರಣವಸ್ಸ ಸರ್ವವ್ಯಾಪೀ ಯಸ್ಸರ್ವವ್ಯಾಪೀ ಸೋಽನಂತೋ ಯೋಽನಂತಸ್ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಂ ಬ್ರಹ್ಮ ಸ ಏಕ ಸ್ಸ ಏಕೋ ರುದ್ರಸ್ಸ ಈಶಾನಸ್ಸ ಭಗವಾನ್ಸ ಮಹೇಶ್ವರಸ್ಸ ಮಹಾದೇವಃ '' ಇತಿ. ಆದಿತ್ಯಪುರಾಣೇ,—'' ಓಂಕಾರೋ ಯಸ್ಸ ಚೈವೇಹ ಪ್ರಣವೋ ಹ್ಯಸ್ಯ ತಿಷ್ಠತಿ || ಅನಂತತಾರಂ ಸೂಕ್ಷ್ಮಂ ಯಚ್ಛುಕ್ಲಂ ವೈದ್ಯುತಮೇವ ತತ್ || ಪರಬ್ರಹ್ಮ ಸ ಈ ಶಾನ ಏಕೋ ರುದ್ರಸ್ತಥೈವ ಚ || ಭಗವಾನ್ಮಹೇಶ್ವರಸ್ಸಾಕ್ಷಾನ್ಮಹಾದೇವೋ ನ

---

ಹೇಳುವುದೇನು? ,, ಕಾತ್ಯಾಯನಶಾಖೆಯಲ್ಲಿ—''ಆ ರುದ್ರಾಕ್ಷಗಳ ನಾಮವನ್ನುಚ್ಚರಿಸುವು ದರಿಂದ ಏಕಸಹಸ್ರಗೋದಾನ ಫಲವುಂಟಾಗುವುದು. ದರ್ಶನ ಸ್ಪರ್ಶನಗಳಿಂದ ದ್ವಿಸಹಸ್ರ ತ್ರಿಸ ಹಸ್ರ ಗೋದಾನಫಲವುಂಟಾಗುವುದು,, ಎಂದು ಉಕ್ತವಾಗಿದೆ. ಸ್ಕಾಂದಪುರಾಣದಲ್ಲಿ—''ರು ದ್ರಾಕ್ಷವು ದೊರಕದಿದ್ದರೆ ಮಣ್ಣಿನಿಂದಾದರೂ ರುದ್ರಾಕ್ಷವನ್ನು ಮಾಡಿ ಧರಿಸಿದವನು ಮಾಡ ಬಾರದ ಪಾಪವನ್ನು ಮಾಡಿದವನಾಗಿದ್ದಾಗ್ಯೂ ಉತ್ಕೃಷ್ಟವಾದ ಗತಿಯನ್ನೇ ಹೊಂದುವನು,, ಎಂದು ಉಕ್ತವಾಗಿದೆ.

ಎಲೈ ಚೋಳನೇ ! ಪ್ರಣವಸಹಿತವಾದ ಪಂಚಾಕ್ಷರಮಂತ್ರವನ್ನುಚ್ಚರಿಸುವುದರಿಂದುಂ ಟಾಗುವ ಮಾಹಾತ್ಮ್ಯವನ್ನು ಕೇಳು; ಅಥರ್ವಶಿರಸ್ಸಿನಲ್ಲಿ—''ರುದ್ರನೇ ಭಗವಂತನು, ಓಂಕಾರ ವೇ ಪ್ರಣವವು, ಪ್ರಣವವೇ ಓಂಕಾರವು, ಅದೇ ಸರ್ವವ್ಯಾಪಿಯು, ಅದೇ ಅನಂತವು, ಅದೇ ಭವ ತಾರಕವು, ಅದೇ ಸೂಕ್ಷ್ಮವು, ಅದೇ ಶುಕ್ಲವು, ಅದೇ ವೈದ್ಯುತವು, ಅದೇ ಪರಬ್ರಹ್ಮವು, ಆ ಪರಬ್ರಹ್ಮವಾದವನೇ ಅದ್ವಿತೀಯನು, ಅವನೇ ರುದ್ರನು, ಅವನೇ ಸರ್ವವಿದ್ಯಾಧಿಪತಿಯು, ಅವ ನೇ ಷಡ್ಗುಣೈಶ್ವರ್ಯಸಂಪನ್ನನು, ಅವನೇ ಮಹೈಶ್ವರ್ಯಶಾಲಿಯು, ಅವನೇ ಮಹಾಪ್ರಕಾಶಮಾ ನನು,, ಎಂದು ಉಕ್ತವಾಗಿದೆ. ಈ ಅರ್ಥವು ಆದಿತ್ಯಪುರಾಣದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಸಂಶಯಃ'' ಇತ್ಯಾದಿ. ಸಾಮವೇದೇ,—"ಅಪಿವಾಯಶ್ಚಂಡಾಲಶ್ಶಿವೇತಿ ವಾಚಂ ವದೇತ್ತೇನ ಸಹಸಂ ವದೇತ್ತೇನ ಸಹಸಂ ವಸೇತ್ತೇನ ಸಹಸಂ ವಿಶೇತ್ತೇನ ಸಹಭುಂಜೀತ ತೇನ ಸಹ ಭುಂಜೇತ'' ಇತಿ. ಪಾದ್ಮೇ ಶಿವರಾಘವಸಂವಾದೇ,—ಶ್ರೀರಾಮಃ, "ಮಹೇಶನಾಮಮಾಹಾತ್ಮ್ಯಂ ಪೂಜಾಮಾಹಾತ್ಮ್ಯಮೇವ ಚ ‖ನಮಸ್ಕಾರಸ್ಯ ಮಾಹಾತ್ಮ್ಯಂ ಸ್ತೋತ್ರಮಾಹಾತ್ಮ್ಯಮೇವ ಚ ‖ ಧೂಪದೀಪಾದಿದಾನಸ್ಯ ಮಾಹಾತ್ಮ್ಯಂ ವದ ಮೇ ಗುರೋ ‖ (ಶ್ರೀಶಂಭುಃ) ಏಕೈಕನಾಮಮಾಹಾತ್ಮ್ಯಂ ವಿಸ್ತರಾನ್ನ ಹಿ ಶಕ್ಯತೇ ‖ ಸಂಕ್ಷೇಪೇಣ ಚ ತೇ ವಚ್ಮಿ ಶೃಣು ರಾಘವ ಸಾದರಂ ‖ ಶಿವೇತಿ ಮಂಗಳಂ ನಾಮ ಯಸ್ಯ ವಾಚಿ ಪ್ರವರ್ತತೇ ‖ ಸಪ್ತಜನ್ಮಕೃತಂ ಪಾಪಂ ಭಸ್ಮೀಭವತಿ ತಸ್ಯ ವೈ ‖ ವದೇತ್ತೇನ ವಸೇತ್ತೇನ ವಿಶೇತ್ತೇನ ಪುನಃ ಪುನಃ ‖ ಭುಂಜೀತ ಸಾಕಂ ಭುಂಜೇತೇತ್ಯಾಹ ಸಾಮಶ್ರುತಿಃ ಖಲು'' ಮಾನವಪುರಾಣೇ,—ಮನುಃ, "ನಮಶ್ಶಬ್ದೇನ ಸಂಯುಕ್ತಂ ಶಿವಾಯೇತ್ಯಕ್ಷರತ್ರಯಂ ‖ ನ ವದೇದ್ಯಶ್ಚತುರ್ವೇದೀ ನ ತೇನ ಸಹಸಂ ವದೇತ್'' ನಾರಾಯಣೋಪನಿಷದಿ ಪಾಣಿಮಂತ್ರಮಿತಿಮಂತ್ರೇ,—"ಶಿವಾಯನಮಃ, ಶಿವಲಿಂಗಾಯನಮಃ'' ಇತಿ. ಬ್ರಹ್ಮೋತ್ತರಖಂಡೇ,—"ಮಹಾ

---

ಸಾಮವೇದದಲ್ಲಿ - "ಚಂಡಾಲನು 'ಶಿವ, ಎಂಬ ನಾಮವನ್ನು ನುಡಿಯುವನೋ, ಆತನೊಡನೆ ಮಾತನಾಡಬೇಕು, ವಾಸಮಾಡಬೇಕು, ಪ್ರವೇಶಿಸಬೇಕು, ಭುಂಜಿಸಬೇಕು,, ಎಂದು ಹೇಳಲ್ಪಟ್ಟಿದೆ. ಪದ್ಮಪುರಾಣದಲ್ಲಿ ಶಿವರಾಘವಸಂವಾದದಲ್ಲಿ —"ಎಲೈ ಜಗದ್ಗುರುವಾದ ಶಿವನೇ! ನಿನ್ನ ನಾಮಮಹತ್ವವನ್ನೂ, ಪೂಜಾಮಹತ್ವವನ್ನೂ, ನಿನಗೆ ನಮಸ್ಕಾರವಂ ಮಾಡುವುದರಿಂದುಂಟಾಗುವ ಮಹತ್ವವನ್ನೂ, ನಿನ್ನನ್ನು ಸ್ತುತಿಸುವುದರಿಂದುಂಟಾಗುವ ಮಹತ್ವವನ್ನೂ, ನಿನಗೆ ಧೂಪದೀಪಾದಿಗಳನ್ನರ್ಪಿಸುವುದರಿಂದುಂಟಾಗುವ ಮಹತ್ವವನ್ನೂ ನನಗೆ ನಿರೂಪಿಸು,, ಎಂದು ಶ್ರೀರಾಮನಿಂದ ಕೇಳಲ್ಪಟ್ಟುದಕ್ಕೆ - "ಎಲೈ ರಾಮನೇ! ನನ್ನ ಒಂದೊಂದು ನಾಮದ ಮಹತ್ವವನ್ನು ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲವಾದ್ದರಿಂದ ಸಂಕ್ಷೇಪವಾಗಿ ಹೇಳುತ್ತೇನೆ ನಂಬುಗೆಯಿಂದ ಕೇಳು; 'ಶಿವಶಿವ, ಎಂದುಚ್ಚಾರಣೆಯನ್ನು ಮಾಡುವವನು ಏಳುಜನ್ಮಗಳಿಂದ ಮಾಡಲ್ಪಟ್ಟ ಪಾಪಗಳಿಂದ ಬಿಡಲ್ಪಡುವನು. ಆದ್ದರಿಂದ ಅವನೊಡನೆಯೇ ಮಾತನಾಡಬೇಕು, ವಾಸಮಾಡಬೇಕು, ನಡೆಯಬೇಕು, ಭುಂಜಿಸಬೇಕು. ಎಂದು ಸಾಮವೇದವು ಹೇಳುತ್ತಿದೆಯಷ್ಟೆ,, ಎಂದು ಶಿವನಿಂದ ಹೇಳಲ್ಪಟ್ಟಿದೆ. ಮಾನವಪುರಾಣದಲ್ಲಿ —"ಯಾವನು ನಮಶ್ಶಿವಾಯ,, ಎಂಬ ಪಂಚಾಕ್ಷರ ಮಹಾಮಂತ್ರವನ್ನುಚ್ಚರಿಸುವುದಿಲ್ಲವೋ ಆತನು ಚತುರ್ವೇದಗಳನ್ನೋದಿದ್ದರೂ ಆತನೊಡನೆ ಮಾತನಾಡಲಾಗದು,, ಎಂದು ಮನುವಿನಿಂದ ಹೇಳಲ್ಪಟ್ಟಿದೆ. ನಾರಾಯಣೋಪನಿಷತ್ತಿನಲ್ಲಿರುವ "ಪಾಣಿಮಂತ್ರಂಪವಿತ್ರಂ,, ಎಂಬ ಮಂತ್ರದಲ್ಲಿ — "ಶಿವನಿಗೋಸ್ಕರ ನಮಸ್ಕಾರವು, ಶಿವಲಿಂಗಕ್ಕೋಸ್ಕರ ನಮಸ್ಕಾರವು,, ಎಂದು ನಿರೂಪಿಸಲ್ಪಟ್ಟಿದೆ. ಬ್ರಹ್ಮೋತ್ತರಖಂಡದಲ್ಲಿ— "ಶಿವ,

ಪಾತಕವಿಚ್ಛಿತ್ತ್ಯೈ ಶಿವ ಇತ್ಯಕ್ಷರದ್ವಯಂ ॥ ಅಲಂ ನಮಸ್ಕ್ರಿಯಾ ಯುಕ್ತೋ ಮು ಕ್ತಯೇ ಕಲ್ಪಿತೋ ಮನುಃ" ಇತಿ. ಯಜುರ್ವೇದೇ ಪಂಚಮಪ್ರಶ್ನೇ ಶತರುದ್ರೀಯೇ ಅಷ್ಟಮಾನುವಾಕೇ,—"ನಮಶ್ಶಿವಾಯ ಶಿವತರಾಯ ಚ" ಅನ್ಯತ್ರ,—"ವೇ ದಾನಾಂ ಯಜುಷಾಂ ಮಧ್ಯೇ ಶತರುದ್ರೀಯಮಧ್ಯಗಂ ॥ ಪ್ರಮಾಣಂ ವೇದವಾಕ್ಯ ತ್ವಾತ್ಪರಮಾರ್ಥಪ್ರಕಾಶನಂ" ಇತಿ. ಸೂತಸಂಹಿತಾಯಾಂ,—"ಏಷಾ ಪಂಚಾಕ್ಷ ರೀ ವಿದ್ಯಾ ಶತರುದ್ರೀಯಮಧ್ಯಗಾ ॥ ಪಾವನೀ ಸರ್ವಭೂತಾನಾಂ" ಇತಿ. ಕೂ ರ್ಮೇ,—"ಅಗಸ್ತ್ಯರಾಮಾದಿಭಿರಾದೃತತ್ವಾದಮುಷ್ಯ ಮಂತ್ರಸ್ಯ ಚ ವೈದಿಕತ್ವಾ ತ್ ॥ ಶಿವಸ್ಯ ತತ್ತ್ವಸ್ಯ ಚ ವಾಚಕತ್ವಾನ್ನಮಶ್ಶಿವಾಯೇತಿ ಸದಾ ಜಪಧ್ವಂ" ಇತಿ. ಶೈವೇ ವಾಯವೀಯಸಂಹಿತಾಯಾಂ,—ಕೃಷ್ಣಃ, "ಮಹರ್ಷೇ ವದ ಸರ್ವಜ್ಞ ಸರ್ವ ಜ್ಞಾನಮಹೋದಧೇ ॥ ಪಂಚಾಕ್ಷರಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ॥ (ಉಪಮನ್ಯುಃ) ಪಂಚಾಕ್ಷರಸ್ಯ ಮಾಹಾತ್ಮ್ಯಂ ವರ್ಷಕೋಟಿಶತೈರಪಿ ॥ ನ ಶಕ್ಯಂ ವಿಸ್ತರಾದ್ವಕ್ತುಂ ತಸ್ಮಾತ್ಸಂಕ್ಷೇಪತಶ್ಶೃಣು॥ ಸಪ್ತಕೋಟಿಷು ಮಂತ್ರೇಷು ಮಂತ್ರಃ ಪಂಚಾಕ್ಷರೋ ಮಹಾನ್ ॥ ಬ್ರಹ್ಮವಿಷ್ಣ್ವಾದಿದೇವೇಷು ಯಥಾ ಶಂಭುರ್ಮಹತ್ತ

---

ಎಂಬ ಎರಡಕ್ಷರವು ನಮಸ್ಕಾರವನ್ನು ಹೇಳುವ ನಮಶ್ಶಬ್ದದಿಂದ ಕೂಡಿದುದಾಗಿ, ಚತುರ್ಥ್ಯಂ ತವಾಗಿ ಕಲ್ಪಿತವಾಗಿ ಉಚ್ಚಾರಕರಿಗೆ ಮಹಾಪಾತಕ ವಿನಾಶಪೂರ್ವಕವಾಗಿ ಮುಕ್ತಿದಾಯಕವಾ ಗಿದೆ,. ಎಂದು ಹೇಳಲ್ಪಟ್ಟಿದೆ. ಯಜುರ್ವೇದದಲ್ಲಿರುವ ಶತರುದ್ರೀಯದಲ್ಲಿ ಎಂಟನೆಯ ಅನುವಾ ಕದಲ್ಲಿ—"ನಮಶ್ಶಿವಾಯ,, ಎಂದು ಹೇಳಲ್ಪಟ್ಟಿದೆ. ಬೇರೊಂದು ಗ್ರಂಥದಲ್ಲಿ—"ಯಜುರ್ವೇ ದಮಧ್ಯದಲ್ಲಿರುವ ಶತರುದ್ರೀಯದ ಮಧ್ಯವರ್ತಿಯಾಗಿರುವುದು—ಪರಬ್ರಹ್ಮ ಶಿವತತ್ತ್ವವೆಂಬ ಪರ ಮಾರ್ಥವನ್ನು ಹೇಳತಕ್ಕುದಾಗಿದೆ. ಅದು ವೇದವಾಕ್ಯವಾಗಿರುವುದರಿಂದ ಸರ್ವರಿಗೂ ಪ್ರಮಾಣ ವಾಗಿರುತ್ತದೆ,, ಎಂದೂ, ಸೂತಸಂಹಿತೆಯಲ್ಲಿ—"ಶತರುದ್ರೀಯ ಮಧ್ಯವರ್ತಿಯಾದ ಈ ಪಂ ಚಾಕ್ಷರೀವಿದ್ಯೆಯು ಸಕಲ ಪ್ರಾಣಿಗಳನ್ನು ಪರಿಶುದ್ಧಿಗೊಳಿಸತಕ್ಕದ್ದು,, ಎಂದೂ, ಕೂರ್ಮಪು ರಾಣದಲ್ಲಿ—"ಈ ಪಂಚಾಕ್ಷರಮಂತ್ರವು-ವೇದೋಕ್ತವಾಗಿರುವುದರದೆಸೆಯಿಂದಲೂ, ಶಿವತತ್ತ್ವ ವನ್ನು ಹೇಳತಕ್ಕುದಾಗಿರುವುದರದೆಸೆಯಿಂದಲೂ, ಅಗಸ್ತ್ಯ ರಾಮಾದಿಗಳಿಂದ ಅಂಗೀಕರಿಸಲ್ಪ ಟ್ಟುದಾಗಿರುವುದರಿಂದಲೂ 'ನಮಶ್ಶಿವಾಯ, ಎಂದು ಯಾವಾಗಲೂ ಜಪಿಸಿರಿ,, ಎಂದೂ ಹೇಳ ಲ್ಪಟ್ಟಿದೆ. ಶಿವಪುರಾಣದ ವಾಯವೀಯಸಂಹಿತೆಯಲ್ಲಿ—"ಸರ್ವಜ್ಞನೂ, ಸರ್ವಜ್ಞಾನಸಮುದ್ರನೂ, ಮಹರ್ಷಿಯೂ ಆಗಿರುವ ಎಲೈ ಉಪಮನ್ಯುವೇ! ಪಂಚಾಕ್ಷರಮಂತ್ರದ ಮಾಹಾತ್ಮ್ಯವನ್ನು ಯ ಥಾರ್ಥವಾಗಿ ಕೇಳಬೇಕೆಂದಿಚ್ಛೈಸುತ್ತೇನೆ,, ಎಂದು ಶ್ರೀಕೃಷ್ಣನಿಂದ ಕೇಳಲ್ಪಟ್ಟುದಕ್ಕೆ ಉಪ ಮನ್ಯುವಿನಿಂದ—"ಪಂಚಾಕ್ಷರಮಂತ್ರದ ಮಹಿಮೆಯನ್ನು ಶತಕೋಟಿವರ್ಷಗಳವರೆಗೆ ಹೇಳಿದರೂ ಪೂರೈಸುವುದು ಸಾಧ್ಯವಲ್ಲವಾದ್ದರಿಂದ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು; ಬ್ರಹ್ಮವಿಷ್ಣ್ವಾ

ರಃ || ಅಂಗಂ ನಮಃ ಪದಮಿದಂ ಶಿವ ಏಷ ಲಿಂಗಂ ಸಂಬಂಧಮಾಯಪದಮೇತದು ದೀರಿತಂ ಸ್ಯಾತ್ || ಲಿಂಗಾಂಗಸಂಗಮುಪದತ್ರಯಬೋಧನಾರ್ಥಂ ಮಂತ್ರೋsಯ ಮಾಹ ನಿಗಮಾಗಮಮಂತ್ರರಾಜಃ'' ಇತಿ. ಸ್ಕಾಂದೇ ಬ್ರಹ್ಮೋತ್ತರಖಂಡೇ,— '' ನಮಸ್ಕಾರೇಣ ಜೀವತ್ವಂ ಶಿವೇತಿ ಪರಮಾತ್ಮತಾ || ಆಯೇತ್ಯೈಕ್ಯಮಿತಿ ಖ್ಯಾತಂ ತಜ್ಜೀವಪರಮಾತ್ಮನೋಃ'' ಇತಿ. ತತ್ರಾಧ್ಯಾಯತ್ರಯೇಣ ಭಸ್ಮರುದ್ರಾಕ್ಷಪಂಚಾ ಕ್ಷರಮಹತ್ತ್ವಂ ಕಥಾರೂಪೇಣ ವಿಸ್ತೃತಂ. ಇತಿ ಶಿವಮಂತ್ರೋಚ್ಚಾರಣಮಹತ್ತ್ವಂ.

ಭೋ ಚೋಳ ! ಶಿವಲಿಂಗಧಾರಣಮಹತ್ತ್ವವಿಧಿಃ ಶ್ರೂಯತಾಂ, ಋಗ್ವೇದೇ,— '' ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ | ಅತ ಪ್ತತನೂರ್ನತದಾಮೋsಶ್ನುತೇ ಶೃತಾಸ ಇದ್ವಹಂ ತಸ್ತತ್ಸಮಾಶತ'' ಇತಿ. ಕಾಶೀಖಂ ಡೇ,—ಶಿವಃ, '' ಯತ್ಪವಿತ್ರಂ ಪವಿತ್ರಾಣಾಂ ತಲ್ಲಿಂಗಂ ಜ್ಯೋತಿರೈಶ್ವರಂ || ತತ್ಸಂ

---

ದಿದೇವತೆಗಳಲ್ಲಿ ಶಿವನು ಉತ್ಕೃಷ್ಟನಾಗಿರುವಂತೆ ಏಳುಕೋಟಿ ಮಂತ್ರಗಳಲ್ಲಿ ಪಂಚಾಕ್ಷರಮಂ ತ್ರವು ಉತ್ಕೃಷ್ಟವಾದುದು. ಈ ಮಂತ್ರದಲ್ಲಿರುವ 'ನಮಃ, ಎಂಬ ಈ ಪದವು ಜೀವ ಎಂಬ ಅಂಗವನ್ನು ಹೇಳತಕ್ಕದ್ದು. 'ಶಿವ, ಎಂಬ ಈ ಪದವು ಪರಮಾತ್ಮನೆಂಬ ಲಿಂಗವನ್ನು ಹೇಳತಕ್ಕ ದ್ದು. 'ಆಯ' ಎಂಬ ಈ ಪದವು ಜೀವಪರಮರಾದ ಅಂಗಲಿಂಗಗಳಿಗೆ ಅವಿಭಾಜ್ಯಸಂಬಂಧವನ್ನು ಹೇಳತಕ್ಕದ್ದು. ವೇದಾಗಮಗಳಲ್ಲಿ ಉಕ್ತವಾಗಿರುವ ಮಂತ್ರಗಳಲ್ಲಿ ಶ್ರೇಷ್ಠವಾಗಿರುವ ಈ ಮಂತ್ರವು 'ಲಿಂಗ,- 'ಅಂಗ,- 'ಸಂಬಂಧ, ಪದಗಳ ಅರ್ಥವನ್ನು ಹೇಳುತ್ತಿದೆ., ಎಂದೂ, ಬ್ರ ಹ್ಮೋತ್ತರಖಂಡದಲ್ಲಿ—''ಈ ಮಂತ್ರವು 'ನಮಃ, ಪದದಿಂದ ಪರಮಾತ್ಮತ್ವವನ್ನು 'ಆಯ, ಪದ ದಿಂದ ಆ ಜೀವ ಪರಮಾತ್ಮರಿಗೆ ಏಕತ್ವವನ್ನು ಹೇಳತಕ್ಕುದೆಂದು ಪ್ರಸಿದ್ಧವಾಗಿದೆ., ಎಂದೂ ಹೇ ಳಲ್ಪಟ್ಟಿದೆ. ಆ ಬ್ರಹ್ಮೋತ್ತರಖಂಡದಲ್ಲಿ ಮೂರು ಅಧ್ಯಾಯಗಳಿಂದ ಭಸ್ಮ ರುದ್ರಾಕ್ಷ ಪಂಚಾ ಕ್ಷರ ಮಾಹಾತ್ಮ್ಯವು ಕಥಾರೂಪದಿಂದ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ.

ಎಲೈ ಚೋಳನೇ! ಶಿವಲಿಂಗಧಾರಣಮಾಹಾತ್ಮ್ಯವಿಧಿಯನ್ನು ಕೇಳು; ಋಗ್ವೇದದಲ್ಲಿ— ''ಎಲೈ ಲಿಂಗರೂಪಶರೀರದಿಂದ ಕೂಡಿಕೊಂಡಿರುವ ಶಿವನೇ ! ನಿನ್ನ ಆ ಬ್ರಹ್ಮಪದವಾಚ್ಯವಾದ ಲಿಂಗರೂಪಶರೀರವು ಶುಚ್ಯಶುಚಿಕಾಲಗಳಲ್ಲೂ ಧರಿಸಲು ಯೋಗ್ಯವು. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಭೇದದಿಂದಲೂ, ಅಥವಾ ಭಕ್ತರ ಸ್ಥೂಲ, ಸೂಕ್ಷ್ಮ, ಕಾರಣ ಶರೀರಭೇದದಿಂದ ಲೂ ಅನೇಕವಿಧವಾಗಿದೆ. ನಿಗ್ರಹಾನುಗ್ರಹಸಮರ್ಥನಾದ ನೀನು ಭಕ್ತರ ಎಲ್ಲಾ ಶರೀರಗಳನ್ನು ವ್ಯಾಪಿಸಿರುತ್ತೀಯೆ. ವೇಧಾ, ಮನು, ಕ್ರಿಯಾರೂಪವಾದ ದೀಕ್ಷಾತ್ರಯದಿಂದ ಸಂಸ್ಕರಿಸಲ್ಪಡ ದಿರುವ ಪಂಪಕ್ವವಲ್ಲದ ಮನಸ್ಸುಳ್ಳವನು ತತ್ಪದವಾಚ್ಯವಾದ ಇಷ್ಟಲಿಂಗವನ್ನು ಹೊಂದಲಾರ ನು. ಶಿವಜ್ಞಾನಸಂಪನ್ನರು ಲಿಂಗವನ್ನಾಶ್ರಯಿಸಿದವರಾಗಿ ತತ್ಪದವಾಚ್ಯವಾದ ಆ ಇಷ್ಟಲಿಂಗವ ನ್ನು ಹೊಂದುತ್ತಾರೆ., ಎಂದು ಹೇಳಲ್ಪಟ್ಟಿದೆ. ಕಾಶಿಕಾಖಂಡದಲ್ಲಿ—''ಎಲೈ ಪಾರ್ವತಿಯೇ!

ಶರೀರಾಣ್ಯಪವಿತ್ರತ್ವಂ ಗಾತ್ರಾಣಿ ಪರಿಯಾಂತಿ ವೈ|| ತದೇತತ್ಪರಮಂ ಜ್ಯೋತಿರ್ಲಿಂಗಂ ದೇವಿ ಮದಾತ್ಮಕಂ || ಶಿವಾನಂದಂ ಪರಂಧಾಮ ದುಷ್ಪ್ರಾಪಮಕೃತಾತ್ಮಭಿಃ || ಯೇ ಸಂಶ್ರಿತಾಸ್ಸದಾ ಲಿಂಗಂ ಯೇ ವದಂತಸ್ಸದಾಽಽದರಾತ್ || ತೇ ಪ್ರಾಪ್ನುವಂತಿ ಸರ್ವೇಶಂ ಮಾಮೇವಾತ್ರ ನ ಸಂಶಯಃ'' ಯಜುರ್ವೇದೇ,—'' ಯಾ ತೇ ರುದ್ರ ಶಿವಾ ತನೂರಘೋರಾಪಾಪಕಾಶಿನೀ | ತಯಾ ನಸ್ತನುವಾ ಶಂತಮಯಾ ಗಿರಿಶಂತಾ ಭಿಚಾಕಶೀಹಿ'' ಸ್ಕಾಂದೇ ಶಾಂಕರಸಂಹಿತಾಯಾಂ,—'' ಸ್ವಪ್ನಕಾಲೇ ಕೃತಂ ಪಾಪಂ ಬ್ರಹ್ಮಹತ್ಯಾದಿಕಂ ಚ ಯತ್ || ಯಥಾ ಪ್ರಬೋಧಸಮಯೇ ತನ್ಮಿಥ್ಯಾ ಭವತಿ ಸ್ಫುಟಂ || ತಥೈವ ಸ್ವಕೃತಂ ಪಾಪಂ ಲಿಂಗಧಾರಣತಃ ಪುರಾ || ಯದಸ್ತಿ ತಲ್ಲಯಂ ಯಾತಿ ಲಿಂಗಧಾರಣತಃ ಪರಂ'' ಪಾದ್ಮೇ,—'' ಕಾಯಸಂಬಂಧಲಿಂಗೇನ ರಹಿತಸ್ಸ್ಯಾತ್ಪಿಶಾಚಕಃ || ನಿಮಿಷಾರ್ಧವಿಯೋಗೇನ ಪಿಶೇಷಾತ್ಪಾತಕೀ ಭವೇತ್ || ಉತ್ತಮಾಂಗೇ ಗಳೇ ಕಕ್ಷೇ ಸರ್ವದಾ ಧಾರಯೇಚ್ಛಿವಂ || ಮೂತ್ರಾದ್ಯುತ್ಸರ್ಜನೇ ಯಾನೇ ಭೋಜನೇಪಿ ಸದಾ ಶುಚಿಃ,, ಶಿವರಹಸ್ಯೇ,—'' ಗಚ್ಛಂಸ್ತಿಷ್ಠನ್ ಸ್ವಪನ್ಜಾಗ್ರದುನ್ಮಿಷನ್ನಿಮಿಷನ್ನಪಿ || ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್,,

---

ಪವಿತ್ರವಾದವುಗಳೊಳಗೆ ಯಾವುದು ಪವಿತ್ರವಾದುದೋ, ಅದೇ ತೇಜೋರೂಪವಾದ ಶಿವಲಿಂಗವು. ಆ ಲಿಂಗದ ಸಂಪರ್ಕದಿಂದ ಭಕ್ತಶರೀರಗಳು ಪವಿತ್ರತ್ವವನ್ನು ಹೊಂದುತ್ತವೆ. ಆ ಈ ಲಿಂಗವು ಪರಂಜ್ಯೋತೀರೂಪವಾದದ್ದು. ನನ್ನ ಸ್ವರೂಪವಾದದ್ದು. ಶಿವಾನಂದಮಯವಾದ ಪರಮಾತ್ಮಲಿಂಗವು ಕೃತಕೃತ್ಯರಲ್ಲದವರಿಂದ ಹೊಂದಲಶಕ್ಯವಾದದ್ದು. ವಿಶ್ವಾಸದಿಂದ ಯಾವಾಗಲೂ ಲಿಂಗಧಾರಿಗಳಾಗಿ, ಲಿಂಗವನ್ನು ಸ್ತುತಿಸುತ್ತಿರುವವರು ಸರ್ವೇಶ್ವರನಾದ ನನ್ನನ್ನೇ ಸೇರುವರು: ಈ ವಿಷಯದಲ್ಲಿ ಸಂದೇಹವಿಲ್ಲವು. [ಯಜುರ್ವೇದಮಂತ್ರಕ್ಕೆ ಟಿಪ್ಪಣಿಯನ್ನು ೨ನೆಯ ಉಪದೇಶದ ೨ನೆಯ ಸಂವಾದದಲ್ಲಿ ನೋಡಿರಿ.] ಸ್ಕಾಂದಪುರಾಣಾಂತರ್ಗತವಾದ ಶಾಂಕರಸಂಹಿತೆಯಲ್ಲಿ—''ಸ್ವಪ್ನದಲ್ಲಿ ಮಾಡಲ್ಪಟ್ಟ ಬ್ರಹ್ಮಹತ್ಯಾದಿ ಪಾಪವು ಎಚ್ಚರವಾದಾಗ ಸುಳ್ಳಾಗುವಂತೆಯೇ ತನಗೆ ಲಿಂಗಧಾರಣವು ಆಗುವುದಕ್ಕಿಂತ ಮೊದಲು ಮಾಡಲ್ಪಟ್ಟ ಪಾಪವು ಲಿಂಗಧಾರಣವಾದ ಬಳಿಕ ನಾಶವಾಗುವುದು. ಪದ್ಮಪುರಾಣದಲ್ಲಿ—''ಯಾವನು ತನ್ನ ಅಂಗದಲ್ಲಿ ಲಿಂಗಧಾರಣವಿಲ್ಲದವನೋ ಅವನು ಪಿಶಾಚಜನ್ಮವನ್ನು ಹೊಂದುವನು. ಅರ್ಧನಿಮಿಷಕಾಲಪರ್ಯಂತರ ಲಿಂಗವಿಹೀನನಾದರೂ ಮಹಾಪಾಪಿಯಾಗುವನು. ಮಸ್ತಕ, ಕಂಠ, ಕಕ್ಷಾದಿಸ್ಥಾನಗಳಲ್ಲಿ ಯಾವಾಗಲೂ ಶಿವಲಿಂಗವನ್ನು ಧರಿಸಬೇಕು. ಲಿಂಗಧಾರಿಯು ಮಲಮೂತ್ರಗಳನ್ನು ಬಿಡುವಾಗಲೂ, ನಡೆಯುವಾಗಲೂ, ಊಟಮಾಡುವಾಗಲೂ ಯಾವಾಗಲೂ ಶುಚಿಯಾಗಿರುತ್ತಾನೆ,, ಶಿವರಹಸ್ಯದಲ್ಲಿ—''ನಡೆಯುವಾಗ, ನಿಂತಿರುವಾಗ, ಮಲಗಿರುವಾಗ, ಎಚ್ಚರದಿಂದಿರುವಾಗ, ಕಣ್ಣುರೆಪ್ಪೆಗಳನ್ನು ಬಿಡುವಾಗ, ಮುಚ್ಚುವಾಗ, ಸ್ನಾನಾದಿಗಳಿಂದ ಶುದ್ಧನಾಗಿರುವಾಗ, ಮೂತ್ರೋತ್ಸರ್ಜನಾದಿಗಳಿಂದ ಅಪರಿಶುದ್ಧ

ವಾತುಲತಂತ್ರೇ,—"ಬ್ರಹ್ಮವಿಷ್ಣುಸುರೇಶಾದಿವಿಬುಧಾಃ ಪರಯಾ ಮುದಾ ॥ ಶಿರಸಾ ಧಾರಯಂತ್ಯೇತೇ ಶಿವಲಿಂಗಮಹರ್ನಿಶಂ ॥ ಕಂಠೇ ತು ಹರಕಂಠಾದಿಮುನಯೋ ಮನವಸ್ತಥಾ ॥ ಸರ್ವದಾ ಶಿವಲಿಂಗಂ ತು ಧಾರಯಂತಿ ಯಜಂತಿ ಚ" ಬ್ರಹ್ಮೋಪನಿಷದಿ,-"ಯದಕ್ಷರಂ ಪರಂಬ್ರಹ್ಮ ತತ್ಸೂತ್ರಮಿತಿ ಧಾರಯೇತ್,, ಕಾರಣಾಗಮೇ,—"ಸಂಸ್ಥಿತತ್ವಾತ್ಸಮಸ್ತೇಷು ವಸ್ತುಷ್ವಪಿ ತು ಸಂತತಂ ॥ ಸೂಚನಾತ್ಪರಮೇಶಸ್ಯ ಸೂತ್ರಂ ಲಿಂಗಮಿತೀರಿತಂ ॥ ಸೂಕ್ಷ್ಮತ್ವಾತ್ಕಾರಣತ್ವಾಚ್ಚ ಲಯನಾದ್ಗಮನಾದಪಿ॥ ಲಕ್ಷಣಾತ್ಪರಮೇಶಸ್ಯ ಲಿಂಗಮಿತ್ಯಭಿಧೀಯತೇ ,, ವೀರತಂತ್ರೇ,—"ಪುಷ್ಪಸ್ಯ ಸುರಭಿರ್ಯದ್ವತ್ತದ್ವದ್ದೇಹಸ್ಯ ಲಿಂಗಕಂ ॥ ಲಿಂಗಭೇದಾನ್ಮಹಾಪಾಪಂ ತಸ್ಮಾತ್ಪೀಠಾರ್ಚನಂ ನಹಿ ॥ ಸರ್ವಜ್ಞೋ ವೇದಶಾಸ್ತ್ರೇಷು ಸರ್ವಜ್ಞಸ್ತು ಶಿವಾಗಮೇ ॥ ಲಿಂಗಧಾರಣಹೀನಶ್ಚೇಚ್ಛ್ವಾನವನ್ಮನ್ಯತೇ ಮಯಾ ॥ ಪತಿತೇ ಪ್ರಾಣಲಿಂಗೇ ಯಃ ಪ್ರಾಣಾನ್ ಧತ್ತೇ ನರಾಧಮಃ ॥ ಸ ಚಂಡಾಲ ಇತಿ ಪ್ರೋಕ್ತಸ್ತದ್ದೇಹೋ ನರಕಾಲಯಃ,, ಇತ್ಯಾದಿಶ್ರುತ್ಯಾಗಮಪುರಾಣವಾಕ್ಯೈಃ ಶಿವಲಿಂಗಧಾರಣಮತಿಪ್ರಸಿದ್ಧಂ.

---

ನಾಗಿರುವಾಗ ಸರ್ವಕಾಲದಲ್ಲೂ ಲಿಂಗವನ್ನು ಧರಿಸಬೇಕು,, ವಾತುಲಾಗಮದಲ್ಲಿ —"ಈ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳು ಅತಿಶಯ ಸಂತೋಷದಿಂದ ಕೂಡಿದವರಾಗಿ ಶಿವಲಿಂಗವನ್ನು ಮಸ್ತಕದಿಂದ ಅಹೋರಾತ್ರಿಯಲ್ಲಿಯೂ ಧರಿಸಿ ಪೂಜಿಸುತ್ತಾರೆ. ಹರಕಂಠ ಮೊದಲಾದ ಮುನಿಗಳೂ ಮನುಗಳೂ ಶಿವಲಿಂಗವನ್ನು ಯಾವಾಗಲೂ ಕಂಠದಲ್ಲಿ ಧಾರಣೆಮಾಡಿ ಪೂಜಿಸುತ್ತಾರೆ,, ಬ್ರಹ್ಮೋಪನಿಷತ್ತಿನಲ್ಲಿ—"ನಾಶರಹಿತವೂ ಪರಬ್ರಹ್ಮವೂ ಆದ ಶಿವಲಿಂಗವನ್ನೇ ಯಜ್ಞಸೂತ್ರವೆಂದು ತಿಳಿದು ಆ ಲಿಂಗವನ್ನು ಧರಿಸಬೇಕು,, ಕಾರಣಾಗಮದಲ್ಲಿ —"ಲಿಂಗವು ಸಕಲ ವಸ್ತುಗಳಲ್ಲೂ ಯಾವಾಗಲೂ ವ್ಯಾಪ್ತವಾಗಿರುವುದರಿಂದಲೂ ಪರಮೇಶ್ವರನನ್ನು ಸೂಚಿಸತಕ್ಕುದಾದ್ದರಿಂದಲೂ ಸೂತ್ರವೆಂದು ಹೇಳಲ್ಪಟ್ಟಿತು. ಪರಮೇಶ್ವರನು ಸೂಕ್ಷ್ಮರೂಪನಾಗಿರುವುದರಿಂದಲೂ, ಸಕಲ ಜಗತ್ಕಾರಣನಾಗಿರುವುದರಿಂದಲೂ, ಪ್ರಪಂಚದ ಲಯೋತ್ಪತ್ತಿಗಳಿಗೆ ಕಾರಣನಾಗಿರುವುದರಿಂದಲೂ ಲಿಂಗವೆಂದು ಹೇಳಲ್ಪಟ್ಟಿರುತ್ತಾನೆ,, ವೀರತಂತ್ರದಲ್ಲಿ—"ಪುಷ್ಪಕ್ಕೆ ಪರಿಮಳವು ನಿತ್ಯಸಂಬಂಧವಾಗಿರುವಂತೆ ಶಕ್ತ್ಯಂಶವಾದ ದೇಹಕ್ಕೆ ಲಿಂಗವು ನಿತ್ಯಸಂಬಂಧವಾದದ್ದು. ಆದ್ದರಿಂದ ಲಿಂಗವನ್ನು ದೇಹದಿಂದ ಬೇರ್ಪಡಿಸಿದವನಿಗೆ ಮಹಾಪಾಪವು ಸಂಭವಿಸುತ್ತದೆ. ಆದ್ದರಿಂದ ಕೇವಲ ಪೀಠವನ್ನೇ ಪೂಜಿಸಬಾರದು. ವೇದಶಾಸ್ತ್ರಾರ್ಥಗಳನ್ನೂ, ಶಿವಾಗಮಗಳ ಅರ್ಥವನ್ನು ತಿಳಿದವನಾದರೂ ಲಿಂಗಧಾರಣಹೀನನಾಗಿದ್ದರೆ ಅವನು ನನ್ನಿಂದ ನಾಯಿಯಂತೆ ಭಾವಿಸಲ್ಪಡುತ್ತಾನೆ. ದೇಹದದೆಸೆಯಿಂದ ಇಷ್ಟಲಿಂಗವಿಯೋಗವನ್ನು ಹೊಂದಿದ ನರಾಧಮನು ಪ್ರಾಣತ್ಯಾಗಮಾಡಿಕೊಳ್ಳದಿದ್ದರೆ ಅವನು ಚಂಡಾಲನು, ಅವನ ದೇಹವು ನರಕಾಲಯವು ಎಂದೂ ಹೇಳಲ್ಪಟ್ಟದೆ,, ಇತ್ಯಾದಿ ವೇದಾಗಮಪುರಾಣವಚನಪ್ರಮಾಣಗಳಿರುವುದರಿಂದ ಶಿವಲಿಂಗಧಾರಣವು ಅತಿ ಪ್ರಸಿದ್ಧವಾಗಿದೆ.

ಭೋ ಚೋಳ! ವೀರಶೈವೈರ್ವಾಮಕರಪೀಠೇ ಶಿವಲಿಂಗಸ್ಯ ಪೂಜಾವಿಧಿಃ ಶ್ರೂಯತಾಂ, ಋಗ್ವೇದೇ,-"ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ|ಅಯಂ ಮೇ ವಿಶ್ವ ಭೇಷಜೋsಯಂ ಶಿವಾಭಿಮರ್ಶನಃ|ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್|ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ" ವಾತುಲತಂತ್ರೇ,-"ನಿಧಾಯ ಕರಪೀಠೇ ಮಾಂ ಲಿಂಗಾಕಾರಂ ಯಜೇತ್ಸದಾ||ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಂ" ಶಿವಧರ್ಮಪುರಾಣೇ,-ನಂದೀಶ್ವರಃ, "ಯಾವನ್ನಾಯಾತಿ ಮರಣಂ ಯಾವನ್ನಾಕ್ರಮತೇ ಜರಾ || ಯಾವನ್ನೇಂದ್ರಿಯವೈಕಲ್ಯಂ ತಾವತ್ಪೂಜಯ ಶಂಕರಂ ||ಅರುದ್ರಃ ಪೂಜಯೇದ್ರುದ್ರಂ ನ ಪೂಜಾಫಲಭಾಗ್ಭವೇತ್ || ರುದ್ರೋ ಭೂತ್ವಾ ಯಜೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್" ಕಾಮಿಕತಂತ್ರೇ,—"ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ || ಶಿವಸ್ಯೈವ ಶಿವೋಪಾಸ್ತಿರಿತಿ ನಾನಾಶ್ರುತಿಃ ಖಲು" ಹೇ ಚೋಳ! ಕಿಂಬಹುನಾ. ಭೋಗಮೋಕ್ಷಯೋಃ ಶಿವಲಿಂಗಾರ್ಚನಮೇಕಮೇವ ಹಿ ಕಾರಣಂ. ತದು

---

ಎಲೈ ಚೋಳನೇ! ವೀರಶೈವರಿಂದ ಕರ್ತವ್ಯವಾದ ವಾಮಹಸ್ತಪೀಠದಲ್ಲಿ ಶಿವಲಿಂಗಪೂಜಾವಿಧಾನವನ್ನು ಕೇಳು; ಋಗ್ವೇದದಲ್ಲಿ—"ಪ್ರಪಂಚಗಳಿಗೆ ಮಿತ್ರಸ್ವರೂಪನಾದೆಲೈ ಶಿವನೇ! ಬಾ, ಗುರುವಿನಿಂದ ಪೂಜಿಸಲ್ಪಟ್ಟ ಈ ಕರಪೀಠವನ್ನು ನಿನಗೆ ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಸಿಹ್ಮಾಸನವನ್ನಾಗಿ ಹೊಂದುವವನಾಗು. ಆ ಕಾರಣದಿಂದಲೇ ಈ ನನ್ನ ಹಸ್ತವು ಷಡ್ಗುಣೈಶ್ವರ್ಯಸಂಪನ್ನವುಳ್ಳುದೂ, ಸಕಲ ಭವರೋಗಗಳಿಗೆ ವೈದ್ಯಸ್ವರೂಪವೂ, ಮತ್ತು ಶಿವನಿಗೆ ವಾಸಸ್ಥಾನಭೂತವೂ, ಮಾತಾಪಿತೃಸ್ವರೂಪವೂ ಆತ್ಮಸ್ವರೂಪವೂ ಆಯಿತು,, ವಾತುಲಾಗಮದಲ್ಲಿ— "ಲಿಂಗಾಕಾರನಾದ ನನ್ನನ್ನು ಹಸ್ತದಲ್ಲಿಟ್ಟು ಪೂಜಿಸಬೇಕು. ಆ ರೀತಿಯಾಗಿ ಪೂಜಿಸತಕ್ಕವನ ಕೈಯಲ್ಲಿ ಸಕಲ ಸಂಪತ್ತುಗಳಿಗೆ ಸ್ಥಾನವಾದ ನನ್ನ ಸ್ಥಾನವು ಇರುವದೆಂದು ತಿಳಿಯತಕ್ಕವಳಾಗು,, ಎಂದು ಶಿವನಿಂದ ಪಾರ್ವತಿಯನ್ನು ಕುರಿತು ಹೇಳಲ್ಪಟ್ಟಿದೆ. ಶಿವಧರ್ಮಪುರಾಣದಲ್ಲಿ— "ಮರಣವುಂಟಾಗುವುದರೊಳಗೆ, ಮುಪ್ಪುಂಟಾಗುವುದರೊಳಗೆ, ಇಂದ್ರಿಯಗಳಿಗೆ ಶೈಥಿಲ್ಯವುಂಟಾಗುವುದರೊಳಗೆ ಶಿವನನ್ನು ಪೂಜಿಸಬೇಕು. ಶಿವತ್ವವನ್ನು ಹೊಂದದವನು ಶಿವನನ್ನು ಪೂಜಿಸಿದರೆ ಆತನಿಗೆ ಪೂಜಾಫಲವು ದೊರಕುವುದಿಲ್ಲವು. ಆದ್ದರಿಂದ ಶಿವದೀಕ್ಷಾಖ್ಯವಾದ ಸಂಸ್ಕಾರದಿಂದ ಶಿವತ್ವವನ್ನು ಹೊಂದಿ ಶಿವನನ್ನು ಪೂಜಿಸಬೇಕು. ಶಿವದೀಕ್ಷಾಸಂಸ್ಕಾರರಹಿತನು ಶಿವಲಿಂಗವನ್ನು ಪೂಜಿಸಕೂಡದು. ಎಂದು ನಂದೀಶ್ವರನಿಂದ ಹೇಳಲ್ಪಟ್ಟಿದೆ. ಕಾಮಿಕಾಗಮದಲ್ಲಿ—"ದೀಕ್ಷಾಸಂಸ್ಕಾರದಿಂದ ಶಿವತ್ವವನ್ನು ಹೊಂದದವನಿಗೆ ಶಿವೋಪಾಸನೆಯು ಕೋಟಿಜನ್ಮಗಳಿಂದಲೂ ಸಂಘಟಿಸುವುದಿಲ್ಲವು. ಶಿವತ್ವವನ್ನು ಹೊಂದಿದವನಿಗೆ ಶಿವೋಪಾಸನೆಯು ಸಂಘಟಿಸುತ್ತದೆ. ಎಂದು ಅನೇಕ ಶ್ರುತಿಗಳು ಹೇಳುತ್ತವೆ,, ಎಂದು ಹೇಳಲ್ಪಟ್ಟಿದೆ.

ಕ್ತಂ ಋಗ್ವೇದೇ,—"ತವ ಶ್ರಿಯೇ ಮರುತೋ ಮರ್ಜಯಂತ ರುದ್ರ ಯತ್ತೇ ಜನಿಮ ಚಾರು ಚಿತ್ರಂ,, ಬೋಧಾಯನಸೂತ್ರೇ,—"ಅಥಾತೋ ಮಹಾದೇವಸ್ಯಾಹರಹಃ ಪರಿಚರ್ಯಾವಿಧಿಂ ವ್ಯಾಖ್ಯಾಸ್ಯಾಮಃ| ಪಾಪಕ್ಷಯಾರ್ಥೀ ವ್ಯಾಧಿವಿಮೋಚನಾರ್ಥೀ ಶ್ರೀಕಾಮಶ್ಶಾಂತಿಕಾಮಃ ಪುಷ್ಟಿಕಾಮಃ ಆರೋಗ್ಯಕಾಮ ಆಯುಷ್ಕಾಮಶ್ಚ ಕುರ್ಯಾತ್ ,, ಇತಿ. ಇತ್ಯಾದಿಭಿರ್ವಚಸ್ಯೈಶ್ಶಿವಲಿಂಗಪೂಜಾ ಪ್ರಸಿದ್ಧಾ.

ಹೇ ಚೋಳ! ಶ್ರುತಿಪ್ರಸಿದ್ಧಗುರುಲಿಂಗಜಂಗಮಪಾದೋದಕಪ್ರಸಾದಸ್ವೀಕಾರವಿಧಿಃ, ಶ್ರೂಯತಾಂ, ಶಿವರಹಸ್ಯೇ,—"ಏಕಮೂರ್ತಿಸ್ತ್ರಿಧಾಭಿನ್ನೋ ಗುರುರ್ಲಿಂಗಂ ಚ ಜಂಗಮಃ'' ಇತಿ. ವಾತುಲತಂತ್ರೇ,—"ಶಿವೇ ಗುರೌ ಸಮಾ ಬುದ್ಧಿರ್ಯಥಾ ಸಾ ಶಿವಯೋಗಿನಿ|| ಸೈಷಾ ತ್ರಿವಿಧಸಂಪತ್ತಿಸ್ಸಂವಿತ್ಸಾಮ್ರಾಜ್ಯಶಾಲಿನಾಂ,, ಕಾಮಿಕತಂತ್ರೇ,—"ಜಾನೀಯಾತ್ಸಚ್ಚಿದಾನಂದಾನ್ದೇಶಿಕೇಶ್ವರಜಂಗಮಾನ್|| ನಿತ್ಯಂ ಪೂರ್ಣಂ ತತ್ಪ್ರಸಾದಮಭೇದೇನೈವ ಭಾವಯೇತ್,, ಮುಂಡಕೋಪನಿಷದಿ,-"ಆವಿಸ್ಸನ್ನಿ

---

ಎಲೈ ಚೋಳನೇ! ಬಹುಮಾತುಗಳಿಂದೇನು? ಭೋಗಮೋಕ್ಷಗಳುಂಟಾಗುವುದಕ್ಕೆ ಶಿವಲಿಂಗಪೂಜೆಯೊಂದೇ ಕಾರಣವಾಗಿರುತ್ತದೆ. ಆ ವಿಷಯವು ಋಗ್ವೇದದಲ್ಲಿ—"ಎಲೈ ಮಹಾದೇವನೇ! ನಿನ್ನ ಸಂಬಂಧವೂ, ಮನೋಹರವೂ, ಸ್ಫಟಿಕಾದಿ ಭೇದದಿಂದ ನಾನಾಸ್ವರೂಪಾದುದೂ ಆದ ಯಾವ ಶಿವಲಿಂಗವುಂಟೋ ಅದನ್ನು ನಿನ್ನ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಪದವನ್ನು ಹೊಂದುವುದಕ್ಕೋಸ್ಕರ ದೇವತೆಗಳು ಪೂಜಿಸಿದರು,, ಎಂದು ನಿರೂಪಿತವಾಗಿದೆ. ಬೋಧಾಯನಸೂತ್ರದಲ್ಲಿ—"ಅನಂತರದಲ್ಲಿ ಶಿವಲಿಂಗಪೂಜಾವಿಧಿಯನ್ನು ಅಹೋರಾತ್ರಿಗಳಲ್ಲೂ ಮಾಡಬೇಕೆಂದು ವ್ಯಾಖ್ಯಾನಮಾಡುವೆವು. ಪಾಪವನ್ನು ಹೋಗಲಾಡಿಸಿಕೊಳ್ಳಬೇಕೆಂಬುವವನೂ, ರೋಗಗಳನ್ನು ಕಳೆದುಕೊಳ್ಳಬೇಕೆಂಬುವವನೂ, ಸಂಪತ್ತನ್ನು ಬಯಸುವವನೂ, ಶಾಂತಿಯನ್ನು ಇಚ್ಛಿಸುವವನೂ, ಪುಷ್ಟಿಯನ್ನಪೇಕ್ಷಿಸುವವನೂ, ಆರೋಗ್ಯವನ್ನಪೇಕ್ಷಿಸುವವನೂ, ಆಯುಸ್ಸನ್ನಪೇಕ್ಷಿಸುವವನೂ ಶಿವಲಿಂಗಪೂಜೆಯನ್ನು ಮಾಡತಕ್ಕದ್ದು,, ಇತ್ಯಾದಿ ವಚನಪ್ರಮಾಣಗಳಿರುವುದರಿಂದ ಶಿವಲಿಂಗಪೂಜೆಯು ಪ್ರಸಿದ್ಧವಾಗಿದೆ. ಎಲೈ ಚೋಳನೇ! ಶ್ರುತಿಪ್ರಸಿದ್ಧವಾದ ಗುರು ಲಿಂಗ ಜಂಗಮರ ಪಾದೋದಕ ಪ್ರಸಾದ ಸ್ವೀಕಾರ ವಿಧಾನವನ್ನು ಕೇಳು; ಶಿವರಹಸ್ಯದಲ್ಲಿ—"ಒಬ್ಬ ಶಿವನೇ ಗುರುವೆಂದೂ ಲಿಂಗವೆಂದೂ ಜಂಗಮನೆಂದೂ ಮೂರುಬಗೆಯಾಗಿರುತ್ತಾನೆ,, ಎಂದು ಉಕ್ತವಾಗಿದೆ. ವಾತುಲಾಗಮದಲ್ಲಿ—"ಶಿವನಲ್ಲಿ ಹೇಗೋ ಹಾಗೆ ಗುರುವಿನಲ್ಲೂ, ಶಿವಗುರುಗಳಲ್ಲಿ ಹೇಗೋ ಹಾಗೆ ಶಿವಯೋಗಿಯಾದ ಜಂಗಮನಲ್ಲೂ ಸಮಾನ ಬುದ್ಧಿಯಿರಬೇಕು. ಆ ಈ ಸಮಬುದ್ಧಿಯೇ ಜ್ಞಾನಿಗಳಿಗೆ ತ್ರಿವಿಧಸಂಪತ್ತಿಯೆಂದೆನಿಸುತ್ತದೆ,, ಎಂದು ನಿರೂಪಿತವಾಗಿದೆ. ಕಾಮಿಕಾಗಮದಲ್ಲಿ—"ದೇಶಿಕೋತ್ತಮರೆಂದೆನಿಸಿದ ಜಂಗಮರನ್ನು ಸಚ್ಚಿದಾನಂದಸ್ವರೂಪರನ್ನಾಗಿ ತಿಳಿಯಬೇಕು. ನಿತ್ಯವೂ, ಪರಿಪೂರ್ಣವೂ ಆದ ಅವರ ಪ್ರಸಾದವನ್ನು ಶಿವಪ್ರಸಾದದೊಡನೆ ಅಭೇದವಾದುದು ಎಂದು ಭಾವಿಸಬೇಕು.,, ಮುಂಡಕೋಪನಿಷತ್ತಿನಲ್ಲಿ—"ಕಂಥೆ, ಕಮಂಡಲು,

ಹಿತಂ ಗುಹಾಚರನ್ನಾಮ ಮಹತ್ಪದಮತ್ರೈತತ್ಸಮರ್ಪಿತಂ | ಏಜತ್ಪ್ರಾಣನ್ನಿಮಿಷಚ್ಚ ಯತ್,, ಅಸ್ಯಾರ್ಥಃ, ಆವಿಃ-ಕಂಥಾಕಮಂಡಲ್ವಾದಿಶಿವಮುದ್ರಾಧಾರಣಪ್ರಕಾಶೇನ, "ಪ್ರಕಾಶೇಪ್ರಾದುರಾವಿಸ್ಸ್ಯಾದಿತ್ಯಮರಃ,, ಸನ್ನಿಹಿತಂ—ಸಮ್ಯಕ್ಸ್ಥಿತಂ, ನಾಮ—ಪ್ರಸಿದ್ಧೌ, ಗುಹಾಸು—ಗಹ್ವರೇಷು, "ವಿಪುಲಾಗಹ್ವರೀಧಾತ್ರೀತ್ಯಮರಃ,, ಗುಹಾಯಾಂ—ಭೂಮಂಡಲೇ, ಆಸಮಂತಾಚ್ಚರತೀತಿ ಗುಹಾಚರಂ, ಮಹತ್ಪದಂ-ಸರ್ವಶ್ರೇಷ್ಠತ್ವಾಸ್ಪದಂ, ಶಿವಯೋಗೀಶ್ವರಂ ಪ್ರತಿ ಯತ್ಪದಾರ್ಥರೂಪಂ ವಸ್ತು ಸಮರ್ಪಿತಂ ಏತದ್ವಸ್ತು, ಅತ್ರ ಕರಪೀಠಸ್ಥಿತೇ ಶಿವಲಿಂಗೇ ಸಮರ್ಪಿತಂ ತತ್, ಏಜತ್ಪ್ರಾಣನಿಮಿಷತ್—ಕಂಪಿತಪ್ರಾಣನಿಮೇಷಪರ್ಯಂತಮಿತ್ಯರ್ಥಃ, "ಏಜೃಕಂಪನೇ,, ವೀರತಂತ್ರೇ,—"ಸ್ಥಾವರಂ ಜಂಗಮಂ ಚೇತಿ ದ್ವಿವಿಧಂ ಲಿಂಗಮುಚ್ಯತೇ || ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್,, ಇತ್ಯಾದಿಶ್ರುತ್ಯಾಗಮಪುರಾಣವಾಕ್ಯಾತ್, ತಸ್ಮಾತ್ತತ್ಪಾದೋದಕಪ್ರಸಾದೌ ಭಕ್ತೈರವಶ್ಯಂ ಸ್ವೀಕರ್ತವ್ಯಾ. ತದುಕ್ತಂ ಸ್ಕಾಂದೇ,—"ಭೂಸುರೋ ಬ್ರಾಹ್ಮಣಶ್ಚೈವ ಭೂರುದ್ರೋ ಜಂಗಮಸ್ಸ್ಮೃತಃ || ಸುರರುದ್ರದ್ವಯೋರ್ಮಧ್ಯೇ ರುದ್ರ ಏಕೋ ವಿಶಿಷ್ಯತೇ,, ಶಿವರಹಸ್ಯೇ,—"ಗುರುದೇವೋ ಮಹಾದೇವೋ ಗುರುರ್ದೇವಸ್ಸದಾಶಿವಃ,, ಅಥರ್ವಶಿರಸಿ,—"ರುದ್ರಂ ಶಾಶ್ವತಂ ವೈ ಪುರಾಣಮಿಷ್ಟಮೂರ್ಜಂ ತಪಸಾನುಯಚ್ಛತಿ,, ವಾತುಲತಂತ್ರೇ,—"ಇಷ್ಟಮೂರ್ಜಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ || ಇಷ್ಟಲಿಂಗಮಿತಿ ಪ್ರಾಹ ತಸ್ಮಾದಾಥರ್ವಣೀ ಶ್ರುತಿಃ,, ಜಾಬಾಲೋಪನಿಷದಿ, —"ರುದ್ರೇಣಾತ್ತ

---

ಭಿಕ್ಷಾಪಾತ್ರೆ, ಭಸ್ಮಘುಟಿಕೆ ಮೊದಲಾದ ಪಂಚಮುದ್ರೆಗಳನ್ನು ಧರಿಸಿ ಭೂಲೋಕದಲ್ಲಿ ಸರ್ವತ್ರ ಸಂಚರಿಸುತ್ತಿರುವ ಜಂಗಮನಿಗೆ ಸಮರ್ಪಿಸಲ್ಪಟ್ಟ ಪದಾರ್ಥವು ವಾಮಕರಪೀಠದಲ್ಲಿರುವ ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟಂತೆಯೇ ಆಗುವುದು,, ಎಂದು ನಿರೂಪಿತವಾಗಿದೆ. ವೀರತಂತ್ರದಲ್ಲಿ—"ಲಿಂಗವು—ಚರಾಚರಭೇದದಿಂದ ಎರಡು ಬಗೆಯಾಗಿರುತ್ತದೆ. ಚರಲಿಂಗವೇ ಜಂಗಮನಾದ್ದರಿಂದ ಜಂಗಮನಿಗವಮಾನವನ್ನು ಮಾಡಿದವನಿಗೆ ಅಚರಲಿಂಗವು ಫಲವನ್ನು ಕೊಡುವುದಿಲ್ಲವು,, ಇತ್ಯಾದಿ ಶ್ರುತ್ಯಾಗಮ ಪುರಾಣವಾಕ್ಯಗಳಿರುವುದರಿಂದ ಜಂಗಮನ ಪಾದೋದಕ ಪ್ರಸಾದಗಳು ಭಕ್ತರಿಂದವಶ್ಯವಾಗಿ ಸೇವ್ಯಗಳಾಗಿರುತ್ತವೆ. ಆ ವಿಷಯವು-ಸ್ಕಾಂದಪುರಾಣದಲ್ಲಿ —"ಬ್ರಾಹ್ಮಣನು ಭೂಸುರನೆಂದು, ಜಂಗಮನು—ಭೂರುದ್ರನೆಂದು ಹೇಳಲ್ಪಟ್ಟನು. ಆದ್ದರಿಂದ ಭೂಸುರ ಭೂರುದ್ರರ ಮಧ್ಯದಲ್ಲಿ ಭೂರುದ್ರನೇ ಅಧಿಕನು,, ಎಂದೂ, ಅಥರ್ವಶಿರಸ್ಸಿನಲ್ಲಿ—"ರುದ್ರಂ ಶಾಶ್ವತಂ ವೈ ಪುರಾಣಮಿಷ್ಟಮೂರ್ಜಂ ತಪಸಾನುಯಚ್ಛತಿ,, ಎಂಬೀ ಮಂತ್ರದ ಅರ್ಥವು ವಾತುಲಾಗಮದಲ್ಲಿ—"ಶಿವನು ತನ್ನ ಭಕ್ತರಿಗೆ ಇಷ್ಟಾರ್ಥವನ್ನು ಯಾವಾಗಲೂ ಕೊಡತಕ್ಕವನಾದ್ದರಿಂದ ಅಥರ್ವಶಿರಸ್ಸು ಇಷ್ಟಲಿಂಗವೆಂದು ಹೇಳುತ್ತದೆ,, ಎಂದೂ, ಜಾಬಾಲೋಪನಿಷತ್ತಿನಲ್ಲಿರುವ "ರುದ್ರೇಣಾ

ಮಶ್ನಂತಿ ರುದ್ರೇಣ ಪೀತಂ ಪಿಬಂತಿ ರುದ್ರೇಣಾಘ್ರಾತಂ ಜಿಘ್ರಂತಿ,, ತದುಕ್ತಮಭಿಯುಕ್ತೈಃ.—“ ಅರ್ಥೋಽಸ್ಯಾಃ ಕಥ್ಯತೇ ಸಮ್ಯಗ್ವೇದಾಢ್ಯೈರುರರೀಕೃತಃ ‖ ವಿದ್ವಾಂಸಃ ಪರಮಾರ್ಥಜ್ಞಾಃ ಪ್ರಶಾಂತಮನಸೋಽನ್ವಹಂ‖ ಶಾಂತಚಿತ್ತಾಬ್ರಾಹ್ಮಣಾ ಹಿ ರುದ್ರೇಣಾರ್ತಿಪ್ರಹಾರಿಣಾ ‖ ಶಿವೇನಾತ್ತಂ ತೇನ ಭುಕ್ತಮೇವಾಶ್ನಂತ್ಯುಪಭುಂಜತೇ‖ರುದ್ರೇಣ ಪೀತಂ ಪಿಬಂತಿ ರುದ್ರೇಣಾಘ್ರಾತಮೇವ ಹಿ‖ಜಿಘ್ರಂತಿ ನಿರ್ಮಾಲ್ಯಮೇವ ಭಕ್ಷಯಂತ್ಯವಧಾನತಃ ‖ ತಸ್ಮಾದ್ಧೇತೋರ್ಹಿ ನಿರ್ಮಾಲ್ಯಮೇವಾಶ್ನೀಯಾದಿತಿ ಸ್ಫುಟಂ,, ಇತಿ. ಋಗ್ವೇದೇ,—“ ತ್ವಾ ದತ್ತೇಭಿಃ ರುದ್ರ ಶಂತಮೇಭಿಶ್ಶತಂ ಹಿಮಾ ಅಶೀಯ ಭೇಷಜೇಭಿಃ | ವ್ಯಸ್ಮದ್ದ್ವೇಷೋ ವಿತರಂ ವ್ಯಂಹೋ ವ್ಯಮೀವಾಂಶ್ಚಾತಯಸ್ವಾವಿಷೂಚೀಃ ” ಅಸ್ಯಾರ್ಥಃ ವ್ಯಾಸಜೈಮಿನಿಸಂವಾದೇ,—“ ಋಕ್ಸೂಕ್ತಸ್ಯಾಸ್ಯ ಗೂಢಾರ್ಥಂ ಕಥಯಾಮ್ಯಹಮಾದರಾತ್ ‖ ಹೇ ರುದ್ರ ತ್ವಾ ತಯಾಶ್ನೀಯ ಭುಕ್ತ್ವಾ ದತ್ತೇಭಿರಾದರಾತ್ ‖ ದತ್ತೈಃ ಪ್ರಸಾದಿತೈಶ್ಶಂತಮೇಭಿಸ್ಸುಖತಮೈಸ್ತಥಾ ‖ ವ್ಯಾ ಸಂಸಾರಾಖ್ಯರೋಗಸ್ಯ ಭೇಷಜೇಭಿಸ್ತದೌಷಧೈಃ ‖ ಸಂಸಾರಸ್ಯ ವಿರೋಧಿತ್ವಾತ್ಪ್ರೋಕ್ತೈಸ್ಸಂಸಾರಭೇಷಜೈಃ ‖ ಇತ್ಥಂ ಭೂತೈಸ್ತತ್ಪ್ರಸಾದೈರತಿಶುದ್ಧೈಶ್ಶತಂ ಹಿಮಾಃ ‖ ಶತಂ ಸಮಾ ಅವಿರತಮನನ್ಯಂ ಸ್ವೀಯಮುನ್ನತಂ ‖ ವೀರಶೈವಂ ಭಕ್ತಜನಂ ಚಾತಯಸ್ವಾತ್ಮನಾ ಸಹ ‖ ಯೋಜಯಾಯಂ ಯದ್ವದಸ್ಮದ್ದ್ವೇಷೋಹಂಕೃತಿವರ್ಜಿತಃ ‖ ವ್ಯಂಹೋ ವಿಗತಪಾಪೌಘೋ ವ್ಯಮೀವಾನ್ ಭಕ್ತಿಸಂಯುತಃ ‖ ಅವಿಷೂಚೀಃ ಸುಮೇಧಾವೀ ಭವೇತ್ತದ್ವತ್ಕೃಪಾನಿಧೇ ” ಯಜುರ್ವೇದೇ ಶತರುದ್ರೀ

---

ತ್ರಮಶ್ನಂತಿ,, ಇತ್ಯಾದಿ ವಾಕ್ಯಗಳ ಅರ್ಥವು ಅಭಿಯುಕ್ತರ ವಾಕ್ಯಗಳಿಂದ—“ವಿದ್ವಾಂಸರೂ, ಯಥಾರ್ಥವನ್ನು ಬಲ್ಲವರೂ, ಶಾಂತಮನಸ್ಕರೂ ಆದ ಬ್ರಾಹ್ಮಣರು ಸಂಸಾರದುಃಖನಿವಾರಕನಾದ ರುದ್ರನಿಂದ ಬುಂಜಿಸಲ್ಪಟ್ಟುದನ್ನೇ ಬುಂಜಿಸುತ್ತಾರೆ. ಪಾನಮಾಡಲ್ಪಟ್ಟುದನ್ನೇ ಪಾನಮಾಡುತ್ತಾರೆ. ಆಘ್ರಾಣಿತವಾದುದನ್ನೇ ಆಘ್ರಾಣಿಸುತ್ತಾರೆ. ನಿರ್ಮಾಲ್ಯವನ್ನೇ ಭಕ್ಷಿಸುತ್ತಾರೆ. ಆದ್ದರಿಂದ ನಿರ್ಮಾಲ್ಯವನ್ನೇ ಭುಂಜಿಸಬೇಕು,, ಎಂದೂ, ಋಗ್ವೇದದಲ್ಲಿರುವ “ತ್ವಾದ,, ಎಂಬ ಮಂತ್ರಕ್ಕೆ ಅರ್ಥವು ವ್ಯಾಸಜೈಮಿನಿಸಂವಾದದಲ್ಲಿ—“ದಯಾಶಾಲಿಯಾದ ಎಲೈ ಶಿವನೇ! ನಿನ್ನಿಂದ ಬುಂಜಿಸಲ್ಪಟ್ಟು ಪ್ರೀತಿಯಿಂದ ಕೊಡಲ್ಪಟ್ಟ ಅತ್ಯಂತ ಪ್ರೇಮಪಾತ್ರಗಳಾದ, ಭವರೋಗಕ್ಕೆ ಔಷಧಗಳಾದ, ಅತಿ ಪರಿಶುದ್ಧಗಳಾದ ಆ ಪ್ರಸಾದಗಳನ್ನು ಸೇವಿಸುವ ವೀರಶೈವರನ್ನು ನೂರುವರ್ಷಪರ್ಯಂತರ ಜೀವಿಸಿರುವಂತೆ ಮಾಡಿ ಅನಂತರದಲ್ಲಿ ನಿನ್ನೊಡನೆ ಸೇರಿಸಿಕೊಳ್ಳುವನಾಗು. ಈ ಜನವು ಹೇಗೆ ಮಾಡಿದರೆ ಅಹಂಕಾರವಿಲ್ಲದುದೂ, ಪಾಪವಿಲ್ಲದುದೂ, ಭಕ್ತಿಯಿಂದ ಕೂಡಿದುದೂ, ಅತಿಶಯ ಪ್ರಜ್ಞಾಬಲವುಳ್ಳುದೂ ಆಗುವುದೋ ಹಾಗೆ ಮಾಡು,, ಎಂದು ವ್ಯಾಸಮಹರ್ಷಿಯಿಂದ ಹೇಳಲ್ಪಟ್ಟಿದೆ. ಯಜುರ್ವೇದದಲ್ಲಿರುವ ಶತರುದ್ರೀಯದಲ್ಲಿ—“ಎಲೈ ಶಿವನೇ! ನಿನ್ನ

ಯೇ,—"ಯಜ್ಞಾಂಶಯೋಶ್ಚ ಮನುರಾಯುಜೇ ಪಿತಾ ಶದಶ್ಯಾಮ ತವ ರುದ್ರ ಪ್ರ ಣೀತಾ,, "ಅಸ್ಯಾರ್ಥಃ ಕಥ್ಯತೇ ಸಮ್ಯಗ್ಭಾಷ್ಯಕಾರಾನುಸಾರತಃ ‖ ಹೇ ರುದ್ರ ಶಂಕರ ತವ ಪ್ರಣೀತಾ ತವ ಪೂಜನೇ ‖ ಯೋ ಮನುಃ ಕಥಿತೋ ಮಂತ್ರೋ ಭವಂ ತಂ ತೇನ ಭಕ್ತಿತಃ ‖ ಆಯಜೇ ಪೂಜಯಾಮಿ ತ್ವಾಂ ತ್ವಂ ಯಸ್ಮಾಜ್ಜಗತಾಂ ಪಿ ತಾ ‖ ತತ್ತಸ್ಮಾತ್ತೇ ಪ್ರಸಾದಾನ್ನಮಶ್ಯಾಮ ಸ್ವೀಕರೋಮ್ಯಹಂ" ಕಠಶಾಖಾ ಯಾಂ,—"ತ್ರಿಗುಪ್ತಾಸ್ತಮಶ್ನೀಯಾದ್ಯದಿ ಪಾಪ್ಮಾ ಶಿವಾನರ್ಪಿತಂ ಭುಂಕ್ಷ್ವ ತ ದೇನೋ ಭುಂಕ್ಷ್ವ ಕ್ರಿಮಿಂ ಭುಂಕ್ಷ್ವ ಮಲಂ ಭುಂಕ್ಷ್ವಾಘಂ ಭುಂಕ್ಷ್ವಾಘಂ ಭುಂಕ್ಷ್ವಾಧೋಗಚ್ಛಾಧೋಗಚ್ಛ" ಇತಿ. "ಅರ್ಥೋಸ್ಯಾಃ ಕಥ್ಯತೇಽಸ್ಮಾಭಿಃ ಪುರಾ ಣಾರ್ಥಾನುಸಾರತಃ ‖ ಗೋಶಬ್ದಸ್ಯ ಮೃಗಾದೀನಾಂ ವಾಚಕತ್ವಾನ್ನಿಘಂಟುಷು ‖ ಗೋಶಬ್ದೇನಾತ್ರ ಸಂಸ್ಥೇನ ಚಕ್ಷುರಿಂದ್ರಿಯಮುಚ್ಯತೇ ‖ ತಿಸ್ರೋ ಗಾವೋ ಲೋ ಚನಾನಿ ಯಸ್ಯೇತ್ಯಸ್ಮಾದ್ಧಿ ವಿಗ್ರಹಾತ್ ‖ ತ್ರಿಗುಪ್ತ್ರಿಲೋಚನಃ ಪ್ರೋಕ್ತಸ್ತೇನ ಪ್ರಾ ಶಂ ಚ ಭಕ್ಷಿತಂ‖ ತತ್ಪ್ರಸಾದಾನ್ನಮಶ್ನೀಯಾದ್ಯದಿ ಪಾಪ್ಮಾಽಶಿವಾಪವರ್ಗ‖ ಶಿವಾನ ರ್ಪಿತಮನ್ನಾದಿಭುಂಕ್ಷ್ವ ಗರ್ಹಾತಿಗರ್ಹಿತಂ ‖ ಏನೋಭುಂಕ್ಷ್ವ ಮಹತ್ಪಾಪಮೇನ ಶ್ಶಬ್ದೇನ ಕಥ್ಯತೇ‖ ಅತೋ ಮಹತ್ಪಾತಕಿನೋ ಯತ್ಪಾಪೀ ಭವತಿ ಕ್ಷಿತೌ‖ತದನರ್ಪಿ ತಭೋಗೇನ ಭವತೀತ್ಯವಗಮ್ಯತೇ‖ ತಥಾ ಕ್ರಿಮೀಣಾಮಘಸ್ಯ ಮಲಸ್ಯಾಪಿ ಚ ಭಕ್ಷ ಣೇ ‖ ಪಾಪಂ ಯದುಪಪಾಪಾದಿ ತದಾಪ್ನೋತೀತಿ ನಿಶ್ಚಿತಂ ‖ ನಿರಂತರಮಧೋಗ ಚ್ಛಾಧೋಗಚ್ಛೇತಿ ವೀಪ್ಸಯಾ ‖ ಬಹುಕಾಲೇ ಕಮತ್ಯುಗ್ರಂ ನರಕಂ ಗಚ್ಛತಿ ಧ್ರು ವಂ" ಇತಿ. ಪಾದ್ಮೇ ಶಿವರಾಘವಸಂವಾದೇ,—"ಅಸಮರ್ಪ್ಯ ಪದಂ ಶಂಭೋ ಭುಂಕ್ತೇ ಖಾದತಿ ಪಾತಿ ಯಃ ‖ ಶ್ವಮಾಂಸಮಸ್ಥಿಮೂತ್ರಂ ಚ ಭುಂಕ್ತೇ ಖಾದತಿ

---

ಪೂಜೆಯಲ್ಲಿ ಯಾವ ಮಂತ್ರವು ಹೇಳಲ್ಪಟ್ಟಿತೋ ಆ ಮಂತ್ರದಿಂದ ಭಕ್ತಿಯಿಂದ ಪೂಜಿಸುತ್ತೇನೆ. ಯಾವಕಾರಣದದೆಸೆಯಿಂದ ನೀನು ಜಗಜ್ಜಾಲಕ್ಕೆ ತಂದೆಯಾಗಿದ್ದೀಯೋ ಆ ಕಾರಣದದೆಸೆಯಿಂಡ ನಿನ್ನ ಪ್ರಸಾದಾನ್ನವನ್ನು ನಾನು ಸ್ವೀಕರಿಸುತ್ತೇನೆ,, ಕಠಶಾಖೆಯಲ್ಲಿ—"ಅನ್ನವೇ ಮೊದಲಾದ ಪದಾರ್ಥಗಳನ್ನು ಶಿವನಿಗೆ ಅರ್ಪಿಸದೆ ಬುಂಜಿಸಿದರೆ ಮಹಾಪಾಪಿಯಾಗಿ ಕ್ರಿಮಿಯನ್ನೂ, ಮಲವ ನ್ನೂ ಭಕ್ಷಿಸಿದವನಾಗಿ, ಇವುಗಳಿಂದುಂಟಾದ ಉಪಪಾತಕಗಳನ್ನು ಹೊಂದಿ ಬಹುಕಾಲದವರೆಗೂ ಅತಿ ಭಯಂಕರವಾದ ನರಕವನ್ನು ಸತ್ಯವಾಗಿಯೂ ಹೊಂದುವನು,, ಎಂದು ಹೇಳಲ್ಪಟ್ಟದೆ. ಪದ್ಮಪುರಾಣದಲ್ಲಿರುವ ಶಿವರಾಘವಸಂವಾದದಲ್ಲಿ—"ಶಿವನನ್ನು ಪೂಜಿಸದೆ, ಅನ್ನವೇ ಮೊದಲಾದ ಪದಾರ್ಥಗಳನ್ನು ಶಿವನಿಗರ್ಪಿಸದೆ ಯಾವನು ಬುಂಜಿಸುವನೋ ಪಾನಮಾಡುವನೋ ಅವನು ನಾ ಯಿಯ ಮಾಂಸ ಮೂಳೆ ಮೂತ್ರಗಳನ್ನು ಬುಂಜಿಸಿದವನಾಗುವನು. ಪಾನಮಾಡಿದವನಾಗುವನು.

ಪಾತಿ ಸಃ ,, ಇತ್ಯಾದಿಶ್ರುತಿಪುರಾಣವಾಕ್ಯೈಃ ರುದ್ರಶಬ್ದವಾಚ್ಯಗುರುಚರೇಷ್ವಲಿಂಗಪ್ರಸಾದಸ್ವೀಕಾರೋ ವಿಜ್ಞೇಯಃ.

ಹೇ ಚೋಳ ! ತತ್ಪಾದತೀರ್ಥನಿಷೇವಣವಿಧಿಃ ಶ್ರೂಯತಾಂ, ಜಾಬಾಲಶಾಖಾಯಾಂ,—"ಭಗವತಃ ಪಾದೌ ಪ್ರಕ್ಷಾಳ್ಯ ಶಂಖಂ ಪ್ರಪೂರ್ಯ ಗಂಧಪುಷ್ಪಾಕ್ಷತಾದಿಭಿರಭ್ಯರ್ಚ್ಯ, ಚರುಂ ನಿವೇದ್ಯ 'ಇಮಂ ಮೇ ಗಂಗೇ ಯಮುನೇತ್ಯಭಿಮಂತ್ರ್ಯ, 'ಕದ್ರುದ್ರಾಯೇತಿ, 'ಮಾತ್ವಾರುದ್ರೇತಿ, ಸಂಮಾರ್ಜನಂ ಕೃತ್ವಾ, 'ಋತಂ ಸತ್ಯಂ ಪರಂ ಬ್ರಹ್ಮೇತಿ ಪ್ರಾಶಯೇತ್, ಯ ಏವಂ ಕುರ್ಯಾತ್ಸ್ವಕುಲಜಾನ್ ದಶಪೂರ್ವಾನ್ ದಶಾಪರಾನಾತ್ಮಾನಂ ಚ ತಾರಯೇತ್" ಇತಿ. ತಥೋಕ್ತಮಭಿಯುಕ್ತೈಃ,—"ಯಚ್ಚ ವಾಕ್ಯಂ ಭಗವತಃ ಪಾದಾವಿತ್ಯೇತದಾದಿಕಂ || ಅಸ್ತಿ ಜಾಬಾಲಶಾಖಾಯಾಂ ರುದ್ರಪಾದೋದಕಸ್ಯ ಹಿ || ಸೇವಾವಿಧಾನಕಥನಂ ತದ್ವಾಕ್ಯಮಪಿ ವಿಶ್ರುತಂ || ಶಂಖಪಾತ್ರಂ ಪ್ರತಿಷ್ಠಾಪ್ಯ ಪಾದೋದಕಸಮನ್ವಿತಂ || ಅರ್ಚಯೇದ್ಗಂಧಪುಷ್ಪಾದ್ಯೈರುಪಚಾರೈರನೇಕಧಾ || ತತ್ಪಾತ್ರಂ ಶಿರಸಾ ಧೃತ್ವಾ ಧನ್ಯೋಽಹಮಿತಿ ಸಂಸ್ಮರನ್ || ಇಮಂ ಮೇ ಗಂಗೇ ಯಮುನೇತ್ಯಭಿಮಂತ್ರ್ಯ ತತಃ ಪರಂ || ಕದ್ರುದ್ರಾಯೇತಿ

---

ಇತ್ಯಾದಿ ಶ್ರುತಿಪುರಾಣವಾಕ್ಯಗಳಿಂದ ರುದ್ರಶಬ್ದವಾಚ್ಯರಾದ ಗುರು ಲಿಂಗ ಜಂಗಮರ ಪಾದೋದಕ ಪ್ರಸಾದಗಳ ಸ್ವೀಕಾರ ವಿಚಾರವನ್ನು ತಿಳಿಯಬೇಕು.

ಎಲೈ ಚೋಳನೇ ! ಆ ಗುರು ಲಿಂಗ ಜಂಗಮ ಪಾದತೀರ್ಥಸ್ವೀಕಾರವಿಷಯದಲ್ಲಿ ವಿಧಿಯನ್ನು ಕೇಳು; ಜಾಬಾಲಶಾಖೆಯಲ್ಲಿ—"ಶಿವನ ಪಾದಗಳನ್ನು ಪ್ರಕ್ಷಾಳಿಸಿ, ಆ ಪ್ರಕ್ಷಾಳನೋದಕವನ್ನು ಶಂಖದಲ್ಲಿ ತುಂಬಿರಿಸಿ, ಗಂಧ ಪುಷ್ಪ ಅಕ್ಷತ ಧೂಪ ದೀಪ ಮೊದಲಾದ ಉಪಚಾರಗಳಿಂದ ಪೂಜಿಸಿ, ಚರುವನ್ನು ನಿವೇದಿಸಿ, ಆಪಾದೋದಕವನ್ನು "ಇಮಂ ಮೇ ಗಂಗೇ ಯಮುನೇ" ಎಂಬ ಮಂತ್ರದಿಂದ ಅಭಿಮಂತ್ರಿಸಿ, "ಕದ್ರುದ್ರಾಯ" "ಮಾತ್ವಾರುದ್ರ" ಎಂಬೆರಡು ಮಂತ್ರಗಳಿಂದ ಸಂಮಾರ್ಜನೆಯನ್ನು ಮಾಡಿ, "ಋತಂ ಸತ್ಯಂ ಪರಂ ಬ್ರಹ್ಮ" ಎಂಬ ಮಂತ್ರದಿಂದ ಸೇವಿಸಬೇಕು. ಈ ರೀತಿಯಾಗಿ ಮಾಡುವವನು ತನ್ನ ಹಿಂದಣ ಹತ್ತು ಕುಲದಲ್ಲಿ ಹುಟ್ಟಿದವರನ್ನೂ ಮುಂದಣ ಹತ್ತು ಕುಲದಲ್ಲಿ ಹುಟ್ಟಿದವರನ್ನೂ ನರಕದದೆಸೆಯಿಂದ ಬಿಡುಗಡೆ ಹೊಂದಿಸುವನಲ್ಲದೆ, ತಾನೂ ನರಕದದೆಸೆಯಿಂದ ಬಿಡುಗಡೆಯನ್ನು ಹೊಂದುವನು" ಎಂದು ಹೇಳಲ್ಪಟ್ಟಿದೆ. ಅದೇ ವಿಷಯವು ಅಭಿಯುಕ್ತರ ವಾಕ್ಯಗಳಿಂದ "ಜಾಬಾಲಶಾಖೆಯಲ್ಲಿ "ಭಗವತಃ ಪಾದೌ ಪ್ರಕ್ಷಾಳ್ಯ" ಎಂಬಿದು ಮೊದಲಾದ ಯಾವ ವಚನವಿರುತ್ತದೆಯೋ ಆ ವಚನವು ಪಾದೋದಕಸೇವನಾದಿ ವಿಷಯಗಳನ್ನು ಹೇಳುತ್ತದೆ. ಶಿವಪಾದೋದಕದಿಂದ ತುಂಬಲ್ಪಟ್ಟ ಶಂಖಪಾತ್ರವನ್ನು ಇರಿಸಿ ಗಂಧ ಪುಷ್ಪ ಮೊದಲಾದ ಉಪಚಾರಗಳಿಂದ ಪೂಜಿಸಿ ಆ ಪಾತ್ರವನ್ನು ತಲೆಯ ಮೇಲಿರಿಸಿಕೊಂಡು "ನಾನು ಧನ್ಯನಾದೆನು" ಎಂದು ಸ್ಮರಿಸಿ, "ಇಮಂ ಮೇ ಗಂಗೇ ಯಮುನೇ" ಎಂಬ ಮಂತ್ರದಿಂದ

ಮಂತ್ರೇಣ ಮಾತ್ವಾರುದ್ರೇತಿ ಮಂತ್ರತಃ॥ಗೃಹೀತ್ವಾ ಪಾಣಿನಾ ತೀರ್ಥಂ ಪ್ರೋಕ್ಷ ಯೇನ್ಮೂರ್ಧ್ನಿ ಭಕ್ತಿತಃ॥ಸರ್ವೋ ವೈ ರುದ್ರಮಂತ್ರೇಣ ದ್ವಾಭ್ಯಾಂ ಚ ಪ್ರಾಶಯೇತ್ತ ತಃ॥ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ॥ ಊರ್ಧ್ವರೇತಂ ವಿರೂಪಾ ಕ್ಷಂ ವಿಶ್ವರೂಪಾಯ ವೈ ನಮೋ ನಮಃ॥ಇತಿ ಶೇಷಂ ಪಿಬೇತ್ತೀರ್ಥಂ ಜ್ಞಾನವೈರಾ ಗ್ಯಸಿದ್ಧಯೇ'' ಇತಿ. ಯಜುರ್ವೇದೋಪನಿಷದಿ,-"ಆಚಾರ್ಯದೇವೋ ಭವ, ಅತಿಥಿ ದೇವೋ ಭವ, ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ, ನೋ ಇತರಾಣಿ,, ತಥಾ ಲೈಂಗೇ,-ನಾರಾಯಣಂ ಪ್ರತಿ ಬ್ರಹ್ಮವಾಕ್ಯಂ, "ಪಾದೌ ಪ್ರಕ್ಷಾಲ್ಯ ದೇವಸ್ಯ ಕರಾಭ್ಯಾಂ ಕಮಲೇಕ್ಷಣ ॥ ಅಭ್ಯುಕ್ಷೇದಾತ್ಮನೋ ಮೂರ್ಧನ್ಯತಿಥೇಶ್ಚ ಗುರೋಸ್ತ ಥಾ'' ಸ್ಕಾಂದೇ,—"ಲಿಂಗೋದಕಂ ಚ ಪಾದಾಂಬುಪ್ರಸಾದಾಂಬ್ವಿತಿತತ್ತ್ರಿಧಾ ॥ ನಮಸ್ಕಾರ್ಯಂ ಹಿ ಶಿರಸಾ ಧಾರ್ಯಂ ಪೇಯಂ ಶಿವಾತ್ಮಭಿಃ'' ಇತ್ಯಾದಿಶ್ರುತಿಪುರಾಣ ವಾಕ್ಯೈರ್ಗುರುಚರೇಷ್ಟಲಿಂಗಾನಾಂ ಪಾದೋದಕಸ್ವೀಕಾರವಿಧಿರ್ವಿಜ್ಞೇಯಃ. ಅಥ ತತ್ಪಾದೋದಕಮಹತ್ತ್ವಂ ಶ್ರೂಯತಾಂ, ಆದಿತ್ಯಪುರಾಣೇ,—"ಪಾದೋದಕಂ ಮಹಾತೀರ್ಥಂ ಗಂಗಾ ಚ ಯಮುನಾ ನದೀ || ನರ್ಮದಾ ಚೈವ ಕಾವೇರೀ ತಥಾ

---

ಅಭಿಮಂತ್ರಿಸಿ "ಕದ್ರುದ್ರಾಯ" "ಮಾತ್ವಾರುದ್ರ" ಎಂಬೆರಡು ಮಂತ್ರಗಳಿಂದ ಹಸ್ತದಿಂದ ತೀರ್ಥವನ್ನು ತೆಗೆದುಕೊಂಡು ಭಕ್ತಿಪೂರ್ವಕವಾಗಿ ತಲೆಯಮೇಲೆ ಪ್ರೋಕ್ಷಿಸಿ, ಮಿಕ್ಕ ತೀರ್ಥವ ನ್ನು ಜ್ಞಾನವೈರಾಗ್ಯಸಿದ್ಧಿಗೋಸ್ಕರ "ಸರ್ವೋ ವೈ ರುದ್ರಃ" "ಋತಂ ಸತ್ಯಂ" ಎಂಬ ಮಂತ್ರ ಗಳಿಂದ ಪಾನಮಾಡಬೇಕು" ಎಂದು ಹೇಳಲ್ಪಟ್ಟಿದೆ. ಯಜುರ್ವೇದೋಪನಿಷತ್ತಿನಲ್ಲಿ —"ಎಲೈ ಶಿವನೇ! ನೀನು ಗುರುಸ್ವರೂಪನಾಗು, ಜಂಗಮಸ್ವರೂಪನಾಗು, ಯಾವ ಕರ್ಮಗಳು ದೋಷವಿಲ್ಲ ದವುಗಳಾಗಿರುತ್ತವೆಯೋ ಆ ಕ್ರಿಯೆಗಳು ಆಚರಿಸಲಿಕ್ಕೆ ಯೋಗ್ಯಗಳಾಗಿರುತ್ತವೆ. ಮಿಕ್ಕ ಕ್ರಿಯೆ ಗಳು ಆಚರಿಸಲಿಕ್ಕೆ ಯೋಗ್ಯಗಳಲ್ಲವು" ಅದೇ ರೀತಿಯಾಗಿ ಲಿಂಗಪುರಾಣದಲ್ಲಿ —"ಎಲೈ ಕಮ ಲಾಕ್ಷನಾದ ವಿಷ್ಣುವೇ! ಶಿವನ ಪಾದಗಳನ್ನು ತೊಳೆದು ಆ ಪಾದೋದಕವನ್ನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳುವಂತೆ ಅತಿಥಿಯಾದ ಜಂಗಮನ ಮತ್ತೂ ಗುರುವಿನ ಪಾದಗಳನ್ನು ತೊ ಳೆದು ಆ ಪಾದೋದಕವನ್ನು ತಲೆಯಮೇಲೆ ಪ್ರೋಕ್ಷಿಸಿಕೊಳ್ಳಬೇಕು,, ಎಂದು ವಿಷ್ಣುವಿಗೆ ಬ್ರ ಹ್ಮನಿಂದ ಹೇಳಲ್ಪಟ್ಟ ವಚನವಿರುತ್ತದೆ. ಸ್ಕಾಂದಪುರಾಣದಲ್ಲಿ —"ಶಿವಲಿಂಗಧಾರಿಗಳಿಂದ ಲಿಂ ಗೋದಕವು ನಮಸ್ಕರಿಸಿಕೊಳ್ಳಲರ್ಹವೂ, ಪಾದೋದಕವು ಶಿರಸ್ಸಿನಿಂದ ಧರಿಸಿಕೊಳ್ಳಲರ್ಹವೂ, ಪ್ರಸಾದೋದಕವು ಪಾನಮಾಡಲರ್ಹವೂ ಆಗಿರುತ್ತದೆ,, ಇತ್ಯಾದಿ ವೇದಪುರಾಣ ವಾಕ್ಯಗಳಿಂದ ಗುರು ಲಿಂಗ ಜಂಗಮರ ಪಾದೋದಕ ಸ್ವೀಕಾರವಿಧಾನವು ತಿಳಿಯಲ್ಪತಕ್ಕದು. ಬಳಿಕ ಆ ಪಾ ದೋದಕದ ಮಹಿಮೆಯನ್ನು ಕೇಳು; ಆದಿತ್ಯಪುರಾಣದಲ್ಲಿ—"ಎಲೈ ಮುನಿಯೇ! ಶಿವಪಾದೋ ದಕವು ಶ್ರೇಷ್ಠವಾದ ತೀರ್ಥವಾಗಿರುತ್ತದೆ. ಶಿವಪಾದೋದಕದಲ್ಲಿ ಗಂಗೆ, ಯಮುನೆ, ನರ್ಮದೆ,

ಗೋದಾವರೀ ನದೀ || ಸದಾ ಸನ್ನಿಹಿತಾಸ್ತ್ವೇತಾಶ್ಶಂಭೋಃ ಪಾದೋದಕೇ ಮುನೇ || ಶಂಭೋಃ ಪಾದೋದಕಂ ಸೇವ್ಯಂ ಸರ್ವತೀರ್ಥಮಯಂ ತತಃ,, ಇತಿ. ಶಿವರಹಸ್ಯೇ,—''ಸಪ್ತಸಾಗರಪರ್ಯಂತತೀರ್ಥಸ್ನಾನಾದಿಕಂ ಫಲಂ || ಗುರೋರಂಘ್ರಿಪಯೋಬಿಂದೋಸ್ಸಹಸ್ರಾಂಶಂ ನ ಪೂರಯೇತ್ || ಶೋಷಣಂ ಪಾಪಪಂಕಸ್ಯ ದೀಪನಂಜ್ಞಾನತೇಜಸಃ || ಚರಪಾದೋದಕಂ ಚಿತ್ರಂ ಸಂಸಾರದ್ರುಮನಾಶನಂ,, ಇತ್ಯಾದಿಭಿಶ್ಶಿವಗುರುಜಂಗಮಪಾದೋದಕಮಹತ್ತ್ವಂ ವಿಜ್ಞೇಯಂ.

ಇತಿ ಶ್ರೀಭಸ್ಮಧಾರಣಾದಿವೀರಶೈವಾಚಾರನಿರ್ಣಯೋ ದ್ವಾದಶೋಪದೇಶೇ
ನವಮಸ್ಸಂವಾದಃ.

ಶ್ರೀಃ.

## ಶಿವಭಕ್ತಮಹತ್ತ್ವಾಧಿಕ್ಯನಿರ್ಣಯಃ.

ರೇ—ಹೇ ಚೋಳ! ಪೂರ್ವೋಕ್ತಶಿವಾಚಾರಸಂಪನ್ನಾನಾಂ ಶಿವೈಕನಿಷ್ಠಾನಾಂ ಶಿವಭಕ್ತಾನಾಂ ಮಹತ್ತ್ವಂ ಶ್ರೂಯತಾಂ, ಸಾಮಶ್ರುತೌ,—''ಅಪಿವಾಯಶ್ಚಂಡಾಲಶ್ಶಿವೇತಿ ವಾಚಂ ವದೇತ್ತೇನ ಸಹಸಂ ವದೇತ್ತೇನ ಸಹಸಂ ವಸೇತ್ತೇನ ಸಹಸಂ ವಿಶೇತ್ತೇನ ಸಹಭುಂಜೀತ ತೇನಸಹ ಭುಂಜೀತ'' ಪಾದ್ಮೇ ಶಿವರಾಘವಸಂವಾದೇ,—ಶಿವಃ, ''ಶಿವೇತಿ

---

ಕಾವೇರಿ, ಗೋದಾವರಿಗಳೆಂಬ ನದಿಗಳು ಯಾವಾಗಲೂ ಸನ್ನಿಹಿತಗಳಾಗಿರುತ್ತವೆ. ಆದುದರಿಂದ ಸಕಲ ತೀರ್ಥಸ್ವರೂಪವಾದ ಶಿವಪಾದೋದಕವು ಸೇವಿಸಲಿಕ್ಕೆ ಯೋಗ್ಯವಾದದ್ದು,, ಎಂದು ಅಭಿಹಿತವಾಗಿದೆ. ಶಿವರಹಸ್ಯದಲ್ಲಿ—''ಸಪ್ತಸಮುದ್ರಗಳವರೆಗಿರುವ ತೀರ್ಥಗಳಲ್ಲಿ ಸ್ನಾನಮಾಡಿದುದರಿಂದುಂಟಾಗುವ ಫಲವು ಗುರುವಿನ ಪಾದೋದಕದ ಒಂದು ಹನಿಯ ಸಾವಿರಭಾಗದಲ್ಲೊಂದು ಭಾಗವನ್ನು ಪೂರ್ತಿಗೊಳಿಸಲಾರದು. ಜಂಗಮನ ಪಾದೋದಕವು ಜೀವರ ಪಾಪವೆಂಬ ಕೆಸರನ್ನೊಣಗಿಸತಕ್ಕದೂ, ಜ್ಞಾನವೆಂಬ ತೇಜಸ್ಸನ್ನಭಿವೃದ್ಧಿಗೊಳಿಸತಕ್ಕದೂ, ಸಂಸಾರವೆಂಬ ಮರವನ್ನು ನಾಶಗೊಳಿಸತಕ್ಕದೂ ಆಗಿರುವುದರಿಂದ ಆಶ್ಚರ್ಯಕರವಾದ ಗುಣಗಳುಳ್ಳುದಾಗಿದೆ,, ಇತ್ಯಾದಿ ವಚನಗಳಿಂದ ಶಿವ ಗುರು ಜಂಗಮರ ಪಾದೋದಕದ ಮಹಿಮೆಯನ್ನು ತಿಳಿಯಬೇಕು.

ಎಂಬಿಲ್ಲಿಗೆ ಶ್ರೀಭಸ್ಮಧಾರಣಾದಿವೀರಶೈವಾಚಾರನಿರ್ಣಯವನ್ನು ಹೇಳುವ ಹನ್ನೆರಡನೆಯ
ಉಪದೇಶದಲ್ಲಿ ಒಂಭತ್ತನೆಯ ಸಂವಾದವು ಮುಗಿದುದು.

## ಶಿವಭಕ್ತಮಹತ್ತ್ವಾಧಿಕ್ಯನಿರ್ಣಯವು.

ರೇ—ಎಲೈ ಚೋಳನೇ! ಆ ಪೂರ್ವೋಕ್ತವಾದ ಶಿವಾಚಾರಗಳಿಂದ ಕೂಡಿದವರೂ, ಶಿವನೊಬ್ಬನಲ್ಲೇ ನಿಷ್ಠೆಯುಳ್ಳವರೂ ಆದ ಶಿವಭಕ್ತರ ಮಾಹಾತ್ಮ್ಯವನ್ನು ಕೇಳು; [ಸಾಮಶ್ರುತಿಮಂತ್ರಕ್ಕೂ, ಪದ್ಮಪುರಾಣದಲ್ಲಿರುವ ಶಿವರಾಘವಸಂವಾದದ ವಚನಕ್ಕೂ ಟಿಪ್ಪಣಿಯನ್ನು ಇದರ

ಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೇ||ಸಪ್ತಜನ್ಮಕೃತಂ ಪಾಪಂ ಭಸ್ಮೀಭವತಿ ತಸ್ಯ ವೈ||ವದೇತ್ತೇನ ವಸೇತ್ತೇನ ವಿಶೇತ್ತೇನ ಪುನಃ ಪುನಃ||ಭುಂಜೀತ ಸಾಕಂ ಭುಂಜೀತೇತ್ಯಾಹ ಸಾಮಶ್ರುತಿಃ ಖಲು,, ಆದಿತ್ಯಪುರಾಣೇ,-ನಾರದಂ ಪ್ರತಿ ಬ್ರಹ್ಮವಾಕ್ಯಂ, ,, ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಶ್ಶೂದ್ರೋ ವಾಪ್ಯಂತ್ಯಜಾತಿಜಃ || ಶಿವಭಕ್ತಸ್ಸದಾ ಪೂಜ್ಯಸ್ಸರ್ವಾವಸ್ಥಾಂ ಗತೋಽಪಿ ವಾ||ನಾಸ್ಯಾಚಾರಂ ಪರೀಕ್ಷೇತ ನ ಕುಲಂ ನ ವ್ರತಂ ತಥಾ || ತ್ರಿಪುಂಡ್ರಾಂಕಿತಫಾಲೇನ ಪೂಜ್ಯಏವ ಹಿ ನಾರದ || ಯೇ ಪುನಶ್ಶಾಂತಮನಸಶ್ಶಿವಭಕ್ತಾ ಜಿತೇಂದ್ರಿಯಾಃ || ಮರ್ತ್ಯಧರ್ಮಂ ಸಮಾಸಾದ್ಯ ವಿಜ್ಞೇಯಾಸ್ತೇ ಗಣೇಶ್ವರಾಃ || ದರ್ಶನಾಚ್ಛಿವಭಕ್ತಾನಾಂ ಸಕೃತ್ಸಂಭಾಷಣಾದಪಿ || ಅತಿರಾತ್ರಸ್ಯ ಯಜ್ಞಸ್ಯ ಫಲಂ ಭವತಿ ನಾರದ || ಕರ್ಮಣಾ ಮನಸಾ ವಾಚಾ ಯಸ್ತು ಭಕ್ತಾನ್ವಿನಿಂದತಿ || ನಿರಯೋ ನಿಷ್ಕೃತಿರ್ನಾಸ್ತಿ ತಸ್ಯ ಮೂಢಾತ್ಮನೋ ಮುನೇ '' ಇತ್ಯಾದಿಬಹುಪ್ರಸಿದ್ಧಂ. ಸ್ಕಾಂದೇ ಶಾಂಕರಸಂಹಿತಾಯಾಂ,—ಶಂಕರಃ " ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ ಪಶುಭ್ಯೋಽಪಿ ನರಾಶ್ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ||ದ್ವಿಜಾತಿಷ್ವಧಿಕಾ ವಿಪ್ರಾಃ ವಿಪ್ರೇಷು ಕ್ರತುಬುದ್ಧಯಃ|| ಕ್ರತುಬುದ್ಧಿಷು ಕರ್ತಾರಸ್ತೇಭ್ಯಸ್ಸನ್ನ್ಯಾಸಿನೋಽಧಿಕಾಃ|| ತೇಭ್ಯೋ ವಿಜ್ಞಾನಿನಶ್ಶ್ರೇ

---

ಹಿಂದಣ ಸಂವಾದದಲ್ಲಿ ನೋಡಿ.] ಆದಿತ್ಯಪುರಾಣದಲ್ಲಿ—"ಎಲೈ ನಾರದನೇ ! ಬ್ರಾಹ್ಮಣನಾದರೂ, ಕ್ಷತ್ರಿಯನಾದರೂ, ವೈಶ್ಯನಾದರೂ, ಶೂದ್ರನಾದರೂ, ಚಂಡಾಲನಾದರೂ, ಸಕಲಾವಸ್ಥೆಯನ್ನು ಹೊಂದಿದವನಾದರೂ ಶಿವಭಕ್ತಿಯುಳ್ಳವನಾಗಿದ್ದರೆ ಯಾವಾಗಲೂ ಪೂಜ್ಯನೆನಿಸಿರುತ್ತಾನೆ. ಈತನ ಆಚಾರವನ್ನೂ, ಕುಲವನ್ನೂ, ವ್ರತವನ್ನೂ ಪರೀಕ್ಷಿಸಬಾರದು. ಇವನು ಹಣೆಯಲ್ಲಿ ಭಸ್ಮ ತ್ರಿಪುಂಡ್ರಧಾರಿಯಾಗಿದ್ದರೆ ಪೂಜ್ಯನೇ ಆಗಿರುತ್ತಾನೆ. ಶಾಂತಮನಸ್ಕರೂ, ಶಿವಭಕ್ತರೂ, ಜಿತೇಂದ್ರಿಯರೂ ಆಗಿ ಮನುಷ್ಯರಿಗೆ ವಿಹಿತವಾದ ಧರ್ಮವುಳ್ಳವರೇ ಗಣೇಶ್ವರರೆಂದು ತಿಳಿಯಲರ್ಹರು. ಶಿವಭಕ್ತರ ದರ್ಶನಮಾಡಿದವನಿಗೂ ಒಂದು ಬಾರಿಯಾದರೂ ಶಿವಭಕ್ತರೊಡನೆ ಮಾತನಾಡಿದವನಿಗೂ ಅತಿರಾತ್ರವೆಂಬ ಯಜ್ಞದ ಸಂಬಂಧವಾದ ಫಲವುಂಟಾಗುವುದು. ಮನಸ್ಸಿನಿಂದಾದರೂ, ಮಾತಿನಿಂದಾದರೂ, ಕರ್ಮದಿಂದಾದರೂ ನಿಂದೆಯನ್ನು ಮಾಡಿದವನಿಗೆ ನರಕವೇ ಉಂಟಾಗುವುದಲ್ಲದೆ ಬೇರೆವಿಧವಾದ ಪ್ರಾಯಶ್ಚಿತ್ತವಿಲ್ಲವು,, ಎಂದು ಬ್ರಹ್ಮವಚನವಿರುತ್ತದೆ. ಇತ್ಯಾದಿ ವಚನವು ಅತಿಪ್ರಸಿದ್ಧವಾಗಿದೆ. ಸ್ಕಾಂದಪುರಾಣದಲ್ಲಿರುವ ಶಾಂಕರಸಂಹಿತೆಯಲ್ಲಿ—"ಪ್ರಜ್ಞೆಯಿಂದ ಕ್ರಿಮಿ ಕೀಟ ಪಕ್ಷಿಗಳಿಗಿಂತ ಪಶುಗಳು, ಅವುಗಳಿಗಿಂತ ಮನುಷ್ಯರು, ಅವರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ದ್ವಿಜರು, ಆ ದ್ವಿಜರಲ್ಲಿ ವಿಪ್ರರು, ಅವರಲ್ಲಿ ಜ್ಯೋತಿಷ್ಟೋಮಾದಿಯಾಗಗಳನ್ನು ಮಾಡುವುದರಲ್ಲಿ ಬುದ್ಧಿಯುಳ್ಳವರು, ಅವರಲ್ಲಿ ಯಾಗಗಳನ್ನು ಮಾಡತಕ್ಕವರು, ಅವರಿಗಿಂತ ಸರ್ವಸಂಗ ಪರಿತ್ಯಾಗವನ್ನು ಮಾಡಿದ ಸನ್ಯಾಸಿಗಳೆಂಬವರು, ಅವರಿಗಿಂತ ವಿಜ್ಞಾನವಾದಿಗಳು, ಅವರಲ್ಲಿ ಶಿವ

ಪ್ಯಾಸ್ತೇಷು ಶಂಕರಪೂಜಕಾಃ||ತೇಷು ಶ್ರೇಷ್ಠಾ ಮಹಾಭಾಗ ಮಮ ಲಿಂಗಾಂಗಸಂಗಿನಃ || ಲಿಂಗಾಂಗಸಂಗಿಷ್ವಧಿಕಷ್ಷಟ್ಸ್ಥಲಜ್ಞಾನವಾನ್ಪುಮಾನ್ || ತಸ್ಮಾದಪ್ಯಧಿಕೋ ನಾಸ್ತಿ ತ್ರಿಷು ಲೋಕೇಷು ಸರ್ವದಾ || ಸ ವಂದ್ಯಸ್ಸರ್ವದಾ ಪೂಜ್ಯಸ್ಸಂಸಾರವಿಜಿಗೀಷುಭಿಃ || ಬಹುನೋಕ್ತೇನ ಕಿಂ ವತ್ಸ ಸ ಏವಾಹಂ ನ ಸಂಶಯಃ '' ಇತ್ಯಾದಿಪ್ರಸಿದ್ಧಂ. ಸ್ಕಾಂದೇ,— ಶಿವಃ, ''ಶ್ವಪಚೋಪಿ ಮುನಿಶ್ರೇಷ್ಠಶ್ಶಿವಭಕ್ತಿಯುತೋ ಯದಿ || ಶಿವಭಕ್ತಿವಿಹೀನಸ್ತು ದ್ವಿಜೋಪಿ ಶ್ವಪಚಾಧಮಃ || ಮಹಾಪಾತಕನಾಶಾರ್ಥಂ ಶಿವಭಕ್ತಗೃಹಂ ವ್ರಜೇತ್ || ಯಾಚಯೇದನ್ನಮಮೃತಂ ತದಲಾಭೇ ಜಲಂ ಪಿಬೇತ್ || ಭಕ್ತಃ ಪ್ರಿಯೋ ಮೇ ಸತತಂ ಯಥಾರ್ಥಃ ಕ್ರೌಂಚಸೂದನ || ತಸ್ಯ ಸಂಪೂಜನಾದೇವ ಪೂಜಿತೋಽಹಂ ನ ಸಂಶಯಃ '' ಇತ್ಯಾದಿಪ್ರಸಿದ್ಧಂ. ಮಹಾಭಾರತೇ,— '' ಹರಿರ್ಮಯೋ ಗುಹಶ್ಚೈವ ರಾಮೋ ಬಾಣಾಸುರಸ್ತಥಾ || ರಾವಣೋ ಭೀಮಸೇನಶ್ಚ ಸಪ್ತ ಮಾಹೇಶ್ವರಾಸ್ಸ್ಮೃತಾಃ '' ಬೋಧಾಯನಮುನಿಃ,— '' ಬ್ರ

ಪೂಜಕರು, ಅವರಲ್ಲಿ ನನ್ನ ಶರೀರವಾದ ಇಷ್ಟ ಪ್ರಾಣ ಭಾವರೂಪವಾದ ಲಿಂಗವನ್ನು ಸ್ಥೂಲ ಸೂಕ್ಷ್ಮ ಕಾರಣಾಂಗತ್ರಯದಲ್ಲಿ ಧಾರಣಮಾಡಿದವರು ಅಧಿಕರು. ಲಿಂಗಾಂಗಸಂಗಿಗಳಲ್ಲಿ ಭಕ್ತ ಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಗಳೆಂಬ ಷಟ್ಸ್ಥಲಗಳಲ್ಲಿ ವಿಹಿತವಾದ ಕ್ರಿಯಾಜ್ಞಾನವನ್ನು ಹೊಂದಿದ ಪುರುಷನು ಅಧಿಕನು. ಆ ಷಟ್ಸ್ಥಲಜ್ಞಾನಸಂಪನ್ನನಿಗಿಂತ ಅಧಿಕನು ಮೂರುಲೋಕಗಳಲ್ಲಿ ಯಾವಾಗಲೂ ಇಲ್ಲವು. ಅವನು ಸಂಸಾರವನ್ನು ಗೆಲ್ಲಬೇಕೆಂಬ ಇಚ್ಛೆಯುಳ್ಳವರಿಂದ ಯಾವಾಗಲೂ ವಂದಿಸಿಕೊಳ್ಳುವುದಕ್ಕೆ ಯೋಗ್ಯನೂ ಪೂಜಿಸಿಕೊಳ್ಳುವುದಕ್ಕೆ ಯೋಗ್ಯನೂ ಆಗಿರುತ್ತಾನೆ. ಬಹುಮಾತುಗಳಿಂದೇನು? ಎಲೈ ಮಗನೇ! ಆ ಷಟ್ಸ್ಥಲಜ್ಞಾನಸಂಪನ್ನನೇ ನಾನಾಗಿರುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು,, ಇತ್ಯಾದಿಯಾಗಿ ಶಿವನಿಂದ ಷಣ್ಮುಖಸ್ವಾಮಿಯನ್ನು ಕುರಿತು ನಿರೂಪಿಸಲ್ಪಟ್ಟ ವಚನವು ಪ್ರಸಿದ್ಧವಾಗಿದೆ. ಸ್ಕಾಂದದಲ್ಲಿ— ''ಎಲೈ ಷಣ್ಮುಖನೇ! ಶ್ವಪಚನಾದರೂ ಶಿವಭಕ್ತನಾಗಿದ್ದರೆ ಮುನಿಶ್ರೇಷ್ಠನೆಂದೆನಿಸಿಕೊಳ್ಳುವನು. ಶಿವಭಕ್ತಿಯಿಲ್ಲದವನು ದ್ವಿಜನಾಗಿದ್ದರೂ ಶ್ವಪಚಾಧಮನೆಂದೆನಿಸುವನು. ಮಹಾಪಾಪಿಯು ತನ್ನ ಮಹಾಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಶಿವಭಕ್ತನ ಮನೆಯನ್ನು ಹೊಂದಬೇಕು. ಆ ಭಕ್ತನದೆಸೆಯಿಂದ ಅಮೃತೋಪಮಾನವಾದ ಅನ್ನವನ್ನು ಯಾಚಿಸಬೇಕು. ಅದು ದೊರಕದಿದ್ದರೆ ಅವನದೆಸೆಯಿಂದ ನೀರನ್ನಾದರೂ ಯಾಚಿಸಿ ತೆಗೆದುಕೊಂಡು ಕುಡಿಯಬೇಕು. ನನ್ನ ಭಕ್ತನು ಯಾವಾಗಲೂ ನನ್ನ ಪ್ರೇಮಕ್ಕೆ ಪಾತ್ರನಾಗಿರುವನು. ಅವನನ್ನು ಪೂಜಿಸುವುದರಿಂದ ನನ್ನನ್ನು ಪೂಜಿಸಿದಂತಾಗುವುದರಲ್ಲಿ ಸಂದೇಹವಿಲ್ಲವು. ಇತ್ಯಾದಿ ಶಿವೋಕ್ತವಚನವು ಪ್ರಸಿದ್ಧವಾಗಿದೆ. ಮಹಾಭಾರತದಲ್ಲಿ — ''ವಿಷ್ಣು, ಮಯ, ಗುಹ, ರಾಮ, ಬಾಣ, ರಾವಣ, ಭೀಮಸೇನ ಈ ಏಳುಮಂದಿಗಳು ಶಿವಭಕ್ತರೆಂದು ಹೇಳಲ್ಪಟ್ಟರು,, ಬೋಧಾಯನಮುನಿಯು— ''ಬ್ರಹ್ಮನು ದೇವತೆಗಳಲ್ಲಿ

ಹ್ಮಾ ಸರ್ವಜಗತ್ಕರಸ್ಸುರವರಶ್ಶ್ರೀವಿಷ್ಣುನಾಭ್ಯುದ್ಭವಃ ವಿಷ್ಣುರ್ವಾರಿಧಿಮಂದಿರಸ್ಸ ತು ಕರೇ ವಾರ್ಧಿರ್ವಿಲೀನೋ ಮುನೇಃ || ಕುಂಭೇಜಾಯತ ಮೃಣ್ಮಯೇ ಸ ತು ಮುನಿರ್ವ್ಯಾಕ್ತಸ್ಸ ಚ ಶೇಷೋದ್ಧೃತಾ ಶೇಷಶ್ಶಂಕರಕಂಕಣಂ ಸ ಚ ಧೃತೋ ಭಕ್ತೇನ ಪಾಯೊತ್ಸವಃ '' ಇತಿ.

ಇತಿ ಶಿವಭಕ್ತಮಹತ್ಮ್ಯಾಧಿಕ್ಯನಿರ್ಣಯೇ ದ್ವಾದಶೋಪದೇಶೇ ದಶಮಸ್ಸಂವಾದಃ.

---

ಶ್ರೀಃ.

## ಶಿವಯೋಗಿಪೂಜಾಕ್ರಮನಿರ್ಣಯಃ.

ರೇ—ಹೇ ಚೋಳ! ಭಕ್ತ್ಯಾದ್ಯೈಕ್ಯಾಂತಷಟ್ಸ್ಥಲಾಚಾರಜ್ಞಾನಸಂಪನ್ನಸ್ಯ ಶಿವಯೋಗಿನಃ ಬಾಹ್ಯಾಭ್ಯಂತರಂ ಲಿಂಗದ್ವಯಂ ಜಪದ್ವಯಂ ಪ್ರಸಾದದ್ವಯಂ ಚ ಕ್ರಮೇಣ ಶ್ರೂಯತಾಂ, ಅಥರ್ವಶಿರಸಿ,—'' ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ,,—'' ರೌದ್ರಂ ಶಾಶ್ವತಂ ವೈ ಪುರಾಣಂ ಇಷ್ಟಮೂರ್ಜಂ ತಪಸಾನುಯಚ್ಛತಿ ,, ಇತಿ. ವಾತುಲತಂತ್ರೇ,—'' ಪ್ರಾಣಲಿಂಗಂ ಮನೋಗ್ರಾಹ್ಯಂ ಭವೇತ್ಸಕಲ

---

ಶ್ರೇಷ್ಠನಾದರೂ ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದನು. ವಿಷ್ಣುವು ಸಮುದ್ರವೇ ಮನೆಯಾಗುಳ್ಳವನು. ಆ ಸಮುದ್ರವು ಅಗಸ್ತ್ಯಮುನಿಯ ಕೈಯಲ್ಲಡಗಿತು. ಆ ಅಗಸ್ತ್ಯನು ಮಣ್ಣಿನ ಗಡಿಗೆಯಲ್ಲಿ ಹುಟ್ಟಿದನು. ಆ ಮಣ್ಣಾದರೋ ಆದಿಶೇಷನಿಂದ ಧರಿಸಲ್ಪಟ್ಟಿತು. ಆ ಶೇಷನು ಶಿವನ ಕರಾಭರಣವಾದನು. ಆ ಶಿವನು ಲಿಂಗರೂಪನಾಗಿ ಭಕ್ತನಿಂದ ಧರಿಸಲ್ಪಟ್ಟನು. ಆದ್ದರಿಂದ ಆ ಶಿವಭಕ್ತನು ನಿಮ್ಮನ್ನು ಕಾಪಾಡಲಿ,, ಎಂದು ಹೇಳಿದ್ದಾನೆ.

ಎಂಬಲ್ಲಿಗೆ ಶಿವಭಕ್ತನ ಮಾಹಾತ್ಮ್ಯಾಧಿಕ್ಯವನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಹತ್ತನೆಯ ಸಂವಾದವು ಮುಗಿದುದು.



### ಶಿವಯೋಗಿಯ ಅರ್ಚನಕ್ರಮನಿರ್ಣಯವು.

ಎಲೈ ಚೋಳನೇ! ಷಟ್ಸ್ಥಲಾಚಾರಜ್ಞಾನಸಂಪನ್ನನಾದ ಶಿವಯೋಗಿಯ ಸಂಬಂಧವಾದ ಬಾಹ್ಯಾಂತರಂಗಧೃತವಾದ ಲಿಂಗದ್ವಯವನ್ನೂ, ಬಾಹ್ಯಾಂತರಂಗಜಪದ್ವಯವನ್ನೂ, ಬಾಹ್ಯಾಂತರ್ಲಿಂಗಪ್ರಸಾದದ್ವಯವನ್ನೂ ಕ್ರಮದಿಂದ ಕೇಳು; ಅಥರ್ವಶಿರಸ್ಸಿನಲ್ಲಿ—''ಮನೋವೇದ್ಯವಾದ ಪ್ರಾಣಲಿಂಗವನ್ನು ಅಂತರ್ಲಿಂಗವನ್ನಾಗಿ ಹೇಳುವರು,, ಎಂದೂ, ''ರೌದ್ರವೂ, ನಾಶರಹಿತವೂ, ಸನಾತನವೂ, ಯಶೋಬಲಾದಿಗಳಿಂದ ಅಧಿಕವೂ ಆದ ಇಷ್ಟಲಿಂಗವನ್ನು ತಪಃಕರ್ಮಾದಿ ಪಂಚಯಜ್ಞಗಳಿಂದ ಪೂಜಿಸಿದರೆ ಇಷ್ಟಾರ್ಥವನ್ನು ಕೊಡುತ್ತದೆ,, ಎಂದೂ ಉಕ್ತವಾಗಿದೆ. ವಾತುಲತಂತ್ರದಲ್ಲಿ—''ಆ ಅಂತರ್ಲಿಂಗವನ್ನು ''ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ,, ಎಂದು ಅಥ

ನಿಷ್ಕಲಂ || ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹುರಿತಿ ಶ್ರುತಿಃ || ಸಕಲಂ ದೃಕ್ಕ
ಲಾಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್ || ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟಪರಿ
ಹಾರಕಂ || ಇಷ್ಟಮೂರ್ಜಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ || ಇತಿ ಲಿಂಗ
ಮಿತಿ ಪ್ರಾಹ ತಸ್ಮಾದಾಥರ್ವಣೀ ಶ್ರುತಿಃ '' ಇತಿ. '' ಜ್ಯೋತಿರ್ಲಿಂಗಾನುಸಂಧಾನ
ಮಾಂತರಂ ಲಿಂಗಧಾರಣಂ|| ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್||
ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವ ವಾ|| ಬಾಹ್ಯಂ ತು ಧಾರಯೇಲ್ಲಿಂಗಂ
ತದ್ರೂಪಮಿತಿ ನಿಶ್ಚಯಾತ್ '' ಇತ್ಯಸ್ಮಾಭಿರಗಸ್ತ್ಯಮಹಾಮುನಯೇ ನಿರೂಪಿತಂ.
ಇತ್ಯುಭಯಲಿಂಗಧಾರಣವಿಧಿಃ. ಅಥೋಭಯಜಪವಿಧಿಃ ಶ್ರೂಯತಾಂ, ಶಿವರಹಸ್ಯೇ,—
'' ಜಪಮಾಲಾ ದ್ವಿಧಾ ಪ್ರೋಕ್ತಾ ಮಾತೃಕಾ ಮಣಿಮಾಲಿಕಾ || ಮಾತೃಕಾ ಪ್ರಾ
ಣಲಿಂಗಸ್ಥಾ ಮಣಿಮಾಲೇಷ್ಟಲಿಂಗಗಾ,,—'' ಅಂತರ್ವಿದ್ರುಮಭಾಸಮಾನಭುಜಗೀ
ಸೂತ್ರಾಂತಪರ್ಣೋಜ್ಜ್ವಲಾಮಾರೋಹಾದವರೋಹತಶ್ಚ ಶಮಯೀಂ ವರ್ಗಾಷ್ಟಕಾ
ಷ್ಟೋತ್ಕರಾಂ || ಹಂಸಬ್ರಹ್ಮವಿದೇಹಮೇರುಶಿಖರಾಂ ಶ್ರೀಮಾತೃಕಾಕ್ಷಾವಳೀಂ ವಿ
ದ್ಯಾಂ ನೌಮಿ ವಿಚಿತ್ರಮಂತ್ರಜನನೀಂ ಜ್ಞಾನೈಕದೀಪಾಂಕುರಾಂ ,, '' ಸಹಸ್ರಂ
ವಾ ತದರ್ಧಂ ವಾ ತದರ್ಧಂ ವಾ ಶತಾಷ್ಟಕಂ|| ಅಷ್ಟೋತ್ತರಸಹಸ್ರಂ ವಾ ಜಪಂ ಕು

---

ರ್ವಶ್ರುತಿಯು ಹೇಳುತ್ತದೆ. ಆ ಪ್ರಾಣಲಿಂಗವು– ಮನಸ್ಸಿನಿಂ ಗ್ರಹಿಸಲು ಯೋಗ್ಯವಾಗಿರುವುದ
ರಿಂದ ಸಕಲನಿಷ್ಕಲವಾದದ್ದು. ನೇತ್ರೇಂದ್ರಿಯದಿಂದ ಗ್ರಹಿಸಲು ಯೋಗ್ಯವಾದುದರಿಂದ ಸಕಲ
ವೂ, ಅನಿಷ್ಟಪರಿಹಾರಪೂರ್ವಕವಾಗಿ ಇಷ್ಟಪ್ರಾಪ್ತಿಯನ್ನುಂಟುಮಾಡುವುದೂ ಅದ ಶ್ರೇಷ್ಠವಾದ
ಇಷ್ಟಲಿಂಗವು ತನ್ನನ್ನು ಪೂಜಿಸುವವರಿಗೆ ಯಾವಾಗಲೂ ಇಷ್ಟಾರ್ಥವನ್ನು ಕೊಡುತ್ತದೆಯಾದುದ
ರಿಂದ ಅದನ್ನು ಅಥರ್ವಣಶ್ರುತಿಯು ಇಷ್ಟಲಿಂಗವನ್ನಾಗಿ ಹೇಳುತ್ತದೆ,, ''ಜ್ಯೋತಿರ್ಲಿಂಗಾನುಸಂ
ಧಾನವೇ ಅಂತರ್ಲಿಂಗಧಾರಣವೆನಿಸಿಕೊಳ್ಳುತ್ತದೆ. ಅದು ಬಾಹ್ಯಲಿಂಗಧಾರಣಕ್ಕಿಂತಲೂ ಕೋಟಿ
ಗುಣವುಳ್ಳುದಾಗಿದೆ. ಈ ಲಿಂಗಧಾರಣೆಯನ್ನು ಮಾಡುವುದರಲ್ಲಿ ಶಕ್ತನಾಗಿದ್ದರೂ, ಅಥವಾ
ಅಶಕ್ತನಾಗಿದ್ದರೂ ಬಾಹ್ಯಲಿಂಗ (ಇಷ್ಟಲಿಂಗ)ವನ್ನು ಧರಿಸಿಯೇ ತೀರಬೇಕು,, ಎಂದು ನಮ್ಮಿಂ
ದ ಅಗಸ್ತ್ಯಮಹಾಮುನಿಗೆ ನಿರೂಪಿಸಲ್ಪಟ್ಟಿದೆ. ಇಲ್ಲಿಗೆ ಉಭಯಲಿಂಗಧಾರಣವಿಧಿಯು ಸಂಪೂ
ರ್ಣವು. ಬಳಿಕ ಉಭಯಜಪವಿಧಿಯನ್ನು ಕೇಳು; ಶಿವರಹಸ್ಯದಲ್ಲಿ —''ಜಪಮಾಲಿಕೆಯು — ಮಾ
ತೃಮಾಲಿಕೆಯೆಂದೂ, ಮಣಿಮಾಲಿಕೆಯೆಂದೂ ಎರಡು ಬಗೆಯಾಗಿರ್ಪುದು. ಮಾತೃಕೆಯು ಪ್ರಾಣ
ಲಿಂಗವನ್ನು ಮಣಿಮಾಲಿಕೆಯು ಇಷ್ಟಲಿಂಗವನ್ನು ಹೊಂದಿದುದು. ''ಅಂತರ್ವಿದ್ರುಮಭಾಸಮಾನ
ಭುಜಗೀ,, ಎಂಬುದರಿಂದ ಅದು ಸ್ತುತಿಸಲ್ಪಟ್ಟದೆ, ಈ ಪ್ರಕಾರವಾಗಿರುವ ಜಪವನ್ನು ಸಾವಿರವ
ನ್ನಾಗಲಿ, ಐದುನೂರನ್ನಾಗಲಿ, ಇನ್ನೂರೈವತ್ತನ್ನಾಗಲಿ, ನೂರೆಂಟನ್ನಾಗಲಿ, ಅಥವಾ ಸಾವಿರದ
ಎಂಟನ್ನಾಗಲಿ ಸ್ಥಿರಮನಸ್ಸುಳ್ಳವನಾಗಿ ಮಾಡಬೇಕು,, ಇಲ್ಲಿಗೆ ಉಭಯ ಜಪವಿಧಿಯು ಸಂಪೂ

ರ್ಯಾದಶಂದ್ರಧೀಃ " ಇತ್ಯುಭಯಪುಜಪವಿಧಿಃ. ಅಥೋಭಯಪ್ರಸಾದಸ್ವೀಕಾರವಿಧಿಶ್ಶ್ರೂಯತಾಂ, ಋಗ್ವೇದೇ,—" ಅಂತರಿಚ್ಛಂತಿ ತಂ ಜನೇ ರುದ್ರಂ ಪರೋ ಮನೀಷಯಾ ಗೃಭ್ಣಂತಿ ಜಿಹ್ವಯಾ ಸಸಂ ,, ಇತಿ. ಪರಾಶರಪುರಾಣೇ,—" ಅಂತರಿಚ್ಛಂತಿ ತಂ ರುದ್ರಂ ಯಥಾ ವದ್ಯೇ ಮನೀಷಯಾ ‖ ಗೃಹ್ಣಂತಿ ಜಿಹ್ವಯಾ ತೇ ಹಿ ಸಸ್ಯಂ ನಿರ್ಲೋಪಮೋದನಂ ‖ ಅಂತರ್ನೇಚ್ಛಂತಿ ಯೇ ರುದ್ರಂ ಭವಾನೀಸಹಿತಂ ಭವಂ ‖ ಪುರೀಷಮೇವ ಗೃಹ್ಣಂತಿ ಜಿಹ್ವಯಾ ತೇ ನ ಸಂಶಯಃ " ಇತಿ. ಶಿವರಹಸ್ಯೇ,— " ರೂಪಂ ಸಮರ್ಪಯೇದಿಷ್ಟೇ ರುಚಿಮಪ್ಯರ್ಪಯೇತ್ತತಃ ‖ ಉಭಯಾರ್ಪಣಹೀನಸ್ತು ಪ್ರಸಾದೋ ನಿಷ್ಫಲೋ ಭವೇತ್ " ಇತ್ಯುಭಯಪ್ರಸಾದಸ್ವೀಕಾರವಿಧಿಃ. ಹೇ ಚೋಳ! " ವರಂ ಪ್ರಾಣಪರಿತ್ಯಾಗಃ ಛೇದನಂ ಶಿರಸೋಪಿ ವಾ ‖ ನ ತ್ವನಭ್ಯರ್ಚ್ಯ ಭುಂಜೀಯಾದ್ಭಗವಂತಂ ತ್ರಿಲೋಚನಂ " ಇತಿ ಶಿವಧರ್ಮಪುರಾಣೇ ನಂದೀಶವಾಕ್ಯಾತ್ ಶಿವಯೋಗಿನೋಪಿ ಬಾಹ್ಯಾಂತಶ್ಶಿವಲಿಂಗಪೂಜಾವಿಧಿಃ ಶ್ರೂಯತಾಂ, ಯಜುರಾರಣ್ಯಕೇ,-" ಯದಿ ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ ,, ಇತಿ. ವೀರತಂತ್ರೇ,—" ಜ್ಞಾನಶಕ್ತ್ಯಾತ್ಮಕಂ ಲಿಂಗಂ ಕ್ರಿಯಾಶಕ್ತಿಸ್ತು ಪೀ

---

ರ್ಥವು. ಬಳಿಕ ಉಭಯಪ್ರಸಾದ ಸ್ವೀಕಾರವಿಧಿಯನ್ನು ಕೇಳು; ಋಗ್ವೇದದಲ್ಲಿ—"ಶಿವದೀಕ್ಷಾರಹಿತರು ಅಲ್ಪಬುದ್ಧಿಯಿಂದ ಪ್ರಪಂಚೋತ್ಪತ್ತಿಗೆ ಕಾರಣವಾದ ಚಿಚ್ಛಕ್ತಿಸ್ವರೂಪದಲ್ಲಿ ವಿಸ್ತೃತನಾದ ಶಿವನನ್ನು ಹೃದಯಾಂಗದಲ್ಲಿ ಅಪೇಕ್ಷಿಸುವರು. ಅವರೇ ನಾಲಿಗೆಯಿಂದ ಸಸ್ಯಪಕಾರವಾದ ಅನ್ನವನ್ನು ಭಕ್ಷಿಸುವರು. ಅಲ್ಪಬುದ್ಧಿಯಿಂದ ಪರಮೇಶ್ವರನನ್ನು ತಿಳಿಯತಕ್ಕವರ ಬಾಯಲ್ಲಿ ಅಮೇಧ್ಯವು ಬೀಳುವುದೆಂದರ್ಥವು,, ಎಂದು ಹೇಳಲ್ಪಟ್ಟಿದೆ. ಅದೇರೀತಿಯಾಗಿ ಪರಾಶರಪುರಾಣದಲ್ಲಿ ಹೇಳಲ್ಪಟ್ಟಿದೆ. ಶಿವರಹಸ್ಯದಲ್ಲಿ—"ಪದಾರ್ಥಗಳ ರೂಪವನ್ನು ಇಷ್ಟಲಿಂಗದಲ್ಲಿ ಅರ್ಪಿಸಿದಬಳಿಕ ಆ ಪದಾರ್ಥಗಳ ರುಚಿಯನ್ನು ಪ್ರಾಣಲಿಂಗದಲ್ಲಿ ಸಮರ್ಪಿಸಬೇಕು. ಇಷ್ಟಪ್ರಾಣಲಿಂಗಗಳಿಗರ್ಪಿತವಾಗದ ಪ್ರಸಾದವಾದರೋ ಫಲದಾಯಕವಾಗುವುದಿಲ್ಲವು,, ಈ ರೀತಿಯಾಗಿ ಉಭಯಪ್ರಸಾದಸ್ವೀಕಾರವಿಧಿಯು ಸಂಪೂರ್ಣವು. ಎಲೈ ಚೋಳನೇ! ಭಗವಂತನಾದ ಶಿವನನ್ನು ಪೂಜಿಸದೆ, ತಾನನುಭವಿಸಬೇಕಾದ ಪದಾರ್ಥಗಳನ್ನು ಶಿವನಿಗರ್ಪಿಸದೆ ಭುಂಜಿಸಿದವನು—ತನ್ನ ಪ್ರಾಣವನ್ನು ಬಿಡುವುದುತ್ತಮವು, ತನ್ನ ತಲೆಯನ್ನು ಒಡೆದುಕೊಳ್ಳುವುದುತ್ತಮವು,, ಎಂದು ಶಿವಧರ್ಮಪುರಾಣದಲ್ಲಿ ನಂದಿಕೇಶ್ವರನ ವಚನವಿರುವುದರಿಂದ, ಶಿವಯೋಗಿಗೂ ಬಾಹ್ಯಾಭ್ಯಂತರ ಲಿಂಗಪೂಜಾವಿಧಿಯನ್ನು ಕೇಳು; ಯಜುರ್ವೇದಾರಣ್ಯದಲ್ಲಿ "ಯಾವುದನ್ನು ಮನಸ್ಸಿನಿಂದ ಚಿಂತಿಸುವನೋ ಅದನ್ನೇ ವಾಕ್ಕಿನಿಂದ ಹೇಳುವನು. ಮನಸ್ಸಿನಿಂದ ಚಿಂತಿಸಿ ಮಾತಿನಿಂದ ನುಡಿಯಲ್ಪಟ್ಟಿದ್ದನ್ನೇ ಕರ್ಮದಿಂದ ಮಾಡುವನು,, ಎಂದು ಹೇಳಲ್ಪಟ್ಟಿದೆ. ವೀರತಂತ್ರದಲ್ಲಿ—"ಲಿಂಗವು ಜ್ಞಾನಶಕ್ತಿಮಯವಾದದ್ದು. ಆ ಲಿಂಗದ ಪೀಠವು ಕ್ರಿಯಾಶಕ್ತಿಮಯವಾದದ್ದು. ಆದುದರಿಂದ

ಶಿಕ್ಷಾ || ಜ್ಞಾನಕ್ರಿಯಾತ್ಮಕಂ ಲಿಂಗಂ ಸದಾ ಯೋಗಿಭಿರರ್ಚ್ಯತೇ '' ವಾತುಲೋತ್ತರೇ,—'' ಇಷ್ಟಲಿಂಗಂ ಪ್ರಾಣಲಿಂಗಂ ಚೈಕೀಕೃತ್ಯ ಸಮರ್ಚಯೇತ್ || ಮಣಿಮಾಲಾಂ ಮಾತೃಮಾಲಾಂ ಚೈಕೀಕೃತ್ಯ ಜಪೇತ್ಸುಧೀಃ || ಬಹಿರಂತಃ ಪ್ರಸಾದಂ ತು ಸ್ವೀಕುರ್ಯಾದವಧಾನತಃ '' ಇತಿ ಬಹಿರಂತಶ್ಶಿವಲಿಂಗಪೂಜಾಜಪಪ್ರಸಾದಸ್ವೀಕಾರವಿಧಿಃ. ಹೇ ಚೋಳ! ತದುಭಯಶಿವಾಚಾರಸಂಪನ್ನಶಿವಯೋಗಿಮಹತ್ತ್ವಂ ಶೃಣು ತಂ, ಯೋಗಜಾಗಮೇ,—ವಾಮದೇವಮುನಿಂ ಪ್ರತಿ ಶಿವವಾಕ್ಯಂ, ''ಅಂತರ್ಯಾಗಂ ಬಹಿರ್ಯಾಗಂ ಯೋ ಜಾನಾತಿ ವಿಶೇಷತಃ || ತ್ವಯಾ ಮಯಾ ಚ ವಂದ್ಯಸ್ಸ್ಯಾಚ್ಛೇಷೈರ್ವಂದ್ಯಸ್ತು ಕಿಂ ಪುನಃ || ಏಷ ಜ್ಞಾನೀ ವಸೇದ್ಯತ್ರ ಸ ದೇಶಃ ಪುಣ್ಯಭಾಜನಂ||ದರ್ಶನಾದರ್ಚನಾತ್ತಸ್ಯ ತ್ರಿಸಪ್ತಕುಲಸಂಯುತಾಃ||ಜನಾಮುಕ್ತಿಪದಂ ಯಾಂತಿ ಕಿಂ ಪುನಸ್ತತ್ಪರಾಯಣಾಃ ,, ಇತಿ. ಸ್ಕಾಂದೇ ಸೂತಸಂಹಿತಾಯಾಂ ಯಜ್ಞವೈಭವಖಂಡೇ,—ಶಿವಃ, '' ನಿರಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಸಮದರ್ಶನಂ || ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತಿ ಸ್ಯಾಂಘ್ರಿರೇಣುಭಿಃ,, ಇತಿ. ಶಿವಧರ್ಮೋತ್ತರೇ—

---

ಜ್ಞಾನಕ್ರಿಯಾಶಕ್ತ್ಯುಭಯಾತ್ಮಕವಾದ ಲಿಂಗವು ಶಿವಯೋಗಿಗಳಿಂದ ಯಾವಾಗಲೂ ಪೂಜಿಸಲ್ಪಡುತ್ತದೆ,, ವಾತುಲೋತ್ತರಭಾಗದಲ್ಲಿ—''ಪ್ರಾಜ್ಞನಾದ ಶಿವಯೋಗಿಯು ಇಷ್ಟಲಿಂಗ ಪ್ರಾಣಲಿಂಗಗಳೆರಡನ್ನೂ ಏಕಾಕಾರವನ್ನಾಗಿ ಭಾವಿಸಿ ಪೂಜಿಸಬೇಕು. ಮಣಿಮಾಲೆಯನ್ನೂ ಮಾತೃಕಾಮಾಲೆಯನ್ನೂ ಏಕಾಕಾರವನ್ನಾಗಿ ಮಾಡಿ ಜಪಿಸಬೇಕು. ಇಷ್ಟಪ್ರಾಣಲಿಂಗ ಪ್ರಸಾದವನ್ನು ಸ್ವೀಕರಿಸಬೇಕು,, ಈ ಪ್ರಕಾರವಾಗಿ ಬಾಹ್ಯಾಭ್ಯಂತರ ಶಿವಲಿಂಗಪೂಜೆ, ಜಪ, ಪ್ರಸಾದಸ್ವೀಕಾರಗಳನ್ನು ಮಾಡುವ ವಿಧಾನವು ಸಂಪೂರ್ಣವು . ಎಲೆ ಚೋಳನೇ! ಆ ಎರಡು ವಿಧವಾದ ಶಿವಪೂಜಾದಿ ಶಿವಾಚಾರಸಂಪನ್ನನಾದ ಶಿವಯೋಗಿಯ ಮಾಹಾತ್ಮ್ಯವನ್ನು ಕೇಳು; ಯೋಗಜಾಗಮದಲ್ಲಿ—''ಅಂತರ್ಯಾಗವನ್ನೂ (ಪ್ರಾಣಲಿಂಗೋಪಾಸನಾಕ್ರಮವನ್ನೂ) ಬಾಹ್ಯಯಾಗವನ್ನೂ (ಇಷ್ಟಲಿಂಗೋಪಾಸನಾಕ್ರಮವನ್ನೂ) ಚೆನ್ನಾಗಿ ತಿಳಿದಿರತಕ್ಕವನೇ ನನ್ನಿಂದಲೂ ನಿನ್ನಿಂದಲೂ ವಂದ್ಯನಾಗಿರುತ್ತಾನೆ. ಹೀಗಿರುವಲ್ಲಿ; ಇತರರಿಂದ ವಂದ್ಯನೆಂದು ಹೇಳತಕ್ಕುದೇನು? ಈ ಜ್ಞಾನಿಯು ವಾಸಮಾಡುತ್ತಿರುವ ದೇಶವೇ ಪುಣ್ಯದೇಶವು. ಆ ಶಿವಯೋಗಿಯನ್ನು ನೋಡುವ ಪೂಜಿಸುವ ಜನರು ತಮ್ಮ ಇಪ್ಪತ್ತೊಂದು ಕುಲದಿಂದ ಕೂಡಿದವರಾಗಿ ಮುಕ್ತಿಯನ್ನು ಹೊಂದುವರು. ಹೀಗಿರುವಲ್ಲಿ; ಯಾವಾಗಲೂ ಆತನನ್ನು ಸೇವಿಸುವುದರಲ್ಲೇ ಆಸಕ್ತರಾಗಿರುವವರ ವಿಚಾರವನ್ನು ಹೇಳತಕ್ಕುದೇನು?'' ಎಂದು ಶಿವನಿಂದ ವಾಮದೇವಮುನಿಗೆ ಹೇಳಲ್ಪಟ್ಟಿದೆ. ಸ್ಕಾಂದದಲ್ಲಿರುವ ಸೂತಸಂಹಿತೆಯಲ್ಲಿಯ ಯಜ್ಞವೈಭವಖಂಡದಲ್ಲಿ—''ವಿಷಯಾಭಿಲಾಷೆಯಿಲ್ಲದವನೂ, ಶಾಂತನೂ, ಯಾವಪ್ರಾಣಿಗಳಲ್ಲೂ ದ್ವೇಷವಿಲ್ಲದವನೂ, ಸರ್ವರಲ್ಲೂ ಸಮಬುದ್ಧಿಯುಳ್ಳವನೂ ಆದ ಶಿವಯೋಗಿಯ ಪರಿಶುದ್ಧಗಳಾದ ಪಾದಧೂಳಿಗಳು ಹೋಗುವ ಸ್ಥಳಕ್ಕೆ ನಾನು ಯಾವಾಗಲೂ ಹೋಗುವೆ

ಕುಂಭ ಸಂಭವಂ ಪ್ರತಿ ಕುಮಾರವಾಕ್ಯಂ, "ಗಂಗಾಸ್ನಾನಸಮಂ ಪುಣ್ಯಂ ದರ್ಶನಾ ಚ್ಛಿವಯೋಗಿನಃ || ಸರ್ವತೀರ್ಥಾಭಿಷೇಕೇಭ್ಯಸ್ತತ್ಸಂಭಾಷಣಮುತ್ತಮಂ || ಮುಚ್ಯತೇ ಸರ್ವಪಾಪೇಭ್ಯಃ ಪ್ರಣಮ್ಯ ಶಿವಯೋಗಿನಂ || ಶುಶ್ರೂಷಯತಿ ತಂ ಭಕ್ತ್ಯಾ ಶಿವ ಲೋಕೇ ಮಹೀಯತೇ || ವಿಪ್ರಾಣಾಂ ವೇದವಿದುಷಾಂ ಕೋಟಿಂ ಸಂಪೂಜ್ಯ ಯ ತ್ಫಲಂ || ಭಿಕ್ಷಾಮಾತ್ರಪ್ರದಾನೇನ ತತ್ಫಲಂ ಶಿವಯೋಗಿನೇ || ಶಿವಯೋಗೀ ಗೃಹೇ ಯಸ್ಯ ಭಿಕ್ಷಾಂ ಗೃಹ್ಣಾತಿ ಸಂಸ್ಕೃತೇಃ || ಕುಲಮುತ್ತಾರಯೇತ್ತಸ್ಯ ನರಕಾರ್ಣವಸಂ ಸ್ಥಿತಂ || ಯೇ ಯೋಗಿನಂ ದ್ವಿಷಂತ್ಯಜ್ಞಾಸ್ಸರ್ವಪಾಪೇಷ್ವವಸ್ಥಿತಾಃ || ಅಧೋಮು ಖಾ ಊರ್ಧ್ವಪಾದಾಸ್ತೇ ಯಾಂತಿ ನರಕಾರ್ಣವಂ || ಕೃಷಿವಾರ್ಧುಷ್ಯವಾಣಿಜ್ಯ ಕ್ರೋಧಾಸತ್ಯಾದಿಭಿರ್ಮುನೇ || ನ ಲಿಪ್ಯತೇ ಪುಮಾನ್ಪಾಪೈರ್ಗುರುಲಿಂಗಚರಾರ್ಚ ಕಃ ||ಖಂಡನೀ ಪ್ರೇಷಣೀ ಚುಲ್ಲೀ ಶೋಧನೀ ಮಾರ್ಜನೀ ಚ ಯಾಃ||ಪಂಚಭಿಸ್ತಾಭಿ ರುದ್ಭೂತೈಃ ಪಾಪೈರಪಿ ನ ಲಿಪ್ಯತೇ || ಅನ್ಯೈಶ್ಚ ಪಾತಕೈರ್ಘೋರೈಸ್ತಸ್ಮಾತ್ಸಂಪೂ ಜಯೇತ್ತ್ರಯಂ ,, ಇತ್ಯಾದಿಭಿರ್ವಚನೈಶ್ಶಿವಯೋಗಿನೋ ಜಂಗಮಸ್ಯ ಮಹತ್ತ್ವಮ ತೀವ ಪ್ರಸಿದ್ಧಂ.

---

ನು,. ಎಂದು ಶಿವನಿಂದ ಹೇಳಲ್ಪಟ್ಟಿದೆ. ಶಿವಧರ್ಮೋತ್ತರದಲ್ಲಿ—"ಶಿವಯೋಗಿಯ ದರ್ಶನದಿಂದ ಗಂಗಾಜಲಸ್ನಾನದಿಂದುಂಟಾಗುವ ಪುಣ್ಯಕ್ಕೆ ಸಮಾನವಾದ ಪುಣ್ಯವು ಉಂಟಾಗುವುದು. ಸಕಲ ತೀರ್ಥಸ್ನಾನಗಳಿಗಿಂತ ಅವನೊಡನೆ ಮಾತನಾಡುವುದು ಉತ್ತಮವಾದದ್ದು. ಆ ಶಿವಯೋಗಿಯ ನ್ನು ಮಣಿದವನು ಸರ್ವಪಾಪಗಳಿಂದ ಬಿಡಲ್ಪಡುವನು. ಭಕ್ತಿಯಿಂದ ಆ ಶಿವಯೋಗಿಯನ್ನು ಸೇವಿ ಸಿದವನು ಶಿವಲೋಕದಲ್ಲಿ ಪೂಜ್ಯನಾಗುವನು, ಆ ಶಿವಯೋಗಿಗೋಸ್ಕರ ಭಿಕ್ಷೆಯನ್ನಿತ್ತವನಿಗೆ ವೇದಾಧ್ಯಯನಸಂಪನ್ನರಾದ ಒಂದುಕೋಟಿ ಬ್ರಾಹ್ಮಣರನ್ನು ಪೂಜಿಸುವುದರಿಂದುಂಟಾಗುವ ಫಲ ವು ದೊರಕುವುದು. ಯಾವ ಸಂಸಾರಿಯ ಮನೆಯಲ್ಲಿ ಶಿವಯೋಗಿಯು ಭಿಕ್ಷೆಯನ್ನು ಪರಿಗ್ರಹಿ ಸುವನೋ ಆ ಸಂಸಾರಿಯ ನರಕದಲ್ಲಿ ಬಿದ್ದಿರುವ ಕುಲವನ್ನು ಸಂಸಾರದಿಂದ ದಾಂಟಿಸುವನು. ಶಿವಯೋಗಿಯನ್ನು ದ್ವೇಷಿಸುವ ಮೂಢರು ಸಕಲ ವಿಧವಾದ ಪಾಪಗಳನ್ನನುಭವಿಸುವವರಾಗಿ, ತಲೆಕೆಳಗಾಗಿ ನಡೆಯುವವರಾಗಿ, ನರಕವೆಂಬ ಸಮುದ್ರವನ್ನು ಹೊಂದುವರು. ಗುರು ಲಿಂಗ ಜಂ ಗಮಾರ್ಚಕನು ವ್ಯವಸಾಯ, ಬಡ್ಡಿ, ವ್ಯಾಪಾರ, ಕೋಪ, ಸುಳ್ಳು, ಮೊದಲಾದವುಗಳಿಂದುಂಟಾ ಗುವ ಪಾಪಗಳಿಂದಲೂ, ಖಂಡನೀ, ಪ್ರೇಷಣೀ, ಚುಲ್ಲೀ, ಶೋಧನೀ, ಮಾರ್ಜನೀ ಎಂಬೈದು ಕಾರ್ಯಗಳಿಂದುಂಟಾಗುವ ಪಾಪಗಳಿಂದಲೂ, ಇನ್ನೂ ಬೇರೆಯಾದ ಘೋರಪಾಪಗಳಿಂದಲೂ ಸಂ ಬಂಧಗೊಳಿಸಲ್ಪಡತಕ್ಕವನಾಗುವುದಿಲ್ಲವು. ಆದ್ದರಿಂದ ಗುರುಲಿಂಗಜಂಗಮರನ್ನು ವಿಧ್ಯನುಸಾರ ವಾಗಿ ಪೂಜಿಸಬೇಕು,, ಎಂದು ಷಣ್ಮುಖಸ್ವಾಮಿಯಿಂದ ಅಗಸ್ತ್ಯಮಹರ್ಷಿಗೆ ಹೇಳಲ್ಪಟ್ಟಿತು. ಇತ್ಯಾದಿ ವಚನಗಳಿಂದ ಶಿವಯೋಗಿಜಂಗಮನ ಮಾಹಾತ್ಮ್ಯವು ಅತಿ ಪ್ರಸಿದ್ಧವಾಗಿದೆ.

ಇತಿ ಪಿಂಡಾದಿಜ್ಞಾನಶೂನ್ಯಾಂತ್ಯೈಕೋತ್ತರಶತಸ್ಥಲಲಕ್ಷಿತಸಾಂಗಲಿಂಗಷಟ್ಸ್ಥಲ
ಜ್ಞಾನಸಂಪನ್ನಶಿವಯೋಗಿವರೇಣ್ಯಸ್ಯ ಪೂಜಾಕ್ರಮನಿರ್ಣಯೋ
ದ್ವಾದಶೋಪದೇಶೇ ಏಕಾದಶಸ್ಸಂವಾದಃ.

ಇತಿ ಶ್ರೀಮದ್ವೇದವೇದಶಿರಶ್ಶಿವಾಗಮಪುರಾಣಪ್ರಭೃತಿಪ್ರಭೂತಪ್ರಥಿತಪ್ರಮಥಸಂಗೀ
ತಾನವದ್ಯಶಿವಾದ್ವೈತಸಿದ್ಧಾಂತಬೋಧಕಶ್ರೀವೀರಶೈವಷಟ್ಸ್ಥಲಸತ್ಪಥಪ್ರಚಾ
ರಕವರ್ಯಶ್ರೀಸೋಸಲಿವೀರಣಾರಾಧ್ಯಶಿವಯೋಗೀಂದ್ರಪುತ್ರಶ್ರೀರೇವಣ
ಸಿದ್ಧೇಶದೇಶಿಕಾತ್ಮಜಶ್ರೀರೇವಣಾರಾಧ್ಯ ಶಿವಯೋಗಿವಿರಚಿತೇ
ಚೋಳರೇಣುಕಸಂವಾದೇ ಶಿವಾಧಿಕ್ಯಶಿಖಾಮಣೌ
ವಿಷ್ಣ್ವವತಾರಸಂಹಾರಾದಿಏಕಾದಶಸಂವಾ
ದವಿಚಾರೋ ದ್ವಾದಶೋಪದೇಶಃ.



## ಶಿವಾಧಿಕ್ಯಶಿಖಾಮಣಿಸ್ಸಮಾಪ್ತಃ.

ಶ್ರೀಸಾಂಬಸದಾಶಿವಾರ್ಪಣಮಸ್ತು.



ಎಂಬಲ್ಲಿಗೆ ಪಿಂಡಾದಿಜ್ಞಾನಶೂನ್ಯಾಂತವಾದ ನೂರೊಂದುಸ್ಥಲದಿಂದಕೂಡಿದ ಲಿಂಗಾಂಗಷಟ್ಸ್ಥ
ಲಜ್ಞಾನಸಂಪನ್ನನಾದ ಶಿವಯೋಗಿವರೇಣ್ಯನಾದ ಜಂಗಮನ ಅರ್ಚನಕ್ರಮನಿರ್ಣಯವ
ನ್ನು ಹೇಳುವ ಹನ್ನೆರಡನೆಯ ಉಪದೇಶದಲ್ಲಿ ಹನ್ನೊಂದನೆಯ ಸಂವಾದವು
ಮುಗಿದುದು.

ಶ್ರೀ ನಮಶ್ಶಿವಾಯಮಠಾಧ್ಯಕ್ಷ ಸೋಮಶೇಖರಸ್ವಾಮಿಯಿಂದ ರಚಿತವಾದ ಕನ್ನಡಟಿಪ್ಪಣಿ
ಯಲ್ಲಿ ಹನ್ನೆರಡನೆಯ ಉಪದೇಶವು ಸಂಪೂರ್ಣವಾಯಿತು.



ಶಿವಾಧಿಕ್ಯಶಿಖಾಮಣಿಯು ಸಂಪೂರ್ಣವು.

ಶ್ರೀಗೌರೀಶಂಕರಾರ್ಪಣಮಸ್ತು.



ಶಾಸ್ತ್ರಮೇತದವಧಾರ್ಯ ಗೃಹ್ಣತಾಮರ್ಥಮಸ್ಯ ನಿಖಿಲಂ ವಿಜಾನತಾಂ || ಗ್ರಾಹ್ಯಮನ್ಯದಪಿ ನಾವಶಿಷ್ಯತೇ ಜ್ಞೇಯಮನ್ಯದಪಿ ವಾ ನ ವಿದ್ಯತೇ ||ಯೇಽನ್ಯೇಷು ಶಾಸ್ತ್ರೇಷು ಬಹುಷ್ವತೀವ ವಾಂಛಂತಿ ಮೋಕ್ಷಂ ಪರಿಮೂಢಚಿತ್ತಾಃ || ತೇ ಶೀತಭೀತಾ ಇವ ವಾನರಾಸ್ಸ್ಯುಃ ಖದ್ಯೋತಪುಂಜಜ್ವಲನೇಷ್ಟಚೇಷ್ಟಾಃ || ಅಪಾರಶಾಸ್ತ್ರಂ ಬಹುವೇದಿತವ್ಯಮಲ್ಪಶ್ಚ ಕಾಲೋ ಬಹವಶ್ಚ ವಿಘ್ನಾಃ || ಯತ್ಸಾರಭೂತಂ ತದುಪೇಕ್ಷಿತವ್ಯಂ ಹಂಸೋ ಯಥಾ ಕ್ಷೀರಮಿವಾಂಬುಮಿಶ್ರಂ ||ಇತ್ಥಂ ಸ ನವನಾಥಸಿದ್ಧನವಕೋಟಿಸಿದ್ಧಕುಲಚಕ್ರವರ್ತೀ ಯುಗಪತ್ತ್ರಿಕೋಟಿಶಿವಲಿಂಗಪ್ರತಿಷ್ಠಾಪಕಃ ಕುಂಭಸಂಭವಮಹಾಮುನ್ಯುಪದೇಶಕೃದ್ದೇಶಿಕಸಾರ್ವಭೌಮಃ ಶ್ರೀರೇಣುಕಗಣಾಧೀಶನಾಮಾ ಗುರುಸ್ಸ್ವಕೃಪಾಪಾತ್ರಾಯ ವಿಜಯೇಂದ್ರಚೋಳಾಯ ವೈಷ್ಣವಚೋಳಾಭಿಖ್ಯಾಯ ನಿಖಿಲಭೂಪಾಲಮೌಳಿಚೂಡಾಮಣಯೇ ಶಿವಾಧಿಕ್ಯಂ ಸಂಬೋಧ್ಯ ಶಿವಾದ್ವೈತಜ್ಞಾನವಾನ್ಭವ ಇತ್ಯಾಶಿಷಂ ಪ್ರಯುಜ್ಯ. "ಯೋ ಮೃಗ್ಯೋ ಮುನಿಭಿರ್ಮುಹುರ್ನಿಯಮಿತಪ್ರಾಣಪ್ರಯಾಣಕ್ರಮೈಸ್ಸ್ವಾಂತೇ ದ್ವಿಷ್ಟದಪಂಕಜೇ ಪ್ರಣವಭೃತ್ಕಾ

---

ಇದನ್ನು ಶಾಸ್ತ್ರವನ್ನಾಗಿ ನಿಶ್ಚೈಸಿ, ಗ್ರಹಿಸತಕ್ಕವರಿಗೂ ಇದರ ಸಮಗ್ರವಾದ ಅರ್ಥವನ್ನು ತಿಳಿಯತಕ್ಕವರಿಗೂ ಬೇರೊಂದು ಗ್ರಹಿಸಲರ್ಹವಾದುದು ಉಳಿದಿರುವುದಿಲ್ಲವು. ತಿಳಿಯಬರ್ಹವಾದ ಮತ್ತೊಂದಾವುದೂ ಇಲ್ಲವು. ಈ ಶಾಸ್ತ್ರಕ್ಕಿಂತ ಬೇರೆಯಾದ ಅನೇಕ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಮುಕ್ತಿಯನ್ನು ಅಪೇಕ್ಷಿಸತಕ್ಕವರು ಮೂಢಾತ್ಮರು. ಶೀತಕ್ಕೆ ಹೆದರಿ ಮಿಣಕುಹುಳಗಳ ಸಮೂಹವನ್ನು ಬೆಂಕಿಯೆಂಬ ಭ್ರಮೆಯಿಂದ ಉರಿಯಿಸುವುದರಲ್ಲಿ ಇಚ್ಛೈಸಿ ಚೇಷ್ಟೆಮಾಡುವ ಮಂಗಗಳಿಗೆ ಸಮಾನರಾಗುವರು. ಕೊನೆಗಾಣದ ಶಾಸ್ತ್ರವನ್ನು ತಿಳಿಯುವುದಕ್ಕೆ ಬಹುಕಾಲವು ಬೇಕು, ಕಾಲವಾದರೋ ಮಿತವಾಗಿರುತ್ತದೆ. ವಿಘ್ನಗಳು ಹೆಚ್ಚಾಗಿ ಬಂದೊದಗುತ್ತವೆ. ಆದ್ದರಿಂದ ಹಾಲು ನೀರಿನೊಡನೆ ಬೆರೆತಿದ್ದರೂ ನೀರನ್ನು ಕುಡಿಯದೆ ಹಾಲನ್ನೇ ಕುಡಿಯುವ ಹಂಸದಂತೆ ಹುರುಳಿಲ್ಲದ ಅನ್ಯಶಾಸ್ತ್ರದ ಗೋಜಿಗೆ ಹೋಗದೆ ಸಾರಭೂತವಾದ ಈ ಶಿವಶಾಸ್ತ್ರವನ್ನೇ ಅಪೇಕ್ಷಿಸಬೇಕು. ಈ ರೀತಿಯಾಗಿ ನವನಾಥಸಿದ್ಧರ ಕುಲಕ್ಕೂ ನವಕೋಟಿಸಿದ್ಧರ ಕುಲಕ್ಕೂ ಚಕ್ರವರ್ತಿಯಾದ, ಒಂದೇ ಮುಹೂರ್ತದಲ್ಲಿ ಮೂರುಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸಿದ, ಅಗಸ್ತ್ಯ ಮಹಾಮುನಿಗುಪದೇಶವನ್ನು ಮಾಡಿದ, ದೇಶಿಕ ಸಾರ್ವಭೌಮನಾದ, ಭರ್ಗಶಬ್ದವಾಚ್ಯನಾದ ಶ್ರೀ ರೇಣುಕಗಣಾಧೀಶನೆಂದು ಹೆಸರನ್ನು ಹೊಂದಿದ ಆ ಗುರುವು ತನ್ನ ದಯೆಗೆ ಪಾತ್ರನೂ, ಸಕಲ ಭೂಪತಿಗಳ ಕಿರೀಟಕ್ಕೆ ಅಲಂಕಾರಪ್ರಾಯವಾದ ಚೂಡಾಮಣಿಯಂತೊಪ್ಪತಕ್ಕವನೂ, ವೈಷ್ಣವಚೋಳನೆಂಬ ಹೆಸರುಳ್ಳವನೂ ಆದ ವಿಜಯೇಂದ್ರಚೋಳನಿಗಾಗಿ ಶಿವಾಧಿಕ್ಯವನ್ನು ಚೆನ್ನಾಗಿ ತಿಳುಹಿಸಿ, ಶಿವಾದ್ವೈತಜ್ಞಾನವುಳ್ಳವನಾಗೆಂದಾಶೀರ್ವದಿಸಿ, "ಯಾವನು ಪ್ರಾಣವಾಯುವನ್ನು ನಿರೋಧಿಸುವ ಕ್ರಮವನ್ನರಿತವರಾದ ಯೋಗಿಗಳಿಂದ ತಮ್ಮ ಹೃದಯ ಸರೋವರ

ಶೀಪ್ರದೇಶೇ ಭೃಶಂ || ಯಸ್ಯಾತ್ರಶಾತರುಣೇಂದುವಹ್ನಿವಿಲಸದ್ಧೃತ್ಪದ್ಮಸದ್ಮಾ ಸದಾ ತಂ ವಂದೇ ಪರಮೇಶ್ವರಂ ಶಿವಮುಮಾಸಂಶ್ಲಿಷ್ಟದೇಹಂ ವಿಭುಂ ,, ಇತಿ ಪರಮೇಶ್ವರಮಭಿವಂದ್ಯ, ಅಥ ಚೋಳರಾಜಾನಂ ಪ್ರತಿ, ಭೋ ವಿಜಯೇಂದ್ರಚೋಳ! ತ್ವದೀಯಾಸ್ಥಾನೇಽಖಿಲವೈಖಾನಸವೈಷ್ಣವ ಭಾಗವತಪಾಂಚರಾತ್ರತತ್ತ್ವವಾದಿಮತಾಚಾರ್ಯಪ್ರಮುಖವೈಷ್ಣವಸಹಸ್ರೇಣಾಸಂಖ್ಯಾಕಪೌರಜನೈಶ್ಚ ಸಹಿತೇ ಸಕಂಪಕೇಶವಸ್ಯಾಸ್ಯ ಸ್ಥಿರಪ್ರತಿಷ್ಠಾಂ ಕರಿಷ್ಯಾಮಸ್ತಸ್ಮುಖಂ ಸಸ್ಮಿತವಚನಂ ಚ. ಮಾಭೈಷೀರಿತ್ಯುಕ್ತ್ವಾ ನಿಜಮಹತ್ತ್ವಸಾಮರ್ಥ್ಯೇನ ಸ್ವಹಸ್ತೇನ ಸಕಂಪಕೇಶವವಿಗ್ರಹಸ್ಯ ಶಿರಸಿ ಸಮ್ಯಕ್ಸಂಮರ್ದ್ಯ ತದೀಯಕಂಪಮುತ್ಸಾರ್ಯ ಸಭಾಮಧ್ಯೇ ತಿರೋ ಬಭೂವ. ಅಥ ಸ ಕೇಶವೋಽಕಂಪಸ್ಸಂತುಷ್ಟಚಿತ್ತಸ್ಸನ್, ಶ್ರೀರೇಣುಕಗಣೇಶಂ ಸ್ತುತ್ವಾ ತದ್ಧ್ಯಾನತತ್ಪರೋ ಬಭೂವ. ತತಸ್ಸವಿಜಯೇಂದ್ರಚೋಳಃ ಪರಮಾಶ್ಚರ್ಯಂ ಸಭ್ಯೈಸ್ಸಹಾನುಭೂಯಾಸ್ಮದಿಷ್ಟದೇವಕೇಶವಾನುಗ್ರಹಕರ್ತ್ರೇ ಶ್ರೀರೇಣುಕಗಣೇಂದ್ರಾಯ ರೇವಣಸಿದ್ಧಾದ್ಯಭಿಧಾನಯುಕ್ತಾಯದೇಶಿಕಸಾರ್ವಭೌಮಾಯ ಸಹಸ್ರವಾರಂ ನಮೋ ನಮಃ ಇತಿ ಸ್ವಶಿರಸ್ಯಂಜಲಿಮುದ್ರಾಂ ನಿಧಾಯ,

---

ದಲ್ಲಿ ನೆಲಸಿರುವ ದ್ವಿದಳಾತ್ಮಕವಾದ ಕಮಲದ ಕರ್ಣಿಕಾಮಧ್ಯದಲ್ಲಿ ಪ್ರಣವಪೀಠದಿಂದ ಕೂಡಿದ ಅವಿಮುಕ್ತಕ್ಷೇತ್ರದಲ್ಲಿ ವಿಶೇಷವಾಗಿ ಬಾರಿಬಾರಿಗೂ ಹುಡುಕಲ್ಪಡುತ್ತಾನೋ, ಯಾವನು ನಕ್ಷತ್ರಗಳಿಂದಲೂ ಪೂರ್ಣಚಂದ್ರನಿಂದಲೂ ಅಗ್ನಿಯಿಂದಲೂ ಪ್ರಕಾಶಮಾನವಾದ ಹೃದಯಕಮಲವೇ ವಾಸಗೃಹವಾಗುಳ್ಳವನೋ ಆ ಪರಮೈಶ್ವರ್ಯಸಂಪನ್ನನೂ, ಉಮಾಖ್ಯವಾದ ಚಿಚ್ಛಕ್ತಿಯಿಂದ ನಿತ್ಯಸಮವೇತನಾಗಿ ಸಕಲ ಪ್ರಪಂಚದಲ್ಲೂ ತುಂಬಿದವನೂ ಆಗಿರುವ ಶಿವನನ್ನು ಯಾವಾಗಲೂ ವಂದಿಸುತ್ತೇನೆ,, ಎಂದು ಹೇಳುತ್ತ ಶಿವನನ್ನು ನಮಿಸಿ, ಬಳಿಕ ಚೋಳರಾಜನನ್ನು ಕುರಿತು, ಎಲೈ ವಿಜಯೇಂದ್ರಚೋಳನೇ! ಸಮಸ್ತರಾದ ವೈಖಾನಸ, ವೈಷ್ಣವ, ಭಾಗವತ, ಪಾಂಚರಾತ್ರ, ತತ್ವವಾದಿ ಮತಾಚಾರ್ಯರೇ ಮೊದಲಾದ ಅನೇಕ ವೈಷ್ಣವರಿಂದಲೂ, ಲೆಕ್ಕಮಾಡಲಿಕ್ಕಾಗದಷ್ಟು ನೆರೆದಿರುವ ಪಟ್ಟಣಿಗರಾದ ಜನರಿಂದಲೂ ಸಂಮಿಳಿತವಾದ ನಿನ್ನ ಆಸ್ಥಾನವು ನೆರೆದಿರುವಾಗಲೇ ಈ ನಡುಗುತ್ತಿರುವ ವಿಷ್ಣುಮೂರ್ತಿಗೆ ತಲೆಯಲ್ಲಾಡದಿರುವಂತೆ ಸ್ಥಿರಪ್ರತಿಷ್ಠೆಯನ್ನು ಮಾಡುವೆವಲ್ಲದೆ ನಗುಮುಖವುಳ್ಳದ್ದನ್ನಾಗಿಯೂ ಮಾಡುವೆವು. ಹೆದರಬೇಡ, ಎಂದು ಹೇಳಿ ತನ್ನ ಮಹತ್ತ್ವವೆಂಬ ವೀರ್ಯದಿಂದ ತನ್ನ ಕೈಯಿಂದ ಆ ಕೇಶವಮೂರ್ತಿಯ ತಲೆಯಲ್ಲಿ ಚೆನ್ನಾಗಿ ಅದಮಿ ಸಭಾಮಧ್ಯದಲ್ಲೇ ಮರೆಯಾದನು. ಬಳಿಕ ಆ ಕೇಶವವಿಗ್ರಹವು ಸಂತುಷ್ಟಮನಸ್ಸುಳ್ಳುದಾಗಿ ಶ್ರೀ ರೇಣುಕಗಣೇಶ್ವರನನ್ನು ಸ್ತುತಿಸಿ, ಅವನನ್ನು ಧ್ಯಾನಿಸುವುದರಲ್ಲಾಸಕ್ತವಾಗಿ ಚಾಂಚಲ್ಯವಿಲ್ಲದುದಾಯಿತು. ಬಳಿಕ ಆ ವಿಜಯೇಂದ್ರಚೋಳನು ವಿಶೇಷವಾದ ಆಶ್ಚರ್ಯವನ್ನು ಸಭಿಕರೊಡನನುಭವಿಸಿ, ನಮ್ಮ ಇಷ್ಟದೈವವಾದ ಕೇಶವನನ್ನನುಗ್ರಹಿಸಿದ ,,ರೇವಣಸಿದ್ಧ,, ಎಂದು ಮೊದಲಾದ ಹೆಸರುಗಳುಳ್ಳವನೂ ದೇಶಿಕಸಾರ್ವಭೌಮನೂ ಆದ ಶ್ರೀಮದ್ರೇಣುಕಗಣೇಂದ್ರನಿಗೋಸ್ಕರ ಅನೇಕಬಾರಿ ನಮ

“ ಜಯ ಶ್ರೀರೇಣುಕಾಚಾರ್ಯ, ಜಯ ಶ್ರೀಶಂಕರಪ್ರಿಯ ||
ಜಯ ಸೋಮೇಶಸಂಭೂತ, ಜಯಾಪ್ರಾಕೃತವೈಭವ ||೧||
ಜಯೋತ್ತುಂಗಗುಣಾಧಾರ, ಜಯ ಪ್ರಮಥನಾಯಕ ||
ಜಯ ದುರ್ವಾದಿಗರ್ವಘ್ನ, ಜಯ ಪಾಷಂಡಭೀಕರ ||೨||
ಜಯ ಯೋಗಿವರಸ್ತುತ್ಯ, ಜಯ ಭಕ್ತಾಮರದ್ರುಮ ||
ಜಯ ಪಾಪಾದ್ರಿದಂಭೋಳೇ, ಜಯ ಸದ್ಭಕ್ತಿಶೇವಧೇ ||೩||
ಜಯ ಜ್ಞಾನಮಹಾಸಿಂಧೋ, ಜಯ ಸರ್ವಜಗದ್ಗುರೋ ||
ಜಯ ವೈರಾಗ್ಯಸತ್ಕೋಶ, ಜಯ ಮಾಹಾತ್ಮ್ಯಮಂದಿರ ||೪||
ಜಯ ಸಿದ್ಧಕುಲಾಧ್ಯಕ್ಷ, ಜಯ ಸಜ್ಜನರಕ್ಷಕ ||
ಜಯ ಪಾವನಚಾರಿತ್ರ, ಜಯ ಮಂಗಲವಿಗ್ರಹ ||೫||
ಗುರೋ ರೇವಣಸಿದ್ಧೇಂದ್ರ, ಮಾಹಾತ್ಮ್ಯಂ ತೇ ಮಹತ್ತರಂ||
ಲೋಕಾಶ್ಚರ್ಯದಮೇವಾಸ್ತಿ ಕಿಂ ಮೇ ನಾಶ್ಚರ್ಯದಾಯಕಂ ||೬||
ಸಮುತ್ಸಾರ್ಯ ಶಿರಃಕಂಪಂ ವಿಷ್ಣುಮೂರ್ತೇರ್ಮಹಾಗುರೋ ||
ದದ್ಯಾಸ್ತ್ವಂ ಪ್ರಮುದಂ ಮಹ್ಯಂ ಕೃಪಾರಸಮಹೋದಧೇ ||೭||
ಉತ್ಪಾದಿತಾ ತ್ವಯಾ ಭಕ್ತಿಶ್ಶೈವೀ ಸರ್ವಾಘನಾಶಿನೀ ||
ಶ್ರುತ್ಯಾಗಮಪುರಾಣಾದಿಪ್ರಥಿತಾ ಮುಕ್ತಿದಾಯಿನೀ ||೮||
ತ್ವತ್ಪಾದಕಲಸಂಸ್ಪರ್ಶಾತ್ಪೂತಾ ಸ್ಯಾತ್ಕಾಂಚಿಕಾಪುರೀ ||
ಮತ್ಪ್ರಜಾಸ್ಸಕಲಾ ಧನ್ಯಾ ಭವದ್ದರ್ಶನತಃ ಪರಂ ||೯||
ನಮಃ ಕಲ್ಯಾಣರೂಪಾಯ, ವಿಶ್ವಕಲ್ಯಾಣದಾಯಿನೇ ||
ತುಭ್ಯಂ ಶ್ರೀಶಂಭುಪುತ್ರಾಯ, ಸಿದ್ಧನಾಥಾಯ ರೇಣುಕ ||೧೦||

ಇತಿ ತಂ ಮಹಾಗುರುಂ ಸಂಸ್ತುತ್ವಾ, ಜಯಘಂಟಾನಿನಾದಪೂರ್ವಕಂ ಸ್ವಸ್ಯ ರಾಜ್ಯಂ ಪರಶಿವಭಕ್ತಿವಿರಾಜಮಾನಂ ಕಾರಯಿತ್ವಾ, “ಪರಮೇಶ್ವರವರಕೃಪಾಪಾತ್ರೇಣ ಸಿರಿಯಾಳಶ್ರೇಷ್ಠಿನಾಮ್ನಾ ವಣಿಕ್ಪತಿನಾ ಸಾರ್ಧಂ ಸ್ವಾಂತಃಪುರಸ್ಯ ಪುರತಃ ಪ

---

ಸ್ಕಾರವಾಗಲೆಂದು ತನ್ನ ತಲೆಯಮೇಲೆ ಅಂಜಲಿಮುದ್ರೆಯನ್ನಿರಿಸಿ, “ಜಯ ಶ್ರೀರೇಣುಕಾಚಾರ್ಯ ಜಯ ಶ್ರೀಶಂಕರಪ್ರಿಯ,, ಇತ್ಯಾದಿಯಾಗಿ ಆತನನ್ನು ಸ್ತುತಿಸಿ, ಜಯಘಂಟಾನಿನಾದಪೂರ್ವಕವಾಗಿ ತನ್ನ ರಾಜ್ಯವನ್ನು ಅತ್ಯಂತಷ್ಟ ಶಿವಭಕ್ತಿಯಿಂದ ಪ್ರಕಾಶಮಾನವನ್ನಾಗಿ 'ಮಾಡಿ' ಪರಮೇಶ್ವರ ಕೃಪಾಪ್ರಸಾದಕ್ಕೆ ಪಾತ್ರನಾದ ಸಿರಿಯಾಳವಣಿಕ್ಪತಿಯೊಡನೆ ತನ್ನ ಅಂತಃಪುರದ ಹಿಂದೆ ಮುಂದೆ ಇರುವ

ಶ್ಚಾಜ್ಞ ಪೌರಜನವರ್ಗಸಹಿತಃ ಪುರಹರಪುರಂ ಸಪ್ರಮದಂ ಜಗಾಮ " ಇತಿ ಕಥಾ ಲೋಕಪ್ರಸಿದ್ಧೇತಿ ಸರ್ವಂ ಶಿವಂ.

---

ವಂಶೇ ಶ್ರೀರೇಣುಕಸ್ಯಾಸೀದ್ವಿಶ್ವನಾಥೋ ಗುರೂತ್ತಮಃ ||
ತಸ್ಯಾಸೀತ್ತನಯಶ್ಶ್ರೀಮಾನ್ಕಾಶೀನಾಥೋ ಬುಧಾಗ್ರಣೀಃ ||
ಆಸ್ತಾಂ ತಸ್ಯ ಸುತಾವಾರ್ಯೌ ವೀರಸರ್ವೇಶ್ವರಾಖ್ಯಕೌ ||
ಪುತ್ರಸ್ಸರ್ವೇಶ್ವರಸ್ಯಾಸೀದ್ರೇವಣಾರಾಧ್ಯನಾಮವಾನ್ ||
ತಸ್ಯಾತ್ಮಜಸ್ಸುಧೀವಂದ್ಯಶ್ಶೈವಸಿದ್ಧಾಂತಕೋವಿದಃ ||
ಶ್ರೀಮದ್ರೇವಣಸಿದ್ಧಾರ್ಯೋ ವೀರಶೈವಾಬ್ಧಿಚಂದ್ರಮಾಃ ||
ತತ್ಪುತ್ರೇಣ ಮಯಾ ಶ್ರೀಮಾನ್ ಶಿವಾಧಿಕ್ಯಶಿಖಾಮಣಿಃ ||
ರೇವಣಾರಾಧ್ಯನಾಮ್ನಾಯಂ ರಚಿತೋ ಜಯತಾಂ ಭುವಿ ||
ನಾಮತೋ ರೂಪತಶ್ಚಾಪಿ ಜಗತ್ಕಲ್ಯಾಣದಾಯಕೌ ||
ಶಿವೌ ನಮಾಮಿ ಸದ್ಭಕ್ತ್ಯಾ ಲೋಕಸ್ಯ ಪಿತರೌ ಸದಾ ||
ಯಶ್ಶಿಕ್ಷಕಶ್ಶಿವದ್ವೇಷ್ಟೄನ್ ರಕ್ಷಕೋ ಯಶ್ಶಿವಪ್ರಿಯಾನ್ ||
ನಮಾಮಿ ವೀರಭದ್ರಂ ತಂ ಅಸಮಾನಪರಾಕ್ರಮಂ ||
ಭೃಂಗಿನೇ ಭರ್ಗಭಕ್ತಾಯ ಶಿವಧರ್ಮಾಯ ನಂದಿನೇ ||
ನಮಃ ಪ್ರಮಥಬೃಂದಾಯ ಶಂಕರಪ್ರೇಮಭೂಮಯೇ ||

---

ಪೌರಜನಗಳ ಸಮೂಹದಿಂದ ಕೂಡಿದವನಾಗಿ ಸಂತೋಷದಿಂದ ಕೈಲಾಸವನ್ನು ಹೊಂದಿದನು. ಎಂಬ ಕಥೆಯು ಲೋಕದಲ್ಲಿ ಪ್ರಸಿದ್ಧವಾಗಿದೆ.

ಭದ್ರಂ ಭೂಯಾತ್.





# ನಮ್ಮಲ್ಲಿ ಬೆಲೆಗೆ ದೊರೆಯುವ ಗ್ರಂಥಗಳು.



**ಶಿವಾಧಿಕ್ಯಶಿಖಾಮಣಿಃ**—ಚೋಳದೇಶದಲ್ಲಿ ಶ್ರೀಮದ್ರೇಣುಕಾಚಾರ್ಯನಿಗೂ ವೈಷ್ಣವಮತಸ್ಥನಾದ ವಿಜಯೇಂದ್ರಚೋಳನಿಗೂ ನಡೆದ ಪ್ರಶ್ನೋತ್ತರರೂಪವಾಗಿದ್ದು ಅಸಾಧಾರಣವಾದ ನೂರು (೧೦೦) ವಿಷಯುಗಳುಳ್ಳುದಾಗಿದೆ. ಮತ್ತು ಕನ್ನಡ ಟಿಪ್ಪಣವೂ ಸಹ ಇರುತ್ತದೆ. ವೀರಶೈವರು ಅವಶ್ಯವಾಗಿ ನೋಡಬೇಕಾದುದು. ಬೆಲೆ ೧—೦—೦.

**ನ್ಯಾಯಶತಕಂ**—ಇದರ ಪ್ರತಿಯೊಂದು ಶ್ಲೋಕದಲ್ಲಿ ಕಾಕಾಕ್ಷಿಗೋಲಕ, ಕಾಕತಾಳ, ಸೂಚೀಕಟಾಹ, ತುಂದಿಲಸುರತ ಇತ್ಯಾದಿ ಒಂದೊಂದು ನ್ಯಾಯವನ್ನು ದಹರಿಸಿ ವಿದ್ವಜ್ಜನರ ಮನಸ್ಸಿಗೆ ಆನಂದವುಂಟಾಗುವಂತೆ ಶಿವಾಧಿಕ್ಯವರ್ಣನೆಯನ್ನು ಮಾಡಿದ್ದಾನೆ. ಇದು ಶೈವ, ವೀರಶೈವರ ಪಾರಾಯಣಕ್ಕೆ ಅವಶ್ಯವಾಗಿರುತ್ತದೆ. ಬೆಲೆ ೦—೩—೦.

| | |
|---|---|
| ಷಟ್ಸ್ಥಲಕೌಮುದೀ | ೦—೮—೦ |
| ಶ್ರುತಿಸಾರಭಾಷ್ಯಂ | ೦—೫—೦ |
| ಪರಮಾತ್ಮಪ್ರಕಾಶಿಕಾ | ೦—೪—೦ |
| ಶಿವಸ್ತವಶಿರೋಮಣಿಃ | ೦—೩—೬ |
| ಪುರುಷಸೂಕ್ತಂ | ೦—೩—೦ |
| ವೀರಶೈವಷಟ್ಸ್ಥಲಸಿದ್ಧಾಂತಂ | ೦—೩—೧ |

ವಿ. ಪಿ. ಛಾರ್ಜು ಅಲಾಯಿದಾ.

---

## ಮುದ್ರಣದಲ್ಲಿರುವ ಗ್ರಂಥಗಳು.

**ಬಸವಾನಂದಲಹರೀ**—ಇದರಲ್ಲಿ ದೊಡ್ಡ ದೊಡ್ಡ ವೃತ್ತಗಳಿಂದ ಕೂಡಿದ ೧೦೮ ಶ್ಲೋಕಗಳಿರುತ್ತವೆ. ಶ್ರೀ ಬಸವೇಶ್ವರನ ಮಹಿಮೆಗಳು ಅತ್ಯುತ್ತಮವಾಗಿ ವರ್ಣಿಸಲ್ಪಟ್ಟಿವೆ. ಕನ್ನಡ ತಾತ್ಪರ್ಯವೂ ಸಂದರ್ಭಾನುಸಾರ ಅಲ್ಲಿಗಲ್ಲಿಗೆ ಕಥೆಗಳೂ ಸ[illegible]ರಿಸಲ್ಪಟ್ಟಿವೆ.

**ಶಾರೀರಪ್ರಕಾಶಿಕಾ**—ಇದರ[illegible] ಅಂತಃಕರಣಪ್ರಕಾಶಿಕಾ, [illegible]ನಿಜದೀಪ್ತಿಪ್ರಕಾಶಿಕಾ, ಪರಮುಕ್ತಿಪ್ರದೀಪಿಕಾ ಈ ಮೂರು ಗ್ರಂಥಗಳು ಸೇರಿಸಲ್ಪಟ್ಟಿವೆ. ಇವುಗಳಲ್ಲಿ ಬ್ರಹ್ಮಸೃಷ್ಟಿಸೂಚನಾವಿಚಾರ, ಶಿವಸೃಷ್ಟಿಸೂಚನಾವಿಚಾರ, ಜೀವಶರೀರಭೇದಸೂಚನಾವಿಚಾರ, ಪರಮಾತ್ಮಸ್ವರೂಪವಿಚಾರ, ಅಂತಃಕರಣಸ್ವರೂಪವಿಚಾರ, ಮನೋನಾಶಸ್ವರೂಪವಿಚಾರ, ಬಂಧಮೋಕ್ಷವಿಚಾರ, ಮ[illegible]ಗ್ರಾಂಶಿನಿರಸನವಿಚಾರಗಳು ಸಪ್ರಮಾಣವಾಗಿ ಕನ್ನಡ ನುಡಿಯಿಂದ ನಿರೂಪಿಸಲ್ಪಟ್ಟಿವೆ.

ನಮ್ಮ ವಿಳಾಸ :—

**ಚರಮೂರ್ತಿ ಶ್ರೀ ಸೋಮಶೇಖರಸ್ವಾಮಿಗಳು,**

ನಮಶ್ಶಿವಾಯಮಠ, ಬಸಪ್ಪಾ[illegible]ರ್ಕ್, ಮೈಸೂರು.